# ದೇವಯಜ್ಯಯಾ ವೃತ್ರ ಹಾ ಭೂಯಾಸಮಿಂದ್ರಾ ಗ್ನಿ-ಯೋರಹಂ

---

ದೇವಯಜ್ಯಯೇತಿ ದೇವ-ಯಜ್ಯಯಾ । ವೃತ್ರಹೇತಿ ವೃತ್ರ-ಹಾ । ಭೂಯಾಸಮ್।

ಇಂದ್ರಾ ಗ್ನಿಯೋರಿತೀಂದ್ರ -ಅಗ್ನಿಯೋಃ । ಅಹಮ್।

---

| ಮಂತ್ರ | ವಿನಿಯೋಗ |
|---|---|
| ಇಂದ್ರಾ ಗ್ನಿಯೋಃ... ಭೂಯಾಸಮ್ । | *ದರ್ಶದ ಐಂದ್ರಾಗ್ನಯಾಗದ ಅನುಮಂತ್ರಣ |

---

ಅಗ್ನೀಷೋಮಯೋಃ ದೇವಯಜ್ಯಯಾ = ಅಗ್ನಿಷೋಮದೇವತೆಗಳಿಗೆ ಕೊಟ್ಟ ಈ ಆಹುತಿಯ ಪ್ರಭಾವದಿಂದ; ವೃತ್ರಹಾ = ವೈರಿಗಳನ್ನು ಕೊಲ್ಲುವವನು; ಭೂಯಾಸಮ್ = ಆಗುವೆನು; ÷ ಅಹಮ್ = ನಾನು; ಇಂದ್ರಾಗ್ನಿಯೋಃ = ಇಂದ್ರಾಗ್ನಿದೇವತೆಗಳ;

---

ದೇವತೆಗಳಲ್ಲಿ ಶ್ರೇಷ್ಠನಾದ ಅನ್ನಭಕ್ಷಕನು. ಆದ್ಯಯಾಗದ ಪ್ರಧಾನದೇವತೆಯಾದ ಅಗ್ನಿಗೆ ಸಮರ್ಪಿಸಿದ ಆಹುತಿಯಿಂದ ನಾನು ಅನ್ನಭಕ್ಷಕನಾಗುವೆನು. ಉಪಾಂಶುಯಾಜ ಯಾಗಕ್ಕೆ ಪ್ರಜಾಪತಿ, ವಿಷ್ಣು, ಅಗ್ನೀಷೋಮ ಇವರು ವಿಕಲ್ಪದಿಂದ ದೇವತೆಗಳಾಗಿರುತ್ತಾರೆ. ಎಲೈ! ಉಪಾಂಶುಯಾಗದೇವತೆಯೇ! ನೀನು ಶತ್ರುಹಿಂಸಕನು. ನಿನ್ನ ಅನುಗ್ರಹದಿಂದ ಶತ್ರುಗಳು ನನ್ನನ್ನು ಹಿಂಸಿಸದಿರಲಿ. ನಾನು ನನ್ನ ಈ ಶತ್ರುವನ್ನು ನಾಶಪಡಿಸುವಂತಾಗಲಿ.

---

* ದರ್ಶಯಾಗದಲ್ಲಿ 'ನಾಸೋಮಯಾಜೀ ಸಂನಯೇತ್' ಎಂಬುದಾಗಿ [ಸೋಮಯಾಗ ಮಾಡದವನು ಸಾನ್ನಾಯ್ಯ(ದಧಿ, ಪಯಸ್ಸು)ಯಾಗವನ್ನು ಮಾಡಬಾರದು] ನಿಷೇಧವಿರುವುದರಿಂದ ಅದರ ಸ್ಥಾನದಲ್ಲಿ ಐಂದ್ರಾಗ್ನಯಾಗವು ವಿಹಿತವಾಗಿದೆ.

ದೇವಯಜ್ಯಯೇಂದ್ರಿಯಾವ್ಯನ್ನಾದೋ ಭೂಯಾಸಮಿಂದ್ರ

ಸ್ಯಾಹಂ ದೇವಯಜ್ಯಯೇಂದ್ರಿಯಾವೀ ಭೂಯಾಸಂ

---

ದೇವಯಜ್ಯಯೇತಿ ದೇವ-ಯಜ್ಯಯಾ। ಇಂದ್ರಿಯಾವೀ । ಅನ್ನಾದ ಇತ್ಯನ್ನ-ಅದಃ । ಭೂಯಾಸಮ್ । ಇಂದ್ರಸ್ಯ । ಅಹಮ್ । ದೇವಯಜ್ಯಯೇತಿ ದೇವ-ಯಜ್ಯಯಾ । ಇಂದ್ರಿಯಾವೀ । ಭೂಯಾಸಮ್ ।

---

| ಮಂತ್ರ | ವಿನಿಯೋಗ |
|---|---|
| ಇಂದ್ರಸ್ಯಾಹಮ್... ಭೂಯಾಸಮ್ । | ದರ್ಶಯಾಗದ ಸಾನ್ನಾಯ್ಯಾಹುತಿಯ ಅನುಮಂತ್ರಣಕ್ಕಾಗಿ |

---

ದೇವಯಜ್ಯಯಾ = ದೇವಯಾಗದಿಂದ; ಇಂದ್ರಿಯಾವೀ = ಇಂದ್ರಿಯಪಾಟವವುಳ್ಳವನೂ; ಅನ್ನಾದಃ = ಅನ್ನಭಕ್ಷಣಸಮರ್ಥನೂ; ಭೂಯಾಸಮ್ = ಆಗುವೆನು; ಅಹಮ್ = ನಾನು; ಇಂದ್ರಸ್ಯ ದೇವಯಜ್ಯಯಾ = [ಸಾನ್ನಾಯ್ಯದೇವತೆಯಾದ] ಇಂದ್ರನಿಗೆ ಸಮರ್ಪಿಸಿದ ಆಹುತಿಯಿಂದ; ಇಂದ್ರಿಯಾವೀ = ಇಂದ್ರಿಯಸಾಮರ್ಥ್ಯವುಳ್ಳವನು; ಭೂಯಾಸಮ್ = ಆಗುವೆನು.

---

ನನ್ನನ್ನು ಹಿಂಸಿಸದಿರಲಿ. ನಾನು ನನ್ನ ಈ ಶತ್ರುವನ್ನು ನಾಶಪಡಿಸುವಂತಾಗಲಿ. * ಅಗ್ನೀಷೋಮರ ಬೆಂಬಲದಿಂದ ಇಂದ್ರನು ವೃತ್ರನನ್ನು ಸಂಹರಿಸಿದನು. ಅಂತಹ ಅಗ್ನೀಷೋಮದೇವತೆಗಳಿಗೆ ಕೊಟ್ಟ ಈ ಯಾಗಾಹುತಿಯಿಂದ ನಾನೂ ಶತ್ರುಹಂತಕ ನಾಗುವಂತಾಗಲಿ/ನಾನು ಪಾಪವನ್ನು ನಾಶಮಾಡುವಂತಾಗಲಿ.

ನಾನು ಇಂದ್ರಾಗ್ನಿದೇವತೆಗಳಿಗೆ ಸಮರ್ಪಿಸಿದ ಆಹುತಿಯ ಪ್ರಭಾವದಿಂದ ಇಂದ್ರನ ಅನುಗ್ರಹದಿಂಥ ಇಂದ್ರಿಯಪಾಟವವುಳ್ಳವನೂ, ಅಗ್ನಿಯ ಅನುಗ್ರಹದಿಂದ ಅನ್ನ -

श्री:श्री:श्री:श्री:श्री:श्री:श्री:श्री:श्री:श्री:श्री:श्री:श्री: श्री: श्री:श्री:श्री:श्री:श्री:श्री:श्री:श्री:श्री:श्री:श्री:श्री:श्री:

## ಮಹೇಂದ್ರಸ್ಯಾಹಂ ದೇವಯಜ್ಯಯಾ ಜೇಮಾನಂ

## ಮಹಿಮಾನಂ

---

ಮಹೇಂದ್ರಸ್ಯೇತಿ ಮಹಾ-ಇಂದ್ರಸ್ಯ । ಅಹಮ್ । ದೇವಯಜ್ಯಯೇತಿ ದೇವ-ಯಜ್ಯಯಾ।

ಜೇಮಾನಮ್ । ಮಹಿಮಾನಮ್ । ಗಮೇಯಮ್ ।

---

| ಮಂತ್ರ | ವಿನಿಯೋಗ |
|---|---|
| ಮಹೇಂದ್ರಸ್ಯಾಹಂ... ಗಮೇಯಮ್ । | * ಗತಶ್ರೀಕರಾದವರಿಗೆ ವಿಹಿತವಾದ ಸಾನ್ನಾಯ್ಯಯಾಗದ ಅನುಮಂತ್ರಣ |

---

✢ ಅಹಮ್ =ನಾನು; ಮಹೇಂದ್ರಸ್ಯ ದೇವಯಜ್ಯಯಾ = ಮಹೇಂದ್ರನಿಗೆ ಸಮರ್ಪಿಸಿದ ಸಾನ್ನಾಯ್ಯದ ಆಹುತಿಯಿಂದ; ಜೇಮಾನಮ್ = ಗೆಲುವನ್ನೂ; ಮಹಿಮಾನಮ್ = ಮಹತ್ತ್ವವನ್ನೂ;

---

ಭಕ್ಷಕನೂ ಆಗುವಂತೆ ಆಗಲಿ. ಇಂದ್ರನಿಗೆ ಸಮರ್ಪಿಸಿದ ಸಾನ್ನಾಯ್ಯಾಹುತಿಯಿಂದ [ಹಾಲು-ಮೊಸರು] ನಾನು ಇಂದ್ರಿಯಸಾಮರ್ಥ್ಯವನ್ನು ಪಡೆಯುವಂತಾಗಲಿ.

---

* 'ತ್ರಯೋ ವೈ ಗತಶ್ರಿಯಃ ಶುಶ್ರುವಾನ್ ಗ್ರಾಮಣೀ ರಾಜನ್ಯಸ್ತೇಷಾಂ ಮಹೇಂದ್ರೋ ದೇವತಾ' ಎಂಬಂತೆ ಗತಶ್ರೀಕ [ಸಂಪತ್ತನ್ನು ಹೊಂದಿದವರು]ರಾದವರು ಮಾಡುವ ಸಾನ್ನಾಯ್ಯಯಾಗಕ್ಕೆ ಮಹೇಂದ್ರನು ದೇವತೆಯಾಗಿರುತ್ತಾನೆ.

श्री:श्री:श्री:श्री:श्री:श्री:श्री:श्री:श्री:श्री:श्री:श्री:श्री: श्री: श्री:श्री:श्री:श्री:श्री:श्री:श्री:श्री:श्री:श्री:श्री:श्री:श्री:

**ಗಮೇಯಮಗ್ನೇಃ ಸ್ವಿಷ್ಟಕೃತೋऽಹಂ ದೇವಯಜ್ಯಯಾಯು ಷ್ಮಾನ್, ಯಜ್ಞೇನ ಪ್ರತಿಷ್ಠಾಂ ಗಮೇಯಮ್ ॥ ೨-7 ॥**

**[ರಿಷ್ಯಾತ್ಸಪತ್ನಕ್ಷಯಣ್ಯನ್ನಾದೋ ಭೂಯಾಸಗ್ಂ ಷಟ್ತ್ರಿಗ್ಂಶಚ್ಚ ।]**

---

**ಗಮೇಯಮ್ । ಅಗ್ನೇಃ । ಸ್ವಿಷ್ಟಕೃತ ಇತಿ ಸ್ವಿಷ್ಟ-ಕೃತಃ । ಅಹಮ್ । ದೇವಯಜ್ಯಯೇತಿ ದೇವ-ಯಜ್ಯಯಾ । ಆಯುಷ್ಮಾನ್ । ಯಜ್ಞೇನ । ಪ್ರತಿಷ್ಠಾಮಿತಿ ಪ್ರತಿ-ಸ್ಥಾಮ್ । ಗಮೇಯಮ್ ॥ ೨ ॥**

---

| ಮಂತ್ರ | ವಿನಿಯೋಗ |
| --- | --- |
| ಅಗ್ನೇಃ ಸ್ವಿಷ್ಟಕೃತಃ.... ಗಮೇಯಮ್ ॥ | ಸ್ವಿಷ್ಟಕೃದ್ಯಾಗದ ಅನುಮಂತ್ರಣ. |

---

**ಗಮೇಯಮ್** = ಹೊಂದುವೆನು. ✢ **ಅಹಮ್** = ನಾನು; **ಅಗ್ನೇಃ ಸ್ವಿಷ್ಟಕೃತಃ ದೇವಯಜ್ಯಯಾ** = ಅಗ್ನಿಸ್ವಿಷ್ಟಕೃದ್ಯಾಗದಿಂದ; **ಆಯುಷ್ಮಾನ್** = ದೀರ್ಘಾಯುಷ್ಮಂತನಾಗಿ; **ಯಜ್ಞೇನ ಪ್ರತಿಷ್ಠಾಮ್** = ಫಲರೂಪವಾದ ಯಜ್ಞದ ಪ್ರತಿಷ್ಠೆಯನ್ನು; **ಗಮೇಯಮ್** = ಹೊಂದುವೆನು.

---

ನಾನು ಸಾನ್ನಾಯ್ಯದೇವತೆಯಾದ ಮಹೇಂದ್ರನ ಪ್ರಭಾವದಿಂದ ಶತ್ರುಜಯವನ್ನೂ ವಿದ್ಯಾದಿಗುಣಗಳಿಂದ ಮಹತ್ತ್ವವನ್ನೂ ಹೊಂದುವೆನು. ರುದ್ರರೂಪನಾದ ಅಗ್ನಿಯೇ ಸ್ವಿಷ್ಟಕೃತ್. ಆತನಿಗೆ ಆಹುತಿಯನ್ನು ಸಮರ್ಪಿಸಿದರೆ ಎಲ್ಲಾ ಯಾಗಗಳೂ ಸ್ವಿಷ್ಟ (ಚೆನ್ನಾಗಿ ಮಾಡಿದವುಗಳು)ಗಳಾಗುತ್ತವೆ. ಆ ಸ್ವಿಷ್ಟಕೃದ್ದೇವನ ಅನುಗ್ರಹದಿಂದ ಆಯುಷ್ಮಂತನಾಗಿ ಪ್ರಕೃಷ್ಟವಾದ ಫಲಸಿದ್ಧಿಯನ್ನು ನಾನು ಹೊಂದುವಂತಾಗಲಿ.

## ವಿನಿಯೋಗ ಸಂಗ್ರಹ

ಧ್ರುವೋಽಸೀತಿ[1-3] ತ್ರಿಭಿರ್ಮಂತ್ರೈಃ ಪರಿಧಿತ್ರಯಮಂತ್ರಣಮ್ ।
[4]ಯುನಾಗ್ನಿಯೋಗ [5]ಇಂಧಾನಾಃ ಸಮಿಧೋರನುಮಂತ್ರಣಮ್॥
[6]ಯನ್ಮೇ ಹವಿರ್ಮಂತ್ರಯೇತ [7-9]ಭೂಸ್ತ್ರಿಭಿಃ ಸಾದಯೇದ್ಧವಿಃ।
[10]ಉಚ್ಛುಷ್ಮೋ ಮಂತ್ರಯೇತೇಧ್ಮಮಮರ್ತ್ಯ ಪ್ರವರಂ ತಥಾ ॥
ಸ್ರೌವಾಘಾರಂ ಮನೋಽಸೀತಿ ಸ್ರುಚ್ಯಾಘಾರಂ ತು ವಾಗಿತಿ ।[13]
[14-18]ವಸಂತ ಪಂಚಭಿರ್ಮಂತ್ರೈಃ ಪ್ರಯಾಜಾನ್ ಪಂಚ ಮಂತ್ರಯೇತ್ ॥
[19]ಅಗ್ನೀಷೋಮೇತ್ಯಾಜ್ಯಭಾಗಾ[20]ವಗ್ನೇರಿತ್ಯಗ್ನಿಯಾಗಕಮ್।
[21]ದಬ್ಧೀತ್ಯುಪಾಂಶುಯಾಜಾಖ್ಯಂ ಸ್ಪಷ್ಟಮಗ್ನೀತಿ[22-26] ಪಂಚಕಮ್ ॥
ಅನುವಾಕೇ ದ್ವಿತೀಯೇಽಸ್ಮಿನ್ ಮಂತ್ರಾಃ ಷಡ್ವಿಂಶತಿರ್ಮತಾಃ ।

ಅನುವಾಕದಲ್ಲಿರುವ ಮಂತ್ರ ಸಂಖ್ಯೆ - 26

## ಅನುವಾಕದ ವಿಶೇಷ ವಿಷಯಗಳು

## ಅ) ಮೀಮಾಂಸಾ

**1. ವಸಂತಾದಿ ಮಂತ್ರಗಳಿಗೆ ಕ್ರಮವಿದೆಯೇ?** **[ಜೈ.ಸೂ. 5.1]**

'ವಸಂತಮೃತೂನಾಂ ಪ್ರೀಣಾಮಿ' ಎಂದು ಆರಂಭವಾಗುವ ಮಂತ್ರಗಳಿಗೆ ಕ್ರಮದಿಂದ ವಿನಿಯೋಗವಿದೆಯೇ? ಎಂಬುದು ಸಂಶಯ.

'ವಸಂತಮೃತೂನಾಂ ಪ್ರೀಣಾಮಿ' ಎಂದು ಆರಂಭಗೊಳ್ಳುವ ಮಂತ್ರಗಳೂ ಐದು. ಪ್ರಯಾಜಗಳೂ ಐದು. ಆದುದರಿಂದ ಮೊದಲನೆಯ ಪ್ರಯಾಜಕ್ಕೆ ಮೊದಲನೆಯ ಮಂತ್ರ ಎಂಬುವ ಕ್ರಮದಂತೆ ಕ್ರಮವಿನಿಯೋಗವುಂಟು. ಇದು ಇಲ್ಲಿನ ಪೂರ್ವಪಕ್ಷ.

ಇಲ್ಲಿನ ಸಿದ್ಧಾಂತವು ಹೀಗಿದೆ. ತೈತ್ತಿರೀಯಶಾಖೆಯಲ್ಲಿ ಮಂತ್ರಪಾಠವು ಒಂದು ರೀತಿಯಲ್ಲಿದೆ. ಶಾಖಾಂತರದಲ್ಲಿ ಮತ್ತೊಂದು ರೀತಿಯಲ್ಲಿದೆ. 'ಸಮಿತ್' ಮುಂತಾದ ಪ್ರಯಾಜವಿಶೇಷಗಳನ್ನು ತಿಳಿಸುವ ಲಿಂಗ(ಸಾಮರ್ಥ್ಯ)ವು ವಸಂತಾದಿಮಂತ್ರಗಳಲ್ಲಿ ಇಲ್ಲ. ವಿಶೇಷಶ್ರುತಿಯೂ ಇಲ್ಲ. ಪ್ರಕರಣವೂ ಸಮಾನವಾಗಿದೆ. ಆದುದರಿಂದ ವಸಂತಾದಿ ಮಂತ್ರಗಳಿಗೆ ಕ್ರಮದಿಂದ ವಿನಿಯೋಗವಿಲ್ಲ.

**2. 'ದಬ್ಧಿರಸಿ...' ಎಂಬ ಮಂತ್ರವು ಉಪಾಂಶುಯಾಜಾನುಮಂತ್ರಣವೇ?**

ದರ್ಶ-ಪೂರ್ಣಮಾಸಪ್ರಕರಣದಲ್ಲಿರುವ 'ದಬ್ಧಿರಸಿ' ಎಂಬ ಮಂತ್ರವು ಉಪಾಂಶು ಯಾಜಾನುಮಂತ್ರಣಮಂತ್ರವೇ ಅಲ್ಲವೇ? ಎಂಬುದು ಸಂಶಯ.

ವಿಶೇಷವಾದ ಶ್ರುತಿಯಿಲ್ಲ. ಶತ್ರುಹಿಂಸಕತ್ವರೂಪಲಿಂಗವು ಮೂರು ಯಾಗ ದೇವತೆಗಳಿಗೂ ಸಮಾನ. ಪ್ರಕರಣವೂ ಸಮಾನ. ಹೀಗೆ ಪ್ರಮಾಣವಿಲ್ಲದುದರಿಂದ ದಬ್ಧಿಮಂತ್ರವು ಉಪಾಂಶುಯಾಜಯಾಗಾಂಗವಲ್ಲ. ಇದು ಇಲ್ಲಿನ ಪೂರ್ವಪಕ್ಷ.

ಇಲ್ಲಿಯ ಸಿದ್ಧಾಂತವು ಹೀಗಿದೆ: ಅಧ್ವರ್ಯುಕಾಂಡದಲ್ಲಿ ಆಗ್ನೇಯ, ಉಪಾಂಶು ಯಾಜ, ಅಗ್ನೀಷೋಮೀಯಯಾಗಗಳು ಕ್ರಮವಾಗಿ ಹೇಳಲ್ಪಟ್ಟಿವೆ. ಯಾಜಮಾನ ಕಾಂಡದಲ್ಲಿ ಅನುಮಂತ್ರಣಮಂತ್ರಗಳೂ ಅದೇ ಕ್ರಮದಲ್ಲಿಯೇ ಹೇಳಲ್ಪಟ್ಟಿವೆ. 'ಸಮಾನದೇಶವೃತ್ತಿತ್ವ' ಎಂಬ ಕ್ರಮದಿಂದ ಯಾಗಗಳಲ್ಲಿ ಮಧ್ಯದಲ್ಲಿರುವ ಉಪಾಂಶು ಯಾಜಯಾಗಕ್ಕೆ ಅನುಮಂತ್ರಣಮಂತ್ರಗಳಲ್ಲಿ ಮಧ್ಯದಲ್ಲಿರುವ ದಬ್ಧಿಮಂತ್ರವು ಅನು ಮಂತ್ರಣಮಂತ್ರವಾಗಿ ಅಂಗವೆನಿಸುತ್ತದೆ. ಹಾಗೆಯೇ ಸನ್ನಿಧಿಕ್ರಮದಿಂದ 'ಶುಂಧಧ್ವಂ...' ಇತ್ಯಾದಿಯಾದ ಮಂತ್ರವು ಸಾನ್ನಾಯ್ಯಪಾತ್ರಶೋಧನಾಂಗವಾಗುತ್ತದೆ. ಅನುಷ್ಠಾನಸಾ ದೇಶ್ಯಕ್ರಮದಿಂದ ಪಶುಧರ್ಮಗಳು ಅಗ್ನೀಷೋಮಾಂಗವಾಗುತ್ತವೆ.

---



## ॥ ತೃತೀಯೋಽನುವಾಕಃ ॥

ಅಗ್ನಿರ್ಮಾ ದುರಿಷ್ಟಾತ್ಪಾತು ಸವಿತಾಽಘಶಗ್ಂಸಾದ್ಯೋ ಮೇಂಽತಿ ದೂರೇಽರಾತೀಯತಿ ತಮೇತೇನ ಜೇಷಗ್ಂ

ಅಗ್ನಿಃ । ಮಾ । ದುರಿಷ್ಟಾದಿತಿ ದುಃ-ಇಷ್ಟಾತ್ । ಪಾತು । ಸವಿತಾ । ಅಘಶಗ್ಂಸಾದಿತ್ಯಘ-ಶಗ್ಂಸಾತ್ । ಯಃ । ಮೇ । ಅಂತಿ । ದೂರೇ । ಅರಾತೀಯತಿ । ತಮ್ । ಏತೇನ । ಜೇಷಮ್ ।

ಎರಡನೆಯ ಅನುವಾಕದಲ್ಲಿ ಹವಿರನುಮಂತ್ರಣಮಂತ್ರಗಳು ಆಮ್ನಾತವಾಗಿವೆ. ಈ ಮೂರನೆಯ ಅನುವಾಕದಲ್ಲಿ ಪ್ರಾಶಿತ್ರ–ಇಡಾಭಕ್ಷಣಾದಿಗಳ ಅನುಮಂತ್ರಣಮಂತ್ರಗಳು ಹೇಳಲ್ಪಟ್ಟಿವೆ.

| ಮಂತ್ರ | ವಿನಿಯೋಗ |
|---|---|
| ಅಗ್ನಿರ್ಮಾ...... ಶಗ್ಂಸಾತ್ । | ಪ್ರಾಶಿತ್ರದ ಅವದಾನ ಮಾಡುವಾಗ ಯಜಮಾನನು ಜಪಿಸುವುದಕ್ಕಾಗಿ |
| ಯೋ ಮೇಂಽತಿ.... ಜೇಷಮ್ । | ಪ್ರಾಶಿತ್ರದಲ್ಲಿ ಯಜಮಾನಭಾಗದ ಅವದಾನದ ಸಮಯದಲ್ಲಿ ಜಪಿಸಲು |

✢ಅಗ್ನಿಃ= ಅಗ್ನಿಯು; ದುರಿಷ್ಟಾತ್ = [ಮಂತ್ರವೈಕಲ್ಯದಿಂದಾಗಲೀ, ಕ್ರಿಯಾವೈಕಲ್ಯದಿಂದಾಗಲೀ] ದೂಷಿತವಾದ ಯಾಗದಾನಾದಿಗಳ ದೆಸೆಯಿಂದ; ಮಾ = ನನ್ನನ್ನು; ಪಾತು = ರಕ್ಷಿಸಲಿ; ಸವಿತಾ = ಸೂರ್ಯನು; ಅಘಶಗ್ಂಸಾತ್ = ಪಾಪಕರ್ಮದಲ್ಲಿ ಅಭಿರುಚಿಯಿರುವ ರಾಕ್ಷಸರಿಂದ; ಮಾ ಪಾತು = ನನ್ನನ್ನು ಕಾಪಾಡಲಿ; ✢ಯಃ = ಯಾವನು; ಮೇ= ನನ್ನ; ಅಂತಿ = ಸಮೀಪದಲ್ಲಿ; [ಅಥವಾ] ದೂರೇ = ದೂರದಲ್ಲಿ; ಅರಾತೀಯತಿ = ಶತ್ರುಭಾವವನ್ನು ಇಚ್ಛಿಸುತ್ತಾನೆಯೋ; ತಮ್ = ಆ ರಾಕ್ಷಸಾದಿಶತ್ರುವನ್ನು ; ಏತೇನ = ಈ ಯಜಮಾನಭಾಗದಿಂದ [ಜಪದಿಂದ] ಜೇಷಮ್ = ಗೆಲ್ಲುವೆನು;

ಮಂತ್ರದಲ್ಲಿ ಅಥವಾ ಕ್ರಿಯೆಯಲ್ಲಿ ವೈಕಲ್ಯವುಂಟಾಗಿ ಮಾಡಿದ ಯಾಗಾದಿಗಳು

# ಸುರೂಪವರ್ಷವರ್ಣ ಏಹೀಮಾನ್ಭದ್ರಾನ್ದುರ್ಯಾಗ್ಂ

ಸುರೂಪವರ್ಷವರ್ಣ ಇತಿ ಸುರೂಪ - ವರ್ಷವರ್ಣೇ । ಏತಿ । ಇಹಿ । ಇಮಾನ್।

ಭದ್ರಾನ್ । ದುರ್ಯಾನ್ ।

---

| ಮಂತ್ರ | ವಿನಿಯೋಗ |
|---|---|
| ಸುರೂಪ .... ಮಘೋನೀ । | ಇಡಾಹರಣ ಮಾಡುವಾಗ ಅನುಮಂತ್ರಣಕ್ಕಾಗಿ |

---

ಸುರೂಪವರ್ಷವರ್ಣೇ = ಒಳ್ಳೆಯ [ಕೊಂಬುಗಳಿರುವಿಕೆ ಮುಂತಾದ] ಸ್ವರೂಪವುಳ್ಳ, ಒಳ್ಳೆಯ[ಘೃತರೂಪ]ವರ್ಷವುಳ್ಳ, ಒಳ್ಳೆಯ[ಶ್ವೇತಾದಿ]ವರ್ಣಗಳುಳ್ಳ ಇಡಾದೇವತೆಯೇ! ಇಮಾನ್ = ಈ[ನಮ್ಮವಾಗಿರುವ] ಭದ್ರಾನ್ = ಮಂಗಳಕರವಾದ; ದುರ್ಯಾನ್ = ಯಜ್ಞಶಾಲೆಗಳನ್ನು ಕುರಿತು;

---

ದುರಿಷ್ಟಗಳೆನಿಸಿಕೊಳ್ಳುತ್ತವೆ. ಅಗ್ನಿಯು ನನ್ನನ್ನು ಇಂತಹ ದುರಿಷ್ಟದೋಷದಿಂದ ರಕ್ಷಿಸಲಿ. ಸವಿತೃದೇವನು ಕೆಟ್ಟುದನ್ನು ಮಾಡಲು ಇಚ್ಛಿಸುವ ರಾಕ್ಷಸಾದಿಗಳಿಂದ ನನಗೆ ತೊಂದರೆಯಾಗದಂತೆ ರಕ್ಷಿಸಲಿ. ★ ಸಮೀಪದಲ್ಲಿದ್ದು, ಅಥವಾ ದೂರದಲ್ಲಿದ್ದುಕೊಂಡು ನನಗೆ ಶತ್ರುತ್ವವನ್ನು ಇಚ್ಛಿಸುವ/ವೈರಿಯಾಗಿ ನಡೆದುಕೊಳ್ಳುವ ರಾಕ್ಷಸಾದಿಗಳನ್ನು ನಾನು ಈ ಯಜಮಾನಭಾಗದಿಂದ/ಈ ಮಂತ್ರಜಪದಿಂದ ಗೆಲ್ಲುವೆನು.

ಎಲೈ ಇಡಾದೇವತೆಯೇ! ನೀನು ಧೇನುಸ್ವರೂಪಳೂ*, ವೃಷ್ಟಿಸ್ವರೂಪಳೂ* ಆಗಿದ್ದೀಯೆ. ಒಳ್ಳೆಯ ರೂಪ, ವರ್ಷ, ವರ್ಣಗಳುಳ್ಳವಳು ನೀನು. ನೀನು ಮಂಗಳ ಕರವಾದ ಯಜ್ಞಶಾಲೆಗೆ ಬಾ. ನನಗೆ ಅನುಕೂಲವಾದ ಆಚರಣೆಯುಳ್ಳವಳಾಗಿ ಬಾ.

---

* 'ಪಶವೋ ವಾ ಇಡಾ । ವೃಷ್ಟಿರ್ವಾ ಇಡಾ। ಇತ್ಯಾದಿ ಶ್ರುತಿವಾಕ್ಯಗಳಿಂದ ಇಡಾದೇವತೆಯನ್ನು ಪಶುರೂಪಧಾರಿಣಿಯೆಂದೂ, ವೃಷ್ಟಿರೂಪಳೆಂದೂ ಭಾವಿಸಿ ಸ್ತುತಿಸಲಾಗಿದೆ.

ಅಭ್ಯೇಹಿ ಮಾಮನುವ್ರತಾ ನ್ಯು ಶೀರ್‌ಷಾಣಿ ಮೃಢ್ವಮಿಡ

ಏಹ್ಯದಿತ ಏಹಿ ಸರಸ್ವತ್ಯೇಹಿ ರಂತಿರಸಿ ರಮತಿರಸಿ

---

ಅಭಿ । ಏತಿ । ಇಹಿ । ಮಾಮ್ । ಅನುವ್ರತೇತ್ಯನು-ವ್ರತಾ । ನೀತಿ । ಉ । ಶೀರ್ ಷಾಣಿ । ಮೃಢ್ವಮ್ । ಇಡೇ। ಏತಿ । ಇಹಿ । ಅದಿತೇ । ಏತಿ । ಇಹಿ । ಸರಸ್ವತಿ। ಏತಿ । ಇಹಿ । ರಂತಿಃ । ಅಸಿ । ರಮತಿಃ । ಅಸಿ ।

---

**ಏಹಿ** = ಬಾ; **ಮಾಮ್ ಅಭಿ** = ನನ್ನ ಎದುರಾಗಿ; **ಅನುವ್ರತಾ** = ನನಗೆ ಅನುಕೂಲವಾದ ಆಚರಣೆಯುಳ್ಳವಳಾಗಿ; ಏಹಿ = ಬಾ; ಉ = ಮತ್ತು; [ಎಲೈ! ಇಡಾವಿಶೇಷಗಳೇ! ನೀವು] **ಶೀರ್‌ಷಾಣಿ** = [ನಮ್ಮ] ತಲೆಗಳನ್ನು; **ನಿಮೃಢ್ವಮ್** = ಪ್ರೀತಿಯಿಂದ ಆಘ್ರಾಣಿಸಿ ಪವಿತ್ರಗೊಳಿಸಿರಿ*; **ಇಡೇ**= ಇಡೆಯೆಂಬ[ಪಶುಸಾಧನವಾದುದರಿಂದ ಅಥವಾ ಸ್ತುತ್ಯಳಾದುದರಿಂದ] ಹೆಸರುಳ್ಳವಳೇ! **ಏಹಿ** = ಬಾ; **ಅದಿತೇ** = [ಅಖಂಡನೀಯಳಾಗಿ] ಅದಿತಿಯೆಂಬ ಹೆಸರುಳ್ಳವಳೇ ! **ಏಹಿ** = ಬಾ; **ಸರಸ್ವತಿ** = [ಸಂಚರಣಶೀಲಳಾದುದರಿಂದ, ಸರಸ್ವತೀಸ್ವರೂಪಳಾದುದರಿಂದ] ಸರಸ್ವತೀ ನಾಮವುಳ್ಳವಳೇ! **ಏಹಿ** = ಬಾ; **ರಂತಿಃ ಅಸಿ** = [ಎರಡು ಲೋಕಗಳಲ್ಲಿಯೂ ಸಂತೋಷಪ್ರದಳಾದುದರಿಂದ] ರಂತಿನಾಮಕಳೂ; **ರಮತಿಃ ಅಸಿ** = [ರಮಣೀಯರೂಪವುಳ್ಳವಳಾದುದರಿಂದ] ರಮತಿನಾಮಧೇಯಳೂ ಆಗಿದ್ದೀಯೆ.

---

ನಮ್ಮ ತಲೆಯನ್ನು ಪ್ರೀತಿಯಿಂದ ಆಘ್ರಾಣಿಸಿ ಶುದ್ಧಿಗೊಳಿಸು. ನೀನು **ಇಡೆ, ಅದಿತಿ, ಸರಸ್ವತಿ, ರಮತಿ, ಸೂನರೀ** ಮೊದಲಾದ ಹೆಸರುಳ್ಳವಳು. ಸರ್ವಸೇವ್ಯಳಾದ ನಿನ್ನ ಪ್ರೀತಿಯನ್ನು ನಾನು ಹೊಂದುವಂತಾಗಲಿ. ನೀನು ನಮ್ಮಲ್ಲಿಗೆ ಬರಲು 'ಇಡ ಏಹಿ' ಮೊದಲಾದ ಮಂತ್ರಗಳಿಂದ ಉಪಹೂತಳಾಗಿರುವೆ. ನಿನ್ನ ಅನುಜ್ಞೆಯನ್ನು ನಾನು ಹೊಂದುವೆನು. ಈ ಯಜ್ಞದ ಸತ್ಯವಾದ ಫಲಸಿದ್ಧಿಯು ನನಗೆ ಉಂಟಾಗಲಿ.

---

* ಇಡಾ ಮುಂತಾದ ಗೋಭೇದವನ್ನು ಗಮನಿಸಿ ಬಹುವಚನವಿದೆ.

ಸೂನರ್ಯಸಿ ಜುಷ್ಟೇ ಜುಷ್ಟಿಂ ತೇऽಶೀಯೋಪಹೂತ

ಉಪಹವಂ [.....ಹವಮ್ (೧) ತೇऽಶೀಯ] ತೇऽಶೀಯ

ಸಾ ಮೇ ಸತ್ಯಾಶೀರಸ್ಯ ಯಜ್ಞಸ್ಯ ಭೂಯಾದರೇಡತಾ ಮನಸಾ

---

ಸೂನರೀ । ಅಸಿ । ಜುಷ್ಟೇ । ಜುಷ್ಟಿಮ್ । ತೇ । ಅಶೀಯ । ಉಪಹೂತ ಇತ್ಯುಪ-ಹೂತೇ । ಉಪಹವಮಿತ್ಯುಪ-ಹವಮ್ (೧) । ತೇ । ಅಶೀಯ । ಸಾ । ಮೇ । ಸತ್ಯಾ । ಆಶೀರಿತ್ಯಾ-ಶೀಃ । ಅಸ್ಯ । ಯಜ್ಞಸ್ಯ । ಭೂಯಾತ್ । ಅರೇಡತಾ । ಮನಸಾ।

---

**ಸೂನರೀ ಅಸಿ** = [ಮನುಷ್ಯರಿಗೆ ಸುಖಹೇತುವಾದುದರಿಂದ] ಸೂನರೀನಾಮಕಳೂ ಆಗಿದ್ದೀಯೆ; **ಜುಷ್ಟೇ** = ಸರ್ವಪ್ರಿಯಳಾದವಳೇ! ಸರ್ವರಿಂದಲೂ ಸೇವ್ಯಳಾದವಳೇ! [ನಾನು] **ತೇ** = ನಿನ್ನ; **ಜುಷ್ಟಿಮ್** = ಪ್ರೀತಿಯನ್ನು; **ಅಶೀಯ** = ಹೊಂದುವೆನು; **ಉಪಹೂತೇ** = ['ಇಡ ಏಹಿ' ಮೊದಲಾಗಿ] [ಬರುವುದಕ್ಕಾಗಿ ನಮ್ಮಿಂದ] ಅನುಜ್ಞಾತಳಾದ ವಳೇ ! [ನಾನು] **ತೇ** = ನಿನ್ನ; **ಉಪಹವಮ್** = ಅನುಜ್ಞೆಯನ್ನು; **ಅಶೀಯ** = ಹೊಂದುವೆನು; **ಮೇ** = ನನ್ನ; **ಸಾ** = ಆ; **ಆಶೀಃ** = ಫಲಪ್ರಾರ್ಥನೆಯು; **ಸತ್ಯಾ** = ಸತ್ಯವಾಗಿ; **ಭೂಯಾತ್** = ಆಗಲಿ. [ಯಜ್ಞಫಲವು ನನಗೆ ಸಿದ್ಧಿಸಲಿ], **ಅರೇಡತಾ** = ಅನಾದರವಿಲ್ಲದ; **ಮನಸಾ** = ಮನಸ್ಸಿನಿಂದ; **ತತ್** = ಆ ಫಲವನ್ನು[ಹೊಂದುವುದಕ್ಕೆ]

---

ಆದರವುಳ್ಳ ಮನಸ್ಸಿನಿಂದ ಆ ಫಲವನ್ನು ಪಡೆಯಲು ನಿನ್ನ ಅನುಗ್ರಹದಿಂದ ಸಮರ್ಥನಾಗುವೆನು. ಯಜ್ಞವು ಸ್ವರ್ಗವನ್ನು ಹೊಂದಿ ದೇವತೆಗಳನ್ನು ತೃಪ್ತಿಪಡಿಸಲಿ. ನನ್ನನ್ನೂ ಮರಣಾನಂತರ ಸ್ವರ್ಗಕ್ಕೆ ಒಯ್ಯಲಿ. ದೇವತೆಗಳು ಸಂಚರಿಸುವ ಮಾರ್ಗದಿಂದ ಯಜ್ಞವು [ಹವಿಸ್ಸು] ದೇವತೆಗಳನ್ನು ಹೊಂದಲಿ. ಇಂದ್ರನು ನಮಗೆ ಇಂದ್ರಿಯಪಾಟವವನ್ನು

ತಚ್ಛಕೇಯಂ ಯಜ್ಞೋ ದಿವಗ್ಂ ರೋಹತು ಯಜ್ಞೋ ದಿವಂ ಗಚ್ಛತು ಯೋ ದೇವಯಾನಃ ಪಂಥಾಸ್ತೇನ ಯಜ್ಞೋ ದೇವಾಗ್ಂ ಅಪ್ಯೇತ್ವಸ್ಮಾಸ್ವಿಂದ್ರ ಇಂದ್ರಿಯಂ ದಧಾತ್ವಸ್ಮಾನ್ರಾಯ

---

ತತ್। ಶಕೇಯಮ್। ಯಜ್ಞಃ ದಿವಮ್। ರೋಹತು । ಯಜ್ಞಃ । ದಿವಮ್ । ಗಚ್ಛತು। ಯಃ । ದೇವಯಾನ ಇತಿ ದೇವ-ಯಾನಃ । ಪಂಥಾಃ । ತೇನ । ಯಜ್ಞಃ । ದೇವಾನ್। ಅಪೀತಿ । ಏತು । ಅಸ್ಮಾಸು । ಇಂದ್ರಃ । ಇಂದ್ರಿಯಮ್ । ದಧಾತು । ಅಸ್ಮಾನ್। ರಾಯಃ ।

---

[ನಿನ್ನ ಅನುಗ್ರಹದಿಂದ] **ಶಕೇಯಮ್** = ಶಕ್ತನಾಗುವೆನು; **ಯಜ್ಞಃ ದಿವಮ್ ರೋಹತು**= [ಯಾವ ವೈಗುಣ್ಯವೂ ಇಲ್ಲದೆ] ಯಜ್ಞವು ಸ್ವರ್ಗವನ್ನು ಹೊಂದಲಿ. [ದೇವತೆಗಳನ್ನು ಪ್ರೀತಿಗೊಳಿಸಲಿ]. **ಯಜ್ಞಃ ದಿವಮ್ ಗಚ್ಛತು** = ಯಜ್ಞವು [ಹವಿರ್ಭೋಕ್ತೃಗಳಾದ ದೇವತೆಗಳು ವಾಸಿಸುವ] ಸ್ವರ್ಗಭಾಗಕ್ಕೆ ಹೋಗಲಿ. [ಯಜ್ಞವು ನನ್ನನ್ನು ಸ್ವರ್ಗಕ್ಕೆ ಒಯ್ಯಲಿ] **ಯಃ ದೇವಯಾನಃ ಪಂಥಾಃ** = ದೇವತೆಗಳು ಯಾಗಶಾಲೆಗೆ ಬರುವ ಮಾರ್ಗವು ಯಾವುದೋ, **ತೇನ ಯಜ್ಞಃ ದೇವಾನ್** = ಆ ಮಾರ್ಗದಿಂದ ಯಜ್ಞವು/ಯಜ್ಞದ ಹವಿಸ್ಸು ದೇವತೆಗಳನ್ನು; **ಅಪ್ಯೇತು**= ಹೊಂದಲಿ. **ಅಸ್ಮಾಸು**=ನಮ್ಮಲ್ಲಿ; **ಇಂದ್ರಃ**= ಯಾಗದಿಂದ ತೃಪ್ತನಾದ ಇಂದ್ರನು; **ಇಂದ್ರಿಯಮ್**=[ಬೇರೆಯ ಯಾಗಗಳನ್ನು ಮಾಡಲು] ಇಂದ್ರಿಯ ಸಾಮರ್ಥ್ಯವನ್ನು; **ದಧಾತು** = ಉಂಟು ಮಾಡಲಿ; **ಉತ** = ಮತ್ತು; **ಅಸ್ಮಾನ್** = ನಮ್ಮನ್ನು; **ರಾಯಃ** = ಯಜ್ಞಸಾಧನವಾದ ಧನಾದಿಗಳೂ;

---

ಕೊಡಲಿ. ನಾವು ದೇವತಾನುಗ್ರಹದಿಂದ ಧನವನ್ನು ಹೊಂದಿ ಅನೇಕ ಯಜ್ಞಗಳನ್ನು ಮಾಡುವಂತಾಗಲಿ. ನಮಗೆ ಯಾಗಗಳ ಫಲವು ಸಿದ್ಧಿಸಲಿ. ನೀನು ನಮಗೆ ಸಂತೋಷಪ್ರದಳೂ, ಶತ್ರುಹಿಂಸಕಳೂ, ದುಃಖನಾಶಕಳೂ, ಧನಪ್ರದಳೂ ಆಗು.

# ಉತ ಯಜ್ಞಾಸ್ಸಚಂತಾಮಸ್ಮಾಸು ಸಂತ್ವಾಶಿಷಸ್ಸಾ ನಃ ಪ್ರಿಯಾ ಸುಪ್ರತೂರ್ತಿರ್ಮಘೋನೀ ಜುಷ್ಟಿರಸಿ ಜುಷಸ್ವ ನೋ ಜುಷ್ಟಾ [ಜುಷ್ಟಾ ನಃ (೨) ಅಸಿ..] ನೋಽಸಿ ಜುಷ್ಟಿಂ ತೇ ಗಮೇಯಂ

---

ಉತ। ಯಜ್ಞಾಃ । ಸಚಂತಾಮ್। ಅಸ್ಮಾಸು । ಸಂತು। ಆಶಿಷ ಇತ್ಯಾ-ಶಿಷಃ । ಸಾ । ನಃ। ಪ್ರಿಯಾ । ಸುಪ್ರತೂರ್ತಿರಿತಿ ಸು-ಪ್ರತೂರ್ತಿಃ । ಮಘೋನೀ । ಜುಷ್ಟಿಃ । ಅಸಿ। ಜುಷಸ್ವ । ನಃ । ಜುಷ್ಟಾ । (೨) । ನಃ । ಅಸಿ । ಜುಷ್ಟಿಮ್ । ತೇ । ಗಮೇಯಮ್।

---

| ಮಂತ್ರ | ವಿನಿಯೋಗ |
|---|---|
| ಜುಷ್ಟಿರಸಿ... ಗಮೇಯಮ್ । | ಅವಾಂತರೇಡಾಪ್ರಾಶನದ ಅನುಮಂತ್ರಣಕ್ಕಾಗಿ |

---

**ಯಜ್ಞಾಃ** = [ಮುಂದೆ ಮಾಡಬೇಕಾದ] ಯಾಗಗಳೂ; **ಸಚಂತಾಮ್** = ಆಶ್ರಯಿಸಲಿ; **ಅಸ್ಮಾಸು** = ನಮ್ಮಲ್ಲಿ; **ಆಶಿಷಃ** = ನಾವು ಪ್ರಾರ್ಥಿಸುವ ಯಜ್ಞಫಲಗಳು; **ಸಂತು** = ಇರಲಿ/ಉಂಟಾಗಲಿ. **ಸಾ** = ಅಂತಹ ನೀನು; **ನಃ** = ನಮ್ಮ ವಿಷಯದಲ್ಲಿ; **ಪ್ರಿಯಾ** = ಸಂತೋಷಪ್ರದಳಾಗಿಯೂ; **ಸುಪ್ರತೂರ್ತಿಃ** = ಅತಿಶಯವಾಗಿ ಶತ್ರುಹಿಂಸಕಳೂ [ಚೆನ್ನಾಗಿ ದುಃಖಗಳಿಂದ ದಾಟಿಸತಕ್ಕವಳೂ] **ಮಘೋನೀ** = ಧನವತಿಯಾಗಿಯೂ [ಆಗು]. ✢[ಅವಾಂತರೇಡೆಯೇ!*] ನೀನು; **ಜುಷ್ಟಿಃ ಅಸಿ** = ಪ್ರೀತಿರೂಪಳಾಗಿರುವೆ; **ನಃ** = ನಮ್ಮನ್ನು; **ಜುಷಸ್ವ** = ಸಂತೋಷಪಡಿಸು; **ನಃ** = ನಮ್ಮಿಂದ; **ಜುಷ್ಟಾ** = ಸೇವಿಸಲ್ಪಡುವವಳು; **ಅಸಿ** = ಆಗಿರುತ್ತೀಯೆ; **ತೇ** = ನಿನ್ನ; **ಜುಷ್ಟಿಮ್** = ಪ್ರೀತಿಯನ್ನು; **ಗಮೇಯಮ್** = ಹೊಂದುವೆನು.

---

ಎಲೈ! ಅವಾಂತರೇಡೆಯೇ! ನೀನು ಪ್ರೀತಿಸ್ವರೂಪಳು. ನಮಗೆ ಸಂತೋಷವನ್ನು

---

* ಒಬ್ಬೊಬ್ಬ ಋತ್ವಿಜರು ಭಕ್ಷಿಸುವ ಇಡೆಯ ಭಾಗ.

**ಮನೋ ಜ್ಯೋತಿರ್ಜುಷತಾಮಾಜ್ಯಂ ವಿಚ್ಛಿನ್ನಂ ಯಜ್ಞಗ್ಂ ಸಮಿಮಂ ದಧಾತು । ಬೃಹಸ್ಪತಿಸ್ತನುತಾಮಿಮಂ ನೋ ವಿಶ್ವೇ ದೇವಾ ಇಹ ಮಾದಯಂತಾಮ್ ॥**

---

ಮನಃ। ಜ್ಯೋತಿಃ। ಜುಷತಾಮ್। ಆಜ್ಯಮ್ । ವಿಚ್ಛಿನ್ನಮಿತಿ ವಿ-ಛಿನ್ನಮ್ । ಯಜ್ಞಮ್। ಸಮಿತಿ । ಇಮಮ್ । ದಧಾತು ॥ ಬೃಹಸ್ಪತಿಃ । ತನುತಾಮ್ । ಇಮಮ್ । ನಃ। ವಿಶ್ವೇ । ದೇವಾಃ । ಇಹ । ಮಾದಯಂತಾಮ್ ॥

---

| ಮಂತ್ರ | ವಿನಿಯೋಗ |
|---|---|
| ಮನೋ...ಮಾದಯಂತಾಮ್ ॥ | ವೇದಿಯ ಮಧ್ಯದಲ್ಲಿ ಜಲಪ್ರೋಕ್ಷಣೆಯನ್ನು ಮಾಡಲು |

---

✣ **ಮನಃ ಜ್ಯೋತಿಃ** = ಮನನೀಯವಾದ ಜ್ಯೋತಿಸ್ಸ್ವರೂಪನಾದ ಅಗ್ನಿಯು; **ಆಜ್ಯಮ್** = [ಹವಿಸ್ಸಾಗಿ ಅರ್ಪಿಸಿದ] ತುಪ್ಪವನ್ನು; **ಜುಷತಾಮ್** = ಸೇವಿಸಲಿ; **ವಿಚ್ಛಿನ್ನಮ್ ಇಮಮ್ ಯಜ್ಞಮ್** = [ಯಾವುದಾದರೂ ವೈಗುಣ್ಯದಿಂದ] ವಿಚ್ಛಿನ್ನವಾಗಿರುವ ಯಜ್ಞವನ್ನು; **ಸಮ್ ದಧಾತು** = ಸೇರುವಂತೆ[ಅವಿಚ್ಛಿನ್ನವಾಗುವಂತೆ] ಮಾಡಲಿ; **ಬೃಹಸ್ಪತಿಃ** = ಬೃಹಸ್ಪತಿಯು; **ನಃ** = ನಮ್ಮ; **ಇಮಮ್** = ಈ ಯಜ್ಞವನ್ನು; **ತನುತಾಮ್** = ವಿಸ್ತರಿಸಲಿ; **ಇಹ** = ಈ ಯಾಗದಲ್ಲಿ; **ವಿಶ್ವೇ ದೇವಾಃ** = ಎಲ್ಲಾ ದೇವತೆಗಳೂ; **ಮಾದಯಂತಾಮ್** = ತೃಪ್ತಿ ಹೊಂದಲಿ.

---

ಉಂಟು ಮಾಡು. ನೀನು ನಮ್ಮಿಂದ ಸೇವಿಸಲ್ಪಡುವವಳಾಗಿ ಇರುವೆ. ನಾನು ನಿನ್ನ ಪ್ರೀತಿಯನ್ನು ಪಡೆಯುವೆನು[ಪಡೆಯುವಂತಾಗಲಿ.]

ಮನಸ್ಸಿನಲ್ಲಿ ತಿಳಿಯಬೇಕಾದವ ನಾದ ಜ್ಯೋತೀರೂಪನಾದ ಅಗ್ನಿಯು ಆಜ್ಯಾದಿ ಹವಿಸ್ಸನ್ನು ಸ್ವೀಕರಿಸಲಿ. ಪ್ರಸನ್ನನಾಗಿ ಯಜ್ಞದಲ್ಲಿ ಸಂಭವಿಸಿರುವ ವೈಗುಣ್ಯವನ್ನು

ಬ್ರ್ಧ್ನ ಪಿನ್ವಸ್ವ ದದತೋ ಮೇ ಮಾ ಕ್ಷಾಯಿ ಕುರ್ವತೋ

ಮೇ ಮೋಪದಸತ್ಪ್ರಜಾಪತೇರ್ಭಾಗೋಽಸ್ಯೂರ್ಜಸ್ವಾ-

---

ಬ್ರ್ಧ್ನ । ಪಿನ್ವಸ್ವ । ದದತಃ । ಮೇ । ಮಾ । ಕ್ಷಾಯಿ । ಕುರ್ವತಃ । ಮೇ । ಮಾ।

ಉಪೇತಿ । ದಸತ್ । ಪ್ರಜಾಪತೇರಿತಿ ಪ್ರಜಾ-ಪತೇಃ । ಭಾಗಃ । ಅಸಿ । ಊರ್ಜಸ್ವಾನ್।

---

| ಮಂತ್ರ | ವಿನಿಯೋಗ |
|---|---|
| ಬ್ರ್ಧ್ನ... ದಸತ್ । | ಬರ್ಹಿಸ್ಸಿನಲ್ಲಿಟ್ಟಿರುವ ಪುರೋಡಾಶದ ಅನುಮಂತ್ರಣಕ್ಕಾಗಿ |
| ಪ್ರಜಾಪತೇಃ.... ಲೋಕೇ। | ಅಂತರ್ವೇದಿಯಲ್ಲಿರುವ ಅನ್ವಾಹಾರ್ಯದ ಅನುಮಂತ್ರಣಕ್ಕಾಗಿ |

---

+ಬ್ರ್ಧ್ನ=ಎಲೈ! ಯಜ್ಞವೇ! ಪಿನ್ವಸ್ವ=[ನಮ್ಮನ್ನೂ ಋತ್ವಿಜರನ್ನೂ] ಸಂತೋಷಗೊಳಿಸು; ದದತಃ = ಧನವನ್ನು ದಾನ ಮಾಡುತ್ತಿರುವ; ಮೇ = ನನ್ನ; [ಆ ಕೊಡಬೇಕಾದ ಧನವು] ಮಾ ಕ್ಷಾಯಿ = ಕ್ಷಯವನ್ನು ಹೊಂದದಿರಲಿ/ವೃದ್ಧಿಯನ್ನು ಹೊಂದಲಿ; ಕುರ್ವತಃ = ಯಾಗಾದಿಕರ್ಮಗಳನ್ನು ಮಾಡುತ್ತಿರುವ; ಮೇ= ನನ್ನ; [ಸಾಮರ್ಥ್ಯವಾಗಲೀ/ಶ್ರದ್ಧೆಯಾಗಲೀ] ಮಾ ಉಪದಸತ್ = ಕ್ಷೀಣಿಸದಿರಲಿ / ಮತ್ತೆ ಮತ್ತೆ ಹೆಚ್ಚಾಗುತ್ತಿರಲಿ; +[ಎಲೈ! ಅನ್ವಾಹಾರ್ಯವೇ!] ನೀನು; ಪ್ರಜಾಪತೇಃ ಭಾಗಃ ಅಸಿ = *ಪ್ರಜಾಪತಿದೇವನ ಭಾಗವಾಗಿದ್ದೀಯೆ; [ನೀನು] ಊರ್ಜಸ್ವಾನ್ = ಬಲವಂತನಾಗಿದ್ದೀಯೆ; ಬಲಪ್ರದನಾಗಿದ್ದೀಯೆ.

---

ಹೋಗಲಾಡಿಸಿ ಯಜ್ಞವು ಅವಿಚ್ಛಿನ್ನವಾಗುವಂತೆ ಮಾಡಲಿ. ಬೃಹಸ್ಪತಿಯು ನಮ್ಮ ಈ ಯಜ್ಞವನ್ನು ವಿಸ್ತರಿಸಿ, ಸಂತತವಾದುದನ್ನಾಗಿ ಮಾಡಲಿ. ಎಲ್ಲ ದೇವತೆಗಳೂ ನಮ್ಮ ಈ ಯಜ್ಞದಲ್ಲಿ ತೃಪ್ತಿ ಹೊಂದಿ, ನಮ್ಮನ್ನು ಅನುಗ್ರಹಿಸಲಿ.

ಯಜ್ಞವೇ! ನಮ್ಮನ್ನೂ ಋತ್ವಿಜರನ್ನೂ ಸಂತೋಷಪಡಿಸು. ದಾನವನ್ನು ಕೊಡುತ್ತಿರುವ ನನ್ನ ಧನವು ಎಂದೂ ಕ್ಷೀಣಿಸದಿರಲಿ. ವೃದ್ಧಿ ಹೊಂದಲಿ. ಯಾಗಾದಿಸತ್ಕರ್ಮ

---

* ಅನ್ವಾಹಾರ್ಯವು ಋತ್ವಿಜರ ಭಾಗವಾದರೂ, ಪ್ರಜಾಪತಿಗೆ ಸಂತೋಷಕರವಾದುದರಿಂದ 'ಪ್ರಜಾಪತಿಭಾಗ'ವೆಂದು ಹೇಳಲ್ಪಟ್ಟಿದೆ.

-ನ್ಪಯಸ್ವಾನ್ಪ್ರಾಣಾಪಾನೌ ಮೇ ಪಾಹಿ ಸಮಾನವ್ಯಾನೌ ಮೇ

ಪಾಹ್ಯುದಾನವ್ಯಾನೌ ಮೇ ಪಾಹ್ಯಕ್ಷಿತೋಽಸ್ಯಕ್ಷಿತ್ಯೈ ತ್ವಾ

ಮಾ ಮೇ ಕ್ಷೇಷ್ಠಾ ಅಮುತ್ರಾಮುಷ್ಮಿನ್ಲೋಕೇ ||೩-10||

[ಉಪಹವಂ ಜುಷ್ಟಾನಸ್ತ್ವಾ ಷಟ್ಚ ।]

---

ಪಯಸ್ವಾನ್ । ಪ್ರಾಣಾಪಾನಾವಿತಿ ಪ್ರಾಣ-ಅಪಾನೌ । ಮೇ । ಪಾಹಿ । ಸಮಾನವ್ಯಾನಾವಿತಿ ಸಮಾನ–ವ್ಯಾನೌ। ಮೇ। ಪಾಹಿ । ಉದಾನವ್ಯಾನಾವಿತ್ಯುದಾನ-ವ್ಯಾನೌ । ಮೇ । ಪಾಹಿ। ಅಕ್ಷಿತಃ । ಅಸಿ । ಅಕ್ಷಿತ್ಯೈ । ತ್ವಾ। ಮಾ। ಮೇ । ಕ್ಷೇಷ್ಠಾಃ । ಅಮುತ್ರ । ಅಮುಷ್ಮಿನ್। ಲೋಕೇ ||೩||

---

**ಪಯಸ್ವಾನ್** = ಹಾಲಿನಂತೆ ಮಧುರನಾಗಿದ್ದೀಯೆ/[ಹಾಲಿನಲ್ಲಿ ಬೇಯಿಸುವುದರಿಂದ ಕ್ಷೀರವಂತನಾಗಿದ್ದೀಯೆ; [ನೀನು] **ಮೇ** = ನನ್ನ; **ಪ್ರಾಣಾಪಾನೌ** = ಪ್ರಾಣ ಮತ್ತು ಅಪಾನ ಇವುಗಳನ್ನು; **ಪಾಹಿ** = ಕಾಪಾಡು; **ಮೇ** = ನನ್ನ ; **ಸಮಾನವ್ಯಾನೌ** = ಸಮಾನ ಮತ್ತು ವ್ಯಾನ ಇವುಗಳನ್ನು; **ಪಾಹಿ** = ರಕ್ಷಿಸು; **ಮೇ** = ನನ್ನ; **ಉದಾನವ್ಯಾನೌ** = ಉದಾನ ಮತ್ತು ವ್ಯಾನ ಇವುಗಳನ್ನು; **ಪಾಹಿ**= ಪೊರೆ; [ನೀನು] **ಅಕ್ಷಿತಃ ಅಸಿ** = ಕ್ಷಯವಿಲ್ಲದವನಾಗಿರುವೆ; **ಅಕ್ಷಿತ್ಯೈ** = [ಇಹದಲ್ಲಿಯೂ, ಪರಲೋಕದಲ್ಲಿಯೂ] ಕ್ಷಯವಿಲ್ಲದಿರುವುದಕ್ಕಾಗಿ; **ತ್ವಾ** = ನಿನ್ನನ್ನು [ಋತ್ವಿಜರಿಗೆ ನೀಡುತ್ತೇನೆ] [ನೀನು] **ಮೇ** = ನನಗೆ; **ಅಮುತ್ರ** = ಪರಲೋಕದಲ್ಲಿ; **ಅಮುಷ್ಮಿನ್ ಲೋಕೇ** = ಐಂದ್ರಾದಿಲೋಕ ಗಳಲ್ಲಿ; **ಮಾ ಕ್ಷೇಷ್ಠಾಃ** = [ಫಲವನ್ನು ಕೊಡಲು] ಕ್ಷಯವನ್ನು ಹೊಂದಬೇಡ.

---

ಗಳನ್ನು ಮಾಡುವ ನನ್ನ ಸಾಮರ್ಥ್ಯವಾಗಲೀ, ಶ್ರದ್ಧೆಯಾಗಲೀ, ಕ್ಷೀಣವಾಗದಿರಲಿ. ಮತ್ತೆ ಮತ್ತೆ ಹೆಚ್ಚಾಗುತ್ತಿರಲಿ.

ಅನ್ವಾಹಾರ್ಯವೇ! ನೀನು ಪ್ರಜಾಪತಿಯ ಭಾಗ. ಬಲವಂತನು ಮತ್ತು ಹಾಲಿನಂತೆ

ರುಚಿಕರನಾಗಿದ್ದೀಯೆ. ನೀನು ನನ್ನ *ಪ್ರಾಣ-*ಅಪಾನ-*ವ್ಯಾನ-*ಉದಾನ-*ಸಮಾನ ಗಳನ್ನು ರಕ್ಷಿಸು. ನೀನು ಕ್ಷಯರಹಿತನು. ನಾನು ಪರಲೋಕದಲ್ಲಿಯೂ ಅಕ್ಷಯಸುಖ ವನ್ನು ಹೊಂದುವಂತೆ ಮಾಡು.

## ವಿನಿಯೋಗಸಂಗ್ರಹ

[1]ಅಗ್ನಿಃ ಪ್ರಾಶಿತ್ರಾವದಾನಂ [2]ಯೋ ಮೇಽಂತಿ ಸ್ವಾಮಿಭಾಗಕಮ್ ।
ಇಡಾದ್ವಯಂ [3]ಸುರೂಪೇತಿ [4]ಜುಷ್ಟಿರಿತ್ಯನುಮಂತ್ರಯೇತ್ ॥
[5]ಮನೋಽದ್ಭಿರ್ಮಾರ್ಜನಂ [6]ಬ್ರಧ್ನ ಪುರೋಡಾಶಂ [7]ಪ್ರಜಾಪತೇಃ ।
ಅನ್ವಾಹಾರ್ಯಂ ಮಂತ್ರಯೇತ ಮಂತ್ರಾಃ ಸಪ್ತೇಹ ವರ್ಣಿತಾಃ ॥

**ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ-7**

---

* ಒಂದೇ ವಾಯುವೇ ದೇಹದ ಬೇರೆ ಬೇರೆಯ ಭಾಗಗಳಲ್ಲಿ ಇದ್ದುಕೊಂಡು, ಬೇರೆ ಬೇರೆಯ ಕೆಲಸಗಳನ್ನು ಮಾಡುವುದರಿಂದ ಬೇರೆ ಬೇರೆಯ ಹೆಸರನ್ನು ಪಡೆಯುತ್ತದೆ.
**ಹೃದಿ ಪ್ರಾಣೋ ಗುದೇಽಪಾನಃ ಸಮಾನೋ ನಾಭಿಮಂಡಲೇ ।**
**ಉದಾನಃ ಕಂಠದೇಶಸ್ಥಃ ವ್ಯಾನಃ ಸರ್ವಶರೀರಗಃ ॥**

ಹೃದಯದಲ್ಲಿರುವ ಪ್ರಾಣವು ಉಚ್ಛ್ವಾಸ-ನಿಃಶ್ವಾಸಗಳನ್ನು ನಿರ್ವಹಿಸುತ್ತದೆ. ಅಪಾನವು ಮಲ-ಮೂತ್ರವಿಸರ್ಜನೆಗೆ ನೆರವಾಗುತ್ತದೆ. ಅನ್ನರಸವನ್ನು ಶರೀರದಲ್ಲಿ ಸಮನಾಗಿ ಒಯ್ಯುವುದು ಸಮಾನದ ಕೆಲಸ. ಸೀನುವುದು, ಆಕಳಿಸುವುದು ಇತ್ಯಾದಿಗಳು ಉದಾನದ ಕೆಲಸ. ಶರೀರದ ನಾಡಿಗಳಲ್ಲಿ ವ್ಯಾಪಿಸಿ, ಪ್ರಾಣಾಪಾನಗಳ ಸಂಧಿಯಲ್ಲಿ ಇದ್ದುಕೊಂಡು ಕೆಲಸ ಮಾಡಲು ಶರೀರಕ್ಕೆ ಬಲವನ್ನು ಕೊಡುವುದು ವ್ಯಾನದ ವ್ಯಾಪಾರ. ಅದು ಮುಖ್ಯವಾದುದರಿಂದಲೇ ಅದನ್ನು ಎರಡು ಸಲ ಹೇಳಲಾಗಿದೆ.

## ॥ ಚತುರ್ಥೋಽನುವಾಕಃ ॥

ಬರ್‌ಹಿಷೋಽಹಂ ದೇವಯಜ್ಯಯಾ ಪ್ರಜಾವಾನ್ಭೂಯಾ-
ಸಂ ನರಾಶಗ್‌ಂಸಸ್ಯಾಹಂ ದೇವಯಜ್ಯಯಾ
ಪಶುಮಾನ್ಭೂಯಾಸಮಗ್ನೇಃ

---

ಬರ್‌ಹಿಷಃ। ಅಹಮ್। ದೇವಯಜ್ಯಯೇತಿ ದೇವ-ಯಜ್ಯಯಾ। ಪ್ರಜಾವಾನಿತಿ ಪ್ರಜಾ-ವಾನ್। ಭೂಯಾಸಮ್ । ನರಾಶಗ್‌ಂಸಸ್ಯ। ಅಹಮ್ । ದೇವಯಜ್ಯಯೇತಿ ದೇವ-ಯಜ್ಯಯಾ । ಪಶುಮಾನಿತಿ ಪಶು-ಮಾನ್ । ಭೂಯಾಸಮ್ । ಅಗ್ನೇಃ ।

---

ಮೂರನೆಯ ಅನುವಾಕದಲ್ಲಿ ಪ್ರಾಶಿತ್ರೇಡಾದಿಭಕ್ಷಣಾನುಮಂತ್ರಣಮಂತ್ರಗಳು ಹೇಳಲ್ಪಟ್ಟಿವೆ. ಈ ನಾಲ್ಕನೆಯ ಅನುವಾಕದಲ್ಲಿ ಅನೂಯಾಜಾದಿಶೇಷಹೋಮಗಳ ಅನುಮಂತ್ರಣ ಮಂತ್ರಗಳು ಹೇಳಲ್ಪಟ್ಟಿವೆ.

---

| ಮಂತ್ರ | ವಿನಿಯೋಗ |
|---|---|
| ಬರ್‌ಹಿಷೋಽಹಂ..ಪ್ರಜಾವಾನ್ಭೂಯಾಸಮ್। | *ಬರ್ಹಿರನೂಯಾಜಹೋಮದ ಅನುಮಂತ್ರಣ. |
| ನರಾಶಗ್‌ಂಸಸ್ಯಾಹಂ...ಪಶುಮಾನ್ಭೂಯಾಸಮ್। | ನರಾಶಂಸಾನೂಯಾಜಹೋಮದ ಅನುಮಂತ್ರಣ |
| ಅಗ್ನೇಃ .... ಗಮೇಯಮ್ । | ಅಗ್ನಿಸ್ವಿಷ್ಟಕೃದನೂಯಾಜ ಹೋಮದ ಅನುಮಂತ್ರಣ. |

---

**ಅಹಮ್** = ನಾನು; **ಬರ್‌ಹಿಷಃ** = ಬರ್ಹಿರ್ನಾಮಕನಾದ ಅನೂಯಾಜದೇವತೆಯಾದ ಅಗ್ನಿಯ; **ದೇವಯಜ್ಯಯಾ** = ಆಜ್ಯಾಹುತಿಯಿಂದ; **ಪ್ರಜಾವಾನ್ ಭೂಯಾಸಮ್** = ಸುಪುತ್ರವಂತನಾಗಿ ಆಗುವೆನು; **ಅಹಮ್** = ನಾನು; **ನರಾಶಗ್‌ಂಸಸ್ಯ** = ದ್ವಿತೀಯಾನೂಯಾಜದೇವತೆಯಾದ ನರಾಶಂಸಾಗ್ನಿಯ; **ದೇವಯಜ್ಯಯಾ** = ಆಜ್ಯಾಹುತಿಯಿಂದ; **ಪಶುಮಾನ್ ಭೂಯಾಸಮ್** = ಧೇನ್ವಾದಿಪಶುಮಂತನಾಗಿ ಆಗುವೆನು;

---

ನಾನು ಅನೂಯಾಜದೇವತೆಗಳಾದ ಬರ್‌ಹಿಃ, ನರಾಶಂಸ, ಅಗ್ನಿಃ ಸ್ವಿಷ್ಟಕೃತ್—

---

* ಬರ್‌ಹಿಃ, ನರಾಶಗ್‌ಂಸ, ಅಗ್ನಿಸ್ವಿಷ್ಟಕೃತ್ ದೇವತೆಗಳು ಅನೂಯಾಜದೇವತೆಗಳು. ಬರ್‌ಹಿರಾದಿಗಳು ಅಗ್ನಿವಿಶೇಷಗಳು.

ಸ್ವಿಷ್ಟಕೃತೋಽಹಂ ದೇವಯಜ್ಯಯಾಯುಷ್ಮಾನ್, ಯಜ್ಞೇನ ಪ್ರತಿಷ್ಠಾಂ ಗಮೇಯಮಗ್ನೇರಹಮುಜ್ಜಿತಿಮನೂಜ್ಜೇಷಗ್ಂ

---

ಸ್ವಿಷ್ಟಕೃತ ಇತಿ ಸ್ವಿಷ್ಟ-ಕೃತಃ । ಅಹಮ್ । ದೇವಯಜ್ಯಯೇತಿ ದೇವ-ಯಜ್ಯಯಾ । ಆಯುಷ್ಮಾನ್। ಯಜ್ಞೇನ । ಪ್ರತಿಷ್ಠಾಮಿತಿ ಪ್ರತಿ-ಸ್ಥಾಮ್ । ಗಮೇಯಮ್ । ಅಗ್ನೇಃ। ಅಹಮ್ । ಉಜ್ಜಿತಿಮಿತ್ಯುತ್-ಜಿತಿಮ್ । ಅನು । ಉದಿತಿ । ಜೇಷಮ್ ।

---

| ಮಂತ್ರ | ವಿನಿಯೋಗ |
|---|---|
| ಅಗ್ನೇರಹಂ...ಅನೂಜ್ಜೇಷಮ್ । | ಯಜಮಾನನಿಂದ ಪಠಿಸಲ್ಪಡುವ ಈ ಉಜ್ಜಿತಿ ಮಂತ್ರಗಳು* ಎಂಟು. |

---

+ ಅಹಮ್ = ನಾನು; ಸ್ವಿಷ್ಟಕೃತಃ ಅಗ್ನೇಃ = [ಯಜ್ಞಾಹುತಿಗಳೆಲ್ಲವನ್ನೂ ಒಳ್ಳೆಯ ಆಹುತಿಗಳನ್ನಾಗಿಸುವ] ಸ್ವಿಷ್ಟಕೃದಗ್ನಿದೇವನ; ದೇವಯಜ್ಯಯಾ = ಆಜ್ಯಾಹುತಿಯಿಂದ; ಆಯುಷ್ಮಾನ್ = ದೀರ್ಘಾಯುಷ್ಮಂತನಾಗಿ; ಯಜ್ಞೇನ = [ಅವಿಕಲವಾದ] ಯಜ್ಞದಿಂದ; ಪ್ರತಿಷ್ಠಾಮ್= [ಫಲಸಿದ್ಧಿಯೆಂಬ] ಪ್ರಕೃಷ್ಟಸ್ಥಿತಿಯನ್ನು; ಗಮೇಯಮ್ = ಹೊಂದುವೆನು; +ಅಹಮ್ = ನಾನು; ಅಗ್ನೇಃ = [ಆಜ್ಯಭಾಗದೇವತೆಯಾದ] ಅಗ್ನಿದೇವನ; ಉಜ್ಜಿತಿಮ್ ಅನು = ಉತ್ಕೃಷ್ಟನಾದ ಅಸುರಜಯವನ್ನು ಅನುಸರಿಸಿ; ಉಜ್ಜೇಷಮ್ = [ಪಾಪರೂಪವೈರಿಯನ್ನು] ಚೆನ್ನಾಗಿ ಗೆಲ್ಲುವೆನು.

---

ಈ ದೇವತೆಗಳಿಗೆ ಸಮರ್ಪಿಸಿದ ಆಹುತಿಗಳಿಂದ ಸುಪ್ರೀತರಾದ ಆ ದೇವತೆಗಳ ಅನುಗ್ರಹದಿಂದ ಪ್ರಜಾಸಂಪತ್ತಿಯನ್ನೂ, ಪಶುಸಮೃದ್ಧಿಯನ್ನೂ, ದೀರ್ಘಾಯುಸ್ಸನ್ನೂ, ಉತ್ತಮವಾದ ಯಜ್ಞಫಲಸಿದ್ಧಿಯನ್ನೂ ಹೊಂದುವೆನು.

---

* 'ಅಗ್ನಿರಿದಗ್ಂ ಹವಿರಜುಷತ' ಮೊದಲಾಗಿ ಆಯಾ ದೇವತೆಗಳ ಮಂತ್ರಗಳನ್ನು ಹೋತೃವು ಹೇಳಿದುದನ್ನು ತಿಳಿದಾಗ ಅಧ್ವರ್ಯುವು ಯಜಮಾನನಿಂದ ಈ ಉಜ್ಜಿತಿಮಂತ್ರಗಳನ್ನು ಹೇಳಿಸಬೇಕು.

**ಸೋಮಸ್ಯಾಹಮುಜ್ಜಿತಿಮನೂಜ್ಜೇಷಮಗ್ನೇರಹಮುಜ್ಜಿತಿ**

**ಮನೂಜ್ಜೇಷಮಗ್ನೀಷೋಮಯೋರಹಮುಜ್ಜಿತಿಮನೂ**

**ಜ್ಜೇಷ–**

---

**ಸೋಮಸ್ಯ । ಅಹಮ್ । ಉಜ್ಜಿತಿಮಿತ್ಯುತ್-ಜಿತಿಮ್ । ಅನು । ಉದಿತಿ । ಜೇಷಮ್। ಅಗ್ನೇಃ । ಅಹಮ್। ಉಜ್ಜಿತಿಮಿತ್ಯುತ್-ಜಿತಿಮ್ । ಅನು । ಉದಿತಿ । ಜೇಷಮ್ । ಅಗ್ನೀಷೋಮಯೋರಿತ್ಯಗ್ನೀ-ಸೋಮಯೋಃ। ಅಹಮ್ । ಉಜ್ಜಿತಿಮಿತ್ಯುತ್-ಜಿತಿಮ್। ಅನು । ಉದಿತಿ । ಜೇಷಮ್ ।**

---

| ಮಂತ್ರ | ವಿನಿಯೋಗ |
|---|---|
| ಸೋಮಸ್ಯ.... ಜೇಷಮ್ । | |
| ಅಗ್ನೇಃ ..... ಜೇಷಮ್ । | ಉಜ್ಜಿತಿಮಂತ್ರಗಳು |
| ಅಗ್ನೀಷೋಮಯೋಃ...... ಜೇಷಮ್। | |

---

✣ **ಸೋಮಸ್ಯ** = [ದ್ವಿತೀಯಾಜ್ಯಭಾಗದೇವತೆಯಾದ] ಸೋಮದೇವನ; **ಉಜ್ಜಿತಿಮ್ ಅನು** = ಶ್ರೇಷ್ಠಜಯವನ್ನನುಸರಿಸಿ; **ಅಹಮ್** = ನಾನು; **ಉಜ್ಜೇಷಮ್** = ಪಾಪವನ್ನು ಗೆಲ್ಲುವೆನು; ✣ **ಅಹಮ್**= ನಾನು; **ಅಗ್ನೇಃ** = [ದರ್ಶ-ಪೂರ್ಣಮಾಸಗಳಲ್ಲಿ ಪ್ರಥಮ ಪ್ರಧಾನದೇವತೆಯಾದ] ಅಗ್ನಿಯ; **ಉಜ್ಜಿತಿಮ್ ಅನು ಉಜ್ಜೇಷಮ್** = ಉತ್ತಮವಾದ ಗೆಲುವನ್ನು ಅನುಸರಿಸಿ ಪಾಪವನ್ನು ಗೆಲ್ಲುವೆನು.

---

ದೇವತೆಗಳು ದರ್ಶ-ಪೂರ್ಣಮಾಸ ಯಾಗಗಳನ್ನು ಮಾಡಿ ರಾಕ್ಷಸರನ್ನು ಸೋಲಿಸಿದರು. ನಾನು ಕೂಡ ಅಗ್ನಿ, ಸೋಮ, ಅಗ್ನಿ, ಅಗ್ನೀಷೋಮ, ಇಂದ್ರಾಗ್ನಿ, ಇಂದ್ರ, ಮಹೇಂದ್ರ, ಸ್ವಿಷ್ಟಕೃದಗ್ನಿ— ಈ ದೇವತೆಗಳ ಅನುಗ್ರಹವನ್ನು ಪಡೆದು ದೇವತೆಗಳು ಅಸುರರನ್ನು

# ಮಿಂದ್ರಾಗ್ನಿಯೋರಹಮುಜ್ಜಿತಿಮನೂಜ್ಜೇಷಮಿಂದ್ರಸ್ಯಾ ಹಮುಜ್ಜಿತಿಮನೂಜ್ಜೇಷಂ ಮಹೇಂದ್ರಸ್ಯಾಹ

# [...ಹಮ್ (೧) ಉಜ್ಜಿತಿ.......]ಮುಜ್ಜಿತಿ

---

ಇಂದ್ರಾಗ್ನಿಯೋರಿತೀಂದ್ರ-ಅಗ್ನಿಯೋಃ। ಅಹಮ್। ಉಜ್ಜಿತಿಮಿತ್ಯುತ್-ಜಿತಿಮ್। ಅನು। ಉದಿತಿ । ಜೇಷಮ್ । ಇಂದ್ರಸ್ಯ । ಅಹಮ್ (೧) । ಉಜ್ಜಿತಿಮಿತ್ಯುತ್-ಜಿತಿಮ್। ಅನು । ಉದಿತಿ । ಜೇಷಮ್ । ಮಹೇಂದ್ರಸ್ಯೇತಿ ಮಹಾ-ಇಂದ್ರಸ್ಯ । ಅಹಮ್ । ಉಜ್ಜಿತಿಮಿತ್ಯುತ್-ಜಿತಿಮ್ ।

---

| ಮಂತ್ರ | ವಿನಿಯೋಗ |
|---|---|
| ಇಂದ್ರಾಗ್ನಿಯೋಃ..... ಜೇಷಮ್ । | |
| ಇಂದ್ರಸ್ಯ..... ಜೇಷಮ್ । | ಉಜ್ಜಿತಿಮಂತ್ರಗಳು |
| ಮಹೇಂದ್ರಸ್ಯ..... ಜೇಷಮ್ । | |

---

✢ಅಹಮ್ = ನಾನು; ಅಗ್ನೀಷೋಮಯೋಃ = [ಪೂರ್ಣಮಾಸಯಾಗದೇವತೆಯಾದ] ಅಗ್ನೀಷೋಮದ; ಉಜ್ಜಿತಮ್ ಅನು ಉಜ್ಜೇಷಮ್ = ಪ್ರಕೃಷ್ಟಜಯವನ್ನನುಸರಿಸಿ ಪಾಪವೆಂಬ ಶತ್ರುವನ್ನು ಗೆಲ್ಲುವೆನು. ✢ಅಹಮ್ = ನಾನು; ಇಂದ್ರಾಗ್ನಿಯೋಃ ಉಜ್ಜಿತಿಮ್ ಅನು ಉಜ್ಜೇಷಮ್ = [ದರ್ಶ-ಪೂರ್ಣಮಾಸದೇವತೆಗಳಾದ] ಇಂದ್ರಾಗ್ನಿಗಳ ಮೇಲಾದ ಗೆಲುವನ್ನು ಅನುಸರಿಸಿ ಪಾಪಶತ್ರುವನ್ನು ನಿಗ್ರಹಿಸುವೆನು; ✢ಅಹಮ್ = ನಾನು; ಇಂದ್ರಸ್ಯ ಉಜ್ಜಿತಿಮ್ ಅನು ಉಜ್ಜೇಷಮ್ = [ದರ್ಶದ ಸಾನ್ನಾಯ್ಯದೇವತೆ ಯಾದ] ಇಂದ್ರನ ಜಯವನ್ನು ಅನುಸರಿಸಿ ಪಾಪವೈರಿಯನ್ನು ಗೆಲ್ಲುವೆನು; ✢ಮಹೇಂದ್ರಸ್ಯ ಉಜ್ಜಿತಿಮ್ ಅನು ಅಹಮ್ ಉಜ್ಜೇಷಮ್ = [ದರ್ಶದ ಸಾನ್ನಾಯ್ಯ ಯಾಗದೇವತೆಯಾದ] ಮಹೇಂದ್ರನ ಗೆಲುವನ್ನನುಸರಿಸಿ ಪಾಪವನ್ನು ಗೆಲ್ಲುವೆನು.

---

ಜಯಿಸಿದಂತೆ ಪಾಪವೆಂಬ ವೈರಿಯನ್ನು ಗೆದ್ದು ಯಾಗದ

ಮನೂಜ್ಜೇಷಮಗ್ನೇಃ ಸ್ವಿಷ್ಟಕೃತೋಽಹಮುಜ್ಜಿತಿಮನೂಜ್ಜೇ

ಷಂ ವಾಜಸ್ಯ ಮಾ ಪ್ರಸವೇನೋದ್ಗ್ರಾಭೇಣೋದಗ್ರಭೀತ್।

---

ಅನು । ಉದಿತಿ । ಜೇಷಮ್ । ಅಗ್ನೇಃ । ಸ್ವಿಷ್ಟಕೃತ ಇತಿ ಸ್ವಿಷ್ಟ-ಕೃತಃ । ಅಹಮ್।

ಉಜ್ಜಿತಿಮಿತ್ಯುತ್-ಜಿತಿಮ್ । ಅನು । ಉದಿತಿ । ಜೇಷಮ್ । ವಾಜಸ್ಯ । ಮಾ ।

ಪ್ರಸವೇನೇತಿ ಪ್ರ-ಸವೇನ । ಉದ್ಗ್ರಾಭೇಣೇತ್ಯುತ್-ಗ್ರಾಭೇಣ । ಉದಿತಿ । ಅಗ್ರಭೀತ್॥

---

| ಮಂತ್ರ | ವಿನಿಯೋಗ |
|---|---|
| ಅಗ್ನೇಃ..... ಜೇಷಮ್ । | ಉಜ್ಜಿತಿಮಂತ್ರ |
| ವಾಜಸ್ಯ.... ಅಕಃ । | ಸ್ರುಕ್‌ಗಳ ವ್ಯೂಹನ [ಮೇಲೆ ಕೆಳಗೆ ಮಾಡುವುದು] ವನ್ನು ಮಾಡಲು |

---

+ಅಹಮ್ ಅಗ್ನೇಃ ಸ್ವಿಷ್ಟಕೃತಃ ಉಜ್ಜಿತಿಮ್ ಅನು ಉಜ್ಜೇಷಮ್ = ನಾನು [ಸ್ವಿಷ್ಟ ಕೃದ್ಯಾಗದೇವತೆಯಾದ] ಸ್ವಿಷ್ಟಕೃದಗ್ನಿದೇವನ ಅಸುರಜಯವನ್ನನುಸರಿಸಿ ಪಾಪವೈರಿ ಯನ್ನು ಗೆಲ್ಲುವೆನು; + ಇಂದ್ರಃ = ಇಂದ್ರನು; ವಾಜಸ್ಯ ಪ್ರಸವೇನ = ಅನ್ನದ ಉತ್ಪತ್ತಿ ನಿಮಿತ್ತವಾದ ; ಉದ್ಗ್ರಾಭೇಣ = [ಸ್ರುಕ್‌ಗಳನ್ನು] ಮೇಲೆತ್ತುವುದರಿಂದ; ಮಾ = ನನ್ನನ್ನು; ಉದಗ್ರಭೀತ್ = ಮೇಲಕ್ಕೆ ಎತ್ತಿದನು;

---

ಫಲಸಿದ್ಧಿಯನ್ನು ಪಡೆಯುವೆನು/ನನ್ನ ಹಗೆಯನ್ನು ಸೋಲಿಸುವೆನು/ಪರಲೋಕದಲ್ಲಿ ನನಗೆ ಅಂತಹ ಸಾಮರ್ಥ್ಯವು ಒದಗಲಿ.

अथा सपत्नाग्ं इन्द्रो मे निग्राभेणाधराग्ं

अकः । उद्ग्राभं च निग्राभं च ब्रह्म देवा

अवीवृधन् ।

---

अथ । सपत्नान् । इन्द्रः । मे । निग्राभेणेति नि-ग्राभेण । अधरान्।

अकः॥ उद्ग्राभमित्युत्-ग्राभम् । च । निग्राभमिति नि-ग्राभम् । च।

ब्रह्म । देवाः । अवीवृधन् ॥

---

ಮಂತ್ರ ವಿನಿಯೋಗ

ಉದ್ಗ್ರಾಭಂ.. ವ್ಯಸ್ಯತಾಮ್ । ಸ್ರುಕ್‌ಗಳ ವ್ಯೂಹನವನ್ನು ಮಾಡಲು



---

ಅಥ = ಅನಂತರ; ಮೇ = ನನ್ನ; ಸಪತ್ನಾನ್ = ಶತ್ರುಗಳನ್ನು; ನಿಗ್ರಾಭೇಣ = ಸ್ರುಕ್ಕುಗಳನ್ನು ಕೆಳಗೆ ಮಾಡುವುದರಿಂದ; ಅಧರಾನ್ ಅಕಃ = ಕೀಳಾದವರನ್ನಾಗಿ ಮಾಡಿದನು; ದೇವಾಃ = ದೇವತೆಗಳು; ಉದ್ಗ್ರಾಭಂ ಚ ನಿಗ್ರಾಭಂ ಚ = [ಸ್ರುಕ್‌ಗಳ] ಉದ್ಗ್ರಾಭ-ನಿಗ್ರಾಭಗಳೆಂಬ; ಬ್ರಹ್ಮ = ಶ್ರೇಷ್ಠವಾದ ಕರ್ಮದ್ವಯವನ್ನು; ಅವೀವೃಧನ್ = ವೃದ್ಧಿಗೊಳಿಸಿದರು;

---

ಇಂದ್ರನು ಅನ್ನದ ಉತ್ಪತ್ತಿನಿಮಿತ್ತದಿಂದ ಸ್ರುಕ್ಕುಗಳನ್ನು ಮೇಲಕ್ಕೆತ್ತಿದನು. ಇದರಿಂದ ನನ್ನನ್ನೂ ಮೇಲಕ್ಕೆ ಎತ್ತಿದಂತಾಯಿತು. ಅನಂತರ ಸ್ರುಕ್ಕುಗಳನ್ನು ಕೆಳಗೆ ಮಾಡಿದುದರಿಂದ ಶತ್ರುಗಳನ್ನು ಕೀಳಾದವರನ್ನಾಗಿ ಮಾಡಿದನು. ದೇವತೆಗಳು ಈ ಉದ್ಗ್ರಾಭ-ನಿಗ್ರಾಭಗಳೆಂಬ ಎರಡು ಕರ್ಮಗಳನ್ನು ವೃದ್ಧಿಗೊಳಿಸಿದರು. ಅನಂತರ ಇಂದ್ರಾಗ್ನಿದೇವತೆಗಳು ನನ್ನ ಶತ್ರುಗಳು ಎಲ್ಲ ಕಡೆಗೂ ಓಡುವಂತೆ ಮಾಡಿ ಅವರನ್ನು ನಾಶಗೊಳಿಸಲಿ.

ಅಥಾ ಸಪತ್ನಾನಿಂದ್ರಾಗ್ನೀ ಮೇ ವಿಷೂಚೀನಾನ್ವ್ಯಸ್ಯತಾಮ್।
ಏಮಾ ಅಗ್ಮನ್ನಾಶಿಷೋ ದೋಹಕಾಮಾ ಇಂದ್ರವಂತೋ
[ಇಂದ್ರವಂತಃ (೨) ವನಾಮಹೇ] ವನಾಮಹೇ ಧುಕ್ಷೀಮಹಿ

---

ಅಥ। ಸಪತ್ನಾನ್। ಇಂದ್ರಾಗ್ನೀ ಇತೀಂದ್ರ-ಅಗ್ನೀ। ಮೇ। ವಿಷೂಚೀನಾನ್ । ವೀತಿ । ಅಸ್ಯತಾಮ್ ॥ ಏತಿ । ಇಮಾಃ । ಅಗ್ಮನ್ನ್ । ಆಶಿಷ ಇತ್ಯಾ-ಶಿಷಃ । ದೋಹಕಾಮಾ ಇತಿ ದೋಹ-ಕಾಮಾಃ। ಇಂದ್ರವಂತ ಇತೀಂದ್ರ-ವಂತಃ (೨)। ವನಾಮಹೇ । ಧುಕ್ಷೀಮಹಿ।

---

| ಮಂತ್ರ | ವಿನಿಯೋಗ |
|---|---|
| ಏಮಾ.... ಪ್ರಜಾಮಿಷಮ್ ॥ | *ಅಧ್ವರ್ಯುವು ಯಜಮಾನನಿಂದ ಹೇಳಿಸಲು. [ಇದು 'ಯಜ್ಞದೋಹ'] |

---

**ಅಥ** = ಅನಂತರ; **ಇಂದ್ರಾಗ್ನೀ** = ಇಂದ್ರಾಗ್ನಿದೇವತೆಗಳು; **ಮೇ** = ನನ್ನ; **ಸಪತ್ನಾನ್** = ಶತ್ರುಗಳನ್ನು; **ವಿಷೂಚೀನಾನ್** = ಎಲ್ಲಾ ಕಡೆಗಳಲ್ಲಿಯೂ ಪಲಾಯನ ಮಾಡುವಂತೆ ಮಾಡಿ; **ವ್ಯಸ್ಯತಾಮ್** = ನಾಶಗೊಳಿಸಲಿ. **ಇಮಾಃ** [ಆಶಿಷಃ] = ["ಆಯುರಾಶಾಸ್ತೇ" ಮೊದಲಾದ] ಈ [ಶುಭಾಶಂಸನೆಗಳು]; **ಆ ಅಗ್ಮನ್ನ್** = ನಮ್ಮನ್ನು ಕುರಿತು ಬರಲಿ; **ವಯಮ್** = ನಾವು; **ದೋಹಕಾಮಾಃ** = [ನಮ್ಮ ಇಷ್ಟಾರ್ಥಗಳನ್ನು] ಕರೆದುಕೊಳ್ಳುವ ಇಚ್ಛೆಯುಳ್ಳವರಾಗಿ; **ಇಂದ್ರವಂತಃ** = ಕಾಮಪ್ರದನಾದ ಇಂದ್ರದೇವನನ್ನು ಹೊಂದಿದವರಾಗಿ; **ವನಾಮಹೇ** = [ಇಂದ್ರನನ್ನು] ಸೇವಿಸುತ್ತೇವೆ.

---

ಹೋತೃವು ಹೇಳುವ 'ಆಯುಸ್ಸು' ಮುಂತಾದ ಶುಭಾಶಂಸನೆಗಳು ನಮಗೆ ಫಲಿಸಲಿ. ನಾವು ಈ ಫಲಗಳನ್ನು ಪಡೆದುಕೊಳ್ಳಲು ಇಂದ್ರನನ್ನು ಸೇವಿಸುತ್ತೇವೆ.

---

* ಹೋತೃವು 'ಆಶಾಸ್ತೇಽಯಂ ಯಜಮಾನೋಽಸೌ' ಎಂದು ಹೇಳುವುದನ್ನು ತಿಳಿದಾಗ ಅಧ್ವರ್ಯುವು ಯಜಮಾನನಿಂದ ಇದನ್ನು ಹೇಳಿಸಬೇಕು.

ಪ್ರಜಾಮಿಷಮ್ ॥ ರೋಹಿತೇನ ತ್ವಾಗ್ನಿರ್ದೇವತಾಂ ಗಮಯತು ಹರಿಭ್ಯಾಂ ತ್ವೇಂದ್ರೋ ದೇವತಾಂ ಗಮಯತ್ವೇತಶೇನ ತ್ವಾ ಸೂರ್ಯೋ ದೇವತಾಂ ಗಮಯತು

---

ಪ್ರಜಾಮಿತಿ ಪ್ರ-ಜಾಮ್ । ಇಷಮ್ ॥ ರೋಹಿತೇನ । ತ್ವಾ । ಅಗ್ನಿಃ । ದೇವತಾಮ್। ಗಮಯತು। ಹರಿಭ್ಯಾಮಿತಿ ಹರಿ-ಭ್ಯಾಮ್। ತ್ವಾ। ಇಂದ್ರಃ । ದೇವತಾಮ್ । ಗಮಯತು। ಏತಶೇನ । ತ್ವಾ । ಸೂರ್ಯಃ । ದೇವತಾಮ್ । ಗಮಯತು ।

---

| ಮಂತ್ರ | ವಿನಿಯೋಗ |
|---|---|
| ರೋಹಿತೇನ... ಅಗ್ನಿಃ.. ಗಮಯತು । | ಪ್ರಸ್ತರಪ್ರಹರಣದ ಅನುಮಂತ್ರಣ |
| ಹರಿಭ್ಯಾಂ... ಇಂದ್ರೋ... ಗಮಯತು । | ಪ್ರಸ್ತರಪ್ರಹರಣದ ಅನುಮಂತ್ರಣ . |
| ಏತಶೇನ.... ಸೂರ್ಯೋ.... ಗಮಯತು । | ಪ್ರಸ್ತರಪ್ರಹರಣದ ಅನುಮಂತ್ರಣ. |

---

**ಪ್ರಜಾಮ್ ಇಷಮ್** = [ಇಂದ್ರನನ್ನು ಸೇವಿಸಿ ಅವನ ಅನುಗ್ರಹದಿಂದ] ಒಳ್ಳೆಯ ಮಕ್ಕಳನ್ನೂ ಅನ್ನಾದಿಗಳನ್ನೂ; **ಧುಕ್ಷೀಮಹಿ** = [ಕಾಮಧೇನುವಿನಂತಿರುವ ಇಂದ್ರನಿಂದ] ಕರೆದುಕೊಳ್ಳುತ್ತೇವೆ. [ಹೊಂದುತ್ತೇವೆ]; ⁜[ಎಲೈ! ಪ್ರಸ್ತರವೇ!] **ಅಗ್ನಿಃ** = ಅಗ್ನಿಯು; **ರೋಹಿತೇನ** = ರೋಹಿತವೆಂಬ ಕುದುರೆಯಿಂದ [ರೋಹಿತವರ್ಣದ ಕುದುರೆಯಿಂದ]; **ತ್ವಾ** = ನಿನ್ನನ್ನು; **ದೇವತಾಮ್** = ಸೂಕ್ತವಾಕದೇವತೆಯನ್ನು; **ಗಮಯತು** = ಹೊಂದಿಸಲಿ; ⁜**ಇಂದ್ರಃ** = ಇಂದ್ರನು; **ಹರಿಭ್ಯಾಮ್** = ಹರಿ [ಹಸಿರುಬಣ್ಣದ ಕುದುರೆ]ಗಳೆಂಬ ಕುದುರೆಗಳಿಂದ; **ತ್ವಾ** = ನಿನ್ನನ್ನು; **ದೇವತಾಮ್** = ಯಾಗದೇವತೆಗಳನ್ನು; **ಗಮಯತು** = ಹೊಂದಿಸಲಿ; ⁜**ಸೂರ್ಯಃ** = ಸೂರ್ಯನು; **ಏತಶೇನ** = [ಚಿತ್ರವರ್ಣದ] ಏತಶವೆಂಬ ಕುದುರೆಯಿಂದ; **ತ್ವಾ** = ನಿನ್ನನ್ನು; **ದೇವತಾಮ್ ಗಮಯತು** = ದೇವತೆಗಳನ್ನು ಹೊಂದಿಸಲಿ;

---

ಇಂದ್ರನು ಕಾಮಧೇನುವಿನಂತೆ ಕೇಳಿದುದೆಲ್ಲವನ್ನು ಕೊಡತಕ್ಕವನು. ಆತನ ಅನುಗ್ರಹ

ವಿ ತೇ ಮುಂಚಾಮಿ ರಶನಾ ವಿ ರಶ್ಮೀನ್, ವಿ ಯೋಕ್ತ್ರಾ ಯಾನಿ

ಪರಿಚರ್ತನಾನಿ ಧತ್ತಾದಸ್ಮಾಸು ದ್ರವಿಣಂ

---

ವೀತಿ । ತೇ । ಮುಂಚಾಮಿ । ರಶನಾಃ । ವೀತಿ । ರಶ್ಮೀನ್ । ವೀತಿ । ಯೋಕ್ತ್ರಾ। ಯಾನಿ । ಪರಿಚರ್ತನಾನೀತಿ ಪರಿ-ಚರ್ತನಾನಿ । ಧತ್ತಾತ್ । ಅಸ್ಮಾಸು । ದ್ರವಿಣಮ್।

---

| ಮಂತ್ರ | ವಿನಿಯೋಗ |
|---|---|
| ವಿ ತೇ....ದೇವತಾಸು । | ಪರಿಧಿಗಳ ವಿಮೋಚನವಾದಾಗ ಹೇಳುವ ಅನುಮಂತ್ರಣಮಂತ್ರ. |

---

✣ [ಎಲೈ! ಅಗ್ನಿಯೇ!] **ತೇ** = ನಿನ್ನ; ***ರಶನಾಃ** = ಹೊಟ್ಟೆಯ ಭಾಗಕ್ಕೆ ಕಟ್ಟಿದ ಹಗ್ಗದಂತಿರುವ ಪರಿಧಿಗಳನ್ನು; **ವಿ ಮುಂಚಾಮಿ** = ಬಿಡಿಸುತ್ತೇನೆ. **ರಶ್ಮೀನ್** = ಕಡಿವಾಣವನ್ನು ಎಳೆಯುವುದಕ್ಕಾಗಿ ಉಪಯೋಗಿಸುವ ಹಗ್ಗಗಳನ್ನು [ಅದರಂತಿರುವ ಪರಿಧಿಗಳನ್ನು] **ವಿ ಮುಂಚಾಮಿ** = ಬಿಡಿಸುತ್ತೇನೆ; **ಯೋಕ್ತ್ರಾ** = ರಥವನ್ನು ಕಟ್ಟಲು ಉಪಯೋಗಿಸುವ ಜೊತಿಗೆ ಹಗ್ಗಗಳನ್ನು [ಅದರಂತಿರುವ ಪರಿಧಿಗಳನ್ನು]; **ವಿ ಮುಂಚಾಮಿ** = ಬಿಚ್ಚುತ್ತೇನೆ; **ಯಾನಿ ಪರಿಚರ್ತನಾನಿ** = ಯಾವ ಸುತ್ತುವ ಹಗ್ಗಗಳಿವೆಯೋ; **ತಾನಿ ವಿಮುಂಚಾಮಿ** = ಅವುಗಳನ್ನು[ಅವುಗಳಂತಿರುವ ಪರಿಧಿಗಳನ್ನು] ತೆಗೆದುಹಾಕುತ್ತೇನೆ; [ಹೀಗೆ ಬಂಧನಮುಕ್ತನಾದ ನೀನು] **ಅಸ್ಮಾಸು** = ನಮ್ಮಲ್ಲಿ; **ದ್ರವಿಣಮ್** = ಧನವನ್ನು;

---

ದಿಂದ ಒಳ್ಳೆಯ ಮಕ್ಕಳನ್ನೂ, ಅನ್ನಾದಿಸಂಪತ್ತನ್ನೂ ಪಡೆದುಕೊಳ್ಳುತ್ತೇವೆ/ ಪಡೆಯುವಂತಾಗಲಿ.

---

* ರಶನಾ, ರಶ್ಮಿ, ಯೋಕ್ತ್ರ , ಪರಿಚರ್ತನ-ಇವುಗಳು ಕುದುರೆಯನ್ನು ರಥಕ್ಕೆ ಕಟ್ಟಿ ನಡೆಸಲು ಉಪಯುಕ್ತವಾದ ಹಗ್ಗಮೊದಲಾದ ಸಾಧನಗಳು. ಪರಿಧಿಗಳು ಅಗ್ನಿಗೆ ಈ ರಶನಾ ಮೊದಲಾದುವುಗಳಂತಿವೆ ಎಂದು ಇಲ್ಲಿ ವರ್ಣಿತವಾಗಿದೆ.

ಯಚ್ಚ ಭದ್ರಂ ಪ್ರ ಣೋ ಬ್ರೂತಾದ್ಭಾಗಧಾನ್ದೇವತಾಸು ॥

ವಿಷ್ಣೋಃ ಶಂಯೋರಹಂ ದೇವಯಜ್ಯಯಾ ಯಜ್ಞೇನ

ಪ್ರತಿಷ್ಠಾಂ ಗಮೇಯಗ್ಂ

---

ಯತ್ । ಚ । ಭದ್ರಮ್ । ಪ್ರೇತಿ । ನಃ । ಬ್ರೂತಾತ್ । ಭಾಗಧಾನಿತಿ ಭಾಗ-ಧಾನ್। ದೇವತಾಸು ॥ ವಿಷ್ಣೋಃ । ಶಂಯೋರಿತಿ ಶಮ್-ಯೋಃ । ಅಹಮ್ । ದೇವಯಜ್ಯಯೇತಿ ದೇವ-ಯಜ್ಯಯಾ । ಯಜ್ಞೇನ । ಪ್ರತಿಷ್ಠಾಮಿತಿ ಪ್ರತಿ- ಸ್ಥಾಮ್। ಗಮೇಯಮ್ ।

---

| ಮಂತ್ರ | ವಿನಿಯೋಗ |
|---|---|
| ವಿಷ್ಣೋಃ ... ಗಮೇಯಮ್ । | ಶಂಯುವಾಕವನ್ನು ಹೇಳುವಾಗ ಅನುಮಂತ್ರಣ ಮಂತ್ರ. [ತಚ್ಛಂಯೋರಾವೃಣೀಮಹೇ । ಎಂದು ಶಂಯುವಾಕದ ಆರಂಭ]. |

---

**ಚ** = ಮತ್ತು; **ಯತ್ ಭದ್ರಮ್** = ಯಾವ ಮಂಗಳಕರವಾದ [ಅನ್ನಾದಿಗಳುಂಟೋ ಅದನ್ನೂ] **ಧತ್ತಾತ್** = ನೆಲೆಗೊಳಿಸು; **ದೇವತಾಸು** = ದೇವತೆಗಳಲ್ಲಿ; **ನಃ** = ನಮ್ಮನ್ನು; **ಭಾಗಧಾನ್** = [ದೇವತೆಗಳಿಗೆ] ಹವಿರ್ಭಾಗವನ್ನು ಕೊಟ್ಟವರನ್ನಾಗಿ; **ಪ್ರಬ್ರೂತಾತ್** = ಘೋಷಿಸು; **ವಿಷ್ಣೋಃ** = ವ್ಯಾಪಕನಾದ; [ಹಲವು ಕಾರ್ಯಗಳ ಸಂಬಂಧವುಳ್ಳ]; **ಶಂಯೋಃ** = ಬೃಹಸ್ಪತಿಪುತ್ರನಾದ ಶಂಯುವಿನ [ಶಂಯು = ಸುಖಯುಕ್ತ; ರೋಗ ಭಯಗಳನ್ನು ಶಮನ ಮಾಡುವವನು/ಹೋಗಲಾಡಿಸುವವನು]; **ದೇವಯಜ್ಯಯಾ** = [ಪರಿಧಿಪ್ರಹರಣರೂಪವಾದ] ಯಾಗದಿಂದ; **ಅಹಮ್**=ನಾನು; **ಯಜ್ಞೇನ ಪ್ರತಿಷ್ಠಾಮ್ ಗಮೇಯಮ್** = ಶ್ರೇಷ್ಠವಾದ ಯಜ್ಞದ ಫಲಸಿದ್ಧಿಯನ್ನು ಹೊಂದುವೆನು.

---

ಅಗ್ನಿ, ಇಂದ್ರ, ಸೂರ್ಯ- ಇವರು ಅಗ್ನಿಯಲ್ಲಿ ಹಾಕುತ್ತಿರುವ ಪ್ರಸ್ತರವನ್ನು ತಮ್ಮ ರೋಹಿತ, ಹರಿ, ಏತಶಗಳೆಂಬ ಕುದುರೆಗಳಿಂದ ಕೂಡಿದ ರಥಗಳಲ್ಲಿ ಸೂಕ್ತವಾಕ

# ಸೋಮಸ್ಯಾಹಂ ದೇವಯಜ್ಯಯಾ [ದೇವಯಜ್ಯಯಾ (೩)] ಸುರೇತಾ ರೇತೋ ಧಿಷೀಯ ತ್ವಷ್ಟುರಹಂ ದೇವಯಜ್ಯಯಾ ಪಶೂನಾಗ್ಂ ರೂಪಂ ಪುಷೇಯಂ

---

ಸೋಮಸ್ಯ । ಅಹಮ್। ದೇವಯಜ್ಯಯೇತಿ ದೇವ-ಯಜ್ಯಯಾ (೩) । ಸುರೇತಾ ಇತಿ ಸು-ರೇತಾಃ । ರೇತಃ। ಧಿಷೀಯ । ತ್ವಷ್ಟುಃ । ಅಹಮ್ । ದೇವಯಜ್ಯಯೇತಿ ದೇವ-ಯಜ್ಯಯಾ । ಪಶೂನಾಮ್ । ರೂಪಮ್ । ಪುಷೇಯಮ್ ।

---

| ಮಂತ್ರ | ವಿನಿಯೋಗ |
|---|---|
| ಸೋಮಸ್ಯ.... ಧಿಷೀಯ । | ಮೊದಲನೆಯ ಪತ್ನೀಸಂಯಾಜಯಾಗದ ಅನುಮಂತ್ರಣ.* |
| ತ್ವಷ್ಟುರಹಂ..... ಪುಷೇಯಮ್ । | ಎರಡನೆಯ ಪತ್ನೀಸಂಯಾಜದ ಅನುಮಂತ್ರಣ. |

---

C **ಅಹಮ್** = ನಾನು; **ಸೋಮಸ್ಯ** = ಸೋಮದೇವತೆಯ; **ದೇವಯಜ್ಯಯಾ** = ಹೋಮದಿಂದ; **ಸುರೇತಾಃ** = ಒಳ್ಳೆಯ ರೇತಸ್ಸುಳ್ಳವನಾಗಿ; **ರೇತಃ ಧಿಷೀಯ** = ರೇತಸ್ಸನ್ನು ಧರಿಸುವೆನು. ✢ **ಅಹಮ್** = ನಾನು; **ತ್ವಷ್ಟುಃ ದೇವಯಜ್ಯಯಾ** = ತ್ವಷ್ಟೃದೇವನ ಪತ್ನೀಸಂಯಾಜಹೋಮದಿಂದ; **ಪಶೂನಾಮ್** = ಪಶುಗಳ; **ರೂಪಮ್ ಪುಷೇಯಮ್** = ರೂಪವು ಪುಷ್ಟಿಗೊಳ್ಳುವಂತೆ ಮಾಡುವೆ;

---

ದೇವತೆಗಳಿಗೆ ಸಮರ್ಪಿಸಲಿ. ★ ಕುದುರೆ ಸವಾರಿ ಮಾಡುವಾಗ ಅಥವಾ ಕುದುರೆಗಳನ್ನು ರಥಕ್ಕೆ ಕಟ್ಟಿ ರಥವನ್ನು ನಡೆಸುವಾಗ ಬಗೆಬಗೆಯ ಹಗ್ಗಗಳನ್ನು ಕುದುರೆಗಳಿಗೆ ಕಟ್ಟುತ್ತಾರೆ. ಪರಿಧಿಗಳು ಅಗ್ನಿಯ ಬಂಧಕವಾದ ಹಗ್ಗಗಳಂತೆ. ಪರಿಧಿಮೋಚನವು ಕುದುರೆಯ ಕಟ್ಟುಗಳನ್ನು ಬಿಚ್ಚಿದಂತೆ. ಈಗ ಹಗ್ಗಗಳಂತಿರುವ ಪರಿಧಿಗಳನ್ನು ತೆಗೆದುಹಾಕುತ್ತೇನೆ.

---

* ಪತ್ನೀಸಂಯಾಜಯಾಗಗಳು ನಾಲ್ಕು. ಮೊದಲ ಎರಡನ್ನು ಪ್ರತ್ಯೇಕವಾಗಿ ಅನುಮಂತ್ರಣ ಮಾಡಬೇಕು. ಉಳಿದೆರಡನ್ನು ಒಟ್ಟಿಗೇ ಅನುಮಂತ್ರಿಸಬೇಕು.

ದೇವಾನಾಂ ಪತ್ನೀರಗ್ನಿರ್ಗೃಹಪತಿರ್ಯಜ್ಞಸ್ಯ ಮಿಥುನಂ

ತಯೋರಹಂ ದೇವಯಜ್ಯಯಾ ಮಿಥುನೇನ ಪ್ರಭೂಯಾಸಂ

ವೇದೋಽಸಿ ವಿತ್ತಿರಸಿ ವಿದೇಯ ಕರ್ಮಾಸಿ

---

ದೇವಾನಾಮ್। ಪತ್ನೀಃ । ಅಗ್ನಿಃ । ಗೃಹಪತಿರಿತಿ ಗೃಹ-ಪತಿಃ । ಯಜ್ಞಸ್ಯ । ಮಿಥುನಮ್। ತಯೋಃ । ಅಹಮ್ । ದೇವಯಜ್ಯಯೇತಿ ದೇವ-ಯಜ್ಯಯಾ। ಮಿಥುನೇನ । ಪ್ರೇತಿ। ಭೂಯಾಸಮ್ । ವೇದಃ । ಅಸಿ । ವಿತ್ತಿಃ । ಅಸಿ । ವಿದೇಯ । ಕರ್ಮ । ಅಸಿ।

---

| ಮಂತ್ರ | ವಿನಿಯೋಗ |
|---|---|
| ದೇವಾನಾಂ...ಪ್ರಭೂಯಾಸಮ್ । | ಮೂರು ಮತ್ತು ನಾಲ್ಕನೆಯ ಪತ್ನೀಸಂಯಾಜದ ಅನುಮಂತ್ರಣಕ್ಕಾಗಿ. |
| ವೇದೋಽಸಿ..... ವಾಜಿನಮ್ ॥ | ಅಂತರ್ವೇದಿಯಲ್ಲಿ ವೇದ [ದರ್ಭೆಗಳ ಕಟ್ಟು]ವನ್ನು ಇಟ್ಟಾಗ ಅಧ್ವರ್ಯುವು ಯಜಮಾನನಿಂದ ಹೇಳಿಸಲು |

---

✣ದೇವಾನಾಮ್ ಪತ್ನೀಃ = ದೇವಪತ್ನಿಯರೂ; ಗೃಹಪತಿಃ ಅಗ್ನಿಃ = ಗೃಹಪತಿಯಾದ ಅಗ್ನಿಯೂ; ಯಜ್ಞಸ್ಯ ಮಿಥುನಮ್ = ಯಜ್ಞಕ್ಕೆ ಸಂಬಂಧಿಸಿದ ಸ್ತ್ರೀಪುರುಷಯುಗ್ಮ ವಿದ್ದಂತೆ; ತಯೋಃ ದೇವಯಜ್ಯಯಾ = ಅವರಿಗೆ ಸಂಬಂಧಿಸಿದ ಪತ್ನೀಸಂಯಾಜ ಹೋಮಗಳಿಂದ; ಅಹಮ್ = ನಾನು; ಮಿಥುನೇನ ಪ್ರಭೂಯಾಸಮ್ = [ಪುತ್ರೀ-ಪುತ್ರರೂಪವಾದ] ಮಿಥುನದಿಂದ ಶ್ರೇಷ್ಠನಾಗುವೆನು; ✣ [ಎಲೈ! ದರ್ಭೆಯ ಕಟ್ಟೇ! ನೀನು] ವೇದಃ ಅಸಿ = ವೇದವೆಂಬ ಹೆಸರುಳ್ಳವನಾಗಿದ್ದೀಯೆ; ವಿತ್ತಿಃ ಅಸಿ = ಕರ್ಮಪ್ರಾಪ್ತಿಸಾಧನವಾಗಿದ್ದೀಯೆ; [ನಿನ್ನ ಅನುಗ್ರಹದಿಂದ ನಾನು] ವಿದೇಯ = [ಧನವನ್ನು] ಹೊಂದುವೆನು; [ನೀನು] ಕರ್ಮ ಅಸಿ = [ಅನುಷ್ಠಾನಹೇತುವಾದುದರಿಂದ] ಕರ್ಮವಾಗಿದ್ದೀಯೆ.

---

ವಿಮುಕ್ತನಾದ ನೀನು ನಮಗೆ ಧನವನ್ನು ಕೊಡು. ಮಂಗಳಕರವಾದ ಅನ್ನಾದಿಗಳು

ಕರುಣಮಸಿ ಕ್ರಿಯಾಸಗ್ಂ ಸನಿರಸಿ ಸನಿತಾಸಿ ಸನೇಯಂ

ಘೃತವಂತಂ ಕುಲಾಯಿನಗ್ಂ ರಾಯಸ್ಪೋಷಗ್ಂ ಸಹಸ್ರಿಣಂ

ವೇದೋ ದದಾತು ವಾಜಿನಮ್॥ ೪-14 ॥

[ಇಂದ್ರಸ್ಯಾಹಮಿಂದ್ರವಂತಃ ಸೋಮಸ್ಯಾಹಂ ದೇವಯಜ್ಯಯಾ

ಚತುಶ್ಚತ್ವಾರಿಗ್ಂಶಚ್ಚ।]

---

ಕರುಣಮ್ । ಅಸಿ । ಕ್ರಿಯಾಸಮ್ । ಸನಿಃ । ಅಸಿ । ಸನಿತಾ । ಅಸಿ । ಸನೇಯಮ್।
ಘೃತವಂತಮಿತಿ ಘೃತ-ವಂತಮ್ । ಕುಲಾಯಿನಮ್ । ರಾಯಃ । ಪೋಷಮ್ ।
ಸಹಸ್ರಿಣಮ್ । ವೇದಃ । ದದಾತು । ವಾಜಿನಮ್ ॥ ೪ ॥

---

**ಕರುಣಮ್ ಅಸಿ** = [ವೇದಿಸಮ್ಮಾರ್ಜನಾದಿಕರ್ಮಸಾಧನನಾದುದರಿಂದ] ಕರುಣನೆನಿಸಿ ಕೊಂಡಿರುವೆ; **ಕ್ರಿಯಾಸಮ್** = [ನಿನ್ನ ನೆರವಿನಿಂದ ಆ ಕರ್ಮಗಳನ್ನು] ಮಾಡುವೆನು; **ಸನಿಃ ಅಸಿ** = ದಾನಸ್ವರೂಪನಾಗಿದ್ದೀಯೆ; **ಸನಿತಾ ಅಸಿ** = ಧನವನ್ನು ಕೊಡುವವನಾಗಿ ದ್ದೀಯೆ. **ಸನೇಯಮ್** = [ನಿನ್ನ ಅನುಗ್ರಹದಿಂದ ನಾನು ಋತ್ವಿಜರೇ ಮುಂತಾದವರಿಗೆ] ಕೊಡುವೆನು. **ವೇದಃ** = ವೇದವು [ದರ್ಭೆಯ ಕಟ್ಟು] **ಘೃತವಂತಮ್** = ತುಪ್ಪವೇ ಮೊದಲಾದ ಭೋಜನಸಾಧನಗಳಿಂದ ಕೂಡಿದ; **ಕುಲಾಯಿನಮ್** = ವಾಸಯೋಗ್ಯವಾದ ಗೃಹಗಳುಳ್ಳ; **ಸಹಸ್ರಿಣಮ್** = ಸಾವಿರಾರು ಸಂಖ್ಯೆಯುಳ್ಳ; **ವಾಜಿನಮ್** = ಅನ್ನವುಳ್ಳ; **ರಾಯಃ ಪೋಷಮ್** = ಧನಸಮೃದ್ಧಿಯನ್ನು; **ದದಾತು** = ಕೊಡಲಿ.

---

ಯಾವುವಿವೆಯೋ, ಅವೆಲ್ಲವನ್ನೂ ನೀಡು. ದೇವತೆಗಳ ನಡುವೆ ನಾವು ದೇವತೆಗಳಿಗೆ ಹವಿರ್ಭಾಗವನ್ನು ಕೊಟ್ಟವರೆಂಬುದನ್ನು ಗಟ್ಟಿಯಾಗಿ ಹೇಳು/ಘೋಷಿಸು.

ಬೃಹಸ್ಪತಿಯ ಪುತ್ರನಾದ ಶಂಯುವು ವ್ಯಾಪಕನಾದುದರಿಂದ ವಿಷ್ಣುವಾಗಿದ್ದಾನೆ. ಸುಖಯುಕ್ತನಾದ, ರೋಗಭಯಾದಿನಿವಾರಕನಾದ ಶಂಯುವಿಗೆ ಸಂಬಂಧಿಸಿದ ಪರಿಧಿ ಪ್ರಹರಣರೂಪವಾದ ಯಾಗದಿಂದ ಪ್ರಕೃಷ್ಟಯಾಗಫಲಸಿದ್ಧಿಯನ್ನು ಹೊಂದುವೆನು.

ಪತ್ನೀಸಂಯಾಜದೇವತೆಯಾದ ಸೋಮನಿಗೆ ಸಮರ್ಪಿಸಿದ ಆಜ್ಯಾಹುತಿಯಿಂದ ನಾನು ಒಳ್ಳೆಯ ರೇತಸ್ಸುಳ್ಳವನಾಗಿ ರೇತಸ್ಸನ್ನು ಧಾರಣೆ ಮಾಡುವೆನು.

ಎರಡನೆಯ ಪತ್ನೀಸಂಯಾಜದೇವತೆಯಾದ ತ್ವಷ್ಟ್ರುದೇವನ ಅನುಗ್ರಹದಿಂದ ಪಶುಗಳ ರೂಪಗಳನ್ನು ಪುಷ್ಟಿಗೊಳಿಸುವೆನು.

ದೇವಪತ್ನಿಯರು ಮತ್ತು ಗೃಹಪತಿಯಾದ ಅಗ್ನಿಯು ಮೂರು ಮತ್ತು ನಾಲ್ಕನೆಯ ಪತ್ನೀಸಂಯಾಜಗಳ ದೇವತೆಗಳು. ಇವರು ಯಜ್ಞಕ್ಕೆ ಸಂಬಂಧಿಸಿದ ಸ್ತ್ರೀ ಪುರುಷಯುಗ್ಮವಿದ್ದಂತೆ. ಪತ್ನೀಸಂಯಾಜಹೋಮದಿಂದ ಪ್ರಸನ್ನರಾದ ಅವರ ಅನುಗ್ರಹದಿಂದ ಒಳ್ಳೆಯ ಪತ್ನೀ-ಪುತ್ರರೆಂಬ ಮಿಥುನಗಳನ್ನು ಪಡೆದು ಶ್ರೇಷ್ಠನಾಗುವೆನು.

ವೇದದಿಂದ ದೇವತೆಗಳು ಅಸುರರ ಸರ್ವಧನವನ್ನೂ ಪಡೆದುಕೊಂಡರು. ಇದರಿಂದ ದರ್ಭೆಗಳ ಕಟ್ಟಿಗೆ 'ವೇದ'ವೆಂದು ಹೆಸರಾಯಿತು. ಹೇ! ವೇದವೇ! ನೀನು ಧನಲಾಭಸ್ವರೂಪನು. ನಿನ್ನಿಂದ ನಾನು ಧನವನ್ನು ಪಡೆಯುವೆನು. ನೀನು ಕರ್ಮಸಾಧನವಾದುದರಿಂದ ಕರ್ಮನೆನಿಸಿಕೊಳ್ಳುವೆ. ಕರ್ಮಸಾಧನವಾಗಿರುವುದರಿಂದ ಕರುಣ[ಅನುಷ್ಠಾಪಕ]ನೂ ಆಗಿರುವೆ. ನಿನ್ನ ನೆರವಿನಿಂದ ವೇದಿಸಮ್ಮಾರ್ಜನಾದಿ ಕರ್ಮಗಳನ್ನು ಮಾಡುವೆನು. ನೀನು ದಾನಸ್ವರೂಪನು. ಆದುದರಿಂದ 'ಸನಿ' ಎನಿಸಿಕೊಂಡಿರುವೆ. ದಾನದ [ಧನದ] ದಾತೃವೂ ನೀನೇ. ನಿನ್ನ ಅನುಗ್ರಹದಿಂದ ನಾನು ಋತ್ವಿಜರೇ ಮೊದಲಾದವರಿಗೆ ಧನವನ್ನು ಕೊಡುವೆನು. ವೇದವು ನನಗೆ ತುಪ್ಪವೇ ಮೊದಲಾದ ಭೋಜನಸಾಧನಗಳುಳ್ಳ, ವಾಸಯೋಗ್ಯವಾದ ಗೃಹಗಳುಳ್ಳ, ಸಹಸ್ರಸಂಖ್ಯಾಕವಾದ, ಅನ್ನಸಮೃದ್ಧಿಯಿಂದ ಕೂಡಿದ ಧನಸಂಪತ್ತನ್ನು ಕೊಡಲಿ.

## ವಿನಿಯೋಗ ಸಂಗ್ರಹ

1-3 ಬರ್ಹಿಸ್ತ್ರಿಭಿರನೂಯಾಜಾನ್ಮಂತ್ರಯೇತ್ಸೂಕ್ತವಾಕಕಮ್ ।
4-11 ಅಗ್ನೇರಿತ್ಯಷ್ಟಭಿರ್ವಾಜ 12-13 ದ್ವಾಭ್ಯಾಂ ವ್ಯೂಹೇತ್ ಸ್ರುಚೌ ತಥಾ ।
14 ಏಮಾಃ ಸ್ವನಾಮಗ್ರಹಣೇ 15-17 ರೋಹೀತಿ ಪ್ರಸ್ತರಂ ತ್ರಿಭಿಃ ।
18 ವಿ ತೇ ಪರಿಧಿಮೋಕಂ ತು 19 ವಿಷ್ಣೋಃ ಶಂ ಶಂಯುವಾಕಕಮ್ ।
ತ್ರಿಭಿಃ 20-22 ಸೋಮಾದಿಸಂಯಾಜಾನ್ 23 ವೇದೋ ವೇದಾಭಿಮರ್ಶನಮ್ ।
ಅನುವಾಕೇ ಚತುರ್ಥೇಽಸ್ಮಿಂಸ್ತ್ರಯೋವಿಂಶತಿರೀರಿತಾಃ ॥

**ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ — 23**

# ॥ ಪಂಚಮೋಽನುವಾಕಃ ॥

ಆ ಪ್ಯಾಯತಾಂ ಧ್ರುವಾ ಘೃತೇನ ಯಜ್ಞಂಯಜ್ಞಂ ಪ್ರತಿ ದೇವಯದ್ಭ್ಯಃ । ಸೂರ್ಯ್ಯಾಯಾ

ಏತಿ । ಪ್ಯಾಯತಾಮ್ । ಧ್ರುವಾ । ಘೃತೇನ । ಯಜ್ಞಂಯಜ್ಞಮಿತಿ ಯಜ್ಞಂ-ಯಜ್ಞಮ್। ಪ್ರತಿ । ದೇವಯದ್ಭ್ಯ ಇತಿ ದೇವಯತ್-ಭ್ಯಃ ॥ ಸೂರ್ಯ್ಯಾಯಾಃ ।

ನಾಲ್ಕನೆಯ ಅನುವಾಕದಲ್ಲಿ ಅನೂಯಾಜಾದಿಗಳ ಅನುಮಂತ್ರಣಮಂತ್ರಗಳು ಹೇಳಲ್ಪಟ್ಟಿವೆ. ಈ ಐದನೆಯ ಅನುವಾಕದಲ್ಲಿ ಧ್ರುವಾಪ್ಯಾಯನಾದಿಗಳ ಮಂತ್ರಗಳಿವೆ.

| ಮಂತ್ರ | ವಿನಿಯೋಗ |
|---|---|
| ಆ ಪ್ಯಾಯತಾಂ... ಅಸ್ಮಿನ್ । | ಧ್ರುವಾಪಾತ್ರಕ್ಕೆ ಆಜ್ಯವನ್ನು ಹಾಕುವಾಗ ಯಜಮಾನನು ಹೇಳುವ ಅನುಮಂತ್ರಣಮಂತ್ರ. |

✣ ಯಜ್ಞಂ ಯಜ್ಞಂ ಪ್ರತಿ = ಆಯಾ ಆಜ್ಯಾಹುತಿಗಾಗಿ; ದೇವಯದ್ಭ್ಯಃ = ದೇವತೆಗಳಿಗೆ ಆಹುತಿ ಕೊಡಲು ಇಚ್ಛಿಸುವ [ಋತ್ವಿಜರಿಗೋಸ್ಕರ] *ಧ್ರುವಾ = ಧ್ರುವಾಪಾತ್ರವು; ಘೃತೇನ = ತುಪ್ಪದಿಂದ; ಆ ಪ್ಯಾಯತಾಮ್ = ಮತ್ತೆ ಮತ್ತೆ ತುಂಬಲ್ಪಡಲಿ; ಸೂರ್ಯಾಯಾಃ = ಸೂರ್ಯಪತ್ನಿಯಾದ/ಗೋರೂಪಧಾರಿಣಿಯಾದ; ಉಷಾದೇವಿಯ;

ಸರ್ವಯಜ್ಞಾಹುತಿಗಳಿಗಾಗಿ ದೇವತೆಗಳಿಗೆ ಆಹುತಿ ಕೊಡಲಿಚ್ಛಿಸುವ ಋತ್ವಿಜರಿಗೋಸ್ಕರ ಈ ಧ್ರುವಾಪಾತ್ರವು ಆಜ್ಯದಿಂದ ಪೂರ್ಣವಾಗಲಿ. ಸೂರ್ಯಪತ್ನಿಯಾದ

* 'ಸರ್ವಸ್ಮೈ ವಾ ಏತದ್ಯಜ್ಞಾಯ ಗೃಹ್ಯತೇ । ಯದ್ಧ್ರುವಾಯಾಮಾಜ್ಯಮ್ । ಎಂಬ ಶ್ರುತಿವಚನದಂತೆ ಧ್ರುವೆಯಲ್ಲಿರುವ ಆಜ್ಯವು ಎಲ್ಲಾ ಆಹುತಿಗಳಿಗಾಗಿ ಇದೆ. ಆ ಧ್ರುವಾಪಾತ್ರವನ್ನು ಮತ್ತೆ ಮತ್ತೆ ತುಂಬುವುದು ಆಪ್ಯಾಯನ.

ಊಧೋಽದಿತ್ಯಾ ಉಪಸ್ಥ ಉರುಧಾರಾ ಪೃಥಿವೀ ಯಜ್ಞೇ ಅಸ್ಮಿನ್ನ್ ॥ ಪ್ರಜಾಪತೇರ್ವಿಭಾನ್ನಾಮ ಲೋಕ

---

ಊಧಃ । ಅದಿತ್ಯಾಃ । ಉಪಸ್ಥ ಇತ್ಯುಪ-ಸ್ಥೇ । ಉರುಧಾರೇತ್ಯುರು-ಧಾರಾ । ಪೃಥಿವೀ। ಯಜ್ಞೇ । ಅಸ್ಮಿನ್ನ್ ॥ ಪ್ರಜಾಪತೇರಿತಿ ಪ್ರಜಾ-ಪತೇಃ। ವಿಭಾನಿತಿ ವಿ-ಭಾನ್। ನಾಮ। ಲೋಕಃ ।

---

| ಮಂತ್ರ | ವಿನಿಯೋಗ |
|---|---|
| ಪ್ರಜಾಪತೇಃ...ಯಜಮಾನೇನ । | ಯಜಮಾನಭಾಗದ ಪ್ರಾಶನಕ್ಕಾಗಿ |

---

**ಊಧಃ** = ಕೆಚ್ಚಲು [ಹಾಲಿನಿಂದ ತುಂಬಿಕೊಳ್ಳುವಂತೆ ಧ್ರುವಾಪಾತ್ರೆಯು ತುಪ್ಪದಿಂದ ತುಂಬಲಿ]; **ಅದಿತ್ಯಾಃ** = ದೇವೀರೂಪವಾದ ಭೂಮಿಯ; **ಉಪಸ್ಥೇ** = ತೊಡೆಯ ಮೇಲಿರುವ [ಈ ಧ್ರುವಪಾತ್ರೆಯು]; **ಉರುಧಾರಾ** = ತುಪ್ಪದ ದೊಡ್ಡ ಧಾರೆಗಳುಳ್ಳದ್ದಾಗಿ; **ಪೃಥಿವೀ** = ವಿಸ್ತೀರ್ಣವಾಗಿ; [(ಈ ಧ್ರುವಪಾತ್ರೆಯು) ಮಹಾರ್ಥ ಸಾಧನವಾದ ಪೃಥಿವೀಸ್ಥಾನೀಯವಾಗಿದೆ.] **ಅಸ್ಮಿನ್ ಯಜ್ಞೇ** = ಸರ್ವಯಜ್ಞಾಹುತಿ ಗಳಿಗಾಗಿ; **ಆಪ್ಯಾಯತಾಮ್** = ತುಪ್ಪದಿಂದ ಪೂರ್ಣವಾಗಲಿ; ✢ [ಎಲೈ! ಯಜಮಾನ ಭಾಗವೇ] **ಪ್ರಜಾಪತೇಃ ವಿಭಾನ್ ನಾಮ ಲೋಕಃ** = ಈ ಭೂಲೋಕವು ಪ್ರಜಾಪತಿಯು ಸೃಷ್ಟಿಸಿರುವ [ಕರ್ಮಭೂಮಿಯಾದುದರಿಂದ ಯಜಮಾನನಿಗೆ ಸ್ಪಷ್ಟವಾಗಿ ಪ್ರಕಾಶಿಸುವ] 'ವಿಭಾನ್' ಎಂಬ ಹೆಸರಿನ ಲೋಕವಾಗಿದೆ.

---

ಗೋರೂಪಧಾರಿಣಿಯಾದ [illegible] ಕೆಚ್ಚಲು ಹಾಲಿನಿಂದ ಪೂರ್ಣವಾಗುವಂತೆ ಈ ಧ್ರುವಾಪಾತ್ರವು [illegible]ತಲಿ. ಯಜ್ಞವೇದಿಯೆಂಬ ಭೂದೇವಿಯ ತೊಡೆಯ ಮೇಲಿರುವ ಈ [illegible] ದೊಡ್ಡ ಆಜ್ಯಧಾರೆಗಳಿಂದ ಕೂಡಿದ್ದಾಗಿ

ಸ್ತ್ವಸ್ಮಿಗ್ಗ್‌ಂಸ್ತ್ವಾ ದಧಾಮಿ ಸಹ ಯಜಮಾನೇನ ಸದಸಿ
ಸನ್ಮೇ ಭೂಯಾಸ್ಸರ್ವಮಸಿ ಸರ್ವಂ ಮೇ ಭೂಯಾಃ

---

ತಸ್ಮಿನ್ । ತ್ವಾ । ದಧಾಮಿ । ಸಹ । ಯಜಮಾನೇನ । ಸತ್ । ಅಸಿ । ಸತ್ ।
ಮೇ । ಭೂಯಾಃ । ಸರ್ವಮ್। ಅಸಿ । ಸರ್ವಮ್ । ಮೇ । ಭೂಯಾಃ ।

---

| ಮಂತ್ರ | ವಿನಿಯೋಗ |
|---|---|
| ಸದಸಿ..... ಕ್ಷೇಷ್ಠಾಃ । | ಆಧ್ವರ್ಯುವು ಪೂರ್ಣಪಾತ್ರವನ್ನು ತರುವಾಗ ಯಜಮಾನನಿಂದ ಹೇಳಿಸಲು |

---

**ತಸ್ಮಿನ್** = ಆ ಭೂಲೋಕದಲ್ಲಿ; **ತ್ವಾ** = ನಿನ್ನನ್ನು; **ಯಜಮಾನೇನ ಸಹ** = ಯಜಮಾನನಾದ ನನ್ನೊಡನೆ; **ದಧಾಮಿ** = ಸ್ಥಾಪಿಸುತ್ತೇನೆ; ✣ [ಎಲೈ! ಪೂರ್ಣಪಾತ್ರವೇ! ನೀನು] **ಸತ್ ಅಸಿ** = ಇರುವುದೆಲ್ಲವೂ/ಒಳ್ಳೆಯದೆಲ್ಲವೂ ಆಗಿರುವೆ; **ಮೇ** = ನನಗೆ; **ಸತ್ ಭೂಯಾಃ** = [ಯಜ್ಞಫಲವನ್ನು ಕೊಡುವುದರಿಂದ] ಒಳ್ಳೆಯದಾಗು/ನನಗೆ ಒಳ್ಳೆಯದೆಲ್ಲವನ್ನೂ ಉಂಟು ಮಾಡು; **ಸರ್ವಮ್ ಅಸಿ** = ಸರ್ವಾತ್ಮಕನು/ಸರ್ವದಿಗ್ವ್ಯಾಪಕನು ಆಗಿರುವೆ; **ಮೇ** = ನನಗೆ; **ಸರ್ವಮ್ ಭೂಯಾಃ** = ಸರ್ವೇಷ್ಟಸಾಧಕನಾಗಿ/ಎಲ್ಲ ಕಾರ್ಯಗಳನ್ನೂ ಮಾಡಲು ಸಮರ್ಥನಾಗು;

---

ವಿಸ್ತೀರ್ಣವಾಗಿ ಈ ಯಜ್ಞದಲ್ಲಿ ಮತ್ತೆ ಮತ್ತೆ ಆಜ್ಯದಿಂದ ತುಂಬುತ್ತಿರಲಿ/ ಸೂರ್ಯಾದೇವಿಯು ದ್ಯುಲೋಕಸ್ವರೂಪಿಣಿ. ಯಜ್ಞವೇದಿಯು ದೇವಮಾತೆಯಾದ ಅದಿತಿ.

ಎಲೈ! ಯಜಮಾನಭಾಗವೇ! ಈ ಭೂಲೋಕವು ಪ್ರಜಾಪತಿಯಿಂದ ಸೃಷ್ಟವಾದ ಕರ್ಮಭೂಮಿಯಾಗಿ 'ವಿಭಾನ್' ಎಂಬ ಹೆಸರುಳ್ಳ ಲೋಕವಾಗಿದೆ. ಈ ಲೋಕದಲ್ಲಿ

**ಪೂರ್ಣಮಸಿ ಪೂರ್ಣಂ ಮೇ ಭೂಯಾ ಅಕ್ಷಿತಮಸಿ ಮಾ ಮೇ ಕ್ಷೇಷ್ಠಾಃ ಪ್ರಾಚ್ಯಾಂ ದಿಶಿ ದೇವಾ ಋತ್ವಿಜೋ ಮಾರ್ಜಯಂತಾಂ ದಕ್ಷಿಣಾಯಾಂ [೧] ದಿಶಿ ಮಾಸಾಃ ಪಿತರೋ ಮಾರ್ಜಯಂತಾಂ**

---

ಪೂರ್ಣಮ್। ಅಸಿ। ಪೂರ್ಣಮ್ । ಮೇ । ಭೂಯಾಃ । ಅಕ್ಷಿತಮ್ । ಅಸಿ । ಮಾ। ಮೇ । ಕ್ಷೇಷ್ಠಾಃ । ಪ್ರಾಚ್ಯಾಮ್ । ದಿಶಿ । ದೇವಾಃ । ಋತ್ವಿಜಃ । ಮಾರ್ಜಯಂತಾಮ್। ದಕ್ಷಿಣಾಯಾಮ್। ದಿಶಿ। ಮಾಸಾಃ । ಪಿತರಃ । ಮಾರ್ಜಯಂತಾಮ್।

---

| ಮಂತ್ರ | ವಿನಿಯೋಗ |
|---|---|
| ಪ್ರಾಚ್ಯಾಂ...ಋತ್ವಿಜೋ ಮಾರ್ಜಯಂತಾಮ್। | ಪೂರ್ಣಪಾತ್ರದ ನೀರನ್ನು ಪೂರ್ವ ದಿಕ್ಕಿಗೆ ಹಾಕಲು |
| ದಕ್ಷಿಣಾಯಾಂ...ಪಿತರೋ ಮಾರ್ಜಯಂತಾಮ್। | ಪೂರ್ಣಪಾತ್ರದ ನೀರನ್ನು ದಕ್ಷಿಣ ದಿಕ್ಕಿಗೆ ಹಾಕಲು |

---

**ಪೂರ್ಣಮ್ ಅಸಿ** = ನೀರಿನಿಂದ ತುಂಬಿರುತ್ತೀಯೆ/ ಸರ್ವಸಮೃದ್ಧಿಪೂರ್ಣನಾಗಿದ್ದೀಯೆ; **ಮೇ** = ನನಗೆ; **ಪೂರ್ಣಮ್ ಭೂಯಾಃ** = ನನಗೆ ಸರ್ವಪ್ರಯೋಜನಗಳನ್ನೂ ಪೂರ್ಣಗೊಳಿಸಲು ಉದ್ಯುಕ್ತನಾಗು; **ಅಕ್ಷಿತಮ್ ಅಸಿ** = ಕ್ಷಯವಿಲ್ಲದವನಾಗಿರುವೆ; **ಮೇ** = ನನ್ನ [ಕಾರ್ಯವಿಷಯದಲ್ಲಿ] **ಮಾ ಕ್ಷೇಷ್ಠಾಃ** = ಕ್ಷಯವನ್ನು ಹೊಂದಬೇಡ; /ಮಿತ್ರನಂತಿರು; ✢ **ಪ್ರಾಚ್ಯಾಮ್ ದಿಶಿ** = ಪೂರ್ವದಿಕ್ಕಿನಲ್ಲಿರುವ; **ದೇವಾಃ** = ದೇವತೆಗಳೂ; **ಋತ್ವಿಜಃ** = ಋತ್ವಿಜರೂ; **ಮಾರ್ಜಯಂತಾಮ್** = ಶುದ್ಧರಾಗಲಿ/ನನ್ನನ್ನೂ ಶುದ್ಧಿಗೊಳಿಸಲಿ; ✢**ದಕ್ಷಿಣಾಯಾಂ ದಿಶಿ** = ದಕ್ಷಿಣದಿಕ್ಕಿನಲ್ಲಿ; **ಮಾಸಾಃ** = ಮಾಸಾಭಿಮಾನಿದೇವತೆಗಳೂ; **ಪಿತರಃ** = ಪಿತೃಗಳೂ, ಸೋಮಪಿತೃಮದಾದಿಗಳೂ, ಸ್ವಪೂರ್ವಜಪಿತೃಗಳೂ; **ಮಾರ್ಜಯಂತಾಮ್** = ನನ್ನನ್ನು ಶುದ್ಧಿಗೊಳಿಸಲಿ, ಶುದ್ಧಿ ಹೊಂದಲಿ;

---

ನಿನ್ನನ್ನು ಹವಿರ್ಭಾಗಭಕ್ಷಕನಾದ ಯಜಮಾನನಾದ ನನ್ನೊಡನೆ ಸ್ಥಾಪಿಸುತ್ತೇನೆ.

ಪ್ರತೀಚ್ಯಾಂ ದಿಶಿ ಗೃಹಾಃ ಪಶವೋ ಮಾರ್ಜಯಂತಾ ಮುದೀಚ್ಯಾಂ ದಿಶ್ಯಾಪ ಓಷಧಯೋ ವನಸ್ಪತಯೋ ಮಾರ್ಜಯಂತಾಮೂರ್ಧ್ವಾಯಾಂ ದಿಶಿ

---

ಪ್ರತೀಚ್ಯಾಮ್ । ದಿಶಿ । ಗೃಹಾಃ । ಪಶವಃ । ಮಾರ್ಜಯಂತಾಮ್ । ಉದೀಚ್ಯಾಮ್। ದಿಶಿ । ಆಪಃ । ಓಷಧಯಃ । ವನಸ್ಪತಯಃ । ಮಾರ್ಜಯಂತಾಮ್ । ಊರ್ಧ್ವಾಯಾಮ್। ದಿಶಿ ।

---

| ಮಂತ್ರ | ವಿನಿಯೋಗ |
|---|---|
| ಪ್ರತೀಚ್ಯಾಂ...ಪಶವೋ ಮಾರ್ಜಯಂತಾಮ್। | ಪೂರ್ಣಪಾತ್ರದ ನೀರನ್ನು ಪಶ್ಚಿಮ ದಿಕ್ಕಿಗೆ ಹಾಕಲು |
| ಉದೀಚ್ಯಾಂ..ವನಸ್ಪತಯೋ ಮಾರ್ಜಯಂತಾಮ್। | ಪೂರ್ಣಪಾತ್ರದ ನೀರನ್ನು ಉತ್ತರ ದಿಕ್ಕಿಗೆ ಹಾಕಲು |
| ಊರ್ಧ್ವಾಯಾಂ..ಯಜ್ಞಪತಿರ್ಮಾರ್ಜಯಂತಾಮ್। | ಪೂರ್ಣಪಾತ್ರದ ನೀರನ್ನು ಊರ್ಧ್ವ ದಿಕ್ಕಿಗೆ ಹಾಕಲು |

---

⁘ಪ್ರತೀಚ್ಯಾಂ ದಿಶಿ = ಪಶ್ಚಿಮದಿಕ್ಕಿನಲ್ಲಿ; ಗೃಹಾಃ = ಗೃಹಾಭಿಮಾನಿದೇವತೆಗಳೂ; ಪಶವಃ = ಪ್ರಾಣಿಗಳೂ (ಅಭಿಮಾನಿದೇವತೆಗಳೂ) ಮಾರ್ಜಯಂತಾಮ್ = ಶುದ್ಧರಾಗಲಿ/ ನನ್ನನ್ನೂ ಶುದ್ಧಿಗೊಳಿಸಲಿ; ಉದೀಚ್ಯಾಂ ದಿಶಿ = ಉತ್ತರ ದಿಕ್ಕಿನಲ್ಲಿ; ಆಪಃ ಓಷಧಯಃ ವನಸ್ಪತಯಃ = ಜಲಾಭಿಮಾನಿಗಳೂ, ಸಸ್ಯಾಭಿಮಾನಿಗಳೂ, ವೃಕ್ಷಾಭಿಮಾನಿಗಳೂ; ಮಾರ್ಜಯಂತಾಮ್ = ತಾವೂ ಶುದ್ಧರಾಗಿ ನಮ್ಮನ್ನೂ ಶುದ್ಧಿಗೊಳಿಸಲಿ; ಊರ್ಧ್ವಾಯಾಂ ದಿಶಿ = ಊರ್ಧ್ವದಿಕ್ಕಿನಲ್ಲಿ;

---

[ಈ ಭೂಲೋಕವು ಕರ್ಮಭೂಮಿ. ಸ್ವರ್ಗಾದಿಗಳು ಕರ್ಮಭೂಮಿಗಳಲ್ಲ].

**ಯಜ್ಞಃ ಸಂವತ್ಸರೋ ಯಜ್ಞಪತಿರ್ಮಾರ್ಜಯಂತಾಂ**

**ವಿಷ್ಣೋಃ ಕ್ರಮೋಽಸ್ಯಭಿಮಾತಿಹಾ ಗಾಯತ್ರೇಣ ಛಂದಸಾ**

**ಪೃಥಿವೀಮನು ವಿಕ್ರಮೇ ನಿರ್ಭಕ್ತಃ ಸ ಯಂ ದ್ವಿಷ್ಮೋ**

---

ಯಜ್ಞಃ । ಸಂವತ್ಸರ ಇತಿ ಸಮ್-ವತ್ಸರಃ। ಯಜ್ಞಪತಿರಿತಿ ಯಜ್ಞ-ಪತಿಃ। ಮಾರ್ಜಯಂತಾಮ್ । ವಿಷ್ಣೋಃ । ಕ್ರಮಃ । ಅಸಿ । ಅಭಿಮಾತಿಹೇತ್ಯಭಿಮಾತಿ-ಹಾ । ಗಾಯತ್ರೇಣ। ಛಂದಸಾ । ಪೃಥಿವೀಮ್ । ಅನು । ವೀತಿ । ಕ್ರಮೇ । ನಿರ್ಭಕ್ತ ಇತಿ ನಿಃ-ಭಕ್ತಃ । ಸಃ । ಯಮ್ । ದ್ವಿಷ್ಮಃ ।

---

| ಮಂತ್ರ | ವಿನಿಯೋಗ |
|---|---|
| ವಿಷ್ಣೋಃ.... ದ್ವಿಷ್ಮಃ । | ಮೊದಲನೆಯ * ವಿಷ್ಣುಕ್ರಮವನ್ನು ಮಾಡಲು |

---

ಯಜ್ಞಃ ಸಂವತ್ಸರಃ ಯಜ್ಞಪತಿಃ = ಯಜ್ಞಸಂವತ್ಸರಾಭಿಮಾನಿದೇವತೆಗಳೂ, ಯಜಮಾನನೂ/ ಪ್ರಜಾಪತಿಯೂ; ಮಾರ್ಜಯಂತಾಮ್ = ಶುದ್ಧಿಹೊಂದಲಿ; +ಅಭಿಮಾತಿಹಾ = ಪಾಪಗಳನ್ನು ನಾಶಪಡಿಸುವ; ವಿಷ್ಣೋಃ ಕ್ರಮಃ ಅಸಿ = ವಿಷ್ಣುವಿನ ಹೆಜ್ಜೆಯಾಗಿರುವೆ; ಗಾಯತ್ರೇಣ ಛಂದಸಾ = ಗಾಯತ್ರೀಛಂದಸ್ಸಿನಿಂದ; ಪೃಥಿವೀಮ್ ಅನು ವಿಕ್ರಮೇ = [ವಿಷ್ಣುವನ್ನು ಅನುಸರಿಸಿ] ಪೃಥಿವಿಯನ್ನು ನನ್ನ ಹೆಜ್ಜೆಯಿಂದ ಆಕ್ರಮಿಸುತ್ತೇನೆ; ಯಮ್ ದ್ವಿಷ್ಮಃ = ಯಾವುದನ್ನು ನಾವು ದ್ವೇಷಿಸುವೆವೋ; ಸಃ

---

ಎಲೈ! ಪೂರ್ಣಪಾತ್ರವೇ! ನೀನು ಇರುವುದೆಲ್ಲವೂ ಒಳ್ಳೆಯದೇ ಆಗಿರುವೆ. ನೀರಿನಿಂದ ಹಿಟ್ಟನ್ನು ಕಲೆಸುವುದು, ಸಂಯವನ, ಮೊದಲಾದ ಕರ್ಮಸಾಧನವಾಗಿ ಒಳ್ಳೆಯದಾಗಿರುವೆ. ನನಗೆ ಒಳ್ಳೆಯದೆಲ್ಲವೂ ಆಗು. ನೀನು ಸರ್ವದಿಕ್ಕುಗಳಲ್ಲಿಯೂ

---

* ಯಜಮಾನನು ಆಹವನೀಯದ ಪಶ್ಚಿಮದ ಭಾಗದಲ್ಲಿ ಇಡುವ ಹೆಜ್ಜೆಗಳು ವಿಷ್ಣುಕ್ರಮ ಗಳು. ಇವು ನಾಲ್ಕು. ಮೂರು ಹೆಜ್ಜೆಗಳನ್ನಿಡುವಾಗ ಹೆಜ್ಜೆಗೆ ಒಂದರಂತೆ ಮಂತ್ರವಾದರೂ ಮೂರನೆಯ ಹೆಜ್ಜೆಯಲ್ಲಿಯೇ ನಾಲ್ಕನೆಯ ಮಂತ್ರವನ್ನೂ ಹೇಳಬೇಕು. ನಾಲ್ಕನೆಯ ಹೆಜ್ಜೆಯನ್ನು ಮಂತ್ರವಿಲ್ಲದೆ ಇಡಬೇಕು.

**ವಿಷ್ಣೋಃ ಕ್ರಮೋಽಸ್ಯಭಿಶಸ್ತಿಹಾ ತ್ರೈಷ್ಟುಭೇನ ಛಂದ**

**ಸಾಂತರಿಕ್ಷಮನು ವಿಕ್ರಮೇ ನಿರ್ಭಕ್ತಃ ಸ ಯಂ ದ್ವಿಷ್ಮೋ**

---

ವಿಷ್ಣೋಃ । ಕ್ರಮಃ । ಅಸಿ । ಅಭಿಶಸ್ತಿಹೇತ್ಯಭಿಶಸ್ತಿ-ಹಾ । ತ್ರೈಷ್ಟುಭೇನ । ಛಂದಸಾ। ಅಂತರಿಕ್ಷಮ್ । ಅನು । ವೀತಿ । ಕ್ರಮೇ । ನಿರ್ಭಕ್ತ ಇತಿ ನಿಃ-ಭಕ್ತಃ । ಸಃ । ಯಮ್ । ದ್ವಿಷ್ಮಃ ।

---

| ಮಂತ್ರ | ವಿನಿಯೋಗ |
|---|---|
| ವಿಷ್ಣೋಃ..... ದ್ವಿಷ್ಮಃ । | ಎರಡನೆಯ ವಿಷ್ಣುಕ್ರಮವನ್ನು ಮಾಡಲು |

---

**ನಿರ್ಭಕ್ತಃ** = ಆ ಪಾಪವು ಈ ಪ್ರದೇಶದಿಂದ ಹೊರಹಾಕಲ್ಪಡಲಿ; +ಎಲೈ! ದ್ವಿತೀಯ ಕ್ರಮವೇ! [ಎರಡನೆಯ ಹೆಜ್ಜೆಯೇ!] ನೀನು; **ಅಭಿಶಸ್ತಿಹಾ** = ನಿರಾಧಾರವಾದ ಅಪವಾದವನ್ನು ಹೋಗಲಾಡಿಸುವ; **ವಿಷ್ಣೋಃ ಕ್ರಮಃ ಅಸಿ** = ವಿಷ್ಣುವಿನ ಹೆಜ್ಜೆಯಾಗಿರುವೆ; [ನಾನು] **ತ್ರೈಷ್ಟುಭೇನ ಛಂದಸಾ** = ತ್ರಿಷ್ಟುಪ್ ಛಂದಸ್ಸಿನ ದೇವತೆಯ ಅನುಗ್ರಹದಿಂದ; **ಅಂತರಿಕ್ಷಮ್ ಅನು ವಿಕ್ರಮೇ** = ಅಂತರಿಕ್ಷಲೋಕವನ್ನು [ವಿಷ್ಣುವಿನ ಎರಡನೆಯ ಹೆಜ್ಜೆಯನ್ನು] ಅನುಸರಿಸಿ ಎರಡನೆಯ ಹೆಜ್ಜೆಯಿಂದ ಕ್ರಮಿಸುತ್ತೇನೆ. **ಯಮ್** = ಯಾವ ಅಪವಾದವನ್ನು; **ದ್ವಿಷ್ಮಃ** = ದ್ವೇಷಿಸುತ್ತೇವೆಯೋ; **ಸಃ ನಿರ್ಭಕ್ತಃ** = ಆ ಅಪವಾದವು ಇದರಿಂದ ಪರಿಹರಿಸಲ್ಪಡಲಿ.

---

ವ್ಯಾಪಿಸಿರುವೆ. ಸರ್ವಾತ್ಮಕನಾಗಿರುವೆ. ನೀನು ನನಗೆ ಸರ್ವಕಾರ್ಯಸಾಧಕನಾಗು. ಸರ್ವೇಷ್ಟಸಾಧಕನಾಗು. ನೀನು ಜಲಪೂರ್ಣನಾಗಿ ಇರುವೆ. ನನ್ನ ಸರ್ವಪ್ರಯೋಜನ ಗಳನ್ನೂ ಪೂರ್ಣಗೊಳಿಸಲು ಉದ್ಯುಕ್ತನಾಗು. ನೀನು ಕ್ಷಯವಿಲ್ಲದವನು. ನನ್ನ ವಿಷಯದಲ್ಲಿ ಕ್ಷಯವನ್ನು ಹೊಂದ ಬೇಡ. ಮಿತ್ರನಂತೆ ನಡೆದುಕೋ.

ವಿಷ್ಣೋಃ ಕ್ರಮೋऽಸ್ಯರಾತೀಯತೋ ಹಂತಾ ಜಾಗತೇನ ಛಂದಸಾ ದಿವಮನು ವಿಕ್ರಮೇ ನಿರ್ಭಕ್ತಃ ಸ ಯಂ ದ್ವಿಷ್ಮೋ ವಿಷ್ಣೋಃ ಕ್ರಮೋऽಸಿ ಶತ್ರೂಯತೋ

---

ವಿಷ್ಣೋಃ । ಕ್ರಮಃ । ಅಸಿ । ಅರಾತೀಯತಃ । ಹಂತಾ । ಜಾಗತೇನ । ಛಂದಸಾ। ದಿವಮ್ । ಅನು । ವೀತಿ । ಕ್ರಮೇ । ನಿರ್ಭಕ್ತ ಇತಿ ನಿಃ-ಭಕ್ತಃ । ಸಃ । ಯಮ್। ದ್ವಿಷ್ಮಃ । ವಿಷ್ಣೋಃ । ಕ್ರಮಃ । ಅಸಿ । ಶತ್ರೂಯತ ಇತಿ ಶತ್ರು-ಯತಃ ।

---

| ಮಂತ್ರ | ವಿನಿಯೋಗ |
|---|---|
| ವಿಷ್ಣೋಃ.... ದ್ವಿಷ್ಮಃ । | * ಮೂರನೆಯ ವಿಷ್ಣುಕ್ರಮವನ್ನು ಇಡಲು |
| ವಿಷ್ಣೋಃ.... ದ್ವಿಷ್ಮಃ । | |

---

÷ [ಎಲೈ! ಮೂರನೆಯ ಹೆಜ್ಜೆಯೇ! ನೀನು] **ಅರಾತೀಯತಃ** = ನಮಗೆ ಹಣವು ಸಿಕ್ಕಬಾರದೆಂದು ಅಪೇಕ್ಷಿಸುವ ವೈರಿಯನ್ನು; **ಹಂತಾ** = ನಾಶಪಡಿಸುವ; **ವಿಷ್ಣೋಃ ಕ್ರಮಃ ಅಸಿ** = ವಿಷ್ಣುವಿನ ಹೆಜ್ಜೆಯಾಗಿರುವೆ. **ಜಾಗತೇನ ಛಂದಸಾ** = ಜಗತೀಛಂದಸ್ಸಿನ ದೇವತೆಯ ಅನುಗ್ರಹದಿಂದ; **ದಿವಮ್ ಅನು ವಿಕ್ರಮೇ** = ದ್ಯುಲೋಕವನ್ನು (ಹೆಜ್ಜೆಯನ್ನು ಅನುಸರಿಸಿ) ಕ್ರಮಿಸುವೆನು; **ಸಃ ನಿರ್ಭಕ್ತಃ ಯಮ್ ದ್ವಿಷ್ಮಃ** = ನಾವು ಯಾವನನ್ನು ದ್ವೇಷಿಸುತ್ತೇವೆಯೋ ಅಂತಹ ನಮ್ಮ ಧನಲಾಭಕ್ಕೆ ವಿರೋಧಿಯಾದವನು ಈ ಹೆಜ್ಜೆಯಿಂದ ನಿಗ್ರಹಿಸಲ್ಪಡಲಿ.

---

★ ಪೂರ್ವ ದಿಕ್ಕಿನಲ್ಲಿರುವ ಋತ್ವಿಜರೂ, ದೇವತೆಗಳೂ, ದಕ್ಷಿಣದಿಕ್ಕಿನಲ್ಲಿರುವ

---

* ನಾಲ್ಕನೆಯ ಮಂತ್ರವನ್ನೂ ಇಲ್ಲಿಯೇ ಹೇಳಬೇಕು.

* 'ಯಾಗವನ್ನು ನೋಡಲು ಸರ್ವಪ್ರಾಣಿಗಳೂ ಬೇರೆಬೇರೆ ದಿಕ್ಕಿನಲ್ಲಿ ಸೇರಿಯುತ್ತವೆ. ಅವಭೃಥರೂಪವಾದ

ಹಂತಾಽಽನುಷ್ಟುಭೇನ ಛಂದಸಾ ದಿಶೋಽನು ವಿಕ್ರಮೇ

ನಿರ್ಭಕ್ತಃ ಸ ಯಂ ದ್ವಿಷ್ಮಃ ||೫-16||

[ದಕ್ಷಿಣಾಯಾಮಂತರಿಕ್ಷಮನು ವಿಕ್ರಮೇ ನಿರ್ಭಕ್ತಃ ಸ ಯಂ

ದ್ವಿಷ್ಮೋ ವಿಷ್ಣೋರೇಕಾನ್ನತ್ರಿಗ್ಂಶಚ್ಚ|]

---

ಹಂತಾ । ಆನುಷ್ಟುಭೇನೇತ್ಯಾನು-ಸ್ತುಭೇನ । ಛಂದಸಾ । ದಿಶಃ । ಅನು । ವೀತಿ ।

ಕ್ರಮೇ । ನಿರ್ಭಕ್ತ ಇತಿ ನಿಃ-ಭಕ್ತಃ । ಸಃ । ಯಮ್ । ದ್ವಿಷ್ಮಃ ॥ ೫ ॥

---

✢ [ಎಲೈ ಹೆಜ್ಜೆಯೇ!] ಶತ್ರೂಯತಃ = ನಮ್ಮ ಶತ್ರುಗಳಾಗಬಯಸುವವರನ್ನು; ಹಂತಾ = ಕೊಲ್ಲುವ; ವಿಷ್ಣೋಃ ಕ್ರಮಃ ಅಸಿ = ವಿಷ್ಣುವಿನ ಹೆಜ್ಜೆಯಾಗಿರುವೆ; [ನಾನು] ಆನುಷ್ಟುಭೇನ ಛಂದಸಾ = ಅನುಷ್ಟುಪ್ ಛಂದಸ್ಸಿನ ದೇವತೆಯ ಅನುಗ್ರಹದಿಂದ; ದಿಶಃ ಅನು ವಿಕ್ರಮೇ = [ವಿಷ್ಣುವನ್ನು ಅನುಸರಿಸಿ] ದಿಕ್ಕುಗಳನ್ನು ಈ ಹೆಜ್ಜೆಯಿಂದ ಕ್ರಮಿಸುವೆನು; ಯಮ್ ದ್ವಿಷ್ಮಃ ಸಃ ನಿರ್ಭಕ್ತಃ = ನಾವು ಯಾವನನ್ನು ದ್ವೇಷಿಸುತ್ತೇವೆಯೋ ಆ ನಮ್ಮ ಶತ್ರುವು ಈ ಹೆಜ್ಜೆಯಿಂದ ನಾಶಹೊಂದಲಿ.

---

*ಮಾಸಗಳೂ, ಪಿತೃಗಳೂ ಪಶ್ಚಿಮದಲ್ಲಿರುವ ಮನೆಗಳೂ, ಪಶುಗಳೂ, ಉತ್ತರದಲ್ಲಿರುವ ಜಲ, ಓಷಧಿಗಳೂ, ವನಸ್ಪತಿಗಳೂ, ಊರ್ಧ್ವದಿಕ್ಕಿನಲ್ಲಿ ಇರುವ ಯಜ್ಞ, ಸಂವತ್ಸರ, ಯಜ್ಞಪತಿಗಳೂ ಈ ಜಲಸೇಚನದಿಂದ ಶುದ್ಧರಾಗಲಿ. ನನ್ನನ್ನೂ ಶುದ್ಧಿಗೊಳಿಸಲಿ.

---

ನೀರಿನ ಸೇಚನದಿಂದ ಎಲ್ಲವೂ ಶುದ್ಧವಾಗುತ್ತವೆ' ಎಂದು ಈ ಮಂತ್ರಗಳಿಗೆ ಸಂಬಂಧಿಸಿದ ಬ್ರಾಹ್ಮಣದಲ್ಲಿ ಹೇಳಿದೆ.

* ಮಾಸಾದಿಗಳು ಅಚೇತನವಾದರೂ ಅವುಗಳ ಅಭಿಮಾನಿದೇವತೆಗಳೆಂದು ವಿವರಿಸಲಾಗಿದೆ.

ಎಲೈ! ಪ್ರಥಮಕ್ರಮವೇ! ನೀನು ವಿಷ್ಣುವಿನ ಹೆಜ್ಜೆಯಾಗಿರುವೆ. ನಾನು ಗಾಯತ್ರೀ

ಛಂದಸ್ಸಿನಿಂದ ಪೃಥಿವಿಯನ್ನು ಕ್ರಮಿಸುತ್ತೇನೆ. ಇದರಿಂದ ನಾವು ದ್ವೇಷಿಸುವ ಪಾಪವು ಹೊರಹಾಕಲ್ಪಡಲಿ.

ಎಲೈ! ದ್ವಿತೀಯಕ್ರಮವೇ! ನೀನು ವಿಷ್ಣುವಿನ ಹೆಜ್ಜೆಯಾಗಿರುವೆ. ನಾನು ತ್ರಿಷ್ಟುಪ್ ಛಂದಸ್ಸಿನ ದೇವತೆಯ ಅನುಗ್ರಹದಿಂದ ಅಂತರಿಕ್ಷಲೋಕವನ್ನು ಕ್ರಮಿಸುತ್ತೇನೆ. ನಾವು ಯಾವ ಅಪವಾದವನ್ನು ದ್ವೇಷಿಸುತ್ತೇವೆಯೋ ಅದು ಇದರಿಂದ ಪರಿಹರಿಸಲ್ಪಡಲಿ.

ಎಲೈ! ತೃತೀಯಕ್ರಮವೇ! ನಾನು ಜಗತೀಛಂದಸ್ಸಿನ ದೇವತೆಯ ಅನುಗ್ರಹದಿಂದ ದ್ಯುಲೋಕವನ್ನು ಕ್ರಮಿಸುತ್ತೇನೆ. ಇದರಿಂದ ನಮ್ಮ ಧನಲಾಭಕ್ಕೆ ವಿರೋಧಿಯಾದವನೂ, ಶತ್ರುಗಳೂ ನಾಶಹೊಂದಲಿ.

## ವಿನಿಯೋಗ ಸಂಗ್ರಹ

[1]ಆಪ್ಯಾ ಧ್ರುವಾಪ್ಯಾಯನಂ ಸ್ಯಾತ್ ಪ್ರಜಾ[2]ಸ್ವಾಮ್ಯಂಶಭಕ್ಷಣಮ್ ।
[3]ಸದಸೀತಿ ಪ್ರಣೀತಾನಾಂ ಧಾರಾಯಾ ಅಭಿಮಂತ್ರಣಮ್ ।
ಪ್ರಾಚ್ಯಾಂ[4-8]ತು ಪಂಚಭಿಃ ಸಿಂಚೇತ್ ಕ್ರಮೇದ್ವಿಷ್ಣೋಃಶ್ಚತುಷ್ಟಯಾತ್[9-12]।
ಅನುವಾಕೇ ಪಂಚಮೇಽಸ್ಮಿನ್ ಮಂತ್ರಾ ದ್ವಾದಶ ವರ್ಣಿತಾಃ ॥

ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ—12



# ॥ ಷಷ್ಠೋಽನುವಾಕಃ ॥

ಅಗನ್ಮ ಸುವಸ್ಸುವರಗನ್ಮ ಸಂದೃಶಸ್ತೇ ಮಾ ಛಿತ್ಸಿ ಯತ್ತೇ ತಪಸ್ತಸ್ಮೈ ತೇ ಮಾಽಽವೃಕ್ಷಿ

---

ಅಗನ್ಮ । ಸುವಃ । ಸುವಃ । ಅಗನ್ಮ । ಸಂದೃಶ ಇತಿ ಸಮ್-ದೃಶಃ । ತೇ । ಮಾ। ಛಿತ್ಸಿ । ಯತ್ । ತೇ । ತಪಃ । ತಸ್ಮೈ । ತೇ । ಮಾ । ಏತಿ । ವೃಕ್ಷಿ ।

---

ಐದನೆಯ ಅನುವಾಕದಲ್ಲಿ ಧ್ರುವಾಪ್ಯಾಯನಾದಿಮಂತ್ರಗಳು ಆಮ್ನಾತವಾಗಿವೆ. ಈ ಆರನೆಯ ಅನುವಾಕದಲ್ಲಿ ಆಹವನೀಯೋಪಸ್ಥಾನ, ಆದಿತ್ಯೋಪಸ್ಥಾನಾದಿಮಂತ್ರಗಳು ಆಮ್ನಾತವಾಗಿವೆ.

---

| ಮಂತ್ರ | ವಿನಿಯೋಗ |
|---|---|
| ಅಗನ್ಮ.... ವೃಕ್ಷಿ । | ನಾಲ್ಕನೆಯ ವಿಷ್ಣುಕ್ರಮದಲ್ಲಿ ನಿಂತು ಆಹವನೀಯೋಪಸ್ಥಾನವನ್ನು ಮಾಡಲು |

---

[ಎಲೈ! ಆಹವನೀಯಾಗ್ನಿಯೇ!] **ಸುವಃ ಅಗನ್ಮ** = ನಾವು [ಪುತ್ರಪೌತ್ರಾದಿಯುಕ್ತರಾಗಿ] ಸ್ವರ್ಗವನ್ನು ಹೊಂದುವೆವು. [ಬಳಿಕ]; **ಸುವಃ ಅಗನ್ಮ** = [ಮೋಕ್ಷದ್ವಾರವಾದ] ಆದಿತ್ಯ ಲೋಕವನ್ನು ಹೊಂದುವೆವು. **ತೇ ಸಂದೃಶಃ** = ನಿನ್ನ ಅನುಗ್ರಹಪೂರ್ಣವಾದ ಕಟಾಕ್ಷದಿಂದ; [ಅನುಧ್ಯಾನದಿಂದ]; **ಮಾ ಛಿತ್ಸಿ** = ನಾನು ವಿಚ್ಛಿತ್ತಿ ಹೊಂದುವುದು ಬೇಡ; **ಯತ್ ತೇ ತಪಃ** = [ನಿನ್ನ ಅನುಗ್ರಹಕ್ಕಾಗಿ ಮಾಡುವ] ಯಾವ ಯಾಗಾದಿಕರ್ಮರೂಪವಾದ ತಪಸ್ಸು ಇದೆಯೋ; **ತಸ್ಮೈ ತೇ ಮಾ ಆ ವೃಕ್ಷಿ** = [ನಿನ್ನ ಅನುಗ್ರಹದಿಂದ] ಆ ತಪಸ್ಸಿನಿಂದ ನಾನು ವಿಚ್ಛಿತ್ತಿ ಹೊಂದುವುದು [ವಿವರ್ಜಿತನಾಗುವುದು] ಬೇಡ.

---

ಎಲೈ! ಆಹವನೀಯಾಗ್ನಿಯೇ ! ನಿನ್ನ ಅನುಗ್ರಹದಿಂದ ಪುತ್ರಪೌತ್ರಾದಿಯುಕ್ತರಾದ

**ಸುಭೂರಸಿ ಶ್ರೇಷ್ಠೋ ರಶ್ಮೀನಾಮಾಯುರ್ಧಾ ಅಸ್ಯಾ ಯುರ್ಮೇ ಧೇಹಿ ವರ್ಚೋಧಾ ಅಸಿ ವರ್ಚೋ ಮಯಿ ಧೇಹೀದಮಹಮಮುಂ ಭ್ರಾತೃವ್ಯಮಾಭ್ಯೋ ದಿಗ್ಭ್ಯೋಽಸ್ಯೈ**

---

ಸುಭೂರಿತಿ ಸು-ಭೂಃ । ಅಸಿ । ಶ್ರೇಷ್ಠಃ । ರಶ್ಮೀನಾಮ್ । ಆಯುರ್ಧಾ ಇತ್ಯಾಯುಃ-ಧಾಃ। ಅಸಿ। ಆಯುಃ। ಮೇ। ಧೇಹಿ। ವರ್ಚೋಧಾ ಇತಿ ವರ್ಚಃ-ಧಾಃ। ಅಸಿ। ವರ್ಚಃ। ಮಯಿ। ಧೇಹಿ । ಇದಮ್ । ಅಹಮ್ । ಅಮುಮ್ । ಭ್ರಾತೃವ್ಯಮ್ । ಆಭ್ಯಃ । ದಿಗ್ಭ್ಯ ಇತಿ ದಿಕ್-ಭ್ಯಃ । ಅಸ್ಯೈ ।

---

| ಮಂತ್ರ | ವಿನಿಯೋಗ |
|---|---|
| ಸುಭೂಃ..... ಮಯಿ ಧೇಹಿ । | ಆದಿತ್ಯೋಪಸ್ಥಾನವನ್ನು ಮಾಡಲು |
| ಇದಮಹಮಮುಮ್.... ದ್ವಿಷ್ಮಃ । | ವೈರಿಯನ್ನು ದೂರ ಮಾಡಲು |

---

✣ [ಎಲೈ! ಆದಿತ್ಯದೇವನೇ! ನೀನು] **ಸುಭೂಃ** = ಒಳ್ಳೆಯ ಉದಯವುಳ್ಳವನು; [ಎಲ್ಲರಿಗೂ ಚೆನ್ನಾಗಿ ತಿಳಿಸುವವನು] **ರಶ್ಮೀನಾಮ್** = ಕಿರಣಗಳುಳ್ಳ ಅಗ್ನಿ-ಚಂದ್ರ-ತಾರಾದಿಗಳಲ್ಲಿ; **ಶ್ರೇಷ್ಠಃ** = ಮೇಲಾದವನು; **ಅಸಿ** = ಆಗಿರುತ್ತೀಯೆ; **ಆಯುರ್ಧಾಃ ಅಸಿ** = ಆಯುಸ್ಸನ್ನು ಸ್ಥಾಪಿಸುವವನಾಗಿದ್ದೀಯೆ; **ಮೇ** = ನನ್ನಲ್ಲಿ; **ಆಯುಃ** = ದೀರ್ಘಾಯುಸ್ಸನ್ನು; **ಧೇಹಿ** = ಸ್ಥಾಪಿಸು/ಉಂಟು ಮಾಡು [ನನಗೆ ಆಯುಸ್ಸನ್ನು ಕೊಡು] **ವರ್ಚೋಧಾಃ** = ಬ್ರಹ್ಮವರ್ಚಸವನ್ನು ಉಂಟುಮಾಡುವವನು; **ಅಸಿ** = ಆಗಿದ್ದೀಯೆ; **ಮಯಿ** = ನನ್ನಲ್ಲಿ; **ವರ್ಚಃ** = ಬ್ರಹ್ಮವರ್ಚಸವನ್ನು; **ಧೇಹಿ** = ಸ್ಥಾಪಿಸು; ✣ **ಅಹಮ್** = ನಾನು; **ಅಮುಮ್ ಭ್ರಾತೃವ್ಯಮ್** = ಈ ಹೆಸರಿನ ವೈರಿಯನ್ನು; **ಆಭ್ಯಃ ದಿಗ್ಭ್ಯಃ** = ಈ ಪೂರ್ವಾದಿ ದಿಕ್ಕುಗಳಿಂದಲೂ **ಅಸ್ಯೈ** = ಈ;

---

ನಾವು ಸ್ವರ್ಗವನ್ನು ಹೊಂದುವೆವು. ಅನಂತರ ಮೋಕ್ಷದ್ವಾರವಾದ ಆದಿತ್ಯಲೋಕವನ್ನು

**ದಿವೋಽಸ್ಮಾದಂತರಿಕ್ಷಾದಸ್ಯೈ ಪೃಥಿವ್ಯಾ ಅಸ್ಮಾದನ್ನಾದ್ಯಾನ್ನಿ ರ್ಭಜಾಮಿ ನಿರ್ಭಕ್ತಃ ಸ ಯಂ ದ್ವಿಷ್ಮಃ[೧]। ಸಂ ಜ್ಯೋತಿಷಾಽಭೂವಮೈಂದ್ರೀಮಾವೃತಮನ್ವಾವರ್ತೇ**

---

ದಿವಃ। ಅಸ್ಮಾತ್ । ಅಂತರಿಕ್ಷಾತ್ । ಅಸ್ಯೈ । ಪೃಥಿವ್ಯಾಃ । ಅಸ್ಮಾತ್ । ಅನ್ನಾದ್ಯಾದಿತ್ಯನ್ನ-ಅದ್ಯಾತ್। ನಿರಿತಿ । ಭಜಾಮಿ । ನಿರ್ಭಕ್ತ ಇತಿ ನಿಃ-ಭಕ್ತಃ। ಸಃ । ಯಮ್ । ದ್ವಿಷ್ಮಃ॥ ಸಮಿತಿ । ಜ್ಯೋತಿಷಾ । ಅಭೂವಮ್ । ಐಂದ್ರೀಮ್ । ಆವೃತಮಿತ್ಯಾ-ವೃತಮ್। ಅನ್ವಾವರ್ತ ಇತ್ಯನು-ಆವರ್ತೇ ।

---

| ಮಂತ್ರ | ವಿನಿಯೋಗ |
|---|---|
| ಸಂ... ಅಭೂವಮ್ । | ಆತ್ಮಾಭಿಮರ್ಶನವನ್ನು ಮಾಡಲು |
| ಐಂದ್ರೀಮ್... ವರ್ತೇ । | ಪ್ರದಕ್ಷಿಣೆಯನ್ನು ಮಾಡಲು |

---

**ದಿವಃ** = ದ್ಯುಲೋಕದಿಂದಲೂ; **ಅಸ್ಮಾತ್ ಅಂತರಿಕ್ಷಾತ್** = ಈ ಅಂತರಿಕ್ಷಲೋಕ ದಿಂದಲೂ; **ಅಸ್ಯೈ ಪೃಥಿವ್ಯಾಃ** = ಈ ಭೂಲೋಕದಿಂದಲೂ; **ಅಸ್ಮಾತ್ ಅನ್ನಾದ್ಯಾತ್** = ಈ ಶ್ರೇಷ್ಠವಾದ ಅನ್ನದಿಂದಲೂ [ಅನ್ನಭಕ್ಷಣೆಯಿಂದಲೂ] **ಇದಮ್ ನಿರ್ಭಜಾಮಿ**= ಈ ರೀತಿಯಾಗಿ ದೂರಮಾಡುವೆನು; **ಯಮ್ ದ್ವಿಷ್ಮಃ** = ಯಾವನನ್ನು ದ್ವೇಷಿಸು ತ್ತೇವೆಯೋ; **ಸಃ ನಿರ್ಭಕ್ತಃ** = ಅವನು ದೂರ ಮಾಡಲ್ಪಡಲಿ. ✢ [ನಾನು] **ಜ್ಯೋತಿಷಾ** = ಸೂರ್ಯನ ಜ್ಯೋತಿಸ್ಸಿನಿಂದ; **ಸಮ್ ಅಭೂವಮ್** = ಕೂಡಿಕೊಂಡೆನು. [ಕೂಡಿ ಕೊಳ್ಳುವೆನು]; ✢ **ಐಂದ್ರೀಮ್** = *ಸೂರ್ಯನಿಗೆ ಸಂಬಂಧಿಸಿದ; **ಆವೃತಮ್** = ತಿರುಗುವಿಕೆ ಯನ್ನು; **ಅನು ಆವರ್ತೇ** = ಅನುಸರಿಸಿ ತಿರುಗುತ್ತೇನೆ./ಪ್ರದಕ್ಷಿಣೆಯನ್ನು ಮಾಡುತ್ತೇನೆ.

---

ಹೊಂದುವೆವು. ನಿನ್ನ ಪ್ರಸಾದವನ್ನು ಬೀರುವ ಕಟಾಕ್ಷವು ನಮ್ಮ ಮೇಲೆ ಯಾವಾಗಲೂ

---

* ಇಲ್ಲಿ ಇಂದ್ರಪದವು ಸೂರ್ಯವಾಚಕವಾದುದೆಂದು 'ಅಸೌ ವಾ ಆದಿತ್ಯ ಇಂದ್ರಃ' ಎಂಬ ಬ್ರಾಹ್ಮಣಭಾಗವು ವಿವರಿಸುತ್ತದೆ.

## ಸಮಹಂ ಪ್ರಜಯಾ ಸಂ ಮಯಾ ಪ್ರಜಾ ಸಮಹಗ್ಂ ರಾಯಸ್ಪೋಷೇಣ ಸಂ ಮಯಾ

---

ಸಮಿತಿ। ಅಹಮ್। ಪ್ರಜಯೇತಿ ಪ್ರ-ಜಯಾ। ಸಮಿತಿ । ಮಯಾ । ಪ್ರಜೇತಿ ಪ್ರ-ಜಾ। ಸಮಿತಿ । ಅಹಮ್ । ರಾಯಃ । ಪೋಷೇಣ । ಸಮಿತಿ । ಮಯಾ ।

---

| ಮಂತ್ರ | ವಿನಿಯೋಗ |
|---|---|
| ಸಮಹಂ..... ರಾಯಸ್ಪೋಷಃ । | ಉತ್ತರದಿಕ್ಕಿಗೆ ತಿರುಗಲು [ಉಪಸ್ಥಾನವನ್ನು ಮಾಡಲು] |

---

✢ **ಅಹಮ್** = ನಾನು; **ಪ್ರಜಯಾ ಸಮ್** [ಭೂಯಾಸಮ್] = ಮಕ್ಕಳೊಡನೆ ಕೂಡಿದವನಾಗುವೆನು; **ಮಯಾ** = ನನ್ನಿಂದ; **ಪ್ರಜಾ** = ಪುತ್ರಾದಿಗಳು; **ಸಮ್** [ಭೂಯಾತ್] ಕೂಡಿಕೊಂಡಿರಲಿ; **ಅಹಮ್** = ನಾನು; **ರಾಯಃ ಪೋಷೇಣ ಸಮ್** [ಭೂಯಾಸಮ್] = ಕ್ಷೇತ್ರ-ಪಶ್ವಾದಿ ಧನದೊಡನೆ ಕೂಡಿಕೊಂಡವನಾಗುವೆನು. **ಮಯಾ** = ನನ್ನಿಂದ;

---

ಇರಲಿ. ನಿನ್ನ ಅನುಗ್ರಹಕ್ಕಾಗಿ ಮಾಡುವ ಯಾಗಾದಿ ತಪಸ್ಸು ಯಾವುದಿದೆಯೋ, ಅದರಿಂದ ನಾವು ಯಾವಾಗಲೂ ವಿವರ್ಜಿತರಾಗುವುದು ಬೇಡ. ನಾವು ಯಾವಾಗಲೂ ಸತ್ಕರ್ಮನಿರತರಾಗಿರುವಂತೆ ಅನುಗ್ರಹಿಸು.

ಆದಿತ್ಯದೇವನೇ! ನಿನ್ನ ಉದಯವನ್ನು ಎಲ್ಲರೂ ಎದುರು ನೋಡುತ್ತಾರೆ. ಆದುದರಿಂದ ನೀನು ಒಳ್ಳೆಯ ಉದಯವುಳ್ಳವನು. ಕಿರಣಗಳುಳ್ಳ ಅಗ್ನಿ, ಚಂದ್ರ, ತಾರಾದಿಗಳಲ್ಲಿ ನೀನು ಶ್ರೇಷ್ಠನಾಗಿದ್ದೀಯೆ. ನೀನು ದೀರ್ಘಾಯುಸ್ಸನ್ನು ಕೊಡುವವನು. ನನಗೂ ದೀರ್ಘಾಯುಸ್ಸನ್ನು ನೀಡು. ನೀನು ಬ್ರಹ್ಮವರ್ಚಸವನ್ನು ಉಂಟುಮಾಡುವವನು. ನನ್ನಲ್ಲಿ ಬ್ರಹ್ಮವರ್ಚಸವು ನೆಲೆಸುವಂತೆ ಮಾಡು.

[ವೈರಿಯನ್ನು 'ಅಮುಮ್' ಎಂದು ಹೆಸರಿಸಿ ದೂರಮಾಡುವೆನು. ಇಲ್ಲಿ ದ್ವೇಷಿಯು ಇಲ್ಲದಿದ್ದರೆ ಪಾಪವನ್ನು ದ್ವೇಷಿಯೆಂದು ಭಾವಿಸಬೇಕು.]

ದ್ಯುಲೋಕ, ಅಂತರಿಕ್ಷ, ಪೃಥಿವೀ-ಇವುಗಳಲ್ಲಿಯೂ, ಪೂರ್ವ, ಪಶ್ಚಿಮ, ಉತ್ತರ, ದಕ್ಷಿಣ ಈ ದಿಕ್ಕುಗಳಲ್ಲಿ ನನಗೆ ವಿರೋಧ ಮಾಡುವವರಿದ್ದರೆ, ಅನ್ನದ ವಿಷಯದಲ್ಲಿ

ರಾಯಸ್ಪೋಷಸ್ಸಮಿದ್ಧೋ ಅಗ್ನೇಮೇ ದೀದಿಹಿ

ಸಮೇದ್ಧಾ ತೇ ಅಗ್ನೇ ದೀದ್ಯಾಸಂ ವಸುಮಾನ್ ಯಜ್ಞೋ

---

ರಾಯಃ । ಪೋಷಃ । ಸಮಿದ್ಧ ಇತಿ ಸಮ್-ಇದ್ಧಃ । ಅಗ್ನೇ । ಮೇ । ದೀದಿಹಿ । ಸಮೇದ್ಧೇತಿ ಸಮ್-ಏದ್ಧಾ । ತೇ । ಅಗ್ನೇ । ದೀದ್ಯಾಸಮ್ । ವಸುಮಾನಿತಿ ವಸು-ಮಾನ್ । ಯಜ್ಞಃ ।

---

| ಮಂತ್ರ | ವಿನಿಯೋಗ |
|---|---|
| ಸಮಿದ್ಧೋ..... ದೀದ್ಯಾಸಮ್ । | ಆಹವನೀಯದಲ್ಲಿ ಸಮಿತ್ತನ್ನು ಹಾಕಲು |
| ವಸುಮಾನ್.... ಭೂಯಾಸಮ್ । | ಆಹವನೀಯೋಪಸ್ಥಾನವನ್ನು ಮಾಡಲು |

---

**ರಾಯಃ ಪೋಷಃ** = ಧನಸಮೃದ್ಧಿಯು; **ಸಮ್** = [ಭೂಯಾತ್] = ಕೂಡಿಕೊಂಡಿರಲಿ; ✢**ಅಗ್ನೇ** = ಅಗ್ನಿದೇವನೇ! **ಸಮಿದ್ಧಃ** = [ಈ ಸಮಿತ್ತಿನಿಂದ] ಪ್ರಜ್ವಲಿಸಿದವನಾಗಿ; **ಮೇ** = ನನಗಾಗಿ; **ದೀದಿಹಿ** = ಪ್ರಜ್ವಲಿಸು; **ಅಗ್ನೇ** = ಅಗ್ನಿಯೇ! [ನಾನು] **ತೇ** = ನಿನ್ನನ್ನು; **ಸಮೇದ್ಧಾ** = ಪ್ರಜ್ವಲಿಸಿದವನಂತೆ ಮಾಡಿದವನಾಗಿ; **ದೀದ್ಯಾಸಮ್** = [ನಿನ್ನ ಅನುಗ್ರಹ ದಿಂದ] ಲೋಕದಲ್ಲಿ ಬೆಳಗುವೆನು. [ಸ್ವಾಹಾ = ಇದು ಹುತವಾಗಲಿ] ✢[ಅಗ್ನಿಯೇ!] **ಯಜ್ಞಃ** = ಈ ಯಜ್ಞವು; **ವಸುಮಾನ್** = [ನಿನ್ನ ಅನುಗ್ರಹದಿಂದ] ಧನಯುಕ್ತವಾಗಲಿ;

---

ನನಗೆ ವಿರೋಧಿಗಳಿದ್ದರೆ, ಆ ಶತ್ರುವನ್ನು ಈ ದಿಕ್ಕುಗಳಿಂದಲೂ, ಈ ಲೋಕಗಳಿಂದಲೂ ಈ ಅನ್ನದಿಂದಲೂ ದೂರ ಮಾಡುವೆನು. ನಾವು ಯಾವನನ್ನು ದ್ವೇಷಿಸುತ್ತೇವೆಯೋ, ಅವನೂ ಕೂಡ ದೂರ ಮಾಡಲ್ಪಡಲಿ.

ಸೂರ್ಯೋಪಸ್ಥಾನದಿಂದ ಸೂರ್ಯನ ತೇಜಸ್ಸನ್ನು ನಾನು ಒಳಗೊಂಡೆನು/ ಒಳಗೊಳ್ಳುವೆನು. ನಾನು ಸೂರ್ಯನ ತಿರುಗುವಿಕೆಯನ್ನು ಅನುಸರಿಸಿ ಪ್ರದಕ್ಷಿಣವಾಗಿ ತಿರುಗುತ್ತೇನೆ. ★ ನಾನು ಪುತ್ರಾದಿಪ್ರಜೆಗಳಿಂದ ಯಾವಾಗಲೂ ಕೂಡಿಕೊಂಡವನಾಗು ವೆನು. ಪ್ರಜೆಯೂ ನನ್ನಿಂದ ಕೂಡಿಕೊಂಡಿರಲಿ. ಪಶುಕ್ಷೇತ್ರಾದಿಧನದೊಡನೆ ನಾನು ಸದಾ ಕೂಡಿಕೊಂಡಿರುವಂತಾಗಲಿ. ಧನಸಂಪತ್ತಿಯೂ ನನ್ನೊಡನೆ ಸದಾ ಕೂಡಿ

**ವಸೀಯಾನ್ಭೂಯಾಸಮಗ್ನ ಆಯೂಗ್ಂಷಿ ಪವಸ ಆ ಸುವೋರ್ಜಮಿಷಂ ಚ ನಃ। ಆರೇ ಬಾಧಸ್ವ ದುಚ್ಛುನಾಮ್॥ ಅಗ್ನೇ ಪವಸ್ವ ಸ್ವಪಾ ಅಸ್ಮೇ**

---

ವಸೀಯಾನ್ । ಭೂಯಾಸಮ್ । ಅಗ್ನೇ । ಆಯೂಗ್ಂಷಿ। ಪವಸೇ । ಆ ಇತಿ। ಸುವ। ಊರ್ಜಮ್ । ಇಷಮ್। ಚ । ನಃ ॥ ಆರೇ । ಬಾಧಸ್ವ । ದುಚ್ಛುನಾಮ್ ॥ ಅಗ್ನೇ। ಪವಸ್ವ । ಸ್ವಪಾ ಇತಿ ಸು-ಅಪಾಃ । ಅಸ್ಮೇ ಇತಿ ।

---

| ಮಂತ್ರ | ವಿನಿಯೋಗ |
|---|---|
| ಅಗ್ನ ಆಯೂಗ್ಂಷಿ.... ದುಚ್ಛುನಾಮ್ ॥ | ಗಾರ್ಹಪತ್ಯೋಪಸ್ಥಾನಕ್ಕಾಗಿ |
| ಅಗ್ನೇ..... ಮಯಿ ॥ | ಗಾರ್ಹಪತ್ಯೋಪಸ್ಥಾನಕ್ಕಾಗಿ |

---

**ವಸೀಯಾನ್ ಭೂಯಾಸಮ್** = [ನಾನು ನಿನ್ನ ಅನುಗ್ರಹದಿಂದ] ಹೆಚ್ಚು ಧನಯುಕ್ತನಾಗಿ ಆಗುವೆನು; ✢ **ಅಗ್ನೇ** = ಅಗ್ನಿದೇವನೇ! [ನೀನು] **ಆಯೂಗ್ಂಷಿ** = [ಪುತ್ರಪೌತ್ರಾದಿಯುಕ್ತ ರಾದ ನಮ್ಮ] ಆಯುಸ್ಸುಗಳನ್ನು; **ಪವಸೇ** = ಶುದ್ಧಗೊಳಿಸುತ್ತೀಯೆ/ಅಪಮೃತ್ಯುವನ್ನು ಪರಿಹಾರ ಮಾಡಿ ರಕ್ಷಿಸುತ್ತೀಯೆ/ಶುದ್ಧಿಗೊಳಿಸು. **ನಃ** = ನಮಗೆ; **ಊರ್ಜಮ್ ಇಷಮ್ ಚ** = ಬಲವನ್ನೂ [ಕ್ಷೀರಾದಿರಸವನ್ನೂ], ಅನ್ನವನ್ನೂ; **ಆ ಸುವ** = ಯಾವಾಗಲೂ ಕೊಡು; **ದುಚ್ಛುನಾಮ್** = ಶತ್ರುಸೇನೆಯನ್ನು/ಉಪದ್ರವಗಳನ್ನು; **ಆರೇ** = ದೂರ ದಲ್ಲಿಯೇ; **ಬಾಧಸ್ವ** = ನಾಶಪಡಿಸು/ಪರಿಹರಿಸು. ✢ **ಅಗ್ನೇ** = ಅಗ್ನಿದೇವನೇ ! [ನೀನು] **ಸ್ವಪಾಃ**= ಶುಭವಾದ ಕರ್ಮಗಳುಳ್ಳವನಾಗಿ; **ಅಸ್ಮೇ ಪವಸ್ವ** = ನಮ್ಮನ್ನು ಪವಿತ್ರಗೊಳಿಸು; ನಮ್ಮನ್ನು ಒಳ್ಳೆಯ ಕರ್ಮಗಳುಳ್ಳವರನ್ನಾಗಿ ಮಾಡು; **ಮಯಿ** = ನನ್ನಲ್ಲಿ;

---

ಕೊಂಡಿರಲಿ. ★ಅಗ್ನಿದೇವನೇ! ಈ ಸಮಿದಾ ಧಾನದಿಂದ ಪ್ರಜ್ವಲಿತನಾಗು. ನೀನು ನನಗಾಗಿ ಪ್ರಜ್ವಲಿಸು. ನಿನ್ನನ್ನು ನಾನು ಪ್ರಜ್ವಲಿಸುವಂತೆ ಮಾಡುವೆನು. ನಿನ್ನ

ವರ್ಚಸ್ಸುವೀರ್ಯಮ್[೨]। ದಧತ್ಪೋಷಗ್‌ಂ ರಯಿಂ ಮಯಿ॥

ಅಗ್ನೇ ಗೃಹಪತೇ ಸುಗೃಹಪತಿರಹಂ ತ್ವಯಾ ಗೃಹಪತಿನಾ

---

ವರ್ಚಃ । ಸುವೀರ್ಯಮಿತಿ ಸು-ವೀರ್ಯಮ್ ॥ ದಧತ್ । ಪೋಷಮ್ । ರಯಿಮ್।

ಮಯಿ॥ ಅಗ್ನೇ। ಗೃಹಪತ ಇತಿ ಗೃಹ-ಪತೇ। ಸುಗೃಹಪತಿರಿತಿ ಸು-ಗೃಹಪತಿಃ। ಅಹಮ್।

ತ್ವಯಾ । ಗೃಹಪತಿನೇತಿ ಗೃಹ-ಪತಿನಾ ।

---

| ಮಂತ್ರ | ವಿನಿಯೋಗ |
|---|---|
| ಅಗ್ನೇ....ಜ್ಯೋತಿಷ್ಮತೀಮ್ ॥* | ಈ ಯಜುರ್ಮಂತ್ರದಿಂದ ಗಾರ್ಹಪತ್ಯೋಪಸ್ಥಾನ |

---

**ವರ್ಚಃ** = ಬ್ರಹ್ಮವರ್ಚಸವನ್ನೂ; **ಸುವೀರ್ಯಮ್** = ಒಳ್ಳೆಯ ವ್ಯವಹಾರಸಾಮರ್ಥ್ಯವನ್ನೂ; **ಪೋಷಮ್** = ಪುಷ್ಟಿಯನ್ನೂ; **ರಯಿಮ್** = ಧನವನ್ನೂ; **ದಧತ್** = ಸ್ಥಿರವಾಗಿ ಇರುವಂತೆ ಮಾಡು. ["ದಧತ್ ಪವಸ್ವ" ಎಂದು ಮಿಶ್ರರು ಅನ್ವಯಿಸಿರುತ್ತಾರೆ.] ✣ **ಅಗ್ನೇ** = ಗಾರ್ಹಪತ್ಯಾಗ್ನಿಯೇ! **ಗೃಹಪತೇ** = [ಯಾವಾಗಲೂ ಮನೆಯಲ್ಲಿ ಧಾರಣ ಮಾಡುವುದರಿಂದ] ಮನೆಯ ಒಡೆಯನಾದವನೇ! **ಅಹಮ್** = ನಾನು; **ಗೃಹಪತಿನಾ ತ್ವಯಾ** = ಮನೆಯ ರಕ್ಷಕನಾದ ನಿನ್ನಿಂದ [ನಿನ್ನ ಅನುಗ್ರಹದಿಂದ]; **ಸುಗೃಹಪತಿಃ**

---

ಅನುಗ್ರಹದಿಂದ ನಾನು ಲೋಕದಲ್ಲಿ ಪ್ರಕಾಶಿಸುವಂತಾಗಲಿ. [ಈ ಸಮಿತ್ತು ಚೆನ್ನಾಗಿ ಹುತವಾಗಲಿ]

ಎಲೈ! ಅಗ್ನಿದೇವನೇ! ಈ ಯಜ್ಞವು ನಿನ್ನ ಅನುಗ್ರಹದಿಂದ ಧನಸಮೃದ್ಧವಾಗಲಿ. ನಾನೂ ನಿನ್ನ ಅನುಗ್ರಹದಿಂದ ಅತಿಶಯ ಧನವಂತನಾಗುವೆನು.

---

* ಆಪಸ್ತಂಬಶ್ರೌತಸೂತ್ರದಲ್ಲಿ ಶಾಖಾಂತರಮಂತ್ರಪಾಠವಿದೆಯೆಂದು ಹೇಳಿರುತ್ತಾರೆ. ಆ ಮಂತ್ರವು ಹೀಗಿದೆ: "ಮಹ್ಯಮು[illegible]ಷ್ಮೈ ಜ್ಯೋತಿಷ್ಮತೀಮ್.... ತಂತವೇ ಇತ್ಯಂತತಃ"

# ಭೂಯಾಸಗ್ಂ ಸುಗೃಹಪತಿರ್ಮಯಾ ತ್ವಂ ಗೃಹಪತಿನಾ ಭೂಯಾಶ್ಶತಗ್ಂ ಹಿಮಾಸ್ತಾಮಾಶಿಷಮಾಶಾಸೇ ತಂತವೇ ಜ್ಯೋತಿಷ್ಮತೀಂ ತಾಮಾಶಿಷಮಾಶಾಸೇಽಮುಷ್ಮೈ

---

ಭೂಯಾಸಮ್ । ಸುಗೃಹಪತಿರಿತಿ ಸು-ಗೃಹಪತಿಃ । ಮಯಾ । ತ್ವಮ್ । ಗೃಹಪತಿನೇತಿ ಗೃಹ-ಪತಿನಾ । ಭೂಯಾಃ । ಶತಮ್ । ಹಿಮಾಃ । ತಾಮ್ । ಆಶಿಷಮಿತ್ಯಾ-ಶಿಷಮ್। ಏತಿ । ಶಾಸೇ । ತಂತವೇ । ಜ್ಯೋತಿಷ್ಮತೀಮ್ । ತಾಮ್ । ಆಶಿಷಮಿತ್ಯಾ-ಶಿಷಮ್। ಏತಿ । ಶಾಸೇ । ಅಮುಷ್ಮೈ ।

---

**ಭೂಯಾಸಮ್** = ಒಳ್ಳೆಯ ಗೃಹಪತಿಯಾಗುವೆನು; **ಗೃಹಪತಿನಾ ಮಯಾ** = ಗೃಹಸ್ವಾಮಿಯಾದ ನನ್ನಿಂದ [ಸೇವಿಸಲ್ಪಟ್ಟ]; **ತ್ವಮ್**= ನೀನು; **ಸುಗೃಹಪತಿಃ ಭೂಯಾಃ** = ಒಳ್ಳೆಯ ಗೃಹರಕ್ಷಕನಾಗು; **ಶತಮ್ ಹಿಮಾಃ**= ನೂರು ಹಿಮಂತರ್ತುಗಳ [ವತ್ಸರಗಳ] ಕಾಲ [ನಿನ್ನ ಸೇವೆಯನ್ನು ಮಾಡುತ್ತಾ, ನಿನ್ನನ್ನು ಪ್ರಜ್ವಲಗೊಳಿಸುತ್ತಾ] ನಾನು; **ತಂತವೇ** = ಮುಂದೆ ಹುಟ್ಟುವ ಪುತ್ರನಿಗಾಗಿ; **ಜ್ಯೋತಿಷ್ಮತೀಮ್ ಆಶಿಷಮ್** = ಪುತ್ರೋತ್ಪತ್ತಿ ಸಮರ್ಥವಾದ ಆ ಶುಭಾಶಂಸನೆಯನ್ನು; **ಆಶಾಸೇ**= ಪ್ರಾರ್ಥಿಸಿಕೊಳ್ಳುತ್ತೇನೆ; **ಅಮುಷ್ಮೈ** = ಹುಟ್ಟಿರುವ ಇಂತಹ ಹೆಸರುಳ್ಳ ಪುತ್ರನಿಗಾಗಿ; **ತಾಮ್ ಜ್ಯೋತಿಷ್ಮತೀಮ್ ಆಶಿಷಮ್** = ಅತಿಬುದ್ಧಿಪ್ರಕಾಶನ ಸಮರ್ಥವಾದ [ಬ್ರಹ್ಮವರ್ಚಸಪ್ರಧಾನವಾದ] ಶುಭ ಪ್ರಾರ್ಥನೆಯನ್ನು; **ಆಶಾಸೇ** = ಮಾಡಿಕೊಳ್ಳುತ್ತೇನೆ.

---

ಅಗ್ನಿದೇವನೇ! ಅಪಮೃತ್ಯುಪರಿಹಾರ ಮಾಡಿ ನೀನು ನಮ್ಮ ಆಯುಸ್ಸುಗಳನ್ನು ಶುದ್ಧಗೊಳಿಸಿರುತ್ತೀಯೆ. ನಮಗೆ ಬಲವನ್ನೂ, ಕ್ಷೀರಾದಿರಸವನ್ನೂ, ಅನ್ನವನ್ನೂ ಸದಾ ಉಂಟು ಮಾಡು. ನಮ್ಮ ವೈರಿಗಳನ್ನೂ, ಉಪದ್ರವಗಳನ್ನೂ ದೂರದಲ್ಲಿಯೇ ಅಡಗಿಸಿ ಪರಿಹರಿಸು.

# ಜ್ಯೋತಿಷ್ಮತೀಂ ಕಸ್ತ್ವಾ ಯುನಕ್ತಿ ಸ ತ್ವಾ ವಿಮುಂಚತ್ವಗ್ನೇ ವ್ರತಪತೇ ವ್ರತಮಚಾರಿಷಂ ತದಶಕಂ ತನ್ಮೇಽರಾಧಿ

---

ಜ್ಯೋತಿಷ್ಮತೀಮ್ । ಕಃ । ತ್ವಾ । ಯುನಕ್ತಿ । ಸಃ । ತ್ವಾ । ವೀತಿ। ಮುಂಚತು ।

ಅಗ್ನೇ । ವ್ರತಪತ ಇತಿ ವ್ರತ-ಪತೇ । ವ್ರತಮ್ । ಅಚಾರಿಷಮ್। ತತ್ । ಅಶಕಮ್।

ತತ್ । ಮೇ । ಅರಾಧಿ ।

---

| ಮಂತ್ರ | ವಿನಿಯೋಗ |
|---|---|
| ಕಸ್ತ್ವಾ..... ವಿಮುಂಚತು ॥ | *ಯಜ್ಞವಿಮೋಕಕ್ಕಾಗಿ |
| ಅಗ್ನೇ ವ್ರತಪತೇ... ತನ್ಮೇಽರಾಧಿ । | ಆಹವನೀಯದಲ್ಲಿ ಸಮಿತ್ತನ್ನು ಹಾಕಲು [ಇದೇ ವ್ರತವಿಸರ್ಗ] |

---

✢ಯಜ್ಞವೇ! **ಯಃ** = ಯಾವ; **ಕಃ** = ಪ್ರಜಾಪತಿಯು; **ತ್ವಾ** = ನಿನ್ನನ್ನು [ಯಜ್ಞವನ್ನು] **ಯುನಕ್ತಿ** = ಕಟ್ಟುತ್ತಾನೆಯೋ; **ಸಃ** = ಆ ಪ್ರಜಾಪತಿಯು; **ತ್ವಾ** = ನಿನ್ನನ್ನು; **ವಿಮುಂಚತು** = ಬಿಡಿಸಲಿ; ✢ **ವ್ರತಪತೇ** = ಯಜ್ಞರೂಪವಾದ ಈ ವ್ರತಕ್ಕೆ ಒಡೆಯನಾದವನೇ! **ಅಗ್ನೇ** = ಅಗ್ನಿದೇವನೇ! [ನಾನು] **ವ್ರತಮ್ ಅಚಾರಿಷಮ್** = [ನಿನ್ನ ಅನುಗ್ರಹದಿಂದ] ಈ ವ್ರತವನ್ನು ಮಾಡಿದೆನು; **ತತ್ ಅಶಕಮ್** = ಅದನ್ನು ಮುಗಿಸಲು ಸಮರ್ಥನಾದೆನು; **ತತ್ ಮೇ ಅರಾಧಿ** = ಆ ಯಜ್ಞರೂಪವಾದ ನನ್ನ ವ್ರತವು ನಿನ್ನ ಅನುಗ್ರಹದಿಂದ ಸಮೃದ್ಧವಾಯಿತು/ಸಿದ್ಧವಾಯಿತು.

---

ಅಗ್ನಿಯೇ! ನೀನು ಶುಭಕರ್ಮಗಳುಳ್ಳವನಾಗಿ, ನಮ್ಮನ್ನು ಶುಭಕರ್ಮಯುಕ್ತರನ್ನಾಗಿ ಮಾಡಿ ಪವಿತ್ರಗೊಳಿಸು. ನನ್ನಲ್ಲಿ ಬ್ರಹ್ಮವರ್ಚಸವನ್ನೂ, ವ್ಯವಹಾರಸಾಮರ್ಥ್ಯವನ್ನೂ, ಸರ್ವವಿಧವಾದ ಪುಷ್ಟಿಯನ್ನೂ, ಧನವನ್ನೂ ಸ್ಥಿರವಾಗಿ ನೆಲೆಸುವಂತೆ ಮಾಡು. ಗಾರ್ಹಪತ್ಯಾಗ್ನಿಯೇ ನಿನ್ನನ್ನು ಮನೆಯಲ್ಲಿ ನಾನು ಸದಾ ಧಾರಣೆ ಮಾಡಿಕೊಂಡಿರುತ್ತೇನೆ.

---

* ಈ ಮಂತ್ರಪಾಠವೇ ಯಜ್ಞವಿಮೋಕ.

ಯಜ್ಞೋ ಬಭೂವ ಸ [ಆ[೩]ಬಭೂವ] ಆ ಬಭೂವ ಸ ಪ್ರಜಜ್ಞೇ ಸ ವಾವೃಧೇ। ಸ ದೇವಾನಾಮಧಿಪತಿರ್ಬಭೂವ

---

ಯಜ್ಞಃ । ಬಭೂವ । ಸಃ । ಏತಿ । ಬಭೂವ । ಸಃ । ಪ್ರೇತಿ । ಜಜ್ಞೇ । ಸಃ । ವಾವೃಧೇ । ಸಃ । ದೇವಾನಾಮ್ । ಅಧಿಪತಿರಿತ್ಯಧಿ-ಪತಿಃ । ಬಭೂವ ।

---

| ಮಂತ್ರ | ವಿನಿಯೋಗ |
|---|---|
| ಯಜ್ಞೋ ಬಭೂವ.... ರಯೀಣಾಮ್ । | ಈ ಪುನರಾಲಂಭಮಂತ್ರವು ಜಪಿಸಲು |

---

✣ಯಜ್ಞಃ = [ನಾವು ಮಾಡಿದ] ಈ ಯಜ್ಞವು; ಬಭೂವ = ಸಂಪೂರ್ಣವಾಯಿತು; **ಸಃ=** ಆ ಯಜ್ಞವು; ಆ ಬಭೂವ = ಮತ್ತೆ ಮತ್ತೆ ಆವೃತ್ತವಾಗಲಿ; **ಸಃ ಪ್ರಜಜ್ಞೇ** = ಆ ಯಜ್ಞವು [ನಮ್ಮನ್ನು ಆಲಸ್ಯವಿಲ್ಲದ ಶ್ರದ್ಧಾವಂತರಾದ ಅನುಷ್ಠಾತೃಗಳನ್ನಾಗಿ] ತಿಳಿಯಿತು. [ಆ ಯಜ್ಞವು ಪ್ರಸಿದ್ಧವಾಗಲಿ] **ಸಃ ವಾವೃಧೇ** = ಆ ಯಜ್ಞವು ವೃದ್ಧಿ ಹೊಂದಲಿ. **ಸಃ** = ಆ ಯಜ್ಞವು; **ದೇವಾನಾಮ್ ಅಧಿಪತಿಃ ಬಭೂವ** = [ನಮ್ಮ ಯಾಗದಲ್ಲಿ ಹವಿರ್ಭಾಗಗಳನ್ನು ಕೊಡುವುದರಿಂದ] ದೇವತೆಗಳನ್ನು ಪಾಲಿಸಲಿ.

---

ಆದುದರಿಂದ ನೀನು ಗೃಹಪತಿಯಾಗಿರುವೆ. ನಿನ್ನ ಅನುಗ್ರಹದಿಂದ ನಾನು ಒಳ್ಳೆಯ ಗೃಹಪತಿಯಾಗುವೆನು. ಗೃಹಪತಿಯಾದ ನನ್ನಿಂದ ಸೇವಿಸಲ್ಪಟ್ಟ ನೀನು ಒಳ್ಳೆಯ ಗೃಹಪತಿಯಾಗು. ನೂರು ವರ್ಷಗಳ ಕಾಲ ನಿನ್ನನ್ನು ಆರಾಧಿಸುತ್ತಾ ಇರುವಂತೆ ಆಗಲಿ. ನಾನು ಮುಂದೆ ಹುಟ್ಟುವ ಪುತ್ರನಿಗಾಗಿ ಪುತ್ರೋತ್ಪತ್ತಿಸಾಧಕವಾದ ಶುಭಾಶಂಸನೆಯನ್ನು ಕೇಳಿಕೊಳ್ಳುತ್ತೇನೆ. ಈಗ ಉತ್ಪನ್ನರಾಗಿರುವ ಇಂತಹ ಇಂತಹ ಹೆಸರಿನ ಮಕ್ಕಳಿಗಾಗಿ ಬ್ರಹ್ಮವರ್ಚಸಪ್ರಧಾನವಾದ ಪ್ರಾರ್ಥನೆಯನ್ನು ಮಾಡುತ್ತೇನೆ.

ಎಲೈ! ಯಜ್ಞವೇ ! ಪ್ರಜಾಪತಿಯು ನಿನ್ನನ್ನು ನಿಯಮಯುಕ್ತನನ್ನಾಗಿ ಮಾಡಿರುತ್ತಾನೆ. ಈಗ ಯಜ್ಞವು ಮುಗಿಯುತ್ತಿರುವುದರಿಂದ ಆ ಪ್ರಜಾಪತಿಯು ನಿನ್ನನ್ನು ನಿಯಮಗಳಿಂದ ಬಿಡಿಸಲಿ.

ವ್ರತಗಳಿಗೆ ಒಡೆಯನಾದ ಅಗ್ನಿದೇವನೇ! ನಿನ್ನ ಅನುಗ್ರಹ ದಿಂದ ಈ ಯಜ್ಞರೂಪವಾದ ವ್ರತವನ್ನು ಮಾಡಿದೆನು. ನಿನ್ನ ಅನುಗ್ರಹದಿಂದಲೇ ಅದನ್ನು ಮುಗಿಸಲು

---

**ಸೋ ಅಸ್ಮಾಗ್ಂ ಅಧಿಪತೀನ್ಕರೋತು ವಯಗ್ಂ ಸ್ಯಾಮ ಪತಯೋ ರಯೀಣಾಮ್॥ ಗೋಮಾಗ್ಂ ಅಗ್ನೇಽವಿಮಾಗ್ಂ ಅಶ್ವೀ ಯಜ್ಞೋ ನೃವತ್ಸಖಾ ಸದಮಿದಪ್ರಮೃಷ್ಯಃ ।**

ಸಃ। ಅಸ್ಮಾನ್। ಅಧಿಪತೀನಿತ್ಯಧಿ-ಪತೀನ್ । ಕರೋತು। ವಯಮ್ । ಸ್ಯಾಮ। ಪತಯಃ। ರಯೀಣಾಮ್ ॥ **ಗೋಮಾನಿತಿ ಗೋ-ಮಾನ್ ।** ಅಗ್ನೇ । ಅವಿಮಾನಿತ್ಯವಿ-ಮಾನ್। ಅಶ್ವೀ । ಯಜ್ಞಃ । ನೃವತ್ಸಖೇತಿ ನೃವತ್-ಸಖಾ । ಸದಮ್ । ಇತ್ । ಅಪ್ರಮೃಷ್ಯ ಇತ್ಯಪ್ರ-ಮೃಷ್ಯಃ॥

---

| ಮಂತ್ರ | ವಿನಿಯೋಗ |
|---|---|
| **ಗೋಮಾಗ್ಂ ಅಗ್ನೇ.... ಸಭಾವಾನ್ ।** | ಪೂರ್ವಕ್ಕೆ ಹೆಜ್ಜೆಯನ್ನಿಟ್ಟು ಜಪಿಸಲು |

---

**ಸಃ** = ಆ ಯಾಗವು; **ಅಸ್ಮಾನ್** = ನಮ್ಮನ್ನು **ಅಧಿಪತೀನ್ ಕರೋತು** = ಅಧಿಕವಾಗಿ ಯಜ್ಞಾನುಷ್ಠಾನದ ಪಾಲಕರನ್ನಾಗಿ [ಮನುಷ್ಯರ] ಪಾಲಕರನ್ನಾಗಿ ಮಾಡಲಿ. **ವಯಮ್** = ನಾವು; **ರಯೀಣಾಮ್** = ಯಜ್ಞಸಾಧನಗಳಾದ ಧನಗಳಿಗೆ; **ಪತಯಃ ಸ್ಯಾಮ** = ಒಡೆಯರಾಗೋಣ; ✣ **ಅಗ್ನೇ** = ಅಗ್ನಿದೇವನೇ! ಏಷಃ **ಯಜ್ಞಃ** = [ನಾವು ಮತ್ತೆ ಮತ್ತೆ ಮಾಡಬೇಕೆನ್ನುವ] ಈ ಯಜ್ಞವು; **ಗೋಮಾನ್** = ಗೋವುಗಳುಳ್ಳದ್ದಾಗಿಯೂ; **ಅವಿಮಾನ್** = ಕುರಿಗಳುಳ್ಳದ್ದಾಗಿಯೂ; **ಅಶ್ವೀ** = ಕುದುರೆಗಳುಳ್ಳದ್ದಾಗಿಯೂ; **ನೃವತ್ಸಖಾ** = ಋತ್ವಿಜರೆಂಬ ಮನುಷ್ಯರುಳ್ಳ ದೇವತೆಗಳೇ ಮಿತ್ರರಾಗಿ ಉಳ್ಳದ್ದಾಗಿಯೂ; **ಸದಮ್ ಇತ್** = ಯಾವಾಗಲೂ; **ಅಪ್ರಮೃಷ್ಯಃ** = ತಿರಸ್ಕರಿಸಲು ಅಸಾಧ್ಯವಾದುದಾಗಿಯೂ ಆಗಲಿ. **ಅಸುರ** = ಪ್ರಾಣವಂತ ನಾದ ಅಗ್ನಿಯೇ! ಏಷಃ = ಈ ಯಜ್ಞವು;

---

ಸಮರ್ಥನಾದೆನು. ನನ್ನ ಈ ಯಜ್ಞರೂಪವಾದ ವ್ರತವು ಸಮೃದ್ಧವಾಗಿ ಫಲಸಿದ್ಧಿಯನ್ನು ಕೊಡಲಿ.

ಈ ಯಜ್ಞವು ಸಂಪೂರ್ಣವಾಯಿತು. ಅದು ಮತ್ತೆ ಮತ್ತೆ ಮಾಡಲ್ಪಡಲಿ. ಅದು ನಮ್ಮನ್ನು ಅನುಷ್ಠಾತೃಗಳನ್ನಾಗಿ ತಿಳಿಯಿತು. ಅದು ಪ್ರಸಿದ್ಧವಾಯಿತು. ಅದು ವೃದ್ಧಿ

---

# ಇಡಾವಾಗ್‌ಂ ಏಷೋ ಅಸುರ ಪ್ರಜಾವಾನ್ದೀರ್ಘೋ ರಯಿಃ ಪೃಥುಬುಧ್ನಃ ಸಭಾವಾನ್ ॥೬-20॥

[ದ್ವಿಷ್ಮಸ್ಸುವೀರ್ಯಗ್‌ಂ ಸ ಆ ಪಂಚತ್ರಿಗ್‌ಂಶಚ್ಚ॥]

ಇಡಾವಾನೀತೀಡಾ-ವಾನ್ । ಏಷಃ । ಅಸುರ । ಪ್ರಜಾವಾನಿತಿ ಪ್ರಜಾ-ವಾನ್। ದೀರ್ಘಃ। ರಯಿಃ। ಪೃಥುಬುಧ್ನ ಇತಿ ಪೃಥು-ಬುಧ್ನಃ। ಸಭಾವಾನಿತಿ ಸಭಾ-ವಾನ್ ॥೬॥

---

ಇಡಾವಾನ್ = ಅನ್ನವುಳ್ಳದ್ದಾಗಿಯೂ; ಪ್ರಜಾವಾನ್ = ಮಕ್ಕಳನ್ನು ಕೊಡುವುದಾಗಿಯೂ; ದೀರ್ಘಃ = ಅವಿಚ್ಛಿನ್ನವಾದುದ್ದಾಗಿಯೂ; ರಯಿಃ = ಬಹುಧನವುಳ್ಳದ್ದಾಗಿಯೂ; ಪೃಥುಬುಧ್ನಃ = ವಿಸ್ತೀರ್ಣವಾದ ಮೂಲವುಳ್ಳದ್ದಾಗಿಯೂ/ಮಂತ್ರಗಳಲ್ಲಿಯೂ ಅನುಷ್ಠಾನಗಳಲ್ಲಿಯೂ ವೈಕಲ್ಯರಹಿತವಾದದ್ದಾಗಿಯೂ; ಸಭಾವಾನ್ = ವಿದ್ವತ್ಸಭೆಯುಳ್ಳದ್ದಾಗಿಯೂ, ಯಜ್ಞಶಾಲೆಗಳುಳ್ಳದ್ದಾಗಿಯೂ ಮತ್ತೆ ಮತ್ತೆ ಉಂಟಾಗಲಿ.

---

ಹೊಂದಲಿ. ಅದು ಹವಿಸ್ಸುಗಳನ್ನು ಕೊಡುವುದರಿಂದ ದೇವತೆಗಳ ಪಾಲಕನಾಗಲಿ. ಅದು ನಮ್ಮನ್ನು ಅನುಷ್ಠಾನದ/ಮನುಷ್ಯರ ಪಾಲಕರನ್ನಾಗಿ ಮಾಡಲಿ. ನಾವು ಯಜ್ಞದೇವತೆಯ ಅನುಗ್ರಹದಿಂದ ಧನಗಳಿಗೆ ಒಡೆಯರಾಗೋಣ.

ಅಗ್ನಿದೇವನೇ! ನಿನ್ನ ಅನುಗ್ರಹದಿಂದ ಮತ್ತೆ ಮತ್ತೆ ನಾವು ಮಾಡಬೇಕೆನ್ನುವ ಯಜ್ಞವು ಗೋವುಗಳನ್ನೂ, ಕುರಿಗಳನ್ನೂ, ಕುದುರೆಗಳನ್ನೂ ಕೊಡಲಿ. ಋತ್ವಿಜರಿಂದ ಆಹ್ವಾನಿಸಲ್ಪಡುವ ದೇವತೆಗಳು ಯಜ್ಞಕ್ಕೆ ಮಿತ್ರರಾಗಲಿ. ಯಾವಾಗಲೂ ಅಡ್ಡಿಪಡಿಸಲು ಸಾಧ್ಯವಾಗದಿರಲಿ. ಅನ್ನಸಂಪತ್ತಿಯುಳ್ಳದ್ದಾಗಲಿ. ಪ್ರಾಣವಂತನಾದ ಅಗ್ನಿಯೇ! ಈ ಯಜ್ಞವು ಪುತ್ರಸಂಪತ್ತಿಯನ್ನೂ, ಧನಸಂಪತ್ತಿಯನ್ನೂ ಕೊಡಲಿ. ಯಜ್ಞವನ್ನು ನೋಡಲು ಬರುವ ವಿದ್ವಾಂಸರು ಯಾಗಶಾಲೆಯಲ್ಲಿ ಇರುವಂತಾಗಲಿ. ಯಜ್ಞ ಮೂಲವಾದ ಮಂತ್ರಗಳಲ್ಲಿಯೂ ಅನುಷ್ಠಾನಗಳಲ್ಲಿಯೂ ವೈಕಲ್ಯವುಂಟಾಗದಿರಲಿ. ಇಂತಹ ಯಜ್ಞವನ್ನು ನಾವು ಮತ್ತೆ ಮತ್ತೆ ಮಾಡುವಂತೆ ಅನುಗ್ರಹಿಸು.

## ವಿನಿಯೋಗ ಸಂಗ್ರಹ

[1]ಅಗನ್ ಪೂರ್ವಾಗ್ನ್ಯುಪಸ್ಥಾನಂ [2]ಸುಭೂರ್ಭಾನೋಪಸ್ಥಿತಿಃ ।
[3]ಇದಂ ನಿಸ್ಸಾರಯೇಚ್ಛತ್ರೂನ್[4]ಸಂಜ್ಯೋತಿ ಸ್ವಾಭಿಮರ್ಶನಮ್ ॥
[5]ಐಂದ್ರೀ ಪ್ರದಕ್ಷಿಣಾವೃತ್ತಿಃ [6]ಸಮಹಂ ತದ್ವಿಪರ್ಯಯಃ ।
[7]ಸಮಿದ್ಧಃ ಸಮಿದಾಧಾನಂ [8]ವಸು ಪೂರ್ವಾಗ್ನ್ಯುಪಸ್ಥಿತಿಃ ।

ಕಸ್ಮಾತ್ತ್ವ[12] ಯಜ್ಞವಿಮೋಕಃ ಸ್ಯಾದಗ್ನೇ[13] ತದ್ವ್ರತಮುತ್ಸೃಜೇತ್ ॥
[14]ಯಜ್ಞೇತಿ ಪುನರಾಲಂಭಂ ಜಪೇದ್ಗೋಮಾಂಸ್ತು[15] ಗೋಮತೀಮ್ ।
ಷಷ್ಠೇಽನುವಾಕ ಏತಸ್ಮಿನ್ ಮಂತ್ರಾಃ ಪಂಚದಶೇರಿತಾಃ ॥

## ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ—15

## ಅನುವಾಕದ ವಿಶೇಷ ವಿಷಯಗಳು

### ಅ) ಮೀಮಾಂಸಾ

**1. 'ಅಗನ್ಮ ಸುವಃ', ' ಅಗ್ನೇರಹಮುಜ್ಜಿತಿಮ್' ಇವುಗಳಿಗೆ ವಿಕೃತಿಯಾಗದಲ್ಲಿ ಊಹವಿದೆಯೇ? [ಜೈ.ಸೂ. 9-1]**

ದರ್ಶಪೂರ್ಣಮಾಸಪ್ರಕರಣದಲ್ಲಿ 'ಅಗನ್ಮ ಸುವಃ' 'ಅಗ್ನೇರಹಮುಜ್ಜಿತಿಮ್' ಎಂಬ ಮಂತ್ರಗಳ ಪಾಠವಿದೆ. ವಿಕೃತಿಯಾಗಗಳ ಅನುಷ್ಠಾನದಲ್ಲಿ ಈ ಮಂತ್ರಗಳಿಗೆ ಊಹ ವಿದೆಯೇ ಇಲ್ಲವೇ? ಎಂಬುದು ಇಲ್ಲಿನ ಸಂಶಯ.

ಇಲ್ಲಿಯ ಪೂರ್ವಪಕ್ಷ ಹೀಗಿದೆ: 'ಅಗನ್ಮ ಸುವಃ' ಎಂಬಲ್ಲಿ ಸ್ವರ್ಗರೂಪ ಅರ್ಥಪ್ರಕಾಶಕವಾದ ಲಿಂಗವಿದೆ. 'ಅಗ್ನೇರಹಮ್' ಎಂಬ ಮಂತ್ರದಲ್ಲಿ ದೇವತಾರೂಪ ಅರ್ಥಪ್ರಕಾಶಕವಾದ ಲಿಂಗವಿದೆ. ವಿಕೃತಿಯಾಗವಾದ ಸೌರ್ಯೇಷ್ಟಿಯನ್ನು ವಿಧಿಸುವ 'ಸೌರ್ಯಂ ಚರುಂ ನಿರ್ವಪೇತ್ ಬ್ರಹ್ಮವರ್ಚಸಕಾಮಃ' ಎಂಬಲ್ಲಿ ಈ ಫಲ-ದೇವತೆಗಳಿಲ್ಲದ ಕಾರಣ ಈ ಮಂತ್ರಗಳಿಗೆ ಲೋಪವುಂಟು. ಊಹವಿಲ್ಲ.

ಇಲ್ಲಿಯ ಸಿದ್ಧಾಂತ ಹೀಗಿದೆ. ಅಪೂರ್ವಕ್ಕೆ ಇತಿಕರ್ತವ್ಯತಾಕಾಂಕ್ಷೆಯಿದೆ. ಅಪೂರ್ವವು ಪ್ರಯೋಜಕವಾದುದರಿಂದ ಪ್ರಕೃತಿಯಾಗದಲ್ಲಿ ಪಠಿತವಾಗಿ ಅತಿದೇಶ ದಿಂದ ವಿಕೃತಿಯಾಗದಲ್ಲಿಯೂ ಪ್ರಾಪ್ತವಾಗುವ ಈ ಮಂತ್ರಗಳಿಗೆ ವಿಕೃತಿಯಾಗದಲ್ಲಿ ಊಹವಿದೆ. ಆದುದರಿಂದ 'ಸೌರ್ಯ ಚರುಂ ನಿರ್ವಪೇತ್ ಬ್ರಹ್ಮವರ್ಚಸಕಾಮಃ' ಎಂಬ ವಿಕೃತಿಯಲ್ಲಿ 'ಅಗನ್ಮ ಬ್ರಹ್ಮವರ್ಚಸಮ್' 'ಸೂರ್ಯಸ್ಯಾಹಮುಜ್ಜಿತಿಮ್' ಎಂಬ ಊಹವಿದೆ.

### ಆ) ಛಂದಸ್ಸು

| | | |
|---|---|---|
| 1) | ಅಗ್ನ ಆಯೂಗ್ಂಷಿ...... । | ಗಾಯತ್ರೀ |
| 2) | ಅಗ್ನೇ ಪವಸ್ವ...... । | ಗಾಯತ್ರೀ |
| 3) | ಯಜ್ಞೋ ಬಭೂವ.....। | ಪಂಚಪದಾ ಜಗತೀ |
| 4) | ಗೋಮಾಗ್ಂ ಅಗ್ನೇ.....। | ತ್ರಿಷ್ಟುಪ್ |

# ॥ ಸಪ್ತಮೋಽನುವಾಕಃ ॥

ಯಥಾ ವೈ ಸಮೃತಸೋಮಾ ಏವಂ ವಾ ಏತೇ ಸಮೃತಯಜ್ಞಾ

---

**ಯಥಾ** । ವೈ । ಸಮೃತಸೋಮಾ ಇತಿ ಸಮೃತ-ಸೋಮಾಃ । ಏವಮ್ । ವೈ । ಏತೇ । ಸಮೃತಯಜ್ಞಾ ಇತಿ ಸಮೃತ - ಯಜ್ಞಾಃ ।

---

ಆರು ಅನುವಾಕಗಳಲ್ಲಿ ಯಾಜಮಾನಮಂತ್ರಗಳು ಹೇಳಲ್ಪಟ್ಟವು. ಬಳಿಕ ಐದು ಅನುವಾಕಗಳಿಂದ ಯಾಜಮಾನಮಂತ್ರಗಳ ಬ್ರಾಹ್ಮಣವು ಹೇಳಲ್ಪಡುತ್ತದೆ.

ಈ ಏಳನೆಯ ಅನುವಾಕದಲ್ಲಿ ದೇವತಾಪರಿಗ್ರಹಾದಿವಿಧಿಗಳು ಇವೆ. ಅಧ್ವರ್ಯುವು ಅಗ್ನ್ಯನ್ವಾಧಾನ ಮಾಡುವಾಗ ಯಜಮಾನನು ಬ್ರಾಹ್ಮಣದ ಅಚ್ಛಿದ್ರ ಕಾಂಡದಲ್ಲಿರುವ **'ಅಗ್ನಿಂ ಗೃಹ್ಣಾಮಿ'** ಇತ್ಯಾದಿ ಮಂತ್ರಗಳನ್ನು ಜಪಿಸಬೇಕು. ಇದೇ **'ದೇವತಾಪರಿಗ್ರಹ'.**

**'ಅಗ್ನಿಂ ಗೃಹ್ಣಾಮಿ'** ಮೊದಲಾದ ಮಂತ್ರಗಳು ಆಹವನೀಯಾನ್ವಾಧಾನ ಮಾಡುವಾಗಲೂ, **'ಅಂತರಾಗ್ನೀ...'** ಎಂಬ ಮಂತ್ರವು ಅಗ್ನಿಗಳ ಮಧ್ಯದಲ್ಲಿ ನಿಂತು ಜಪಿಸಲೂ, **'ಇಹ ಪ್ರಜಾ' 'ಇಹ ಪಶವಃ'** ಎಂಬ ಎರಡು ಮಂತ್ರಗಳು ಗಾರ್ಹಪತ್ಯಾನ್ವಾಧಾನ ಮಾಡುವಾಗಲೂ, **'ಅಯಂ ಪಿತೃಣಾಮಗ್ನಿಃ'** ಎಂಬುದು ದಕ್ಷಿಣಾಗ್ನಿಯ ಅನ್ವಾಧಾನ ಸಮಯದಲ್ಲಿಯೂ ಅನುಮಂತ್ರಣಮಂತ್ರಗಳಾಗಿವೆ.

---

| **ಬ್ರಾಹ್ಮಣಭಾಗ*** | **ದೇವತಾಪರಿಗ್ರಹವಿಧಿಃ ವಿವರಣೆ** |
|---|---|
| ಯಥಾ ವೈ | ಹೇಗೆ [ಏಕಕಾಲದಲ್ಲಿ] [ವಸಂತಕಾಲದಲ್ಲಿ] |
| ಸಮೃತಸೋಮಾಃ | ಅನೇಕ ಯಜಮಾನರು ಮಾಡುವ ಸೋಮ |
| ಏವಂ ವೈ | ಯಾಗಗಳು ಒಟ್ಟಾಗಿ ಬರುತ್ತವೆಯೋ, ಹೀಗೆಯೇ |
| ಯತ್ ದರ್ಶಪೂರ್ಣಮಾಸೌ | ಯಾವ ದರ್ಶಪೂರ್ಣಮಾಸಗಳೆಂಬ [ಯಾಗ |
| ಏತೇ ಸಮೃತಯಜ್ಞಾಃ | ಗಳುಂಟೋ] ಇವು ಏಕಕಾಲದಲ್ಲಿ ಒಟ್ಟಾಗಿ ಪ್ರಾಪ್ತವಾಗುತ್ತವೆ. [ಹೀಗಿರುವುದರಿಂದ] |

ಯದ್ದರ್ಶಪೂರ್ಣಮಾಸೌ ಕಸ್ಯ ವಾಽಹದೇವಾ ಯಜ್ಞಮಾ
ಗಚ್ಛಂತಿ ಕಸ್ಯ ವಾ ನ ಬಹೂನಾಂ ಯಜಮಾನಾನಾಂ ಯೋ
ವೈ ದೇವತಾಃ ಪೂರ್ವಃ ಪರಿಗೃಹ್ಣಾತಿ ಸ ಏನಾಃ ಶ್ವೋ
ಭೂತೇ ಯಜತ ಏತದ್ವೈ ದೇವಾನಾಮಾಯತನಂ

---

ಯತ್। ದರ್ಶಪೂರ್ಣಮಾಸಾವಿತಿ ದರ್ಶ-ಪೂರ್ಣಮಾಸೌ। ಕಸ್ಯ । ವಾ । ಅಹ । ದೇವಾಃ । ಯಜ್ಞಮ್ । ಆಗಚ್ಛಂತೀತ್ಯಾ-ಗಚ್ಛಂತಿ । ಕಸ್ಯ। ವಾ। ನ। ಬಹೂನಾಮ್। ಯಜಮಾನಾನಾಮ್। ಯಃ । ವೈ । ದೇವತಾಃ। ಪೂರ್ವಃ। ಪರಿಗೃಹ್ಣಾತೀತಿ ಪರಿ-ಗೃಹ್ಣಾತಿ। ಸಃ । ಏನಾಃ । ಶ್ವಃ । ಭೂತೇ । ಯಜತೇ । ಏತತ್ । ವೈ। ದೇವಾನಾಮ್। ಆಯತನಮಿತ್ಯಾ-ಯತನಮ್ ।

---

| | |
|---|---|
| ದೇವಾಃ ಕಸ್ಯ ವಾ ಯಜ್ಞಮ್ ಆಗಚ್ಛಂತಿ ? | ದೇವತೆಗಳು ಯಾವ ಯಜಮಾನನ ಯಜ್ಞಕ್ಕೆ ಬರುತ್ತಾರೆ ? |
| ಕಸ್ಯ ವಾ ನ ? | ಯಾವನ ಯಜ್ಞಕ್ಕೆ ಬರುವುದಿಲ್ಲ? |
| ಅಹ! | ಇಂತಹ ಸಂಕಟವು ದೇವತೆಗಳಿಗೆ ಪ್ರಾಪ್ತವಾಗುತ್ತದೆ. |
| ಬಹೂನಾಂ ಯಜಮಾನಾನಾಮ್ ಯಃ ವೈ ದೇವತಾಃ ಪೂರ್ವಃ ಪರಿಗೃಹ್ಣಾತಿ | ಹಲವರು ಯಜಮಾನರ ಮಧ್ಯದಲ್ಲಿ ಯಾವ ಯಜಮಾನನು ಮೊದಲನೆಯವನಾಗಿ ದೇವತೆಗಳನ್ನು ಪರಿಗ್ರಹಿಸುತ್ತಾನೆಯೋ |
| ಸಃ ಏನಾಃ ಶ್ವಃ ಭೂತೇ ಯಜತೇ | ಆ ಯಜಮಾನನು ಈ ದೇವತೆಗಳನ್ನು ಕುರಿತು ಮಾರನೆಯ ದಿನ ಯಾಗ ಮಾಡಲು ಅರ್ಹನಾಗುತ್ತಾನೆ. |

ಯದಾಹವನೀಯೋಂಽತರಾಗ್ನೀ ಪಶೂನಾಂಗಾರ್‌ಹಪತ್ಯೋ
ಮನುಷ್ಯಾಣಾಮನ್ವಾಹಾರ್ಯಪಚನಃ ಪಿತೃಣಾಮಗ್ನಿಂ
ಗೃಹ್ಣಾತಿ ಸ್ವ ಏವಾಯತನೇ ದೇವತಾಃ ಪರಿ[ಪರಿ [೧]
ಗೃಹ್ಣಾತಿ] ಗೃಹ್ಣಾತಿ

ಯತ್। ಆಹವನೀಯ ಇತ್ಯಾ-ಹವನೀಯಃ । ಅಂತರಾ । ಅಗ್ನೀ ಇತಿ । ಪಶೂನಾಮ್। ಗಾರ್‌ಹಪತ್ಯ ಇತಿ ಗಾರ್‌ಹ-ಪತ್ಯಃ। ಮನುಷ್ಯಾಣಾಮ್। ಅನ್ವಾಹಾರ್ಯಪಚನ ಇತ್ಯನ್ವಾ ಹಾರ್ಯ-ಪಚನಃ। ಪಿತೃಣಾಮ್। ಅಗ್ನಿಮ್। ಗೃಹ್ಣಾತಿ । ಸ್ವೇ । ಏವ । ಆಯತನ ಇತ್ಯಾ-ಯತನೇ । ದೇವತಾಃ । ಪರೀತಿ [೧] ಗೃಹ್ಣಾತಿ

| | |
|---|---|
| ಯತ್ ಆಹವನೀಯಃ ಏತತ್ ವೈ ದೇವಾನಾಮ್ ಆಯತನಮ್ | ಆಹವನೀಯಾಗ್ನಿಯೆಂಬುದು ಯಾವುದುಂಟೋ, ಅದು ದೇವತೆಗಳ ಸ್ಥಾನವಾಗಿದೆ. |

**ದೇವತೆಗಳ ಪರಿಗ್ರಹಕ್ಕಾಗಿ ಪ್ರದೇಶದ ವಿಧಿ**

| | |
|---|---|
| ಅಗ್ನೀ ಅಂತರಾ ಪಶೂನಾಮ್ | ಆಹವನೀಯ-ಗಾರ್‌ಹಪತ್ಯಾಗ್ನಿಗಳ ಮಧ್ಯ ಪ್ರದೇಶವು ಪಶುಗಳ [ಸ್ಥಾನ]. |
| ಗಾರ್‌ಹಪತ್ಯಃ ಮನುಷ್ಯಾಣಾಮ್ ಅನ್ವಾಹಾರ್ಯಪಚನಃ ಪಿತೃಣಾಮ್ | ಗಾರ್ಹಪತ್ಯವು ಮನುಷ್ಯರ [ಸ್ಥಾನ]. [ಋತ್ವಿಜರಿಗಾಗಿ] ಅನ್ವಾಹಾರ್ಯವನ್ನು ಬೇಯಿಸುವ ದಕ್ಷಿಣಾಗ್ನಿಯು ಪಿತೃದೇವತೆಗಳ[ಸ್ಥಾನವಾಗಿದೆ] [ಅಲ್ಲಿಯೇ] |
| ಅಗ್ನಿಂ ಗೃಹ್ಣಾತಿ | ಅಗ್ನ್ಯಾದಿದೇವತೆಗಳ ಪರಿಗ್ರಹವನ್ನು ಮಾಡಬೇಕು. [ವಿಧಿ] |
| ಸ್ವೇ ಏವ ಆಯತನೇ ದೇವತಾಃ ಪರಿಗೃಹ್ಣಾತಿ | ತಮ್ಮ ತಮ್ಮ ಸ್ಥಾನದಲ್ಲಿಯೇ ದೇವತೆಗಳನ್ನು ಪರಿಗ್ರಹ ಮಾಡಿದಂತಾಗುತ್ತದೆ. |

**ತಾತ್ಪರ್ಯ :** ಒಂದೇ ಕಾಲದಲ್ಲಿ ಹಲವರು ಯಜಮಾನರು ಮಾಡುವ ಸೋಮ ಯಾಗಗಳೂ ಇವೆ. ದರ್ಶ-ಪೂರ್ಣಮಾಸಾದಿಯಾಗಗಳೂ ಇವೆ. ಹೀಗಿರುವುದರಿಂದ

श्रीः

ತಾಃ ಶ್ವೋ ಭೂತೇ ಯಜತೇ ವ್ರತೇನ ವೈ

ಮೇಧ್ಯೋಽಗ್ನಿರ್ವ್ರತಪತಿ-

---

ತಾಃ । ಶ್ವಃ । ಭೂತೇ । ಯಜತೇ । ವ್ರತೇನ । ವೈ । ಮೇಧ್ಯಃ । ಅಗ್ನಿಃ । ವ್ರತಪತಿರಿತಿ ವ್ರತ - ಪತಿಃ ।

---

ತಾಃ ಶ್ವಃ ಭೂತೇ ಯಜತೇ — ಆ ದೇವತೆಗಳನ್ನು ಕುರಿತು ಮಾರನೆಯ ದಿನ ಯಾಗ ಮಾಡಬೇಕು.

**ಯಜ್ಞರೂಪವ್ರತಸ್ವೀಕಾರವಿಧಿ/ ಪ್ರಸ್ತಾವ**

ವ್ರತೇನ ವೈ ಮೇಧ್ಯಃ ಅಗ್ನಿಃ ವ್ರತಪತಿಃ — [ಯಜಮಾನನು ಮಾಡುವ] ವ್ರತಸ್ವೀಕಾರದಿಂದ ವ್ರತಪತಿಯಾದ ಅಗ್ನಿಯು ಯಾಗ ಯೋಗ್ಯನಾಗುತ್ತಾನೆ.
[ವ್ರತದಿಂದ ಯಜಮಾನನು ಪವಿತ್ರನಾಗುತ್ತಾನೆ. ಅಗ್ನಿಯು ವ್ರತರಕ್ಷಕನಾಗಿದ್ದಾನೆ]

---

ದೇವತೆಗಳು ಯಾವ ಯಜಮಾನನ ಯಾಗಕ್ಕೆ ಹೋಗಬೇಕು? ಯಾವನ ಯಾಗಕ್ಕೆ ಹೋಗಬಾರದು ಎಂಬ ಸಂಕಟಕ್ಕೆ ಒಳಗಾಗುತ್ತಾರೆ. ಪರಿಗ್ರಹಮಂತ್ರಪಾಠದಿಂದಲೇ ದೇವತೆಗಳ ಸಂಕಟವು ಪರಿಹಾರವಾಗುತ್ತದೆ. ಹೇಗೆಂದರೆ ಹಲವರು ಯಜಮಾನರಲ್ಲಿ *ಮೊದಲು ದೇವತಾಪರಿಗ್ರಹ ಮಾಡಿದ ಯಜಮಾನನು ಮಾರನೆಯ ದಿನ ಆ ದೇವತೆಗಳನ್ನು ಕುರಿತು ಯಾಗ ಮಾಡುತ್ತಾನೆ.

ಆಹವನೀಯವು ದೇವತೆಗಳ ಸ್ಥಾನ. ಆಹವನೀಯ - ಗಾರ್ಹಪತ್ಯಗಳ ಮಧ್ಯ ಪ್ರದೇಶವು ಪಶುಗಳ ಸ್ಥಾನ. ಗಾರ್ಹಪತ್ಯವು ಮನುಷ್ಯರ ಸ್ಥಾನ. ದಕ್ಷಿಣಾಗ್ನಿಯುಪಿತೃಗಳ ಸ್ಥಾನ. ಅಗ್ನ್ಯಾದಿದೇವತೆಗಳನ್ನು ಅಲ್ಲಲ್ಲಿ ಪರಿಗ್ರಹ ಮಾಡಬೇಕು. ಇದರಿಂದ

---

*ಅನೇಕ ಯಜಮಾನರು ಏಕಕಾಲದಲ್ಲಿ ದೇವತಾಪರಿಗ್ರಹ ಮಾಡಿದರೆ ? ಎಂಬ ಶಂಕೆ ಬಂದರೆ, ಎರಡು ರೀತಿ ಸಮಾಧಾನವನ್ನು ಹೇಳಬಹುದು.

೧) ದೇವತೆಗಳಿಗೆ ವಿಗ್ರಹಾದಿಗಳಿಲ್ಲ. 'ದ್ರವ್ಯತ್ಯಾಗಕಾಲೀನಚತುರ್ಥ್ಯಂತಪದೋಚ್ಚಾರಣ ಕರ್ಮತ್ವಂ ದೇವತಾತ್ವಮ್' 'ಅಗ್ನಯೇ ಇದಂ ನ ಮಮ' ಮೊದಲಾಗಿ ಹೇಳುವಾಗ ಚತುರ್ಥ್ಯಂತ ಪದಪ್ರತಿಪಾದ್ಯತ್ವವೇ ದೇವತಾತ್ವ. 'ಮೊದಲು ದೇವತಾಪರಿಗ್ರಹ ಮಾಡಿದ' ಮುಂತಾದದ್ದು ಅರ್ಥವಾದ. ಸ್ವಾರ್ಥಕ್ಕೆ ಪ್ರಾಶಸ್ತ್ಯವಿಲ್ಲ.

೨) 'ವಿರೋಧಃ ಕರ್ಮಣೀತಿ ಚೇನ್ನ, ಅನೇತಪ್ರತಿಪತ್ತೇರ್ದರ್ಶನಾತ್' ಎಂಬ ಬಾದರಾಯಣರ ಮತದಂತೆ ದೇವತೆಗಳಿಗೆ ಯೋಗಸಾಮರ್ಥ್ಯವಿರುವುದರಿಂದ ಏಕಕಾಲದಲ್ಲಿ ಹಲವು ಶರೀರಗಳನ್ನು ಧರಿಸಬಲ್ಲರು. ಹೀಗೂ ಸಮಾಧಾನವಿದೆ. (ಬ್ರ.ಸೂ. ೧.೩.೨೭)

ಬ್ರಾಹ್ಮಣೋ ವ್ರತಭೃದ್ವ್ರತಮುಪೈಷ್ಯನ್ಬ್ರೂಯಾದಗ್ನೇ
ವ್ರತಪತೇ ವ್ರತಂ ಚರಿಷ್ಯಾಮೀತ್ಯಗ್ನಿರ್ವೈ ದೇವಾನಾಂ
ವ್ರತಪತಿಸ್ತಸ್ಮಾ ಏವ ಪ್ರತಿಪ್ರೋಚ್ಯ ವ್ರತಮಾಲಭತೇ

---

ಬ್ರಾಹ್ಮಣಃ । ವ್ರತಭೃದಿತಿ ವ್ರತ-ಭೃತ್ । ವ್ರತಮ್। ಉಪೈಷ್ಯನ್ನಿತ್ಯುಪ-ಏಷ್ಯನ್ । ಬ್ರೂಯಾತ್ ।ಅಗ್ನೇ। ವ್ರತಪತ ಇತಿ ವ್ರತ-ಪತೇ । ವ್ರತಮ್। ಚರಿಷ್ಯಾಮಿ। ಇತಿ। ಅಗ್ನಿಃ । ವೈ । ದೇವಾನಾಮ್ । ವ್ರತಪತಿರಿತಿ ವ್ರತ-ಪತಿಃ । ತಸ್ಮೈ । ಏವ। ಪ್ರತಿಪ್ರೋಚ್ಯೇತಿ ಪ್ರತಿ-ಪ್ರೋಚ್ಯ । ವ್ರತಮ್ । ಏತಿ । ಲಭತೇ ।

---

| | |
|---|---|
| ಬ್ರಾಹ್ಮಣಃ ವ್ರತಭೃತ್ | ಬ್ರಾಹ್ಮಣನು [ಯಜಮಾನನು] ವ್ರತವನ್ನು ಧರಿಸಿದವನಾಗುತ್ತಾನೆ. |
| ವ್ರತಮ್ ಉಪೈಷ್ಯನ್ ಬ್ರೂಯಾತ್ ಅಗ್ನೇ ವ್ರತಪತೇ ವ್ರತಂ ಚರಿಷ್ಯಾಮಿ ಇತಿ | ವ್ರತಸ್ವೀಕಾರ ಮಾಡುವಾಗ 'ಅಗ್ನೇ ವ್ರತಪತೇ ವ್ರತಂ ಚರಿಷ್ಯಾಮಿ'* ಎಂಬ ಮಂತ್ರವನ್ನು ಹೇಳಬೇಕು.[ಮಂತ್ರ ವಿಧಿ] |
| ಅಗ್ನಿಃ ವೈ ದೇವಾನಾಮ್ ವ್ರತಪತಿಃ | ದೇವತೆಗಳ ಮಧ್ಯದಲ್ಲಿ ಅಗ್ನಿಯೇ ವ್ರತ ರಕ್ಷಕನಾಗಿರುತ್ತಾನೆ. |
| ತಸ್ಮೈ ಏವ ಪ್ರತಿಪ್ರೋಚ್ಯ ವ್ರತಮ್ ಆಲಭತೇ | [ಈ ಮಂತ್ರವನ್ನು ಹೇಳುವುದರಿಂದ] ವ್ರತಪತಿ ಯಾದ ಅಗ್ನಿಗೇ ತಿಳಿಸಿ ಯಜಮಾನನು ವ್ರತಾರಂಭಣ ಮಾಡಿದಂತಾಗುತ್ತದೆ. |

---

ತಮ್ಮ ತಮ್ಮ ಸ್ಥಾನಗಳಲ್ಲಿ ದೇವತೆಗಳನ್ನು ನೆಲೆಗೊಳಿಸಿ ದಂತಾಗುತ್ತದೆ. ಆ ದೇವತೆಗಳಿಗೆ ಮಾರನೆಯ ದಿನ ಯಾಗ ಮಾಡಬೇಕು.

**ತಾತ್ಪರ್ಯ:** ಯಜಮಾನನು ವ್ರತಸ್ವೀಕಾರ ಮಾಡುವುದರಿಂದ ವ್ರತರಕ್ಷಕನಾದ ಅಗ್ನಿಯು ಯಾಗಯೋಗ್ಯನಾಗುತ್ತಾನೆ. ಯಜಮಾನನು ವ್ರತವನ್ನು ಧರಿಸಿದವನಾಗು ತ್ತಾನೆ. **'ಅಗ್ನೇ ವ್ರತಪತೇ'** ಎಂಬ ಮಂತ್ರವನ್ನು ವ್ರತಗ್ರಹಣ ಮಾಡುತ್ತಾ ಹೇಳಬೇಕು. ಅಗ್ನಿಯು ವ್ರತರಕ್ಷಕನಾದುದರಿಂದ ಅವನಿಗೆ ತಿಳಿಸಿ ವ್ರತವನ್ನು ಆರಂಭಿಸಿದಂತೆ ಆಗುತ್ತದೆ.

---

* ಈ ಮಂತ್ರವನ್ನು ಹೇಳುವುದೇ ವ್ರತಗ್ರಹಣ.

ಬರ್‌ಹಿಷಾ ಪೂರ್ಣಮಾಸೇ ವ್ರತಮುಪೈತಿ ವತ್ಸೈರಮಾ

ವಾಸ್ಯಾಯಾಮೇತದ್ಧ್ಯೇತಯೋರಾಯತನಮುಪಸ್ತೀರ್ಯಃ

ಪೂರ್ವಶ್ಚಾಗ್ನಿರಪರಶ್ಚೇತ್ಯಾಹು -

---

ಬರ್‌ಹಿಷಾ । ಪೂರ್ಣಮಾಸ ಇತಿ ಪೂರ್ಣ-ಮಾಸೇ । ವ್ರತಮ್। ಉಪೇತಿ । ಏತಿ। ವತ್ಸೈಃ । ಅಮಾವಾಸ್ಯಾಯಾಮಿತ್ಯಮಾ-ವಾಸ್ಯಾಯಾಮ್ । ಏತತ್ । ಹಿ । ಏತಯೋಃ। ಆಯತನಮಿತ್ಯಾ-ಯತನಮ್ । ಉಪಸ್ತೀರ್ಯ ಇತ್ಯುಪ-ಸ್ತೀರ್ಯಃ। ಪೂರ್ವಃ। ಚ। ಅಗ್ನಿಃ। ಅಪರಃ । ಚ । ಇತಿ । ಆಹುಃ ।

---

### ವ್ರತಗ್ರಹಣದ ಕಾಲವಿಧಾನ

| | |
|---|---|
| ಬರ್‌ಹಿಷಾ ಪೂರ್ಣಮಾಸೇ ವ್ರತಮ್ ಉಪೈತಿ | ಪೂರ್ಣಮಾಸದಲ್ಲಿ ಬರ್ಹಿರಾಹರಣಾನಂತರ ಕಾಲದಲ್ಲಿ ವ್ರತಗ್ರಹಣ ಮಾಡಬೇಕು. |
| ವತ್ಸೈಃ ಅಮಾವಾಸ್ಯಾಯಾಮ್ | ಅಮಾವಾಸ್ಯೆಯಲ್ಲಿ ವತ್ಸಾಪಾಕರಣಾನಂತರ ವ್ರತಗ್ರಹಣವನ್ನು ಮಾಡಬೇಕು. |
| ಏತತ್ ಏತಯೋಃ ಆಯತನಮ್ ಹಿ | ಈ ಕಾಲದ್ವಯವು ಈ ವ್ರತಸ್ವೀಕಾರಗಳಿಗೆ ಉಚಿತವಾದ ಸ್ಥಾನವಾಗಿದೆಯಷ್ಟೆ. |

### ಉಪಸ್ತರಣವಿಧಿ

| | |
|---|---|
| ಪೂರ್ವಃ ಚ ಅಗ್ನಿಃ ಅಪರಃ ಚ [ಅಗ್ನಿಃ] ಉಪಸ್ತೀರ್ಯಃ ಇತಿ ಆಹುಃ | ಗಾರ್ಹಪತ್ಯವೂ, ಆಹವನೀಯವೂ ಉಪಸ್ತರಣ ಮಾಡಲ್ಪಡಬೇಕು. [ವಿಧಿ] ಹೀಗೆ ತಿಳಿದವರು ಹೇಳುತ್ತಾರೆ. |

---

ಪೂರ್ಣಮಾಸದಲ್ಲಿ ಬರ್ಹಿರಾಹರಣಕಾಲವೂ, ಅಮಾವಾಸ್ಯೆಯಲ್ಲಿ ವತ್ಸಾಪಾಕರಣ ಕಾಲವೂ ವ್ರತಗ್ರಹಣಕಾಲಗಳಾಗಿವೆ. ಪೂರ್ಣಮಾಸ ಮತ್ತು ಅಮಾವಾಸ್ಯೆಗಳ ವ್ರತ ಸ್ವೀಕಾರಕ್ಕೆ ಈ ಕಾಲದ್ವಯವು ತಕ್ಕದ್ದು ತಾನೇ?

ಮನುಷ್ಯಾ [ಮನುಷ್ಯಾಃ [೨] ಇನ್ನ್ವೈ] ಇನ್ನ್ವೈ

ಉಪಸ್ತೀರ್ಣಮಿಚ್ಛಂತಿ ಕಿಮು ದೇವಾ ಯೇಷಾಂ

ನವಾವಸಾನಮುಪಾಸ್ಮಿನ್ಛ್ವೋ ಯಕ್ಷ್ಯಮಾಣೇ ದೇವತಾ

ವಸಂತಿ ಯ ಏವಂ ವಿದ್ವಾನಗ್ನಿಮುಪಸ್ತೃಣಾತಿ

---

ಮನುಷ್ಯಾಃ [೨] । ಇತ್ । ನು । ವೈ । ಉಪಸ್ತೀರ್ಣಮಿತ್ಯುಪ-ಸ್ತೀರ್ಣಮ್। ಇಚ್ಛಂತಿ। ಕಿಮ್। ಉ । ದೇವಾಃ। ಯೇಷಾಮ್। ನವಾವಸಾನಮಿತಿ ನವ-ಅವಸಾನಮ್। ಉಪೇತಿ। ಅಸ್ಮಿನ್। ಶ್ವಃ। ಯಕ್ಷ್ಯಮಾಣೇ । ದೇವತಾಃ। ವಸಂತಿ । ಯಃ । ಏವಮ್ । ವಿದ್ವಾನ್। ಅಗ್ನಿಮ್। ಉಪಸ್ತೃಣಾತೀತ್ಯುಪ-ಸ್ತೃಣಾತಿ ।

---

| | |
|---|---|
| ಮನುಷ್ಯಾಃ ಇತ್ ನು ವೈ ಉಪಸ್ತೀರ್ಣಮ್ ಇಚ್ಛಂತಿ | ಮನುಷ್ಯರೂ [ಹುಲ್ಲು ಮೊದಲಾದವುಗಳಿಂದ ಲಾದರೂ] ಆಚ್ಛಾದಿತವಾದ ಮನೆಗಳನ್ನು ಬಯಸುತ್ತಾರೆ. |
| ಕಿಮ್ ಉ ದೇವಾಃ ಯೇಷಾಮ್ ನವಾವಸಾನಮ್ | [ಹೀಗಿರುವಾಗ] ಯಾವ ದೇವತೆಗಳಿಗೆ ಇಚ್ಛಾ ಮಾತ್ರದಿಂದಲೇ ಹೊಸ ಹೊಸ ಮನೆಗಳಾಗು ತ್ತವೆಯೋ ಅಂತಹವರ ಬಗ್ಗೆ ಹೇಳುವುದೇನು? |
| ಯಃ ಏವಮ್ ವಿದ್ವಾನ್ ಅಗ್ನಿಮ್ ಉಪಸ್ತೃಣಾತಿ ಅಸ್ಮಿನ್ ಶ್ವಃ ಯಕ್ಷ್ಯಮಾಣೇ | ಯಾವ ವಿದ್ವಾಂಸನು ಹೀಗೆ ಅಗ್ನ್ಯುಪಸ್ತರಣ* ಮಾಡುತ್ತಾನೆಯೋ ಮಾರನೆಯ ದಿನ ಯಾಗ ಮಾಡುವ ಈ ಯಜಮಾನನಲ್ಲಿ |
| ದೇವತಾಃ ಉಪವಸಂತಿ | ದೇವತೆಗಳು ಅವನ ಸಮೀಪದಲ್ಲಿ ವಾಸಿಸು ತ್ತಾರೆ. |

---

* ಅಧ್ವರ್ಯುವು ಅಗ್ನಿಗಳ ಸುತ್ತಲೂ ದರ್ಭೆಗಳ ಪರಿಸ್ತರಣಗಳನ್ನು ಹಾಕುವಾಗ ಯಜಮಾನನು ಹೇಳುವ 'ಉಭಾವಗ್ನೀ ಉಪಸ್ತೃಣತೇ' ಮೊದಲಾದ ಮಂತ್ರವೇ ಉಪಸ್ತರಣ. ಅಥವಾ ಅಧ್ವರ್ಯುವು ಹಾಕುವ ಪರಿಸ್ತರಣವನ್ನೇ ಇಲ್ಲಿ ವಿಧಿಯು ಹೇಳುತ್ತದೆ.

ಯಜಮಾನೇನ ಗ್ರಾಮ್ಯಾಶ್ಚ ಪಶವೋऽವರುಧ್ಯಾ ಆರಣ್ಯಾ

ಶ್ಚೇತ್ಯಾಹುರ್ಯದ್ಗ್ರಾಮ್ಯಾನುಪವಸತಿ ತೇನ ಗ್ರಾಮ್ಯಾನವ

ರುಂಧೇ ಯದಾರಣ್ಯಸ್ಯಾಶ್ನಾತಿ ತೇನಾರಣ್ಯಾನ್,

---

ಯಜಮಾನೇನ । ಗ್ರಾಮ್ಯಾಃ । ಚ। ಪಶವಃ । ಅವರುಧ್ಯಾ ಇತ್ಯವ-ರುಧ್ಯಾಃ। ಆರಣ್ಯಾಃ। ಚ । ಇತಿ । ಆಹುಃ । ಯತ್ । ಗ್ರಾಮ್ಯಾನ್ । ಉಪವಸತೀತ್ಯುಪ-ವಸತಿ । ತೇನ। ಗ್ರಾಮ್ಯಾನ್। ಅವೇತಿ। ರುಂಧೇ । ಯತ್ । ಆರಣ್ಯಸ್ಯ । ಅಶ್ನಾತಿ । ತೇನ। ಆರಣ್ಯಾನ್।

---

**ಆರಣ್ಯಾಶನವಿಧಿ / ಅರ್ಥವಾದ**

| | |
|---|---|
| ಯಜಮಾನೇನ ಗ್ರಾಮ್ಯಾಃ ಪಶವಃ ಆರಣ್ಯಾಃ ಚ ಅವರುಧ್ಯಾಃ ಇತಿ ಆಹುಃ | ವಿದ್ವಾಂಸರು 'ಯಜಮಾನನಿಂದ ಗ್ರಾಮ್ಯಪಶುಗಳೂ ಮತ್ತು ಆರಣ್ಯಪಶುಗಳೂ ಹೊಂದಲ್ಪಡಬೇಕು' ಎಂದು ಹೇಳುತ್ತಾರೆ. |
| ಯತ್ ಗ್ರಾಮ್ಯಾನ್ ಉಪವಸತಿ | ಗ್ರಾಮದಲ್ಲಿ ಬೆಳೆಯುವ ವ್ರೀಹಿ ಮುಂತಾದ ಧಾನ್ಯಗಳ ಭೋಜನ ಮಾಡದಿದ್ದರೆ |
| ತೇನ ಗ್ರಾಮ್ಯಾನ್ ಅವರುಂಧೇ | ಆದರಿಂದ ಗ್ರಾಮ್ಯಪಶುಗಳನ್ನು ಹೊಂದುತ್ತಾನೆ. |
| ಯತ್ ಆರಣ್ಯಸ್ಯ ಅಶ್ನಾತಿ | ಆರಣ್ಯದಲ್ಲಿ ಬೆಳೆಯುವ ನೀವಾರಾದಿಧಾನ್ಯಗಳ ಅನ್ನವನ್ನು ಭೋಜನ ಮಾಡಿದರೆ |
| ತೇನ ಆರಣ್ಯಾನ್ | ಆದರಿಂದ ಆರಣ್ಯಪಶುಗಳನ್ನು [ಯಜಮಾನನು ಪಡೆಯುತ್ತಾನೆ.] |

---

**ಉಪಸ್ತರಣವಿಧಿ: ತಾತ್ಪರ್ಯ:** ಬಲ್ಲವರು ಗಾರ್ಹಪತ್ಯವನ್ನೂ, ಆಹವನೀಯವನ್ನೂ ಆಸ್ತರಣ ಮಾಡಬೇಕೆಂದು ಹೇಳುತ್ತಾರೆ. ಮನುಷ್ಯರೇ ಆಚ್ಛಾದಿತ ಮನೆಗಳನ್ನು ಬಯಸುವಾಗ, ಮಹಾಪ್ರಭಾವಶಾಲಿಗಳಾದ ದೇವತೆಗಳು ಉತ್ತಮನಿವಾಸಗಳನ್ನು ಇಚ್ಛಿಸುವರೆಂದು ಹೇಳುವುದೇನಿದೆ ? ಆದುದರಿಂದ ಗಾರ್ಹಪತ್ಯ, ಆಹವನೀಯಗಳನ್ನು ಉಪಸ್ತರಣ ಮಾಡಬೇಕು.

ಯದನಾಶ್ವಾನುಪವಸೇತ್ಪಿತೃದೇವತ್ಯಃ ಸ್ಯಾದಾರಣ್ಯಸ್ಯಾಶ್ನಾ

ತೀಂದ್ರಿಯಂ [...ತೀಂದ್ರಿಯಮ್[೩]ವಾ] ವಾ

ಆರಣ್ಯಮಿಂದ್ರಿಯಮೇವಾತ್ಮನ್ಧತ್ತೇ

---

ಯತ್। ಅನಾಶ್ವಾನ್। ಉಪವಸೇದಿತ್ಯುಪ-ವಸೇತ್ । ಪಿತೃದೇವತ್ಯ ಇತಿ ಪಿತೃ-ದೇವತ್ಯಃ।

ಸ್ಯಾತ್। ಆರಣ್ಯಸ್ಯ। ಅಶ್ನಾತಿ । ಇಂದ್ರಿಯಮ್ [೩]। ವೈ । ಆರಣ್ಯಮ್ । ಇಂದ್ರಿಯಮ್।

ಏವ । ಆತ್ಮನ್ನ್। ಧತ್ತೇ।

---

| | |
|---|---|
| ಯತ್ ಅನಾಶ್ವಾನ್ ಉಪವಸೇತ್ | ಏನೂ ತಿನ್ನದೆ ಉಪವಾಸ ಮಾಡಿದರೆ ಯಜ್ಞವು |
| ಪಿತೃದೇವತ್ಯಃ ಸ್ಯಾತ್ | ಪಿತೃದೇವತೆಗಳ ಭಾಗವಾಗಿ ಹೋಗುತ್ತದೆ. |
| ಆರಣ್ಯಸ್ಯಾಶ್ನಾತಿ | [ಆದುದರಿಂದ] ಆರಣ್ಯದ ಧಾನ್ಯಗಳ ಅನ್ನ ವನ್ನು ಊಟ ಮಾಡಬೇಕು. [ವಿಧಿ] |
| ಇಂದ್ರಿಯಮ್ ವೈ ಆರಣ್ಯಮ್ | ಆರಣ್ಯಧಾನ್ಯವು [ಇಂದ್ರಿಯಬಲಸಾಧನ ವಾದುದರಿಂದ] ಇಂದ್ರಿಯವೇ ಆಗಿದೆ. |
| ಇಂದ್ರಿಯಮ್ ಏವ ಆತ್ಮನ್ನ್ ಧತ್ತೇ | [ಸಾಯಂಕಾಲ ಆರಣ್ಯಧಾನ್ಯಾನ್ನಭೋಜನದಿಂದ ಯಜಮಾನನು] ಇಂದ್ರಿಯಸಾಮರ್ಥ್ಯವನ್ನು ತನ್ನಲ್ಲಿ ಧರಿಸುತ್ತಾನೆ. [ಪೋಷಿಸುತ್ತಾನೆ.] |

---

**ಆರಣ್ಯಾಶನವಿಧಿ: ತಾತ್ಪರ್ಯ:** ಪೂರ್ಣಮಾಸ, ಅಮಾವಾಸ್ಯೆಗಳಲ್ಲಿ ಸಾಯಂಕಾಲ ಭೋಜನಕ್ಕೆ ಸಂಬಂಧಿಸಿದಂತೆ ಮೂರು ಪಕ್ಷಗಳಿವೆ. 1. ಆರಣ್ಯಾಶನ. 2. ಅಬಶನ [ನೀರನ್ನು ಕುಡಿಯುವುದು]. 3. ಅನಶನ[ಉಪವಾಸ]. ಇದರಲ್ಲಿ ಮೊದಲನೆಯದಾದ ಆರಣ್ಯಾಶನಪಕ್ಷದ ವಿಧಿ ಮತ್ತು ಅದರ ಅರ್ಥವಾದವಿದು.

ಯಜಮಾನನು ಗವಾದಿಗ್ರಾಮ್ಯಪಶುಗಳನ್ನೂ, ಹಸ್ತ್ಯಾದಿಆರಣ್ಯಪಶುಗಳನ್ನೂ ಪಡೆಯಬೇಕೆಂದು ಬಲ್ಲವರು ಹೇಳುತ್ತಾರೆ. ಗ್ರಾಮ್ಯವಾದ ವ್ರೀಹಿಯೇ ಮೊದಲಾದ ಧಾನ್ಯಗಳನ್ನು ಭೋಜನದಲ್ಲಿ ಉಪಯೋಗಿಸದೇ ಇರುವುದರಿಂದ ಗ್ರಾಮ್ಯಪಶುಪ್ರಾಪ್ತಿ ಯಾಗುತ್ತದೆ. ಅರಣ್ಯದಲ್ಲಿ ಬೆಳೆಯುವ ನೀವಾರಾದಿಧಾನ್ಯಗಳ ಅನ್ನವನ್ನು ತಿನ್ನುವುದ ರಿಂದ ಆರಣ್ಯಪಶುಪ್ರಾಪ್ತಿಯಾಗುತ್ತದೆ. ಏನೂ ತಿನ್ನದೇ ಉಪವಾಸವನ್ನು ಮಾಡಿದರೆ

ಯದನಾಶ್ವಾನುಪವಸೇತ್ಕ್ಷೋಧುಕಃ ಸ್ಯಾದ್ಯದಶ್ನೀ

ಯಾದ್ರುದ್ರೋऽಸ್ಯ ಪಶೂನಭಿಮನ್ಯೇತಾಪೋऽಶ್ನಾತಿ

ತನ್ನೇವಾಶಿತಂ ನೇವಾನಶಿತಂ ನ ಕ್ಷೋಧುಕೋ ಭವತಿ

---

ಯತ್। ಅನಾಶ್ವಾನ್। ಉಪವಸೇದಿತ್ಯುಪ-ವಸೇತ್। ಕ್ಷೋಧುಕಃ। ಸ್ಯಾತ್ । ಯತ್। ಅಶ್ನೀಯಾತ್। ರುದ್ರಃ । ಅಸ್ಯ । ಪಶೂನ್। ಅಭೀತಿ। ಮನ್ಯೇತ । ಅಪಃ । ಅಶ್ನಾತಿ। ತತ್ । ನ। ಇವ । ಅಶಿತಮ್। ನ । ಇವ । ಅನಶಿತಮ್। ನ । ಕ್ಷೋಧುಕಃ । ಭವತಿ ।

---

**ಅಬಶನ [ಜಲಪಾನ] ವಿಧಿ/ಅರ್ಥವಾದ**

| | |
|---|---|
| ಯತ್ ಅನಾಶ್ವಾನ್ ಉಪವಸೇತ್ ಕ್ಷೋಧುಕಃ ಸ್ಯಾತ್ | ಆಹಾರವನ್ನು ತೆಗೆದುಕೊಳ್ಳದೆ ಅಗ್ನಿಸಮೀಪದಲ್ಲಿ ವಾಸಿಸಿದರೆ ಯಾವಾಗಲೂ ಹಸಿವಿನಿಂದ ಬಳಲುವನಾಗುತ್ತಾನೆ [ದರಿದ್ರ] |
| ಯತ್ ಅಶ್ನೀಯಾತ್ ರುದ್ರಃ ಅಸ್ಯ | ಅನ್ನವನ್ನು ಊಟ ಮಾಡಿದರೆ ರುದ್ರದೇವನು ಈ ಯಜಮಾನನ |
| ಪಶೂನ್ ಅಭಿಮನ್ಯೇತ ಅಪಃ ಅಶ್ನಾತಿ | ಪಶುಗಳನ್ನು ನಾಶಪಡಿಸುತ್ತಾನೆ. [ಆದು ದರಿಂದ] ನೀರನ್ನು ಮಾತ್ರ ಆಹಾರವನ್ನಾಗಿ ತೆಗೆದುಕೊಳ್ಳಬೇಕು. [ವಿಧಿ] |
| ತತ್ ನ ಇವ ಅಶಿತಮ್ | ಅದು ಊಟ ಮಾಡಿದಂತೆಯೂ ಆಗುವುದಿಲ್ಲ. |
| ನ ಇವ ಅನಶಿತಮ್ | ಊಟ ಮಾಡದಿದ್ದಂತೆಯೂ ಆಗುವುದಿಲ್ಲ. |
| ನ ಕ್ಷೋಧುಕಃ ಭವತಿ | [ಇದರಿಂದ] ಯಜಮಾನನು ಹಸಿವಿನಿಂದ ಬಳಲುವುದೂ ಇಲ್ಲ. |

---

ಈ ವ್ರತವಿಶೇಷವು ಪಿತೃದೇವತೆಗಳ ಭಾಗವಾಗುತ್ತದೆ. ಆದುದರಿಂದ ಆರಣ್ಯಕವಾದ ನೀವಾರಾದಿಧಾನ್ಯಗಳ ಅನ್ನವನ್ನು ಊಟ ಮಾಡಬೇಕು. [ಆರಣ್ಯಾಶನವಿಧಿ]

ಅರಣ್ಯಧಾನ್ಯಗಳು ಇಂದ್ರಿಯಸಾಧನವಾದುದರಿಂದ ಆ ಧಾನ್ಯಭೋಜನದಿಂದ ಯಜಮಾನನು ಇಂದ್ರಿಯಸಾಮರ್ಥ್ಯವನ್ನು ಹೊಂದುತ್ತಾನೆ.

ನಾಸ್ಯ ರುದ್ರಃ ಪಶೂನಭಿ ಮನ್ಯತೇ ವಜ್ರೋ ವೈ ಯಜ್ಞಃ

ಕ್ಷುತ್ಖಲು ವೈ ಮನುಷ್ಯಸ್ಯ ಭ್ರಾತೃವ್ಯೋ

ಯದನಾಶ್ವಾನುಪವಸತಿ

---

ನ । ಅಸ್ಯ । ರುದ್ರಃ । ಪಶೂನ್ । ಅಭೀತಿ । ಮನ್ಯತೇ । ವಜ್ರಃ । ವೈ । ಯಜ್ಞಃ

ಕ್ಷುತ್ । ಖಲು । ವೈ । ಮನುಷ್ಯಸ್ಯ । ಭ್ರಾತೃವ್ಯಃ । ಯತ್ । ಅನಾಶ್ವಾನ್ ।

ಉಪವಸತೀತ್ಯುಪ - ವಸತಿ ।

---

| | |
|---|---|
| ನ ಅಸ್ಯ ರುದ್ರಃ ಪಶೂನ್ ಅಭಿಮನ್ಯತೇ | ರುದ್ರದೇವನು ಯಜಮಾನನ ಪಶುಗಳನ್ನು ಹಿಂಸಿಸುವುದೂ ಇಲ್ಲ. |

**ಅನಶನವಿಧಿ / ಅರ್ಥವಾದ**

| | |
|---|---|
| ಯಜ್ಞಃ ವಜ್ರಃ ವೈ | [ನರಕಾದಿನಿವಾರಕವಾದ] ಯಜ್ಞವು ವಜ್ರಾಯುಧಸದೃಶವೇ ಆಗಿದೆ. |
| ಕ್ಷುತ್ ಖಲು ವೈ ಮನುಷ್ಯಸ್ಯ ಭ್ರಾತೃವ್ಯಃ | ಹಸಿವು ಮಾನವನ ಮುಖ್ಯಶತ್ರುವಾಗಿದೆಯಷ್ಟೆ. |
| ಯತ್ ಅನಾಶ್ವಾನ್ ಉಪವಸತಿ | ಆಹಾರವನ್ನು ತೆಗೆದುಕೊಳ್ಳದೆ ಉಪವಾಸ ಮಾಡಿದರೆ |

---

ಆರಣ್ಯಾಶನವೆಂದರೆ ಆರಣ್ಯಪಶುಗಳ ಮಾಂಸಾದಿಭಕ್ಷಣ, ಗ್ರಾಮ್ಯಾನಶನವೆಂದರೆ ಗ್ರಾಮ್ಯಪಶುಗಳ ಕ್ಷೀರ, ಮಾಂಸಾದಿಗಳ ಅನಶನ. [ಭ. ಭಾ.]

**ಜಲಾಶನ ವಿಧಿ : ತಾತ್ಪರ್ಯ :** ಅಶನವಿಷಯದಲ್ಲಿ ಎರಡನೆಯ ಆಬಶನ [ಜಲಾಶನ] ಪಕ್ಷವನ್ನು ಈ ಭಾಗದಲ್ಲಿ ಹೇಳಲಾಗಿದೆ.

ಯಜಮಾನನು ಆಹಾರವನ್ನು ತೆಗೆದುಕೊಳ್ಳದೆ ಅಗ್ನಿಯ ಸಮೀಪದಲ್ಲಿ ವಾಸಿಸಿದರೆ [ಉಪವಾಸ ಮಾಡಿದರೆ] ಹಸಿವಿನಿಂದ ಬಳಲುತ್ತಾನೆ. ಆಹಾರವನ್ನು ಸ್ವೀಕರಿಸಿದರೆ ರುದ್ರ ದೇವನು ಈ ಯಜಮಾನನ ಪಶುಗಳನ್ನು ಕೊಲ್ಲುತ್ತಾನೆ. ಈ ದೋಷದ್ವಯನಿವೃತ್ತಿಗಾಗಿ

ವಜ್ರೇಣೈವ ಸಾಕ್ಷಾತ್ಕ್ಷುಧಂ ಭ್ರಾತೃವ್ಯಗ್ಂ ಹಂತಿ ||೭-24||

[ಪರಿ ಮನುಷ್ಯಾ ಇಂದ್ರಿಯಗ್ಂ ಸಾಕ್ಷಾತ್ರೀಣಿ ಚ ||]

---

ವಜ್ರೇಣ | ಏವ | ಸಾಕ್ಷಾದಿತಿ ಸ-ಅಕ್ಷಾತ್ | ಕ್ಷುಧಮ್| ಭ್ರಾತೃವ್ಯಮ್| ಹಂತಿ ||೭||

---

| | |
|---|---|
| ವಜ್ರೇಣ ಏವ ಸಾಕ್ಷಾತ್ ಕ್ಷುಧಮ್ ಭ್ರಾತೃವ್ಯಮ್ ಹಂತಿ | [ಯಜ್ಞವೆಂಬ] ವಜ್ರಾಯುಧದಿಂದ ಮಾನವನ ಸಾಕ್ಷಾತ್ ಶತ್ರುವಾಗಿರುವ ಹಸಿವೆಂಬ ಶತ್ರುವನ್ನು ಯಜಮಾನನು ಕೊಲ್ಲುತ್ತಾನೆ. |

---

ಯಜಮಾನನು ನೀರನ್ನು ಕುಡಿಯಬೇಕು.[ಜಲಾಶನವಿಧಿ] ಈ ಜಲಪಾನವು ಅನ್ನವನ್ನು ತಿಂದಂತೆಯೂ ಆಗುವುದಿಲ್ಲ; ತಿನ್ನದೆ ಇದ್ದಂತೆಯೂ ಆಗುವುದಿಲ್ಲ. ನೀರನ್ನು ಕುಡಿದರೆ ಊಟ ಮಾಡಿದನೆಂದು ಯಾರೂ ಹೇಳುವುದಿಲ್ಲ. ಆದರೆ ನೀರು ಕುಡಿದರೆ ಅದು ಸ್ವಲ್ಪ ಮಟ್ಟಿಗೆ ಹಸಿವನ್ನು ತಗ್ಗಿಸುತ್ತದೆ. ಇದರಿಂದ ಯಜಮಾನನು ಹಸಿವಿನಿಂದ ಬಳಲುವುದಿಲ್ಲ. ರುದ್ರನು ಯಜಮಾನನ ಪಶುಗಳನ್ನು ನಾಶಪಡಿಸುವುದಿಲ್ಲ. ಆದುದರಿಂದ ಜಲಪಾನವು ಪ್ರಶಸ್ತವಾದುದು.

**ಅನಶನವಿಧಿ : ತಾತ್ಪರ್ಯ:—** ಮೂರನೆಯ ಪಕ್ಷ ಅನಶನ.

ಮನುಷ್ಯನಿಗೆ ಹಸಿವೇ ಮುಖ್ಯ ಶತ್ರು. ಯಾಗವು ನರಕಾದಿಗಳನ್ನು ಹೋಗಲಾಡಿಸುವುದರಿಂದ ವಜ್ರಾಯುಧದಂತೆ. ಆಹಾರವನ್ನು ತೆಗೆದುಕೊಳ್ಳದೇ ಉಪವಾಸ ಮಾಡಬೇಕು. [ಅನಶನವಿಧಿ]. ಇದರಿಂದ ಯಜಮಾನನು ಮುಂದಿನ ಜನ್ಮದಲ್ಲಿ ಅನ್ನಸಮೃದ್ಧಿಯನ್ನು ಪಡೆಯುವುದರಿಂದ ಅವನು ಹಸಿವನ್ನೇ ಕೊಂದಂತಾಗುತ್ತದೆ.[1] ಆದುದರಿಂದ ಅನಶನವಿಧಿಯು ಪ್ರಶಸ್ತವಾದುದು.[2]

---

1. ಮುಂದಿನ ಜನ್ಮದಲ್ಲಿ ಯಜ್ಞಫಲವಾಗಿ ಅನ್ನಸಮೃದ್ಧಿಯನ್ನು ಅವನು ಪಡೆಯುವುದರಿಂದ ಹಸಿವೆಂಬ ಶತ್ರುವನ್ನು ಎದುರಿಸುವ ಸಂದರ್ಭ ಬರುವುದಿಲ್ಲ.
2. ಒಂದನ್ನು ವಿಧಿಸುವಾಗ ಇನ್ನೊಂದರ ನಿಂದೆಯಿರುವುದು ವಿಹಿತವಾದುದನ್ನು ಹೊಗಳುವುದಕ್ಕೆ ಹೊರತು ಇನ್ನೊಂದನ್ನು ನಿಂದಿಸಲು ಅಲ್ಲ.

[ನ ಹಿ ನಿಂದಾ ನಿಂದಿತುಂ ಪ್ರವೃತ್ತಾ, ಅಪಿ ತು ವಿಧೇಯಂ ಸ್ತೋತುಮ್]

## ಅನುವಾಕದ ವಿಶೇಷ ವಿಷಯಗಳು

### ಅ) ಮೀಮಾಂಸಾ

1. 'ವತ್ಸೈರಮಾವಾಸ್ಯಾಯಾಮ್' ಎಂಬುದರ ತಾತ್ಪರ್ಯ ಏನು ? [ಜೈ. ಸೂ. 6.4]

"ಬರ್ಹಿಷಾ ಪೂರ್ಣಮಾಸೇ ವ್ರತಮುಪೈತಿ ವತ್ಸೈರಮಾವಾಸ್ಯಾಯಾಮ್' ಎಂದು ದರ್ಶ-ಪೂರ್ಣಮಾಸಪ್ರಕರಣದಲ್ಲಿದೆ. ಇದರಲ್ಲಿ 'ವತ್ಸೈರಮಾವಾಸ್ಯಾಯಾಮ್' ಎಂಬುದು ವ್ರತದಲ್ಲಿ ವತ್ಸಗಳ ವಿಧಿಯೇ? ಅಥವಾ ಕಾಲೋಪಲಕ್ಷಣವೇ? ಎಂಬುದು ಇಲ್ಲಿನ ಸಂಶಯ.

'ವತ್ಸೈಃ' ಎಂದು ತೃತೀಯಾವಿಭಕ್ತಿಯಿರುವುದರಿಂದ ವತ್ಸವಿಶಿಷ್ಟವ್ರತವಿಧಾನ. ಇದು ಒಂದನೆಯ ಪೂರ್ವಪಕ್ಷ.

ವ್ರತವು ರಾಗಪ್ರಾಪ್ತವಾದುದರಿಂದ ಅದಕ್ಕೆ ವಿಧಿಯಿಲ್ಲ. ಆ ವ್ರತದಲ್ಲಿ ವತ್ಸಗಳ ವಿಧಿ ಇದು ಎಂಬುದು ಎರಡನೆಯ ಪೂರ್ವಪಕ್ಷ.

ಇಲ್ಲಿಯ ಸಿದ್ಧಾಂತವು ಹೀಗಿದೆ; ಕೈಗಳು ಕೆಲಸಗಳಿಗೆ ಸಾಧನವಾಗುವಂತೆ ವತ್ಸಗಳು ವ್ರತಕ್ಕೆ ಸಾಧನವಾಗಲಾರವು. ಆದುದರಿಂದ ವ್ರತಗ್ರಹಣಕ್ಕೆ ವತ್ಸಾಪಾಕರಣವು ಕಾಲೋಪಲಕ್ಷಕವಾಗಿದೆ. ಹೀಗೆಯೇ ಪೂರ್ಣಮಾಸದಲ್ಲಿ ಬರ್ಹಿರಾಹರಣವೂ ಕಾಲೋಪ ಲಕ್ಷಕ. ಅಮಾವಾಸ್ಯೆಯಲ್ಲಿ ಹಸುಗಳ ಕರುಗಳನ್ನು ಹಸುಗಳಿಂದ ಬೇರ್ಪಡಿಸುವ ಕಾಲವು ವ್ರತಗ್ರಹಣದ ಕಾಲ. ಪೂರ್ಣಮಾಸದಲ್ಲಿ ಬರ್ಹಿರಾಹರಣಕಾಲವು ವ್ರತಗ್ರಹಣದ ಕಾಲ.

---

## ॥ ಅಷ್ಟಮೋಽನುವಾಕಃ ॥

ಯೋ ವೈ ಶ್ರದ್ಧಾಮನಾರಭ್ಯ ಯಜ್ಞೇನ ಯಜತೇ

ನಾಸ್ಯೇಷ್ಟಾಯ ಶ್ರದ್ಧತೇಽಪಃ ಪ್ರಣಯತಿ

---

**ಯಃ** । ವೈ । ಶ್ರದ್ಧಾಮಿತಿ ಶ್ರತ್-ಧಾಮ್ । ಅನಾರಭ್ಯೇತ್ಯನಾ-ರಭ್ಯ । ಯಜ್ಞೇನ । ಯಜತೇ । ನ । ಅಸ್ಯ । ಇಷ್ಟಾಯ । ಶ್ರತ್ । ದಧತೇ । ಅಪಃ । ಪ್ರೇತಿ । ನಯತಿ ।

---

ಏಳನೆಯ ಅನುವಾಕದಲ್ಲಿ ದೇವತಾಪರಿಗ್ರಹಾದಿಗಳು ಹೇಳಲ್ಪಟ್ಟಿವೆ. ಈ ಎಂಟನೆಯ ಅನುವಾಕದಲ್ಲಿ ಮುಖ್ಯವಾಗಿ ಯಜ್ಞಾಯುಧಸಂಭಾರವು ಹೇಳಲ್ಪಡುತ್ತದೆ.

---

### ಪ್ರಣೀತಾಜಲಗಳ ಪ್ರಣಯನ / ಅರ್ಥವಾದ

| | |
|---|---|
| ಯಃ ವೈ ಶ್ರದ್ಧಾಮ್ ಅನಾರಭ್ಯ ಯಜ್ಞೇನ ಯಜತೇ | ಯಾವ ಯಜಮಾನನು [ಮನಸ್ಸಿನಲ್ಲಿ ದೇವತಾವಿಷಯಕವಾದ] ಶ್ರದ್ಧೆಯನ್ನು* ಇಡದೆ ಯಜ್ಞವನ್ನು ಮಾಡುತ್ತಾನೆಯೋ |
| ನ ಅಸ್ಯ ಇಷ್ಟಾಯ ಶ್ರದ್ದಧತೇ | [ದೇವತೆಗಳೂ ಋತ್ವಿಜರೂ] ಈ ಯಜಮಾನನ ಯಾಗದ ವಿಷಯದಲ್ಲಿ ನಂಬಿಕೆ ಇಡುವುದಿಲ್ಲ. |
| ಅಪಃ ಪ್ರಣಯತಿ | ಅಪ್ಪ್ರಣಯನವನ್ನು ಮಾಡಬೇಕು.[ವಿಧಿ] |

---

**ಅಪ್ಪ್ರಣಯನ : ತಾತ್ಪರ್ಯ :** ಯಾವ ಯಜಮಾನನು ದೇವತೆಗಳು, ಫಲಸಿದ್ಧಿ, ಯಾಗಾನುಷ್ಠಾನ ಮೊದಲಾದವುಗಳಲ್ಲಿ ಶ್ರದ್ಧೆಯಿಡುವುದಿಲ್ಲವೋ, ಅವನು ಮಾಡುವ ಯಜ್ಞದ ವಿಷಯದಲ್ಲಿ ದೇವತೆಗಳೂ, ಋತ್ವಿಜರೂ ನಂಬಿಕೆಯಿಡುವುದಿಲ್ಲ.

---

ಫಲಾವಶ್ಯಂಭಾವನಿಶ್ಚಯಃ ಶ್ರದ್ಧಾ = ಈ ಕರ್ಮವು ಸಫಲವಾಗುವುದೆಂಬ ಬಲವಾದ ನಂಬಿಕೆ.

ಶ್ರದ್ಧಾ ವಾ ಆಪಃ ಶ್ರದ್ಧಾಮೇವಾರಭ್ಯ ಯಜ್ಞೇನ ಯಜತ ಉಭಯೇಽಸ್ಯ ದೇವಮನುಷ್ಯಾ ಇಷ್ಟಾಯ ಶ್ರದ್ದಧತೇ

---

ಶ್ರದ್ಧೇತಿ ಶ್ರತ್-ಧಾ । ವೈ । ಆಪಃ । ಶ್ರದ್ಧಾಮಿತಿ ಶ್ರತ್ - ಧಾಮ್ । ಏವ । ಆರಭ್ಯೇತ್ಯಾ-ರಭ್ಯ । ಯಜ್ಞೇನ । ಯಜತೇ । ಉಭಯೇ । ಅಸ್ಯ । ದೇವಮನುಷ್ಯಾ ಇತಿ ದೇವ-ಮನುಷ್ಯಾಃ । ಇಷ್ಟಾಯ । ಶ್ರತ್ । ದಧತೇ ।

---

| | |
|---|---|
| ಶ್ರದ್ಧಾ ವೈ ಆಪಃ | ನೀರುಗಳು ಶ್ರದ್ಧಾರೂಪವಾಗಿವೆ.* |
| ಶ್ರದ್ಧಾಮ್ ಏವ ಆರಭ್ಯ ಯಜ್ಞೇನ ಯಜತೇ | [ಈ ಪ್ರಣಯನದಿಂದ ಯಜಮಾನನು] ಶ್ರದ್ಧೆಯನ್ನು ಮನಸ್ಸಿನಲ್ಲಿ ಸ್ಥಿರಗೊಳಿಸಿದವನಾಗಿ ಯಾಗ ಮಾಡಲು ತಕ್ಕವನಾಗುತ್ತಾನೆ. |
| ಉಭಯೇ ಅಸ್ಯ ದೇವಮನುಷ್ಯಾಃ ಇಷ್ಟಾಯ ಶ್ರದ್ದಧತೇ | ದೇವತೆಗಳೂ, ಋತ್ವಿಜರೂ ಈ ಯಜಮಾನನ ಯಾಗದ ವಿಷಯದಲ್ಲಿ ನಂಬಿಕೆಯುಳ್ಳವರಾಗುತ್ತಾರೆ. |

---

ಅಪ್ಪ್ರಣಯನ ಮಾಡಬೇಕು. ನೀರುಗಳು ಶ್ರದ್ಧಾರೂಪವಾಗಿವೆ. ಸ್ನಾನಾದಿಗಳನ್ನು ಮಾಡಿದವನ ಮನಸ್ಸು ಏಕಾಗ್ರತೆಯನ್ನು ಹೊಂದುತ್ತದೆ. ಇದರಿಂದ ಆ ಯಜಮಾನನು ಮನಸ್ಸಿನಲ್ಲಿ ಶ್ರದ್ಧೆಯನ್ನು ಹೊಂದಿ ಯಾಗವನ್ನು ಮಾಡಿದವನಾಗುತ್ತಾನೆ. ದೇವತೆಗಳೂ, ಋತ್ವಿಜರೂ ಆತನ ಯಜ್ಞದ ವಿಷಯದಲ್ಲಿ ನಂಬಿಕೆಯನ್ನಿಟ್ಟುಕೊಳ್ಳುತ್ತಾರೆ.

---

* ಸ್ನಾನಾಚಮನಗಳಿಂದ ದೇವಪೂಜಾದಿಗಳಲ್ಲಿ ಮನಸ್ಸು ಏಕಾಗ್ರತೆಯನ್ನು ಹೊಂದುವುದು ಅನುಭವವೇದ್ಯವಾಗಿದೆ.

ತದಾಹುರತಿ ವಾ ಏತಾ ವರ್ತ್ರ್ಂ ನೇದಂತ್ಯತಿ ವಾಚಂ

ಮನೋ ವಾವೈತಾ ನಾತಿ ನೇದಂತೀತಿ

---

ತತ್ । ಆಹುಃ । ಅತೀತಿ । ವೈ । ಏತಾಃ । ವರ್ತ್ರ್ಮ್ । ನೇದಂತಿ । ಅತೀತಿ । ವಾಚಮ್ । ಮನಃ । ವಾವ । ಏತಾಃ । ನ । ಅತೀತಿ । ನೇದಂತಿ । ಇತಿ ।

---

**ಅಪ್ಪ್ರಣಯನ */ ಪೃಥಿವೀಧ್ಯಾನ */ ಅರ್ಥವಾದ**

| | |
|---|---|
| ತತ್ ಆಹುಃ | ತಿಳಿದವರು ಈ ಪ್ರಣಯನದ ವಿಷಯದಲ್ಲಿ ಹೀಗೆ ಹೇಳುತ್ತಾರೆ. |
| ಏತಾಃ ವೈ ವರ್ತ್ರ್ಮ್ ಅತಿ ನೇದಂತಿ ವಾಚಮ್ ಅತಿ [ನೇದಂತಿ] | ಈ ನೀರುಗಳು ಶರೀರದ ವೃತ್ತಿಯನ್ನೂ ಮೀರುತ್ತವೆಯಷ್ಟೆ. ಮಾತನ್ನೂ ಅತಿಕ್ರಮಿಸುತ್ತವೆ. |
| ಏತಾಃ ಮನಃ ವಾವ ನ ಅತಿ ನೇದಂತಿ ಇತಿ | ಈ ನೀರುಗಳು ಮನಸ್ಸನ್ನು ಮಾತ್ರವೇ ಅತಿಕ್ರಮಿಸಲಾರವೆಂಬುದಾಗಿ [ಹೇಳುತ್ತಾರೆ.] |

---

ಮನಸ್ಸಿನಲ್ಲಿ ಪೃಥಿವಿಯನ್ನು ಧ್ಯಾನ ಮಾಡುತ್ತಾ ಜಲಪ್ರಣಯನವನ್ನು ಮಾಡಬೇಕು. ಈ ವಿಷಯದಲ್ಲಿ ಬಲ್ಲವರು ಹೀಗೆ ಹೇಳುತ್ತಾರೆ. ನೀರುಗಳು ಎಲ್ಲವನ್ನೂ ಅತಿಕ್ರಮಿಸುತ್ತವೆ. ಶರೀರೇಂದ್ರಿಯಗಳನ್ನೂ ಮೀರುತ್ತವೆ. ವಾಕ್ಕನ್ನೂ ಮೀರುತ್ತವೆ. ಪ್ರವಾಹವು ಬಂದಿರುವಾಗ ನದಿಗಳ ನೀರನ್ನು ದೇಹದಿಂದಲೂ ಮಾತಿನಿಂದಲೂ ತಡೆಯಲು ಸಾಧ್ಯವಿಲ್ಲ. ಮನಸ್ಸು ಮಾತ್ರ ತಡೆಯಬಲ್ಲುದು. ಏಕೆಂದರೆ ಮನಸ್ಸು

---

* **'ಅಪಃ ಪ್ರಣಯತಿ'** ಎಂದು ಬ್ರಾಹ್ಮಣಭಾಗದಲ್ಲಿ ಅಧ್ವರ್ಯುವು ಮಾಡುವ ಜಲಪ್ರಣಯನವು ಹೇಳಲ್ಪಟ್ಟಿದೆ. ಶಾಖಾಂತರಗತವಾದುದರಿಂದ ಪುನರುಕ್ತಿ ಇಲ್ಲ.

* ಪ್ರಣಯನಕಾಲದಲ್ಲಿ 'ಪೃಥಿವೀಂ ಚ ಮನಸಾ ಧ್ಯಾಯತಿ' [ಆಪ. ಶ್ರೌ. ಸೂ. 1.16.7] ಎಂಬ ವಚನದಂತೆ ಪೃಥಿವಿಯನ್ನು ಧ್ಯಾನಿಸಬೇಕು. ಇದನ್ನು 'ಮನಸಾ ಪ್ರಣಯತಿ' ಎಂದು ಶ್ರುತಿಯು ಹೇಳಿದೆ.

ಮನಸಾ ಪ್ರಣಯತೀಯಂ ವೈ ಮನೋऽನಯೈವಾನಾಃ
[ಮನಃ (೧) ಅನಯೈವಾನಾಃ] ಪ್ರಣಯತ್ಯಸ್ಕನ್ನಹವಿರ್ಭ
ವತಿ ಯ ಏವಂ ವೇದ

---

ಮನಸಾ । ಪ್ರೇತಿ । ನಯತಿ । ಇಯಮ್ । ವೈ । ಮನಃ । ಅನಯಾ । ಏವ।
ಏನಾಃ । ಪ್ರೇತಿ । ನಯತಿ । ಅಸ್ಕನ್ನಹವಿರಿತ್ಯಸ್ಕನ್ನ-ಹವಿಃ । ಭವತಿ । ಯಃ ।
ಏವಮ್ । ವೇದ ।

---

| | |
|---|---|
| ಮನಸಾ ಪ್ರಣಯತಿ | [ಆದುದರಿಂದ] ಮನಸ್ಸಿನಿಂದ [ಪೃಥಿವಿಯನ್ನು ಧ್ಯಾನಿಸುತ್ತಾ] ಅಪ್ಪ್ರಣಯನವನ್ನು ಮಾಡಬೇಕು.[ವಿಧಿ] |
| ಇಯಮ್ ವೈ ಮನಃ | ಈ ಭೂಮಿಯೇ ಮನಸ್ಸಾಗಿದೆ. |
| ಅನಯಾ ಏವ ಏನಾಃ ಪ್ರಣಯತಿ | ಈ ಭೂಮಿಯಿಂದಲೇ ನೀರಿನ ಪ್ರಣಯನ ಮಾಡಿದಂತಾಗುತ್ತದೆ. |
| ಯಃ ಏವಮ್ ವೇದ | ಯಾವನು ಹೀಗೆ ತಿಳಿಯುತ್ತಾನೆಯೋ [ಅವನು] |
| ಅಸ್ಕನ್ನಹವಿಃ ಭವತಿ | ಚೆಲ್ಲಿ ಹೋಗದ ಹವಿಸ್ಸುಳ್ಳವನಾಗುತ್ತಾನೆ. |

---

ಭೂಮಿಯೇ ಆಗಿದೆ. ಭೂಮಿಯು ವ್ಯಾಪಕವಾಗಿದೆ. ಅದನ್ನು ಪ್ರವಾಹವು ಅತಿಕ್ರಮಿಸಲಾರದು. ಮನಸ್ಸೂ ಎಲ್ಲವನ್ನೂ ವ್ಯಾಪಿಸಬಲ್ಲುದು. ಆದುದರಿಂದ ಮನಸ್ಸಿನಿಂದ ಭೂಮಿಯನ್ನು ಧ್ಯಾನಿಸುತ್ತಾ, ಜಲಪ್ರಣಯನವನ್ನು ಮಾಡಬೇಕು. ಇದರಿಂದ ಭೂಮಿಯಿಂದಲೇ ಜಲಪ್ರಣಯನವನ್ನು ಮಾಡಿದಂತಾಗುತ್ತದೆ. ಯಾವನು ಹೀಗೆ ತಿಳಿದು ಅನುಷ್ಠಾನ ಮಾಡುತ್ತಾನೆಯೋ, ಆತನು ಕೊಡುವ ಹವಿಸ್ಸು ಚೆಲ್ಲಿ ಹೋಗುವುದಿಲ್ಲ. ವ್ಯರ್ಥವಾಗುವುದಿಲ್ಲ.

ಯಜ್ಞಾಯುಧಾನಿ ಸಂಭರತಿ ಯಜ್ಞೋ ವೈ ಯಜ್ಞಾಯುಧಾನಿ

ಯಜ್ಞಮೇವ ತತ್ಸಂಭರತಿ ಯದೇಕಮೇಕಗ್ಂ ಸಂಭರೇತ್ಪಿತೃ

ದೇವತ್ಯಾನಿ ಸ್ಯುರ್ಯತ್ಸಹ ಸರ್ವಾಣಿ

---

**ಯಜ್ಞಾಯುಧಾನೀತಿ** ಯಜ್ಞ-ಆಯುಧಾನಿ। ಸಮಿತಿ। ಭರತಿ। ಯಜ್ಞಃ। ವೈ। ಯಜ್ಞಾಯುಧಾನೀತಿ ಯಜ್ಞ-ಆಯುಧಾನಿ। ಯಜ್ಞಮ್। ಏವ । ತತ್ । ಸಮಿತಿ । ಭರತಿ । ಯತ್। ಏಕಮೇಕಮಿತ್ಯೇಕಮ್-ಏಕಮ್ । ಸಂಭರೇದಿತಿ ಸಮ್ - ಭರೇತ್ । ಪಿತೃದೇವತ್ಯಾನೀತಿ ಪಿತೃ-ದೇವತ್ಯಾನಿ । ಸ್ಯುಃ । ಯತ್ । ಸಹ । ಸರ್ವಾಣಿ ।

---

### ಯಜ್ಞಾಯುಧಗಳ ಸಂಭರಣವಿಧಿ / ಅರ್ಥವಾದ

| | |
|---|---|
| ಯಜ್ಞಾಯುಧಾನಿ ಸಂಭರತಿ | ಯಜ್ಞೋಪಯೋಗಿಯಾದ ಸ್ಫ್ಯ, ಕಪಾಲ ಮೊದಲಾದವುಗಳನ್ನು ಸಂಗ್ರಹಿಸಿ ಇಟ್ಟುಕೊಳ್ಳಬೇಕು.[ವಿಧಿ] |
| ಯಜ್ಞಃ ವೈ ಯಜ್ಞಾಯುಧಾನಿ | ಈ ಯಜ್ಞಸಾಧನಗಳು ಯಜ್ಞದ ಸ್ವರೂಪವೇ ಆಗಿವೆ. [ಆದುದರಿಂದ ಯಜ್ಞಾಯುಧಗಳನ್ನು ಸಂಗ್ರಹಿಸಿದರೆ] |
| ಯಜ್ಞಮ್ ಏವ ತತ್ ಸಂಭರತಿ | ಯಜ್ಞವನ್ನೇ ಸಂಪಾದಿಸಿದಂತಾಗುತ್ತದೆ. |

ಸಂಭರಣಕ್ರಮದ ವಿಧಿ

| | |
|---|---|
| ಯತ್ ಏಕಮೇಕಮ್ ಸಂಭರೇತ್ | ಈ ಪಾತ್ರಗಳನ್ನು ಒಂದೊಂದಾಗಿ ಪ್ರಯೋಗ ಮಾಡಿದರೆ |
| ಪಿತೃದೇವತ್ಯಾನಿ ಸ್ಯುಃ | ಅವು ಪಿತೃದೇವತಾಕವಾದ ಕ್ರಿಯೆಗೆ ಸಂಬಂಧಿಸಿದವುಗಳಾಗುತ್ತವೆ. |
| ಯತ್ ಸಹ ಸರ್ವಾಣಿ | ಎಲ್ಲ ಪಾತ್ರಗಳನ್ನೂ ಒಮ್ಮೆಗೇ ಪ್ರಯೋಗ ಮಾಡಿದರೆ |

ಮಾನುಷಾಣಿ ದ್ವೇದ್ವೇ ಸಂಭರತಿ ಯಾಜ್ಯಾನುವಾಕ್ಯಯೋ ರೇವ ರೂಪಂ ಕರೋತ್ಯಥೋ ಮಿಥುನಮೇವ ಯೋ ವೈ ದಶ ಯಜ್ಞಾಯುಧಾನಿ ವೇದ

---

ಮಾನುಷಾಣಿ । ದ್ವೇದ್ವೇ ಇತಿ ದ್ವೇ -ದ್ವೇ । ಸಮಿತಿ । ಭರತಿ । ಯಾಜ್ಯಾನುವಾಕ್ಯಯೋರಿತಿ ಯಾಜ್ಯಾ-ಅನುವಾಕ್ಯಯೋಃ । ಏವ। ರೂಪಮ್। ಕರೋತಿ । ಅಥೋ ಇತಿ। ಮಿಥುನಮ್। ಏವ । ಯಃ । ವೈ । ದಶ । ಯಜ್ಞಾಯುಧಾನೀತಿ ಯಜ್ಞ- ಆಯುಧಾನಿ । ವೇದ।

---

| | |
|---|---|
| ಮಾನುಷಾಣಿ | ಮನುಷ್ಯಸಂಬಂಧಿಯಾದ ಕರ್ಮಗಳಿಗೆ ಸಂಬಂಧಿಸುತ್ತವೆ. |
| ದ್ವೇದ್ವೇ ಸಂಭರತಿ | [ಆದುದರಿಂದ] ಎರಡೆರಡನ್ನಾಗಿ ಪಾತ್ರಾಸಾದನ ಮಾಡಬೇಕು [ವಿಧಿ] |
| ಯಾಜ್ಯಾನುವಾಕ್ಯಯೋಃ ಏವ ರೂಪಮ್ ಕರೋತಿ ಅಥೋ ಮಿಥುನಮ್ ಏವ [ಕರೋತಿ] | [ಇದರಿಂದ] ಯಾಜ್ಯಾ-ಪುರೋನುವಾಕ್ಕೆಗಳ ರೂಪವನ್ನೇ ಮಾಡಿದಂತಾಗುತ್ತದೆ ಮತ್ತು ಸ್ತ್ರೀಪುರುಷರೂಪವಾದ ಮಿಥುನವನ್ನೇ ಸಂಪಾದಿಸಿದಂತೆ ಆಗುತ್ತದೆ. |

**ಯಜ್ಞಾಯುಧಗಳ ಅರಿವಿನ ಪ್ರಶಂಸೆ**

| | |
|---|---|
| ಯಃ ವೈ ದಶ ಯಜ್ಞಾಯುಧಾನಿ ವೇದ | ಯಾವನು [ಆಸಾದನ ಮಾಡಬೇಕಾದ] ಹತ್ತು ಯಜ್ಞಸಾಧನಗಳನ್ನು ಸಂಪಾದಿಸಲು ತಿಳಿದಿರುತ್ತಾನೆಯೋ |

---

**ಯಜ್ಞಾಯುಧಸಂಭರಣ : ತಾತ್ಪರ್ಯ :** ಯಜ್ಞಕ್ಕೆ ಬೇಕಾದ ಸಾಧನಗಳೇ ಯಜ್ಞಾಯುಧಗಳು. ಇವುಗಳನ್ನು ಸಂಗ್ರಹಿಸಿ ಇಟ್ಟುಕೊಳ್ಳಬೇಕು. ಏಕೆಂದರೆ ಯಜ್ಞಾಯುಧಗಳು ಯಜ್ಞವೇ. ಇವುಗಳು ಇಲ್ಲದಿದ್ದರೆ ಯಜ್ಞವೇ ಆಗುವುದಿಲ್ಲ. ಇವುಗಳ ಸಂಭರಣವು ಯಜ್ಞವನ್ನೇ ಸಂಪಾದಿಸಿದಂತೆ ಆಗುತ್ತದೆ. ಈ ಯಜ್ಞಸಾಧನಪಾತ್ರಗಳನ್ನು ಒಂದೊಂದಾಗಿ ಪ್ರಯೋಗಿಸಿದರೆ [ಇಟ್ಟರೆ] ಪಿತೃದೇವತೆಗಳಿಗೆ ಸಂಬಂಧಿಸಿದವುಗಳಾಗುತ್ತವೆ.

ಮುಖತೋऽಸ್ಯ ಯಜ್ಞಃ ಕಲ್ಪತೇ ಸ್ಫ್ಯಶ್ಚ[ಸ್ಫ್ಯಃ (೨)ಚ]

ಕಪಾಲಾನಿ ಚಾಗ್ನಿಹೋತ್ರಹವಣೀ ಚ ಶೂರ್ಪಂ ಚ

ಕೃಷ್ಣಾಜಿನಂ ಚ

---

ಮುಖತಃ । ಅಸ್ಯ । ಯಜ್ಞಃ । ಕಲ್ಪತೇ । ಸ್ಫ್ಯಃ (೨) ಚ । ಕಪಾಲಾನಿ । ಚ । ಅಗ್ನಿಹೋತ್ರಹವಣೀತ್ಯಗ್ನಿಹೋತ್ರ-ಹವನೀ । ಚ । ಶೂರ್ಪಮ್ । ಚ । ಕೃಷ್ಣಾಜಿನಮಿತಿ ಕೃಷ್ಣ-ಅಜಿನಮ್ । ಚ ।

---

ಮುಖತಃ ಅಸ್ಯ ಯಜ್ಞಃ ಕಲ್ಪತೇ — ಆರಂಭದಲ್ಲಿಯೇ ಈ ಯಜಮಾನನ ಯಜ್ಞವು ಚೆನ್ನಾಗಿ ನೆರವೇರಿದಂತಾಗುತ್ತದೆ.

**ಯಜ್ಞಾಯುಧಗಳ ಸ್ವರೂಪ**

ಸ್ಫ್ಯಃ ಚ ಕಪಾಲಾನಿ ಚ — ಸ್ಫ್ಯ [ತೋಳುದ್ದದ ಕತ್ತಿಯಂತಿರುವ ಕಟ್ಟಿಗೆಯ ವಸ್ತು] ಮತ್ತು ಕಪಾಲಗಳು [ಮಡಕೆಯ ಚೂರುಗಳಂತಿರುವ ವಸ್ತುಗಳು]

ಅಗ್ನಿಹೋತ್ರಹವಣೀ ಚ ಶೂರ್ಪಮ್ ಚ — ಅಗ್ನಿಹೋತ್ರಹವಣೀ [ಹವಿರ್ನಿರ್ವಾಪಕ್ಕೆ ಬಳಸುವ ವಿಕಂಕತ (ನಾಯಿಬೇಲ) ವೃಕ್ಷ ನಿರ್ಮಿತವಾದ ಕೈಯ ಅರ್ಧಬೊಗಸೆ (ಶಾರೆ) ಯಂತಿರುವ ತೋಳುದ್ದದ ವಸ್ತು] ಮತ್ತು ಮೊರ

ಕೃಷ್ಣಾಜಿನಂ ಚ — ಜಿಂಕೆಯ ಚರ್ಮ ಮತ್ತು

---

ಎಲ್ಲವನ್ನೂ ಒಟ್ಟಾಗಿ ಇಟ್ಟರೆ ಮಾನುಷವಾಗುತ್ತವೆ. ಇದು ದೇವಕರ್ಮ. ಆದುದರಿಂದ ಪಾತ್ರಗಳನ್ನು ಎರಡೆರಡನ್ನಾಗಿ ಪ್ರಯೋಗಿಸಬೇಕು. [ವಿಧಿ]. ಇದರಿಂದ ಯಾಜ್ಯಾ-ಪುರೋನುವಾಕ್ಯಗಳ ರೂಪವನ್ನು ಹೊಂದಿದಂತೆ ಆಗುತ್ತದೆ. ಯಾಜ್ಯಾ-ಪುರೋನುವಾಕ್ಯಗಳೂ ಎರಡು. ಆದುದರಿಂದ ಅವುಗಳ ರೂಪವನ್ನು ಹೊಂದಿದಂತಾಗುತ್ತದೆ ಮತ್ತು

ಶಮ್ಯಾ ಚೋಲೂಖಲಂ ಚ ಮುಸಲಂ ಚ ದೃಷಚ್ಚೋಪಲಾ ಚೈತಾನಿ ವೈ ದಶ ಯಜ್ಞಾಯುಧಾನಿ ಯ ಏವಂ ವೇದ ಮುಖತೋऽಸ್ಯ ಯಜ್ಞಃ ಕಲ್ಪತೇ

---

ಶಮ್ಯಾ। ಚ । ಉಲೂಖಲಮ್ । ಚ । ಮುಸಲಮ್ । ಚ । ದೃಷತ್। ಚ। ಉಪಲಾ। ಚ । ಏತಾನಿ । ವೈ । ದಶ । ಯಜ್ಞಾಯುಧಾನೀತಿ ಯಜ್ಞ - ಆಯುಧಾನಿ । ಯಃ। ಏವಮ್ । ವೇದ । ಮುಖತಃ । ಅಸ್ಯ । ಯಜ್ಞಃ । ಕಲ್ಪತೇ ।

---

| | |
|---|---|
| ಶಮ್ಯಾ ಚ | ಶಮ್ಯಾ [ಗದೆಯ ಆಕಾರದ ತೋಳಿನ ಅಳತೆಯ ಮರದ ವಸ್ತು, (ಜೊತಿಗೆ)] |
| ಉಲೂಖಲಮ್ ಚ ಮುಸಲಮ್ ಚ | ಒರಳು ಮತ್ತು ಒನಕೆ |
| ದೃಷತ್ ಚ ಉಪಲಾ ಚ | ಅರೆಯುವ ಕಲ್ಲು ಮತ್ತು ಗುಂಡುಕಲ್ಲು |
| ಏತಾನಿ ವೈ ದಶ ಯಜ್ಞಾಯುಧಾನಿ | ಇವುಗಳೇ ಮುಖ್ಯವಾದ ಹತ್ತು ಯಜ್ಞ ಸಾಧನಗಳಷ್ಟೆ. |
| ಯಃ ಏವಮ್ ವೇದ | ಯಾವನು ಹೀಗೆ ತಿಳಿಯುತ್ತಾನೆಯೋ |
| ಮುಖತಃ ಅಸ್ಯ ಯಜ್ಞಃ ಕಲ್ಪತೇ | ಯಜ್ಞಾರಂಭದಲ್ಲಿ ಈ ಯಜಮಾನನ ಯಜ್ಞವು ನಿರ್ವಿಘ್ನವಾಗಿ ಅನುಷ್ಠಿಸಲು ಸಮರ್ಥವಾಗುತ್ತದೆ. |

---

ಸ್ತ್ರೀ-ಪುರುಷಯುಗ್ಮರೂಪವಾದ ಮಿಥುನಸ್ವರೂಪವನ್ನು ಹೊಂದಿದಂತೆಯೂ ಆಗುತ್ತದೆ.

ಯಜ್ಞಾಯುಧಗಳನ್ನು ತಿಳಿದು ಅವುಗಳನ್ನು ಸಂಪಾದಿಸಿದರೆ, ಯಜಮಾನನ ಯಜ್ಞವು ತಡೆಯಿಲ್ಲದೆ ನೆರವೇರಿಸಲು ಸಮರ್ಥವಾಗುತ್ತದೆ. **(1) ಸ್ಫ್ಯ (2) ಕಪಾಲಗಳು (3) ಅಗ್ನಿಹೋತ್ರಹವಣೀ (4) ಮೊರ (5) ಜಿಂಕೆಯ ಚರ್ಮ (6) ಶಮ್ಯಾ (ಜೊತಿಗೆ) (7) ಒರಳು (8) ಒನಕೆ (9) ಅರೆಯುವ ಕಲ್ಲು (10) ಗುಂಡುಕಲ್ಲು**–ಇವು ಛೇದನ, ನಿರ್ವಾಪಾದಿಸಾಧನವಾದ ಹತ್ತು ಯಜ್ಞಾಯುಧಗಳು. ಇವುಗಳನ್ನು ಸಂಪಾದಿಸಿದರೆ ಯಜ್ಞವು ನಿರ್ವಿಘ್ನವಾಗಿ ನೆರವೇರಲು ಸಮರ್ಥವಾಗುತ್ತದೆ.

ಯೋ ವೈ ದೇವೇಭ್ಯಃ ಪ್ರತಿಪ್ರೋಚ್ಯ ಯಜ್ಞೇನ ಯಜತೇ ಜುಷಂತೇಽಸ್ಯ ದೇವಾ ಹವ್ಯಗ್ಂ ಹವಿರ್ನಿರುಪ್ಯಮಾಣ-ಮಭಿಮಂತ್ರಯೇತಾಗ್ನಿಗ್ಂ ಹೋತಾರಮಿಹ ತಗ್ಂ ಹುವ

---

ಯಃ । ವೈ। ದೇವೇಭ್ಯಃ । ಪ್ರತಿಪ್ರೋಚ್ಯೇತಿ ಪ್ರತಿ-ಪ್ರೋಚ್ಯ । ಯಜ್ಞೇನ। ಯಜತೇ। ಜುಷಂತೇ । ಅಸ್ಯ । ದೇವಾಃ । ಹವ್ಯಮ್ । ಹವಿಃ । ನಿರುಪ್ಯಮಾಣಮಿತಿ ನಿಃ-ಉಪ್ಯಮಾನಮ್। ಅಭೀತಿ । ಮಂತ್ರಯೇತ । ಅಗ್ನಿಮ್ । ಹೋತಾರಮ್ । ಇಹ। ತಮ್ । ಹುವೇ।

---

## ಹವಿರ್ನಿರ್ವಾಪಾಭಿಮಂತ್ರಣವಿಧಿ / ಅರ್ಥವಾದ

| | |
|---|---|
| ಯಃ ವೈ ದೇವೇಭ್ಯಃ ಪ್ರತಿಪ್ರೋಚ್ಯ ಯಜ್ಞೇನ ಯಜತೇ | ಯಾವ ಯಜಮಾನನು ದೇವತೆಗಳಿಗೆ (ಅಗ್ನಯೇ, ಅಗ್ನೀಷೋಮಾಭ್ಯಾಮ್ ಹೋಷ್ಯಾಮಿ ಇತ್ಯಾದಿ) ಮೊದಲೇ ನಿರ್ದೇಶ ಮಾಡಿ ಯಾಗ ಮಾಡುತ್ತಾನೆಯೋ |
| ಜುಷಂತೇ ಅಸ್ಯ ದೇವಾಃ ಹವ್ಯಮ್ | ಈ ಯಜಮಾನನು ನೀಡುವ ಹವ್ಯಗಳನ್ನು ದೇವತೆಗಳು ಸೇವಿಸುತ್ತಾರೆ. |
| ಹವಿಃ ನಿರುಪ್ಯಮಾಣಮ್ ಅಭಿಮಂತ್ರಯೇತ | [ಆದುದರಿಂದ ಅಧ್ವರ್ಯುವು ಹವಿರ್ನಿರ್ವಾಪ ಮಾಡುವಾಗ ಯಜಮಾನನು] ನಿರ್ವಾಪ ಮಾಡುತ್ತಿರುವ ಹವಿಸ್ಸನ್ನು |

---

ಆಪಸ್ತಂಬರು ಇವುಗಳ ಜೊತೆಗೆ ಇನ್ನೂ ಕೆಲವು ಯಜ್ಞಪಾತ್ರಗಳನ್ನು ಹೇಳಿರುತ್ತಾರೆ. (1) ಸ್ರುವ (2) ಜುಹೂ (3) ಉಪಭೃತ್ (4) ಧ್ರುವಾ (5) ವೇದ (6) ಪಾತ್ರೀ (7)ಆಜ್ಯಸ್ಥಾಲೀ (8) ಪ್ರಾಶಿತ್ರಹರಣ (9) ಇಡಾಪಾತ್ರ (10) ಪ್ರಣೀತಾ ಪ್ರಣಯನ ಈ ಹತ್ತನ್ನು ಪೂರ್ವಪಾತ್ರಗಳನ್ನಾಗಿ ಹೇಳಿರುತ್ತಾರೆ. ಇವುಗಳ ಜೊತೆಗೆ ಅನ್ವಾಹಾರ್ಯಸ್ಥಾಲೀ, ಅಶ್ಮ, ಉಪವೇಷ, ಪ್ರಾತರ್ದೋಹಪಾತ್ರಗಳನ್ನು ಆಸಾದನ ಮಾಡಬೇಕು ಎಂದು ಹೇಳಿರುತ್ತಾರೆ.

ಇತಿ (ಖ) ದೇವೇಭ್ಯ ಏವ ಪ್ರತಿಪ್ರೋಚ್ಯ ಯಜ್ಞೇನ ಯಜತೇ ಜುಷಂತೇऽಸ್ಯ ದೇವಾ ಹವ್ಯಮೇಷ ವೈ ಯಜ್ಞಸ್ಯ ಗ್ರಹೋ ಗೃಹೀತ್ವೈವ ಯಜ್ಞೇನ ಯಜತೇ

---

ಇತಿ(ಖ) ದೇವೇಭ್ಯಃ। ಏವ । ಪ್ರತಿಪ್ರೋಚ್ಯೇತಿ ಪ್ರತಿ–ಪ್ರೋಚ್ಯ। ಯಜ್ಞೇನ । ಯಜತೇ। ಜುಷಂತೇ। ಅಸ್ಯ। ದೇವಾಃ। ಹವ್ಯಮ್। ಏಷಃ । ವೈ । ಯಜ್ಞಸ್ಯ । ಗ್ರಹಃ । ಗೃಹೀತ್ವಾ। ಏವ । ಯಜ್ಞೇನ । ಯಜತೇ ।

---

| | |
|---|---|
| ಅಗ್ನಿಮ್ ಹೋತಾರಮ್ ಇಹ ತಮ್ ಹುವೇ ಇತಿ | *'ಅಗ್ನಿಗ್ಂ ಹೋತಾರಮ್' ಎಂಬ ಮಂತ್ರದಿಂದ ಅಭಿಮಂತ್ರಣ ಮಾಡಬೇಕು. |
| ದೇವೇಭ್ಯಃ ಏವ ಪ್ರತಿಪ್ರೋಚ್ಯ | [ಹಾಗೆ ಮಾಡುವುದರಿಂದ] ದೇವತೆಗಳಿಗೆ ನಿರ್ದೇಶ ಮಾಡಿಯೇ |
| ಯಜ್ಞೇನ ಯಜತೇ | ಯಜಮಾನನು ಯಾಗ ಮಾಡಿದಂತಾಗುತ್ತದೆ. |
| ಜುಷಂತೇ ಅಸ್ಯ ದೇವಾಃ ಹವ್ಯಮ್ | ಈ ಯಜಮಾನನು ಕೊಡುವ ಹವಿಸ್ಸನ್ನು ದೇವತೆಗಳು ಸೇವಿಸುತ್ತಾರೆ. |

**ಅಭಿಮಂತ್ರಣದ ಇನ್ನೊಂದು ಪ್ರಶಂಸೆ**

| | |
|---|---|
| ಏಷಃ ವೈ ಯಜ್ಞಸ್ಯ ಗ್ರಹಃ | ಈ ಮಂತ್ರಪ್ರಯೋಗವು ಯಜ್ಞಸ್ವೀಕಾರರೂಪವಾಗಿದೆ. |
| ಗೃಹೀತ್ವಾ ಏವ ಯಜ್ಞೇನ ಯಜತೇ | [ದೇವತೆಗಳಿಗೆ ದ್ರವ್ಯನಿರ್ದೇಶರೂಪವಾದ ಯಜ್ಞವನ್ನು] ಸ್ವೀಕರಿಸಿಯೇ ಯಜಮಾನನು ಯಾಗವನ್ನು ಆರಂಭಿಸಿದಂತಾಗುತ್ತದೆ. |

---

ಇವುಗಳನ್ನು ಗಾರ್ಹಪತ್ಯ - ಆಹವನೀಯಗಳ ಉತ್ತರಭಾಗದಲ್ಲಿ ದರ್ಭೆಗಳನ್ನು ಹಾಕಿ ಅವುಗಳ ಮೇಲೆ ಆಸಾದನ ಮಾಡಬೇಕು.

---

* ತೈ.ಸಂ. **1.5.10**

ತದುದಿತ್ವಾ ವಾಚಂ ಯಚ್ಛತಿ ಯಜ್ಞಸ್ಯ ಧೃತ್ಯಾ ಅಥೋ

---

ತತ್ । ಉದಿತ್ವಾ । ವಾಚಮ್ । ಯಚ್ಛತಿ । ಯಜ್ಞಸ್ಯ । ಧೃತ್ಯೈ । ಅಥೋ ಇತಿ।

---

**ವಾಗ್ಯಮವಿಧಿ–ಅದರ ಪ್ರಶಂಸೆ**

| | |
|---|---|
| ತತ್ ಉದಿತ್ವಾ ವಾಚಮ್ ಯಚ್ಛತಿ | ಆ ಅಭಿಮಂತ್ರಣವನ್ನು ಹೇಳಿ ಯಜಮಾನನು ವಾಗ್ಯಮವನ್ನು ಮಾಡಬೇಕು. ಮೌನವಾಗಿರಬೇಕು. [ವಿಧಿ]. |
| ಯಜ್ಞಸ್ಯ ಧೃತ್ಯೈ | ಯಜ್ಞವು ದೃಢವಾಗಿರುವುದಕ್ಕಾಗಿ [ಈ ವಾಗ್ಯಮವನ್ನು ಮಾಡಬೇಕು]. |
| ಅಥೋ | ಮತ್ತು |

---

**ಹವಿರ್ನಿರ್ವಾಪಾಭಿಮಂತ್ರಣ–ತಾತ್ಪರ್ಯ:** ಯಜಮಾನನು ದೇವತೆಗಳಿಗೆ ನಾಮ ನಿರ್ದೇಶ ಮಾಡಿ ಯಾಗ ಮಾಡಿದರೆ ದೇವತೆಗಳು ಅವನ ಹವ್ಯವನ್ನು ಸ್ವೀಕರಿಸುತ್ತಾರೆ. ಅಧ್ವರ್ಯುವು ಹವಿರ್ನಿರ್ವಾಪ ಮಾಡುವಾಗ ಯಜಮಾನನು **'ಅಗ್ನಿಗ್ಂ ಹೋತಾರಮ್'** ಎಂಬ ಮಂತ್ರದಿಂದ ಅಭಿಮಂತ್ರಣ ಮಾಡಬೇಕು. 'ನಾನು ದೇವತೆಗಳನ್ನು ಆಹ್ವಾನಿಸುವ ಅಗ್ನಿಯನ್ನು ಆಹ್ವಾನಿಸುತ್ತೇನೆ. ಈ ಯಜ್ಞದಲ್ಲಿ ಈ ಯಜ್ಞದ ದೇವತೆಗಳಾಗಿ ಯಾರು ಇದ್ದಾರೆಯೋ ಅವರನ್ನೂ ಆಹ್ವಾನಿಸುತ್ತೇನೆ. ಅವರು ಬರಲಿ, ಹವ್ಯವನ್ನು ಸ್ವೀಕರಿಸಲಿ' ಎಂಬ ಅರ್ಥವುಳ್ಳ ಆ ಮಂತ್ರದಿಂದ ದೇವತೆಗಳನ್ನು ನಿರ್ದೇಶ ಮಾಡಿದಂತಾಯಿತು. ಆ ದೇವತೆಗಳು ಯಜಮಾನನ ಹವಿಸ್ಸನ್ನು ಸ್ವೀಕರಿಸುತ್ತಾರೆ.

ಈ ಮಂತ್ರಪ್ರಯೋಗವು ಯಜ್ಞಸ್ವೀಕಾರರೂಪವಾದುದು. ಈ ರೀತಿಯ ಯಜ್ಞವನ್ನು ಸ್ವೀಕರಿಸಿಯೇ ಯಜಮಾನನು ಯಾಗವನ್ನು ಆರಂಭಿಸಿದಂತಾಗುತ್ತದೆ.

**ವಾಗ್ಯಮ–ತಾತ್ಪರ್ಯ:** ಯಜಮಾನನು ನಿರ್ವಾಪಾಭಿಮಂತ್ರಣಮಂತ್ರವನ್ನು ಹೇಳಿ ಮೌನ ವಾಗಿರಬೇಕು. ಇದರಿಂದ ಯಜ್ಞವು ಸ್ಥಿರವಾಗಿರುವಂತೆ ಆಗುತ್ತದೆ. [ಇದಕ್ಕಾಗಿ ವಾಗ್ಯಮವನ್ನು ಮಾಡಬೇಕು] ಮತ್ತು ಪ್ರಜಾಪತಿಯು ಮನಸ್ಸಿನಲ್ಲಿಯೇ ಯಜ್ಞವನ್ನು

ಮನಸಾ ವೈ ಪ್ರಜಾಪತಿರ್ಯಜ್ಞಮತನುತ ಮನಸೈವ

ತದ್ಯಜ್ಞಂ ತನುತೇ ರಕ್ಷಸಾಮನನ್ವವಚಾರಾಯ ಯೋ ವೈ

ಯಜ್ಞಂ ಯೋಗ ಆಗತೇ ಯುನಕ್ತಿ ಯುಂಕ್ತೇ ಯುಂಜಾನೇಷು

---

ಮನಸಾ। ವೈ। ಪ್ರಜಾಪತಿರಿತಿ ಪ್ರಜಾ-ಪತಿಃ। ಯಜ್ಞಮ್। ಅತನುತ। ಮನಸಾ। ಏವ।

ತತ್। ಯಜ್ಞಮ್। ತನುತೇ। ರಕ್ಷಸಾಮ್। ಅನನ್ವವಚಾರಾಯೇತ್ಯನನು-ಅವಚಾರಾಯ।

ಯಃ। ವೈ। ಯಜ್ಞಮ್ । ಯೋಗೇ । ಆಗತ ಇತ್ಯಾ - ಗತೇ । ಯುನಕ್ತಿ । ಯುಂಕ್ತೇ।

ಯುಂಜಾನೇಷು ।

---

| | |
|---|---|
| ಮನಸಾ ವೈ ಪ್ರಜಾಪತಿಃ ಯಜ್ಞಮ್ ಅತನುತ | ಪ್ರಜಾಪತಿಯು ಮನಸ್ಸಿನಿಂದಲೇ ಯಾಗವನ್ನು ವಿಸ್ತರಿಸಿದನು. |
| ಮನಸಾ ಏವ ತತ್ ಯಜ್ಞಮ್ ತನುತೇ | [ಮೌನವಾಗಿರುವುದರಿಂದ] ಯಜಮಾನನು ಮನಸ್ಸಿನಿಂದಲೇ ಯಜ್ಞವನ್ನು ವಿಸ್ತರಿಸಿದವನಾಗುತ್ತಾನೆ. |
| ರಕ್ಷಸಾಮ್ ಅನನ್ವವಚಾರಾಯ | [ಇದರಿಂದ] ರಾಕ್ಷಸರು ಪ್ರವೇಶಿಸಿ, ಅಡ್ಡಿ ಪಡಿಸದಿರುವಂತಾಗುತ್ತದೆ. |

**ಯಜ್ಞಯೋಗಕ್ಕೆ ಸಂಬಂಧಿಸಿದ ಅರ್ಥವಾದ**

| | |
|---|---|
| ಯಃ ವೈ ಯಜ್ಞಮ್ ಯೋಗೇ ಆಗತೇ ಯುನಕ್ತಿ | ಯಾವ ಯಜಮಾನನು ಯಜ್ಞಯೋಗಕಾಲವು ಬಂದಾಗ ಯಜ್ಞಯೋಗವನ್ನು ಮಾಡುತ್ತಾನೆಯೋ |
| ಯುಂಜಾನೇಷು ಯುಂಕ್ತೇ | ಯಜಮಾನರ ಮಧ್ಯದಲ್ಲಿ 'ಯೋಗ ಮಾಡಿದ್ದಾನೆ' ಎನಿಸಿಕೊಳ್ಳುತ್ತಾನೆ. [ಯಜ್ಞಯೋಗ ಮಾಡಿದವರಲ್ಲಿ ಸೇರುತ್ತಾನೆ.] |

---

ವಿಸ್ತರಿಸಿದಂತೆ ಯಜಮಾನನೂ ಮನಸ್ಸಿನಿಂದ ಯಜ್ಞವನ್ನು ವಿಸ್ತರಿಸಿದವನಾಗುತ್ತಾನೆ.

ಕಸ್ತ್ವಾ ಯುನಕ್ತಿ ಸ ತ್ವಾಯುನಕ್ತ್ವಿತ್ಯಾಹ ಪ್ರಜಾಪತಿರ್ವೈ ಕಃ ಪ್ರಜಾಪತಿನೈವೈನಂ ಯುನಕ್ತಿ ಯುಂಕ್ತೇ ಯುಂಜಾನೇಷು

||೮-28|| [ವೈ ಮನಃ ಸ್ಪೃ ಇತಿ ಯುನಕ್ತ್ವೇಕಾದಶ ಚ ||]

---

ಕಃ । ತ್ವಾ । ಯುನಕ್ತಿ । ಸಃ । ತ್ವಾ । ಯುನಕ್ತು । ಇತಿ । ಆಹ । ಪ್ರಜಾಪತಿರಿತಿ ಪ್ರಜಾ-ಪತಿಃ। ವೈ। ಕಃ। ಪ್ರಜಾಪತಿನೇತಿ ಪ್ರಜಾ-ಪತಿನಾ । ಏವ । ಏನಮ್ । ಯುನಕ್ತಿ। ಯುಂಕ್ತೇ । ಯುಂಜಾನೇಷು ||೮||

---

| | |
|---|---|
| ಕಃ ತ್ವಾ ಯುನಕ್ತಿ ಸಃ ತ್ವಾ ಯುನಕ್ತು ಇತಿ ಆಹ | [ಶ್ರುತಿಯು] 'ಯೋಗಕರ್ತನಾದ ಪ್ರಜಾ ಪತಿಯು ನಿನ್ನನ್ನು [ಯಜ್ಞವನ್ನು] ಕಟ್ಟಲಿ' ಎಂದು ಹೇಳುತ್ತದೆ. |
| ಪ್ರಜಾಪತಿಃ ವೈ ಕಃ | ಪ್ರಜಾಪತಿಯು 'ಕ' ಶಬ್ದವಾಚ್ಯನಾಗಿದ್ದಾನೆ. |
| ಪ್ರಜಾಪತಿನಾ ಏವ ಏನಮ್ ಯುನಕ್ತಿ ಯುಂಕ್ತೇ ಯುಂಜಾನೇಷು | [ಈ ಮಂತ್ರಪಾಠದಿಂದ] ಪ್ರಜಾಪತಿಯಿಂದಲೇ [ರಥಕ್ಕೆ ಕುದುರೆಗಳನ್ನು ಕಟ್ಟಿದಂತೆ] ಯಜಮಾನನು ತನಗೆ ಯಜ್ಞವನ್ನು ಕಟ್ಟುತ್ತಾನೆ. [ಸಂಬಂಧಿಸಿಕೊಳ್ಳುತ್ತಾನೆ / ಯಾಗನಿಷ್ಠನಾಗುತ್ತಾನೆ]. [ಆದುದರಿಂದ ಈ ಯಜ್ಞಯೋಗವನ್ನು ಪಠಿಸಬೇಕು.]. [ವಿಧಿ] |

---

ಇದರಿಂದ ರಾಕ್ಷಸರು ಯಜ್ಞವಿಘ್ನವನ್ನು ಮಾಡದಂತೆಯೂ ಆಗುತ್ತದೆ.

**ಯಜ್ಞಯೋಗ–ತಾತ್ಪರ್ಯ** : ಯಜಮಾನನು ಯಜ್ಞಯೋಗಕಾಲವು ಬಂದಾಗ ಯಜ್ಞಯೋಗ ಮಾಡಿದರೆ ಹಾಗೆ ಯಜ್ಞಯೋಗ ಮಾಡಿದ ಯಜಮಾನರಲ್ಲಿ ಸೇರಿಕೊಳ್ಳುತ್ತಾನೆ. **'ಕಸ್ತ್ವಾ ಯುನಕ್ತಿ ಸ ತ್ವಾ ಯುನಕ್ತು'** ಎಂಬ ಮಂತ್ರಪಾಠವೇ ಯಜ್ಞಯೋಗ.

ಇದನ್ನು ಪಠನ ಮಾಡಿದರೆ ಕುದುರೆಗಳನ್ನು ರಥಕ್ಕೆ ಕಟ್ಟಿದಂತೆ ಯಜಮಾನನು ತನಗೆ ಯಜ್ಞವನ್ನು ಕಟ್ಟಿಕೊಂಡಂತೆ ಆಗುತ್ತದೆ. 'ಕ' ಶಬ್ದವಾಚ್ಯನಾದ ಪ್ರಜಾಪತಿಯು

ಇಂತಹ ಯೋಗಕ್ಕೆ ಕಾರಣನಾಗುತ್ತಾನೆ. ಆದುದರಿಂದ ಯಜ್ಞಯೋಗವನ್ನು ಮಾಡಬೇಕು. ಯಜ್ಞಕ್ಕೆ ಸಂಬಂಧಿಸಿದ ಕಾರ್ಯದಲ್ಲಿಯೇ ತನ್ನನ್ನು ತೊಡಗಿಸಿಕೊಳ್ಳಬೇಕು.

## ಅನುವಾಕದ ವಿಶೇಷ ವಿಷಯಗಳು

### ಅ) ಮೀಮಾಂಸಾ

**1. ಯಜ್ಞಸಾಧನಗಳು ವ್ಯವಸ್ಥಿತಗಳೇ ? [ಜೈ. ಸೂ. 3.1.]**

ದರ್ಶ-ಪೂರ್ಣಮಾಸ ಪ್ರಕರಣದಲ್ಲಿ 'ಸ್ಫ್ಯಶ್ಚ.. ಏತಾನಿ ವೈ ದಶ ಯಜ್ಞಾಯುಧಾನಿ' ಎಂಬ ವಾಕ್ಯವಿದೆ. ಸ್ಫ್ಯಾದಿಗಳು ಯಜ್ಞಸಾಧನಗಳು. ಇವುಗಳು ಇಂತಿಂತಹ ಕಾರ್ಯಗಳಿಗೇ ಎಂಬುದಾಗಿ ವ್ಯವಸ್ಥಿತಗಳೇ ? ಅಥವಾ ಅವ್ಯವಸ್ಥಿತಗಳೇ ? ಇದು **ಸಂಶಯ.**

ಇಲ್ಲಿಯ **ಪೂರ್ವಪಕ್ಷ** ಹೀಗಿದೆ : **'ವ್ರೀಹೀನವಹಂತಿ'** ಮೊದಲಾದ ವಾಕ್ಯಗಳಲ್ಲಿ 'ಅವಹನನದಿಂದಲೇ ವೈತುಷ್ಯ[ಹೊಟ್ಟು ತೆಗೆಯುವಿಕೆ]ವನ್ನು ಸಂಪಾದಿಸಬೇಕು. ನಖಲುಂಛನಾದಿಗಳಿಂದ ಅಲ್ಲ, ಎಂದು ಅವಘಾತಾದಿಸಂಸ್ಕಾರಗಳು ವ್ಯವಸ್ಥಿತವಾಗಿ ಇದ್ದರೂ ಸ್ಫ್ಯಾದಿದ್ರವ್ಯಗಳು ವ್ಯವಸ್ಥಿತವಲ್ಲ. **'ಯಜ್ಞಾಯುಧಾನಿ'** ಎಂಬುದಾಗಿ ಸಾಮಾನ್ಯವಾಗಿ ಯಜ್ಞಸಾಧನಗಳೆಂದು ಹೇಳಿರುವುದರಿಂದ ಯಾವ ವಸ್ತುವನ್ನು ಯಾವ ಕ್ರಿಯೆಯಲ್ಲಿಯಾದರೂ ಉಪಯೋಗಿಸಬಹುದು. ಇದರಿಂದ ಯಜ್ಞಾಯುಧವೆಂದು ಹೇಳಿರುವುದಕ್ಕೆ ವಿರೋಧವೇನೂ ಇರುವುದಿಲ್ಲ. ಆದುದರಿಂದ ವೈಕಲ್ಪಿಕವಾಗಿ ಯಾವುದೊಂದನ್ನು ಯಾವ ಕ್ರಿಯೆಯಲ್ಲಿಯಾದರೂ ಉಪಯೋಗಿಸಬಹುದು.

ಇಲ್ಲಿಯ **ಸಿದ್ಧಾಂತ** ಹೀಗಿದೆ : **'ಸ್ಫ್ಯೇನೋದ್ಧಂತಿ'** (ಸ್ಫ್ಯದಿಂದ ಖನನ ಮಾಡಬೇಕು) **'ಕಪಾಲೇಷು ಶ್ರಪಯತಿ'** (ಕಪಾಲಗಳಲ್ಲಿ ಬೇಯಿಸಬೇಕು) ಮೊದಲಾದ ವಿಧಿಗಳು ಆಯಾ ಕ್ರಿಯೆಗಳಲ್ಲಿ ಪ್ರತ್ಯೇಕ ವಸ್ತುಗಳನ್ನೇ ಸಾಧನವನ್ನಾಗಿ ಹೇಳಿರುತ್ತವೆ. ಯಾವ ವಸ್ತುವನ್ನಾದರೂ ಯಾವ ಕ್ರಿಯೆಯಲ್ಲಿಯಾದರೂ ಉಪಯೋಗಿಸಬಹುದೆಂದರೆ ವಿಶೇಷ ವಿಧಿಗಳು ವ್ಯರ್ಥವಾಗುತ್ತವೆ. **'ಯಜ್ಞಾಯುಧಾನಿ'** 'ಯಜ್ಞಸಂಬಂಧಿಗಳು' ಎಂದು ಹೇಳಿರುವುದು—**'ಯಜ್ಞಾಯುಧಾನಿ ಸಂಭರತಿ'** ಎಂದು ಪಾತ್ರಾಸಾದನದಲ್ಲಿ ಉಪಯುಕ್ತವಾಗುವುದರಿಂದ—ಸಾರ್ಥಕವಾಗುತ್ತದೆ. **'ಸ್ಫ್ಯೇನೋದ್ಧಂತಿ'** ಮೊದಲಾದ ವಾಕ್ಯಗಳಲ್ಲಿ ಸ್ಫ್ಯಾದಿಗಳನ್ನು ಹೇಳಿರುವುದನ್ನು **'ಸ್ಫ್ಯಶ್ಚ ಕಪಾಲಾನಿ ಚ'** ಎಂಬ ವಾಕ್ಯಗಳಲ್ಲಿ ಅನುವಾದ ಮಾಡಲಾಗಿದೆ. ಆದುದರಿಂದ ಸ್ಫ್ಯಾದಿಗಳು ಕರ್ಮವಿಶೇಷಗಳಲ್ಲಿ ವ್ಯವಸ್ಥಿತವಾಗಿವೆ.

**2. ಸ್ಫ್ಯಾದಿಗಳು ಹವಿಸ್ಸುಗಳೇ ? [ಜೈ. ಸೂ. 4.1]**

'ಏತಾನಿ ವೈ ದಶ ಯಜ್ಞಾಯುಧಾನಿ' ಎಂಬ ವಾಕ್ಯವು ಸ್ಫ್ಯಾದಿಗಳನ್ನು ಹವಿಸ್ಸುಗಳನ್ನಾಗಿ ವಿನಿಯೋಗಿಸುತ್ತದೆಯೇ? ಇಲ್ಲವೇ? ಎಂಬ **ಸಂಶಯ.**

ಹವಿಸ್ಸು ಮುಖ್ಯವಾದ ಯಜ್ಞಸಾಧನ. ಆದುದರಿಂದ ಈ ವಿಧಿಯು ಸ್ಪ್ಯಾದಿಗಳನ್ನು ಹವಿಸ್ಸುಗಳನ್ನಾಗಿ ವಿನಿಯೋಗಿಸುತ್ತದೆ. ಪುರೋಡಾಶಾದಿಹವಿಸ್ಸುಗಳೊಡನೆ ಈ ಸ್ಪ್ಯಾದಿಗಳಿಗೆ ವಿಕಲ್ಪವಾಗಲೀ, ಸಮುಚ್ಚಯವಾಗಲೀ ಆಗಬಹುದು. ಇದು ಇಲ್ಲಿನ **ಪೂರ್ವಪಕ್ಷ.**

**'ಆಗ್ನೇಯೋಽಷ್ಟಾಕಪಾಲಃ' ಅಗ್ನೀಷೋಮೀಯಮೇಕಾದಶಕಪಾಲಮ್' 'ಐಂದ್ರಂ ದಧಿ' 'ಐಂದ್ರಂ ಪಯಃ'** ಈ ರೀತಿಯಾಗಿ ಉತ್ಪತ್ತಿವಾಕ್ಯಗಳಲ್ಲಿಯೇ ಪುರೋಡಾಶಾದಿ ದ್ರವ್ಯಗಳು ಆಮ್ನಾತವಾಗಿವೆ. ಅನಂತರ ಹೇಳುವ ಸ್ಪ್ಯಾದಿಗಳಿಗೆ ಪುರೋಡಾಶಾದಿ ಗಳೊಡನೆ ವಿಕಲ್ಪವಾಗಲೀ, ಸಮುಚ್ಚಯವಾಗಲೀ ಸಾಧ್ಯವಿಲ್ಲ. ಆಯುಧ ಶಬ್ದವು ಪರಂಪರೆಯಿಂದ ಯಜ್ಞಸಾಧನವಾಚಿಯಾಗಿದೆ. **'ಸ್ಫ್ಯೇನೋದ್ಧಂತಿ'** ಮೊದಲಾದ ಶ್ರುತಿ ವಚನಗಳಲ್ಲಿ ಸ್ಪ್ಯಾದಿಗಳು ಯಜ್ಞಾಂಗವಾದ ಕರ್ಮವಿಶೇಷಗಳಲ್ಲಿ ಸಾಧನವಾಗಿವೆ. ಇಂತಹ ಯಜ್ಞಾಯುಧತ್ವವನ್ನು ಅನುವಾದ ಮಾಡಿ ಸಂಭರಣವಿಧಿಯು ಹೊಗಳಲ್ಪ ಡುತ್ತದೆ. ಆದುದರಿಂದ ಸ್ಪ್ಯಾದಿಗಳಿಗೆ ಹವಿಷ್ಟ್ವವು ಇಲ್ಲ. ಇದು ಇಲ್ಲಿನ **ಸಿದ್ಧಾಂತ.**

### 3. ಪ್ರದೇಶಾದಿಗಳು ಪ್ರತಿ ಯಾಗಕ್ಕೂ ಬೇರೆಯೇ ? [ಜೈ. ಸೂ. 11. 3.]

**'ಸಮೇ ಯಜೇತ'** ಎಂಬುದಾಗಿ ಹೇಳಿರುವ ಪ್ರದೇಶ, ಜುಹೂ ಮುಂತಾದ ಪಾತ್ರಗಳು, ಅಧ್ವರ್ಯುವೇ ಮುಂತಾದ ಋತ್ವಿಜರು ಪ್ರತಿ ಯಾಗಕ್ಕೂ ಬೇರೆ ಬೇರೆ ಯಾಗಿಯೇ ಇರಬೇಕೆ? ಇಲ್ಲವೇ? ಇವು ಇಲ್ಲಿನ **ಸಂಶಯ.**

**ಪೂರ್ವಪಕ್ಷ:** ಊಟ ಮಾಡಿದ ಪಾತ್ರೆಯು (ಎಲೆಯು) ನಿರಿಷ್ಟಕ (ದುಷ್ಟ)ವಾಗು ವಂತೆ ದೇಶಾದಿಗಳೂ ನಿರಿಷ್ಟಕಗಳಾಗುತ್ತವೆ. ಆದುದರಿಂದ ಪ್ರಯೋಗಾಂತರಕ್ಕೆ ಬೇರೆ ಬೇರೆಯಾಗಿ ಅನ್ಯದೇಶಾದಿಗಳನ್ನೇ ಉಪಯೋಗಿಸಿಕೊಳ್ಳಬೇಕು.

ಇಲ್ಲಿಯ **ಸಿದ್ಧಾಂತವು** ಹೀಗಿದೆ : ಊಟ ಮಾಡಿದ ಎಲೆಯನ್ನು ಎಸೆಯುತ್ತಾರೆ. ಉಟ್ಟ ಬಟ್ಟೆಯನ್ನು ಒಗೆದು ಉಪಯೋಗಿಸುತ್ತಾರೆ. ಈ ವಿಷಯದಲ್ಲಿ ಶಿಷ್ಟರ ಆಚರಣೆಯೇ ಪ್ರಮಾಣ. ಆದುದರಿಂದ ದೇಶಾದಿಗಳು ಬೇರೆಯೇ ಆಗಬೇಕಾಗಿಲ್ಲ.

### * ಪಾತ್ರಗಳು ಐಚ್ಛಿಕವೇ ? [ಜೈ. ಸೂ. 11. 3. ]

ದೇಶ, ಋತ್ವಿಜರು, ಪಾತ್ರಗಳು ಬೇರೆಯಾಗಬೇಕಾಗಿಲ್ಲ. ಐಚ್ಛಿಕವೆಂದು ಸಿದ್ಧವಾದ ಮೇಲೆ ದೇಶ, ಋತ್ವಿಜರಂತೆ ಜುಹೂ ಮುಂತಾದ ಪಾತ್ರಗಳೂ ಅನಿಯತವೇ ? ನಿಯತವೇ? [ಹಿಂದಿನ ಪ್ರಯೋಗಗಳ ಪಾತ್ರಗಳೇ ಆಗಿರಬೇಕೇ ?] ಎಂಬ **ಸಂಶಯ.**

ದೇಶವೂ, ಋತ್ವಿಜರೂ ಎಂದೆಂದೂ ಹಿಂದಿನವರೇ ಆಗಿರಲು ಸಾಧ್ಯವಿಲ್ಲ. ಕಾರಣಾಂತರದಿಂದ ದೇಶವು ಬದಲಾಗಬಹುದು. ಋತ್ವಿಜರೂ ರೋಗಾದಿಗ್ರಸ್ತರಾಗ

ಬಹುದು. ಅವರಂತೆಯೇ ಜುಹ್ವಾದಿಪಾತ್ರಗಳೂ ಸಹ ಅನಿಯತ. ಹಿಂದಿನವುಗಳೇ ಆಗಿರಬೇಕೆಂಬ ನಿಯಮವಿಲ್ಲ. ಇದು ಇಲ್ಲಿನ **ಪೂರ್ವಪಕ್ಷ.**

ಇಲ್ಲಿಯ ಸಿದ್ಧಾಂತವು ಹೀಗಿದೆ. **'ಆಹಿತಾಗ್ನಿಮಗ್ನಿಭಿರ್ದಹಂತಿ ಯಜ್ಞಪಾತ್ರೈಶ್ಚ [ಬೌ. ಪಿತೃಮೇಧ 1.10]** ಎಂದು ಯಜ್ಞಪಾತ್ರಗಳಿಗೆ ಅಂತ್ಯೇಷ್ಟಿಯಲ್ಲಿ ಪ್ರತಿಪತ್ತಿಯನ್ನು ಹೇಳಿರುತ್ತಾರೆ. ಆದುದರಿಂದ ಯಾಗಗಳ ಮೊದಲನೆಯ ಪ್ರಯೋಗದಿಂದ ಕೊನೆಯ ವರೆಗೂ ಪಾತ್ರಗಳು ತಂತ್ರವೇ/ಅಭಿನ್ನವೇ. **[ಅನೇಕೋದ್ದೇಶೇನ ಸಕೃದನುಷ್ಠಾನಂ ತಂತ್ರಮ್].**

## 4. ಪಾತ್ರಗಳ ಧಾರಣ ಯಾವಾಗ ? [ಜೈ. ಸೂ. 11.3]

**'ಪರ್ಣಮಯೀ ಜುಹೂರ್ಭವತಿ'** ಮೊದಲಾದ ವಾಕ್ಯಗಳು ನಿರ್ದಿಷ್ಟವಾದ ಒಂದು ಯಾಗದ 'ಪ್ರಕರಣದಲ್ಲಿರದೆ ಅನಾರಭ್ಯಾಧೀತಗಳಾಗಿವೆ. ಅನಾರಭ್ಯಾಧೀತವಾದ ವಿಧಿಗಳು ಪ್ರಕೃತಿಗಾಮಿಗಳಾದುದರಿಂದ ಪಾತ್ರಗಳನ್ನು ಯಾವ ಪ್ರಯೋಗವನ್ನು ಮೊದಲು ಮಾಡಿಕೊಂಡು ಧಾರಣ ಮಾಡಬೇಕು? ಇದು ಇಲ್ಲಿನ **ಸಂಶಯ.**

ಇಷ್ಟಿಗಳಿಗೆ ದರ್ಶ-ಪೂರ್ಣಮಾಸಗಳೇ ಪ್ರಕೃತಿಗಳು. ಅನಾರಭ್ಯಾಧೀತವಾದವುಗಳು ಪ್ರಕೃತಿಗಾಮಿಗಳು. ಆದುದರಿಂದ ಪ್ರಥಮದರ್ಶ - ಪೂರ್ಣಮಾಸಪ್ರಯೋಗವನ್ನು ಆರಂಭಿಸಿ ಪಾತ್ರಧಾರಣ ಮಾಡಬೇಕು. ಇದು ಇಲ್ಲಿನ **ಪೂರ್ವಪಕ್ಷ.**

ಇಲ್ಲಿಯ **ಸಿದ್ಧಾಂತ** ಹೀಗಿದೆ : ಮೊದಲು ಆಧಾನವನ್ನು ಮಾಡಿ ಅಗ್ನಿಗಳನ್ನು ಸಿದ್ಧಪಡಿಸಿಕೊಳ್ಳಬೇಕು. ಆಧಾನಕ್ಕೆ ಅಂಗವಾಗಿ ಪವಮಾನೇಷ್ಟಿಗಳಿವೆ. ಅವುಗಳಿಗೆ ಜುಹೂ ಮುಂತಾದ ಪಾತ್ರಗಳು ಬೇಕಾಗಿವೆ. ಆಧಾನಕ್ಕೂ ದರ್ಶ-ಪೂರ್ಣಮಾಸಗಳಿಗೂ ಮಧ್ಯದಲ್ಲಿಯೇ ಆಹಿತಾಗ್ನಿಯ ಮರಣವು ಸಂಭವಿಸಿದರೆ **'ದಹಂತಿ ಯಜ್ಞಪಾತ್ರೈಶ್ಚ'** ಎಂಬ ವಿಧಿಗೆ ಲೋಪ ಬರುತ್ತದೆ. ಆದುದರಿಂದ ಆಧಾನಾದಿಯಾಗಿಯೇ ಪಾತ್ರಗಳನ್ನು ಕೊನೆಯವರೆಗೂ ಇಟ್ಟುಕೊಳ್ಳಬೇಕು.

---

## ॥ ನವಮೋಽನುವಾಕಃ ॥

ಪ್ರಜಾಪತಿರ್ಯಜ್ಞಾನಸೃಜತಾಗ್ನಿಹೋತ್ರಂ
ಚಾಗ್ನಿಷ್ಟೋಮಂ ಚ ಪೌರ್ಣಮಾಸೀಂ ಚೋಕ್ಥ್ಯಂ

---

**ಪ್ರಜಾಪತಿರಿತಿ ಪ್ರಜಾ-ಪತಿಃ। ಯಜ್ಞಾನ್। ಅಸೃಜತ। ಅಗ್ನಿಹೋತ್ರಮಿತ್ಯಗ್ನಿ- ಹೋತ್ರಮ್। ಚ। ಅಗ್ನಿಷ್ಟೋಮಮಿತ್ಯಗ್ನಿ-ಸ್ತೋಮಮ್। ಚ। ಪೌರ್ಣಮಾಸೀಮಿತಿ ಪೌರ್ಣ-ಮಾಸೀಮ್। ಚ । ಉಕ್ಥ್ಯಮ್ ।**

---

ಎಂಟನೆಯ ಅನುವಾಕದಲ್ಲಿ ಯಜ್ಞಾಯುಧಗಳ ಸಂಭರಣವನ್ನು ಹೇಳಲಾಯಿತು. ಈ ಒಂಬತ್ತನೆಯ ಅನುವಾಕದಲ್ಲಿ ದ್ವಾದಶದ್ವಂದ್ವಸಂಪತ್ತಿಯನ್ನು ಹೇಳಲಾಗುತ್ತದೆ. ದರ್ಶ-ಪೂರ್ಣಮಾಸಗಳು ಮಹಾಫಲಪ್ರದಗಳೆಂದು ಪ್ರಶಂಸೆಯು ಈ ಅನುವಾಕದಲ್ಲಿದೆ.

---

### ಅಗ್ನಿಹೋತ್ರಾದಿಗಳಿಗೆ ಇರುವ ಸಾಮ್ಯ

| | |
|---|---|
| ಪ್ರಜಾಪತಿಃ ಯಜ್ಞಾನ್ ಅಸೃಜತ | ಪ್ರಜಾಪತಿಬ್ರಹ್ಮನು ಅಗ್ನಿಹೋತ್ರಾದಿ ಯಜ್ಞಗಳನ್ನು ಸೃಷ್ಟಿಸಿದನು. |
| ಅಗ್ನಿಹೋತ್ರಮ್ ಚ ಅಗ್ನಿಷ್ಟೋಮಮ್ ಚ | ಅಗ್ನಿಹೋತ್ರ ಮತ್ತು ಅಗ್ನಿಷ್ಟೋಮಗಳನ್ನೂ, |
| ಪೌರ್ಣಮಾಸೀಮ್ ಚ ಉಕ್ಥ್ಯಮ್ ಚ | ಪೂರ್ಣಮಾಸ ಮತ್ತು ಉಕ್ಥ್ಯಯಾಗಗಳನ್ನೂ, |

---

**ದರ್ಶಪೂರ್ಣಮಾಸಪ್ರಶಂಸೆ: ತಾತ್ಪರ್ಯ:** ಇದು ಪ್ರಶಂಸಾರ್ಥವಾದ. ಪ್ರಜಾಪತಿ ಬ್ರಹ್ಮನು ಅಗ್ನಿಹೋತ್ರಾದಿಯಜ್ಞಗಳನ್ನು ಸೃಜಿಸಿದನು. ಅಗ್ನಿಹೋತ್ರ-ಅಗ್ನಿಷ್ಟೋಮಗಳನ್ನೂ, ಪೂರ್ಣಮಾಸ-ಉಕ್ಥ್ಯಗಳನ್ನೂ,

ಚಾಮಾವಾಸ್ಯಾಂ ಚಾತಿರಾತ್ರಂ ಚ ತಾನುದಮಿಮೀತ
ಯಾವದಗ್ನಿಹೋತ್ರಮಾಸೀತ್ತಾವಾನಗ್ನಿಷ್ಟೋಮೋ
ಯಾವತೀ ಪೌರ್ಣಮಾಸೀ ತಾವಾನುಕ್ಥ್ಯೋ
ಯಾವತ್ಯಮಾವಾಸ್ಯಾ ತಾವಾನತಿರಾತ್ರೋ

---

ಚ । ಅಮಾವಾಸ್ಯಾಮಿತ್ಯಮಾ-ವಾಸ್ಯಾಮ್। ಚ । ಅತಿರಾತ್ರಮಿತ್ಯತಿ-ರಾತ್ರಮ್। ಚ । ತಾನ್ । ಉದಿತಿ । ಅಮಿಮೀತ । ಯಾವತ್ । ಅಗ್ನಿಹೋತ್ರಮಿತ್ಯಗ್ನಿ-ಹೋತ್ರಮ್। ಆಸೀತ್ । ತಾವಾನ್ । ಅಗ್ನಿಷ್ಟೋಮ ಇತ್ಯಗ್ನಿ-ಸ್ತೋಮಃ । ಯಾವತೀ । ಪೌರ್ಣಮಾಸೀತಿ ಪೌರ್ಣ-ಮಾಸೀ । ತಾವಾನ್। ಉಕ್ಥ್ಯಃ। ಯಾವತೀ । ಅಮಾವಾಸ್ಯೇತ್ಯಮಾ-ವಾಸ್ಯಾ । ತಾವಾನ್। ಅತಿರಾತ್ರ ಇತ್ಯತಿ-ರಾತ್ರಃ ।

---

| | |
|---|---|
| ಅಮಾವಾಸ್ಯಾಮ್ ಚ ಅತಿರಾತ್ರಮ್ ಚ [ಅಸೃಜತ] | ದರ್ಶ ಮತ್ತು ಅತಿರಾತ್ರಯಾಗಗಳನ್ನೂ ಸೃಷ್ಟಿಸಿದನು. |
| ತಾನ್ ಉದಮಿಮೀತ | ಅವುಗಳನ್ನು ಪರಸ್ಪರವಾಗಿ ಹೋಲಿಸಿದನು. |
| ಯಾವತ್ ಅಗ್ನಿಹೋತ್ರಮ್ ಆಸೀತ್, ತಾವಾನ್ ಅಗ್ನಿಷ್ಟೋಮಃ | ಅಗ್ನಿಹೋತ್ರವು ಎಷ್ಟು ಫಲದಾಯಕವೋ ಅಗ್ನಿಷ್ಟೋಮವೂ ಅಷ್ಟೇ ಫಲದಾಯಕವಾಯಿತು. |
| ಯಾವತೀ ಪೌರ್ಣಮಾಸೀ ತಾವಾನ್ ಉಕ್ಥ್ಯಃ | ಪೌರ್ಣಮಾಸದಷ್ಟೇ ಉಕ್ಥ್ಯವು ಫಲದಾಯಕವಾಯಿತು. |
| ಯಾವತೀ ಅಮಾವಾಸ್ಯಾ ತಾವಾನ್ ಅತಿರಾತ್ರಃ | ದರ್ಶವು ಎಷ್ಟು ಫಲದಾಯಕವೋ ಅತಿರಾತ್ರವು ಅಷ್ಟೇ ಫಲದಾಯಕವಾಯಿತು. |

---

ದರ್ಶ-ಅತಿರಾತ್ರಗಳನ್ನೂ ಪರಸ್ಪರ ಹೋಲಿಸಿದನು. ಅಗ್ನಿಹೋತ್ರದಷ್ಟೇ ಅಗ್ನಿಷ್ಟೋಮವೂ, ಪೂರ್ಣಮಾಸದಷ್ಟೇ ಉಕ್ಥ್ಯವೂ, ದರ್ಶದಷ್ಟೇ ಅತಿರಾತ್ರವೂ ಫಲದಾಯಕವೆಂದು ಹೋಲಿಸಿ ನಿಶ್ಚಯಿಸಿದನು.

ಯ ಏವಂ ವಿದ್ವಾನಗ್ನಿಹೋತ್ರಂ ಜುಹೋತಿ ಯಾವದಗ್ನಿಷ್ಟೋ
ಮೇನೋಪಾಪ್ನೋತಿ ತಾವದುಪಾಪ್ನೋತಿ ಯ ಏವಂ
ವಿದ್ವಾನ್ಪೌರ್ಣಮಾಸೀಂ ಯಜತೇ ಯಾವದುಕ್ಥ್ಯೇನೋ
ಪಾಪ್ನೋತಿ [ಯಾವದುಕ್ಥ್ಯೇನೋಪಾಪ್ನೋತಿ[೧]]

---

ಯಃ। ಏವಮ್। ವಿದ್ವಾನ್। ಅಗ್ನಿಹೋತ್ರಮಿತ್ಯಗ್ನಿ-ಹೋತ್ರಮ್। ಜುಹೋತಿ। ಯಾವತ್। ಅಗ್ನಿಷ್ಟೋಮೇತ್ಯಗ್ನಿ-ಸ್ತೋಮೇನ । ಉಪಾಪ್ನೋತೀತ್ಯುಪ-ಆಪ್ನೋತಿ । ತಾವತ್ । ಉಪೇತಿ। ಆಪ್ನೋತಿ । ಯಃ । ಏವಮ್ । ವಿದ್ವಾನ್ । ಪೌರ್ಣಮಾಸೀಮಿತಿ ಪೌರ್ಣ-ಮಾಸೀಮ್ । ಯಜತೇ । ಯಾವತ್ । ಉಕ್ಥ್ಯೇನ । ಉಪಾಪ್ನೋತೀತ್ಯುಪ-ಆಪ್ನೋತಿ।

---

**ಅಗ್ನಿಹೋತ್ರಾದಿಗಳನ್ನು ಅಗ್ನಿಷ್ಟೋಮಾದಿಗಳಂತೆ ಅರಿಯುವುದರ ಪ್ರಶಂಸೆ**

| | |
|---|---|
| ಯಃ ಏವಮ್ ವಿದ್ವಾನ್ | ಯಾವನು ಹೀಗೆ ತಿಳಿದವನಾಗಿ ಅಗ್ನಿ |
| ಅಗ್ನಿಹೋತ್ರಮ್ ಜುಹೋತಿ | ಹೋತ್ರವನ್ನು ಮಾಡುತ್ತಾನೆಯೋ |
| ಯಾವತ್ ಅಗ್ನಿಷ್ಟೋಮೇನ | [ಅವನು] ಅಗ್ನಿಷ್ಟೋಮದಿಂದ ಬರು |
| ಉಪಾಪ್ನೋತಿ ತಾವತ್ ಉಪಾಪ್ನೋತಿ | ವಷ್ಟು ಫಲವನ್ನು ಹೊಂದುತ್ತಾನೆ. |
| ಯಃ ಏವಮ್ ವಿದ್ವಾನ್ | ಯಾವನು ಹೀಗೆ ತಿಳಿದವನಾಗಿ ಪೂರ್ಣ |
| ಪೌರ್ಣಮಾಸೀಮ್ ಯಜತೇ | ಮಾಸಯಾಗವನ್ನು ಮಾಡುತ್ತಾನೆಯೋ [ಅವನು] |
| ಯಾವತ್ ಉಕ್ಥ್ಯೇನ ಉಪಾಪ್ನೋತಿ | ಉಕ್ಥ್ಯಯಾಗದಿಂದ ಬರುವಷ್ಟು |

---

ಯಾವನು ಹೀಗೆ ತಿಳಿದವನಾಗಿ ಅಗ್ನಿಹೋತ್ರ, ಪೂರ್ಣಮಾಸಯಾಗ ಮತ್ತು ದರ್ಶಯಾಗವನ್ನು ಅನುಷ್ಠಿಸುತ್ತಾನೆಯೋ ಅವನು ಅಗ್ನಿಷ್ಟೋಮ, ಉಕ್ಥ್ಯ ಮತ್ತು ಅತಿರಾತ್ರಯಾಗಗಳನ್ನು ಅನುಷ್ಠಿಸಿದ ಫಲವನ್ನು ಪಡೆಯುತ್ತಾನೆ.

**[ಭ.ಭಾ.ಭಾ.] ಅಗ್ನಿಷ್ಟೋಮ** = ಯಜ್ಞಾಯಜ್ಞೀಯವೆಂಬ ಸಾಮವು ಅಗ್ನಿಷ್ಟೋಮವು.

ತಾವದುಪಾಪ್ನೋತಿ ಯ ಏವಂ ವಿದ್ವಾನಮಾವಾಸ್ಯಾಂ ಯಜತೇ ಯಾವದತಿರಾತ್ರೇಣೋಪಾಪ್ನೋತಿ ತಾವದುಪಾಪ್ನೋತಿ ಪರಮೇಷ್ಠಿನೋ ವಾ ಏಷ ಯಜ್ಞೋಽಗ್ರ ಆಸೀತ್ತೇನ

---

ತಾವತ್ । ಉಪೇತಿ । ಆಪ್ನೋತಿ । ಯಃ । ಏವಮ್ । ವಿದ್ವಾನ್ । ಅಮಾವಾಸ್ಯಾಮಿತ್ಯಮಾ-ವಾಸ್ಯಾಮ್ । ಯಜತೇ । ಯಾವತ್ । ಅತಿರಾತ್ರೇಣೇತ್ಯತಿ-ರಾತ್ರೇಣ । ಉಪಾಪ್ನೋತೀ-ತ್ಯುಪ-ಆಪ್ನೋತಿ। ತಾವತ್ । ಉಪೇತಿ । ಆಪ್ನೋತಿ। ಪರಮೇಷ್ಠಿನಃ । ವೈ । ಏಷಃ। ಯಜ್ಞಃ । ಅಗ್ರೇ । ಆಸೀತ್ । ತೇನ ।

---

| | |
|---|---|
| ತಾವತ್ ಉಪಾಪ್ನೋತಿ ಯಃ ಏವಮ್ ವಿದ್ವಾನ್ ಅಮಾವಾಸ್ಯಾಮ್ ಯಜತೇ ಯಾವತ್ ಅತಿರಾತ್ರೇಣ ಉಪಾಪ್ನೋತಿ ತಾವತ್ ಉಪಾಪ್ನೋತಿ | ಫಲವನ್ನು ಪಡೆಯುತ್ತಾನೆ. ಹೀಗೆ ತಿಳಿದ ಯಾವ ಯಜಮಾನನು ದರ್ಶಯಾಗವನ್ನು ಮಾಡುತ್ತಾನೆಯೋ, ಅವನು ಅತಿರಾತ್ರಯಾಗದಿಂದ ಎಷ್ಟು ಫಲವನ್ನು ಪಡೆಯಬಹುದೋ ಅಷ್ಟು ಫಲವನ್ನು ಪಡೆಯುತ್ತಾನೆ. |

**ಇನ್ನೊಂದು ಬಗೆಯ ದರ್ಶ-ಪೂರ್ಣಮಾಸದ ಪ್ರಶಂಸೆ**

| | |
|---|---|
| ಪರಮೇಷ್ಠಿನಃ ವೈ ಏಷಃ ಯಜ್ಞಃ ಅಗ್ರೇ ಆಸೀತ್ | ಈ ದರ್ಶ-ಪೂರ್ಣಮಾಸ ಯಜ್ಞವು ಪೂರ್ವಕಲ್ಪದಲ್ಲಿ ಪರಮೇಷ್ಠಿಯಾದ ಚತುರ್ಮುಖಬ್ರಹ್ಮನದಾಗಿದ್ದಿತು. |
| ತೇನ | ಆ ಯಾಗದಿಂದ |

---

ಇದೇ ಕೊನೆಯಲ್ಲಿರುವ ಹಾಗೂ ಪ್ರಧಾನವಾಗಿರುವ ಸ್ತೋತ್ರವುಳ್ಳ ಸೋಮಯಾಗವು ಅಗ್ನಿಷ್ಟೋಮ. ಇದರಲ್ಲಿ **12** ಸ್ತೋತ್ರಗಳಿವೆ. **ಉಕ್ಥ್ಯ** = ಅಗ್ನಿಷ್ಟೋಮದ ವಿಕೃತಿಯಾದುದು. ಕೊನೆಯಲ್ಲಿ ಮೂರು ಹೆಚ್ಚು ಉಕ್ಥ್ಯಸ್ತೋತ್ರಗಳನ್ನು ಹೊಂದಿರುವ ಸೋಮಯಾಗ. **ಅತಿರಾತ್ರ** = ರಾತ್ರಿಪರ್ಯಾಯಸ್ತೋತ್ರಗಳನ್ನು ಹೊಂದಿರುವ, ಅಗ್ನಿಷ್ಟೋಮವಿಕೃತಿಯಾದ **29** ಸ್ತೋತ್ರಗಳನ್ನು ಹೊಂದಿರುವ ಸೋಮಯಾಗ].

ಅಗ್ನಿಷ್ಟೋಮಾದಿಗಳು ಬಹುದ್ರವ್ಯಸಾಧ್ಯವಾದ ಯಾಗಗಳು. ಅಗ್ನಿಹೋತ್ರಾದಿಗಳು ಅಲ್ಪದ್ರವ್ಯಸಾಧ್ಯವಾದವುಗಳು. ಇದು ದರ್ಶ-ಪೂರ್ಣಮಾಸಪ್ರಕರಣ

ಸ ಪರಮಾಂ ಕಾಷ್ಠಾಮಗಚ್ಛತ್ತೇನ ಪ್ರಜಾಪತಿಂ ನಿರವಾಸಾ
ಯಯತ್ತೇನ ಪ್ರಜಾಪತಿಃ ಪರಮಾಂ
ಕಾಷ್ಠಾಮಗಚ್ಛತ್ತೇನೇಂದ್ರಂ

---

ಸಃ । ಪರಮಾಮ್ । ಕಾಷ್ಠಾಮ್ । ಅಗಚ್ಛತ್ । ತೇನ । ಪ್ರಜಾಪತಿಮಿತಿ ಪ್ರಜಾ-ಪತಿಮ್ । ನಿರವಾಸಾಯಯದಿತಿ ನಿಃ-ಅವಾಸಾಯಯತ್। ತೇನ। ಪ್ರಜಾಪತಿರಿತಿ ಪ್ರಜಾ-ಪತಿಃ । ಪರಮಾಮ್ । ಕಾಷ್ಠಾಮ್ । ಅಗಚ್ಛತ್ । ತೇನ । ಇಂದ್ರಮ್ ।

---

| | |
|---|---|
| ಸಃ ಪರಮಾಮ್ ಕಾಷ್ಠಾಮ್ ಅಗಚ್ಛತ್ | ಆತನು [ಈ ಕಲ್ಪದಲ್ಲಿ] ಈ ಪರಮೇಷ್ಠಿ ಪದವಿಯೆಂಬ ಶ್ರೇಷ್ಠಸ್ಥಾನವನ್ನು ಪಡೆದನು. |
| ತೇನ ಪ್ರಜಾಪತಿಮ್ ನಿರವಾಸಾಯಯತ್ | [ಪರಮೇಷ್ಠಿಯು] ಆ ಯಜ್ಞದಿಂದ ದಕ್ಷಾದಿ ಪ್ರಜಾಪತಿಯನ್ನು [ಪ್ರಜಾಪತಿಗಳನ್ನು] ಬೇರೆ ಯವರಿಗಿಂತಲೂ ಶ್ರೇಷ್ಠರನ್ನಾಗಿ ಮಾಡಿದನು/ ಯಾಗ ಮಾಡಲು ಪ್ರೇರಿಸಿದನು. |
| ತೇನ ಪ್ರಜಾಪತಿಃ ಪರಮಾಮ್ ಕಾಷ್ಠಾಮ್ ಅಗಚ್ಛತ್ | ಈ ಯಜ್ಞದಿಂದ (ದಕ್ಷಾದಿ) ಪ್ರಜಾಪತಿಯು ಶ್ರೇಷ್ಠವಾದ ಪದವಿಯನ್ನು ಪಡೆದನು. |
| ತೇನ ಇಂದ್ರಮ್ | [ಪ್ರಜಾಪತಿಯು] ಆ ಯಾಗದಿಂದ ಇಂದ್ರನನ್ನು |

---

ವಾದುದರಿಂದ ಇಲ್ಲಿ ದರ್ಶ-ಪೂರ್ಣಮಾಸಪ್ರಶಂಸೆಯು ಪ್ರಧಾನವಾದುದು. ಅಗ್ನಿಹೋತ್ರದ ಪ್ರಶಂಸೆಯು ಪ್ರಾಸಂಗಿಕವಾಗಿ ಬಂದಿದೆ.

ಅಗ್ನಿಹೋತ್ರಾದಿಗಳು ಅಗ್ನಿಷ್ಟೋಮಾದಿಗಳಿಗೆ ಸಮಾನವೆಂದು ತಿಳಿದು ಅವುಗಳನ್ನು ಅನುಷ್ಠಿಸಿದರೆ, ಅಗ್ನಿಷ್ಟೋಮಾದಿಗಳ ಅನುಷ್ಠಾನದ ಫಲವೇ ದೊರೆಯುತ್ತದೆ ಎಂಬ ವಿಧಿಯನ್ನು ಉನ್ನಯನ ಮಾಡಬೇಕು.

ತಂದೆಯು ಕಿರಿಯ ಮಗನಲ್ಲಿ ಪ್ರೀತಿಯಿಡುವಂತೆ ಪ್ರಜಾಪತಿಯು ಈ ಅಲ್ಪದ್ರವ್ಯ ಸಾಧ್ಯವಾದ ಯಾಗಗಳಲ್ಲಿ ಪ್ರೀತಿ ಇಟ್ಟು ಅವುಗಳನ್ನು ಮಹಾಯಾಗಗಳಿಗೆ ಸಮಾನ

ನಿರವಾಸಾಯಯತ್ತೇನೇಂದ್ರಃ ಪರಮಾಂ ಕಾಷ್ಠಾಮಗಚ್ಛತ್ತೇ
ನಾಗ್ನೀಷೋಮೌ ನಿರವಾಸಾಯಯತ್ತೇನಾಗ್ನೀಷೋಮೌ
ಪರಮಾಂ ಕಾಷ್ಠಾಮಗಚ್ಛತಾಂ ಯ [ಯಃ (೨)]

---

ನಿರವಾಸಾಯಯದಿತಿ ನಿಃ-ಅವಾಸಾಯಯತ್ । ತೇನ । ಇಂದ್ರಃ । ಪರಮಾಮ್ । ಕಾಷ್ಠಾಮ್ । ಅಗಚ್ಛತ್ । ತೇನ । ಅಗ್ನೀಷೋಮಾವಿತ್ಯಗ್ನೀ-ಸೋಮೌ । ನಿರವಾಸಾಯ ಯದಿತಿ ನಿಃ–ಅವಾಸಾಯಯತ್। ತೇನ । ಅಗ್ನೀಷೋಮಾವಿತ್ಯಗ್ನೀ–ಸೋಮೌ । ಪರ ಮಾಮ್ । ಕಾಷ್ಠಾಮ್ । ಅಗಚ್ಛತಾಮ್ । ಯಃ [೨]

---

| | |
|---|---|
| ನಿರವಾಸಾಯಯತ್ | ಇತರರಿಗಿಂತಲೂ ಶ್ರೇಷ್ಠನನ್ನಾಗಿ ಮಾಡಿದನು. |
| ತೇನ ಇಂದ್ರಃ ಪರಮಾಮ್ ಕಾಷ್ಠಾಮ್ ಅಗಚ್ಛತ್ | ಆ ಯಾಗದ ಅನುಷ್ಠಾನದಿಂದ ಇಂದ್ರನು ಶ್ರೇಷ್ಠವಾದ ಇಂದ್ರಪದವಿಯನ್ನು ಪಡೆದನು. |
| ತೇನ ಅಗ್ನೀಷೋಮೌ ನಿರವಾಸಾಯಯತ್ | ಆ ದರ್ಶ–ಪೂರ್ಣಮಾಸಯಾಗದಿಂದ [ಇಂದ್ರನು] ಅಗ್ನೀಷೋಮರನ್ನು ಪ್ರೇರಿಸಿದನು/ ಸಂತೋಷಪಡಿಸಿದನು. |
| ತೇನ ಅಗ್ನೀಷೋಮೌ ಪರಮಾಮ್ ಕಾಷ್ಠಾಮ್ ಅಗಚ್ಛತಾಮ್ | ಆ ದರ್ಶ-ಪೂರ್ಣಮಾಸಾನುಷ್ಠಾನದಿಂದ ಅಗ್ನೀಷೋಮರು ಶ್ರೇಷ್ಠಪದವಿಯನ್ನು ಹೊಂದಿದರು. |

---

ಮಾಡಿದನು. ಇದು ಪ್ರಶಂಸಾರ್ಥವಾಗಿದೆ. ಇಲ್ಲಿ ಎರಡು ಪಕ್ಷಗಳಿವೆ: ಈ ಅರ್ಥವಾದದಿಂದ 'ಅಗ್ನಿಹೋತ್ರಾದಿಗಳನ್ನೇ ಅಗ್ನಿಷ್ಟೋಮಾದಿಗಳಿಗೆ ಸಮಾನಗಳನ್ನಾಗಿ ಮಾಡಬೇಕೆಂಬ ವಿಧಿಯನ್ನು ಉನ್ನಯನ ಮಾಡಬೇಕೆಂಬುದು ಮೊದಲನೆಯ ಪಕ್ಷ. ಉಪಾಸನೆಗಳಲ್ಲಿ ಭಾವಿಸುವಂತೆಯೂ, ಶಾಲಗ್ರಾಮಾದಿಗಳನ್ನು ವಿಷ್ಣು ಮೊದಲಾದ ದೇವತೆಗಳಂತೆ ಭಾವಿಸುವಂತೆಯೂ, ಮಾನಸಿಕಪೂಜೆಯಲ್ಲಿ 'ರತ್ನೈಃ ಕಲ್ಪಿತಮಾಸನಮ್' ಎಂದು ಮೊದಲಾಗಿ ಭಾವಿಸುವಂತೆಯೂ ಅಗ್ನಿಹೋತ್ರಾದಿಗಳನ್ನು ಅಗ್ನಿಷ್ಟೋಮಾದಿ ಗಳಂತೆ ಭಾವಿಸಿಕೊಳ್ಳಬೇಕು ಎಂಬುದು ಎರಡನೆಯ ಪಕ್ಷ.

ಏವಂ ವಿದ್ವಾನ್ದರ್ಶಪೂರ್ಣಮಾಸೌ ಯಜತೇ
ಪರಮಾಮೇವ ಕಾಷ್ಠಾಂ ಗಚ್ಛತಿ ಯೋ ವೈ ಪ್ರಜಾತೇನ

---

ಏವಮ್ । ವಿದ್ವಾನ್ । ದರ್ಶಪೂರ್ಣಮಾಸಾವಿತಿ ದರ್ಶ-ಪೂರ್ಣಮಾಸೌ । ಯಜತೇ।
ಪರಮಾಮ್ । ಏವ । ಕಾಷ್ಠಾಮ್ । ಗಚ್ಛತಿ । ಯಃ । ವೈ । ಪ್ರಜಾತೇನೇತಿ ಪ್ರ-ಜಾತೇನ।

---

| | |
|---|---|
| ಯಃ ಏವಮ್ ವಿದ್ವಾನ್ ದರ್ಶಪೂರ್ಣಮಾಸೌ ಯಜತೇ | ಹೀಗೆ ತಿಳಿದಿರುವ ಯಾವ ಯಜಮಾನನು ದರ್ಶ-ಪೂರ್ಣಮಾಸಯಾಗಗಳನ್ನು ಮಾಡುತ್ತಾನೆಯೋ, |
| ಪರಮಾಮ್ ಏವ ಕಾಷ್ಠಾಮ್ ಗಚ್ಛತಿ | ಅತ್ಯಂತಶ್ರೇಷ್ಠವಾದ ಪದವಿಯನ್ನೇ ಪಡೆಯುತ್ತಾನೆ. [ಚಿತ್ತಶಾಂತಿಸಂಪಾದನಪೂರ್ವಕವಾಗಿ ಆನಂದವನ್ನೇ ಪಡೆದು ಪುನರ್ಜನ್ಮವಿಲ್ಲದವನಾಗುತ್ತಾನೆ] |

**ಪ್ರಜಾತಯಜ್ಞಾನುಷ್ಠಾನ-ಅದರ ಫಲ**

| | |
|---|---|
| ಯಃ ವೈ ಪ್ರಜಾತೇನ | ಯಾವ ಯಜಮಾನನು ವಿಸ್ತೃತವಾದ |

---

ಅಗ್ನಿಹೋತ್ರವನ್ನು ಪ್ರತಿನಿತ್ಯವೂ ಮಾಡಬೇಕು. ದರ್ಶ-ಪೂರ್ಣಮಾಸಗಳನ್ನು ತಿಂಗಳಿಗೊಮ್ಮೆ ಮಾಡಬೇಕು. ಅಗ್ನಿಷ್ಟೋಮಾದಿಗಳನ್ನು ವರ್ಷಕ್ಕೊಮ್ಮೆ ಮಾಡಬೇಕು. ಹೀಗಿರುವುದರಿಂದ ಅಲ್ಪದ್ರವ್ಯಸಾಧ್ಯವಾದರೂ ಬಹುಪ್ರಯೋಗಾವೃತ್ತಿಗಳಾಗುವುದರಿಂದ ಅಗ್ನಿಹೋತ್ರಾದಿಗಳು ಅಗ್ನಿಷ್ಟೋಮಾದಿಗಳಿಗೆ ಸಮಾನವಾದವುಗಳು ಎಂದೂ ವಿವರಿಸಬಹುದು. ಇದು ಪ್ರಶಂಸಾರ್ಥವಾದವಾದುದರಿಂದ ಅಕ್ಷರಾರ್ಥಕ್ಕೆ ಪ್ರಾಶಸ್ತ್ಯವಿಲ್ಲ.

**ದರ್ಶಪೂರ್ಣಮಾಸದ ಪ್ರಶಂಸೆ: ತಾತ್ಪರ್ಯ:** ಈ ದರ್ಶ-ಪೂರ್ಣಮಾಸಯಾಗವು *ಪುರಾತನಕಲ್ಪದಲ್ಲಿ ಚತುರ್ಮುಖ ಬ್ರಹ್ಮನದಾಗಿದ್ದಿತು/ಸರ್ವದೇವತಾತ್ಮನಾದ ಪರಮಾತ್ಮನಾಗಿದ್ದಿತು. ಆತನು ಯಜಮಾನನಾಗಿ ಈ ಯಜ್ಞವನ್ನು ಈಶ್ವರಾರ್ಪಣ ಬುದ್ಧಿಯಿಂದ ಮಾಡಿದನು. ಇದರಿಂದ ಶ್ರೇಷ್ಠಪದವಿಯನ್ನು ಪಡೆದನು.

---

* ಕಲ್ಪಗಳು ಹಲವು. 'ಯಃ ಕಲ್ಪಃ ಸಃ ಕಲ್ಪಪೂರ್ವಃ' ಎಂದು ಕಲ್ಪಬಾಹುಳ್ಯವನ್ನು ಸಾಧಿಸುತ್ತಾರೆ. ಈಗ ನಡೆಯುತ್ತಿರುವುದು ಶ್ವೇತವರಾಹಕಲ್ಪ. ಇದು ಏಳನೆಯದು.

ಯಜ್ಞೇನ ಯಜತೇ ಪ್ರ ಪ್ರಜಯಾ ಪಶುಭಿರ್ಮಿಥುನೈರ್ಜಾ
ಯತೇ ದ್ವಾದಶ ಮಾಸಾಸ್ಸಂವತ್ಸರೋ ದ್ವಾದಶ ದ್ವಂದ್ವಾನಿ

---

ಯಜ್ಞೇನ । ಯಜತೇ । ಪ್ರೇತಿ । ಪ್ರಜಯೇತಿ ಪ್ರ-ಜಯಾ । ಪಶುಭಿರಿತಿ ಪಶು-ಭಿಃ।
ಮಿಥುನೈಃ । ಜಾಯತೇ । ದ್ವಾದಶ । ಮಾಸಾಃ । ಸಂವತ್ಸರ ಇತಿ ಸಮ್-ವತ್ಸರಃ ।
ದ್ವಾದಶ । ದ್ವಂದ್ವಾನೀತಿ ದ್ವಮ್-ದ್ವಾನಿ ।

---

| | |
|---|---|
| ಯಜ್ಞೇನ ಯಜತೇ | ದರ್ಶ-ಪೂರ್ಣಮಾಸಯಾಗವನ್ನು ಮಾಡುತ್ತಾನೆಯೋ [ಆ ಯಜಮಾನನು] |
| ಪ್ರ ಪ್ರಜಯಾ ಪಶುಭಿಃ ಮಿಥುನೈಃ ಜಾಯತೇ | ಪ್ರಜೆಯಿಂದಲೂ, ಪಶುಗಳಿಂದಲೂ ಸ್ತ್ರೀಪುರುಷಯುಗ್ಮದಿಂದಲೂ ವೃದ್ಧಿಯನ್ನು ಹೊಂದುತ್ತಾನೆ. [ವಿಸ್ತೃತನಾಗುತ್ತಾನೆ.] |

**ದ್ವಾದಶದ್ವಂದ್ವಸಂಪತ್ತಿವಿಧಿ/ಪ್ರಶಂಸೆ**

| | |
|---|---|
| ದ್ವಾದಶ ಮಾಸಾಃ ಸಂವತ್ಸರಃ | ಹನ್ನೆರಡು ಮಾಸಗಳು ಕೂಡಿ ಸಂವತ್ಸರವಾಗುತ್ತವೆ. |
| ದ್ವಾದಶ ದ್ವಂದ್ವಾನಿ | ಹನ್ನೆರಡು ಯುಗ್ಮಗಳು |

---

ಹಾಗೆಯೇ ದಕ್ಷಪ್ರಜಾಪತಿ [ಪ್ರಜಾಪತಿಗಳು] ಬ್ರಹ್ಮ, ಇಂದ್ರ, ಅಗ್ನೀಷೋಮ— ಇವರೂ ಉಪದೇಶಪರಂಪರೆಯಿಂದ ಈ ಯಾಗವನ್ನು ಮಾಡಿ ಅತ್ಯುನ್ನತ ಪದವಿಗಳನ್ನು ಪಡೆದರು. ಹೀಗೆ ತಿಳಿದ ಯಾವ ಯಜಮಾನನು ಈ ಯಾಗವನ್ನು ಮಾಡುತ್ತಾನೆಯೋ, ಅವನೂ ಶ್ರೇಷ್ಠಪದವಿಯನ್ನೇ ಪಡೆಯುತ್ತಾನೆ. ಪುನರ್ಜನ್ಮರಹಿತವಾದ ಮುಕ್ತಿಯನ್ನೇ ಪಡೆಯುತ್ತಾನೆ.

**ದ್ವಾದಶದ್ವಂದ್ವಸಂಪತ್ತಿ: ತಾತ್ಪರ್ಯ:-** ಹನ್ನೆರಡು ಮಾಸಗಳು ಕೂಡಿ ಸಂವತ್ಸರವಾಗುತ್ತವೆಯಷ್ಟೆ. ದರ್ಶ-ಪೂರ್ಣಮಾಸಯಾಗಗಳಿಗೆ ಸಂಬಂಧಿಸಿದ ಹನ್ನೆರಡು ಯುಗ್ಮಗಳು ದ್ವಾದಶಸಂಖ್ಯಾಸಾಮ್ಯದಿಂದ ವಿಸ್ತೃತವಾಗಿವೆ.

ದರ್ಶಪೂರ್ಣಮಾಸಯೋಸ್ತಾನಿ ಸಂಪಾದ್ಯಾನೀತ್ಯಾಹು

ರ್ವತ್ಸಂ ಚೋಪಾವಸೃಜತ್ಯುಖಾಂ ಚಾಧಿಶ್ರಯತ್ಯವ ಚ

ಹಂತಿ

---

ದರ್ಶಪೂರ್ಣಮಾಸಯೋರಿತಿ ದರ್ಶ-ಪೂರ್ಣಮಾಸಯೋಃ । ತಾನಿ । ಸಂಪಾದ್ಯಾನೀತಿ ಸಮ್-ಪಾದ್ಯಾನಿ । ಇತಿ । ಆಹುಃ । ವತ್ಸಮ್ । ಚ । ಉಪಾವಸೃಜತೀತ್ಯುಪ-ಅವಸೃಜತಿ। ಉಖಾಮ್ । ಚ । ಅಧೀತಿ । ಶ್ರಯತಿ । ಅವೇತಿ । ಚ । ಹಂತಿ ।

---

| | |
|---|---|
| ದರ್ಶಪೂರ್ಣಮಾಸಯೋಃ | ದರ್ಶ-ಪೂರ್ಣಮಾಸಗಳಿಗೆ ಸಂಬಂಧಿಸಿದವುಗಳು. |
| ತಾನಿ ಸಂಪಾದ್ಯಾನಿ ಇತಿ ಆಹುಃ | [ತಿಳಿದವರು] ಈ ಹನ್ನೆರಡು ದ್ವಂದ್ವಗಳು [ದರ್ಶ-ಪೂರ್ಣಮಾಸಯಾಗದಲ್ಲಿ] ಸಂಪಾದಿಸಲ್ಪಡಬೇಕೆಂದು ಹೇಳುತ್ತಾರೆ. |

**ದ್ವಾದಶದ್ವಂದ್ವವಿಧಿ**

| | |
|---|---|
| ವತ್ಸಂ ಚ ಉಪಾವಸೃಜತಿ | ಅಧ್ವರ್ಯುವು [ಅಯಕ್ಷ್ಮಾ ವಃ... ಎಂಬ ಮಂತ್ರದಿಂದ] ಕರುವನ್ನು ಹಾಲು ಕರೆಯಲು ಹಸುವಿನ ಬಳಿ ಬಿಡಬೇಕು. |
| ಉಖಾಮ್ ಚ ಅಧಿಶ್ರಯತಿ | [ಹಾಲನ್ನು ಕಾಯಿಸಲು] ಹಾಲಿನ ಮಡಕೆಯನ್ನು [ಮಾತರಿಶ್ವನೋ ಘರ್ಮಃ.. ಎಂಬ ಮಂತ್ರದಿಂದ ಗಾರ್ಹಪತ್ಯಾಗ್ನಿಯಲ್ಲಿ] ಇಡಬೇಕು. |
| ಅವ ಚ ಹಂತಿ | [ಅವ ರಕ್ಷಃ... ಎಂಬ ಶಾಖಾಂತರೀಯಮಂತ್ರದಿಂದ ಒರಳಿನಲ್ಲಿ ಹಾಕಿದ ಬತ್ತವನ್ನು] ಕುಟ್ಟಬೇಕು. |

---

**ದ್ವಾದಶದ್ವಂದ್ವ: ತಾತ್ಪರ್ಯ:-** ದರ್ಶ-ಪೂರ್ಣಮಾಸಯಾಗದಲ್ಲಿ ಹನ್ನೆರಡು ದ್ವಂದ್ವಗಳನ್ನು ಸಂಪಾದಿಸಬೇಕೆಂದು ತಿಳಿಸಲಾಗಿದೆ. ಅವುಗಳನ್ನು ಸಂಪಾದಿಸಿ ಯಾಗವನ್ನು

ದೃಷದೌ ಚ ಸಮಾಹಂತ್ಯಧಿ ಚ ವಪತೇ ಕಪಾಲಾನಿ ಚೋಪದಧಾತಿ ಪುರೋಡಾಶಂ ಚಾ [ಪುರೋಡಾಶಂ ಚ (೩) ಅಧಿ...]ಧಿಶ್ರಯತ್ಯಾಜ್ಯಂ ಚ

---

ದೃಷದೌ। ಚ । ಸಮಾಹಂತೀತಿ ಸಮ್-ಆಹಂತಿ । ಅಧೀತಿ । ಚ । ವಪತೇ । ಕಪಾಲಾನಿ। ಚ । ಉಪೇತಿ । ದಧಾತಿ । ಪುರೋಡಾಶಮ್ । ಚ (೩)। ಅಧಿಶ್ರಯತೀತ್ಯಧಿ-ಶ್ರಯತಿ। ಆಜ್ಯಮ್ । ಚ ।

---

| | |
|---|---|
| ದೃಷದೌ ಚ ಸಮಾಹಂತಿ | ['ಇಷಮಾವದ....' ಎಂಬ ಮಂತ್ರದಿಂದ] ದೃಷತ್* ಮತ್ತು *ಉಪಲಗಳನ್ನು [ಶಮ್ಯೆ ಯಿಂದ] ಜೋಡಿಸಬೇಕು.[ಬೀಸಬೇಕು] |
| ಅಧಿ ಚ ವಪತೇ | ['ದೇವಸ್ಯ ತ್ವಾ' ಎಂಬ ಮಂತ್ರದಿಂದ] ಬೀಸುವ ಕಲ್ಲಿನಲ್ಲಿ ಅಕ್ಕಿಯನ್ನು ಹಾಕಬೇಕು. |
| ಕಪಾಲಾನಿ ಚ ಉಪದಧಾತಿ | ['ಧ್ರುವಮಸಿ..' ಮೊದಲಾದ ಮಂತ್ರಗಳಿಂದ ಪುರೋಡಾಶಶ್ರಪಣಕ್ಕಾಗಿ ಕಪಾಲಗಳನ್ನು ಅಗ್ನಿಯಲ್ಲಿ ಇಡಬೇಕು. |
| ಪುರೋಡಾಶಮ್ ಚ ಅಧಿಶ್ರಯತಿ | [ಕಪಾಲಗಳಲ್ಲಿ 'ಘರ್ಮೋಽಸಿ' ಎಂಬ ಮಂತ್ರ ದಿಂದ] ಪುರೋಡಾಶವನ್ನು ಬೇಯಿಸಬೇಕು. |
| ಆಜ್ಯಮ್ ಚ [ಅಧಿಶ್ರಯತಿ] | ['ಅಗ್ನಿಸ್ತೇ ತೇಜಃ' ಎಂಬ ಮಂತ್ರದಿಂದ ಆಹವ ನೀಯಾಗ್ನಿಯಲ್ಲಿ] ತುಪ್ಪವನ್ನು ಕಾಯಿಸಬೇಕು. |

---

ಮಾಡುವವನು ವಿಸ್ತೃತವಾದ ಯಾಗವನ್ನು ಮಾಡಿದಂತಾಗಿ ಪ್ರಜೆ/ಪಶು/ಸ್ತ್ರೀ ಪುರುಷಪರಿವಾರಗಳ ಭಾಗ್ಯವನ್ನು ಪಡೆಯುತ್ತಾನೆ.

---

* ದೃಷತ್ = ಬೀಸುವ ಕಲ್ಲಿನಲ್ಲಿ ಕೆಳಗಿನದು ಅಥವಾ ಅರೆಯುವ ಕಲ್ಲು.

ಉಪಲಾ = ಮೇಲಿನ ಕಲ್ಲು ಅಥವಾ ಅರೆಯುವ ಗುಂಡು.

ಸ್ತಂಬಯಜುಶ್ಚ ಹರತ್ಯಭಿ ಚ ಗೃಹ್ಣಾತಿ ವೇದಿಂ ಚ
ಪರಿಗೃಹ್ಣಾತಿ ಪತ್ನೀಂ ಚ ಸಂ ನಹ್ಯತಿ ಪ್ರೋಕ್ಷಣೀಶ್ಚಾಸಾ

---

ಸ್ತಂಬಯಜುರಿತಿ ಸ್ತಂಬ-ಯಜುಃ। ಚ। ಹರತಿ । ಅಭೀತಿ । ಚ । ಗೃಹ್ಣಾತಿ । ವೇದಿಮ್। ಚ। ಪರಿಗೃಹ್ಣಾತೀತಿ ಪರಿ-ಗೃಹ್ಣಾತಿ। ಪತ್ನೀಮ್। ಚ । ಸಮಿತಿ । ನಹ್ಯತಿ । ಪ್ರೋಕ್ಷಣೀರಿತಿ ಪ್ರ-ಉಕ್ಷಣೀಃ। ಚ । ಆಸಾದಯತೀತ್ಯಾ-ಸಾದಯತಿ ।

---

| | |
|---|---|
| ಸ್ತಂಬಯಜುಃ ಚ ಹರತಿ | [ವೇದಿ ಮಾಡುವ ಪ್ರದೇಶದಲ್ಲಿರುವ] ಸ್ತಂಬ ಯಜುಸ್ಸನ್ನು [ಹುಲ್ಲುಗಳುಳ್ಳ ಹುಡಿಮಣ್ಣನ್ನು] ['ಪೃಥಿವಿ ದೇವಯಜನಿ' ಎಂಬ ಮಂತ್ರದಿಂದ] ತೆಗೆದುಹಾಕಬೇಕು. |
| ಅಭಿ ಚ ಗೃಹ್ಣಾತಿ | ['ಅರರುಸ್ತೇ' ಎಂಬ ಮಂತ್ರದಿಂದ ಆಗ್ನೀಧ್ರನು *ಉತ್ಕರಪ್ರದೇಶದಲ್ಲಿ ಹಾಕಿರುವ ಹುಲ್ಲಿನಿಂದ ಕೂಡಿದ ಧೂಳನ್ನು] ಬೊಗಸೆಯಿಂದ ತೆಗೆದು ಕೊಳ್ಳಬೇಕು. |
| ವೇದಿಮ್ ಚ ಪರಿಗೃಹ್ಣಾತಿ | ['ವಸವಸ್ತ್ವಾ' ಮೊದಲಾದ ಮಂತ್ರಗಳಿಂದ] ವೇದಿಪರಿಗ್ರಹವನ್ನು ಮಾಡಬೇಕು. [ಅಧ್ವರ್ಯುವು ಸ್ಫ್ಯದಿಂದ ರೇಖಾಕರಣ ಮಾಡಬೇಕು] |
| ಪತ್ನೀಮ್ ಚ ಸಂನಹ್ಯತಿ | ["ಆಶಾಸಾನಾ" ಎಂಬ ಮಂತ್ರದಿಂದ ಯೋಕ್ತ್ರವನ್ನು] ಪತ್ನಿಯ ಸೊಂಟಕ್ಕೆ ಕಟ್ಟಬೇಕು. |
| ಪ್ರೋಕ್ಷಣೀಃ ಚ ಆಸಾದಯತಿ | ['ಋತಸಧಸ್ಥ' ಎಂಬ ಶಾಖಾಂತರಮಂತ್ರದಿಂದ ಸ್ಫ್ಯದಿಂದ ಮಾಡಿದ ರೇಖೆಯಲ್ಲಿ] ಪ್ರೋಕ್ಷಣಿಗಳ ಆಸಾದನವನ್ನು ಮಾಡಬೇಕು. |

---

**ಉತ್ಕರ = ಕಸ ಮೊದಲಾದವುಗಳನ್ನು ಹಾಕುವ ಸ್ಥಳ.**

ದಯತ್ಯಾಜ್ಯಂ ಚೈತಾನಿ ವೈದ್ವಾದಶ ದ್ವಂದ್ವಾನಿ ದರ್ಶಪೂರ್ಣ
ಮಾಸಯೋಸ್ತಾನಿ ಯ ಏವಗ್ಂ ಸಂಪಾದ್ಯ ಯಜತೇ ಪ್ರಜಾತೇ
ನೈವ ಯಜ್ಞೇನ ಯಜತೇ

---

ಆಜ್ಯಮ್। ಚ । ಏತಾನಿ । ವೈ । ದ್ವಾದಶ । ದ್ವಂದ್ವಾನೀತಿ ದ್ವಮ್-ದ್ವಾನಿ । ದರ್ಶ ಪೂರ್ಣಮಾಸಯೋರಿತಿ ದರ್ಶ-ಪೂರ್ಣಮಾಸಯೋಃ । ತಾನಿ । ಯಃ । ಏವಮ್ । ಸಂಪಾದ್ಯೇತಿ ಸಮ್-ಪಾದ್ಯ। ಯಜತೇ। ಪ್ರಜಾತೇನೇತಿ ಪ್ರ-ಜಾತೇನ। ಏವ । ಯಜ್ಞೇನ ಯಜತೇ ।

---

| | |
|---|---|
| ಆಜ್ಯಮ್ ಚ [ಆಸಾದಯತಿ] | ['ಅಗ್ನೇರ್ಜಿಹ್ವಾಸಿ' ಎಂಬ ಮಂತ್ರದಿಂದ ಸ್ಫ್ಯದಿಂದ ಮಾಡಿದ ರೇಖೆಯಲ್ಲಿ] ತುಪ್ಪವನ್ನು ಆಸಾದನ ಮಾಡಬೇಕು. |
| ಏತಾನಿ ವೈ ದ್ವಾದಶ ದ್ವಂದ್ವಾನಿ | ಇವು ಹನ್ನೆರಡು ದ್ವಂದ್ವಗಳಾಗಿವೆಯಷ್ಟೆ. |

**ದ್ವಾದಶದ್ವಂದ್ವಸಂಪತ್ತಿಯ ಫಲಶ್ರುತಿ**

| | |
|---|---|
| ದರ್ಶಪೂರ್ಣಮಾಸಯೋಃ ತಾನಿ ಯಃ ಏವಮ್ ಸಂಪಾದ್ಯ ಯಜತೇ | ದರ್ಶಪೂರ್ಣಮಾಸಗಳ [ಆ ಹನ್ನೆರಡು* ದ್ವಂದ್ವಗಳನ್ನು] ಯಾವ ಯಜಮಾನನು ಹೀಗೆ ಸಂಪಾದಿಸಿ ಯಾಗ ಮಾಡುತ್ತಾನೆಯೋ [ಅವನು] |
| ಪ್ರಜಾತೇನ ಏವ ಯಜ್ಞೇನ ಯಜತೇ | ವಿಸ್ತೃತವಾದ ಯಾಗವನ್ನೇ ಮಾಡಿದವನಾಗುತ್ತಾನೆ. |

---

* 'ವತ್ಸಂ ಚೋಪಾವಸೃಜತಿ...' ಎಂಬಲ್ಲಿಂದ 'ಆಜ್ಯಂ ಚ' ಎಂಬಲ್ಲಿಯವರೆಗೆ ಸಂಖ್ಯೆಯು ಹದಿನಾಲ್ಕು ಆಗುತ್ತದೆ. ವತ್ಸ ಮತ್ತು ಗೋವುಗಳ ಸೇರುವಿಕೆಯು ಒಂದು ದ್ವಂದ್ವ. ಹೀಗೆಯೇ ಉಳಿದವುಗಳು. 'ಅಧಿಶ್ರಯತಿ' ಮತ್ತು 'ಆಸಾದಯತಿ' ಇವುಗಳನ್ನು ಒಂದಾಗಿ ಭಾವಿಸಿದರೆ ಹನ್ನೆರಡು ದ್ವಂದ್ವಗಳಾಗುತ್ತವೆ. ಅಥವಾ ಹಿಂದಿನ ಅನುವಾಕದಲ್ಲಿ ಬಂದಿರುವ ಹತ್ತು ಯಜ್ಞಾಯುಧಗಳನ್ನು ಐದು ಯಜ್ಞಾಯುಧದ್ವಂದ್ವಗಳೆಂದು ಪರಿಗಣಿಸಿ, ಇಲ್ಲಿಯ ಹದಿನಾಲ್ಕು ಕ್ರಿಯೆಗಳನ್ನು ಏಳು ಕ್ರಿಯಾದ್ವಂದ್ವಗಳೆಂದು ಪರಿಗಣಿಸಿದಾಗ ಒಟ್ಟು 'ದ್ವಾದಶ ದ್ವಂದ್ವ'ವಾಯಿತು.

ಪ್ರಪ್ರಜಯಾ ಪಶುಭಿರ್ಮಿಥುನೈರ್ಜಾಯತೇ ||೩೨-9||

[ಉಕ್ಥ್ಯೇನೋಪಾಪ್ನೋತ್ಯಗಚ್ಛತಾಂ ಯಃ ಪುರೋಡಾಶಂ ಚ

ಚತ್ವಾರಿಗ್ಂಶಚ್ಚ ||]

---

ಪ್ರೇತಿ| ಪ್ರಜಯೇತಿ ಪ್ರ-ಜಯಾ । ಪಶುಭಿರಿತಿ ಪಶು-ಭಿಃ । ಮಿಥುನೈಃ । ಜಾಯತೇ || ೬ ||

---

ಮಿಥುನೈಃ ಪ್ರಜಾಯತೇ — [ಯಜಮಾನನು] ಪುತ್ರಾದಿಪ್ರಜೆಯಿಂದಲೂ ಗವಾದಿಪಶುಗಳಿಂದಲೂ ಸ್ತ್ರೀಪುರುಷಾದಿ ಪರಿವಾರದಿಂದಲೂ ವಿಸ್ತಾರ ಹೊಂದಿದವನಾಗುತ್ತಾನೆ. ಹೀಗೆ ದ್ವಾದಶದ್ವಂದ್ವಸಂಪತ್ತಿಯು ಶ್ರೇಷ್ಠವಾಗಿದೆ.

## ಅನುವಾಕದ ವಿಶೇಷವಿಷಯಗಳು

### ಅ) ಮೀಮಾಂಸಾ

೧) 'ಯ ಏವಮ್.... ಮುಂತಾದ ವಾಕ್ಯಗಳು ಯಾವ ರೀತಿಯವು?

[ಜೈ.ಸೂ. 2.2]

ದರ್ಶ-ಪೂರ್ಣಮಾಸಪ್ರಕರಣದಲ್ಲಿ 'ಯ ಏವಂ ವಿದ್ವಾನ್ ಪೌರ್ಣಮಾಸೀಂ ಯಜತೇ' 'ಯ ಏವಂ ವಿದ್ವಾನಮಾವಾಸ್ಯಾಂ ಯಜತೇ' [ತೈ.ಸಂ. 1.6.9] ಎಂಬ ಎರಡು ವಾಕ್ಯಗಳು ಶ್ರುತವಾಗಿವೆ. ಇವುಗಳು ಅತಿರಿಕ್ತವಾದ ಯಾಗವಿಧಿಗಳೋ? ಅಥವಾ ಅನುವಾದಕಗಳೋ ಎಂಬುದು ಇಲ್ಲಿನ ಸಂಶಯ.

ಇಲ್ಲಿಯ ಪೂರ್ವಪಕ್ಷ ಹೀಗಿದೆ: 'ಸಮಿಧೋ ಯಜತಿ' 'ತನೂನಪಾತಂ ಯಜತಿ' ಎಂದು ಮೊದಲಾದ ವಾಕ್ಯಗಳಲ್ಲಿ 'ಯಜತಿ' ಎಂಬ ಪದವೇ ಪುನಃ ಆವರ್ತಿತವಾಗಿರುವುದರಿಂದ 'ಯಜತಿ' ಎಂಬ ಪದಕ್ಕೆ 'ಅಭ್ಯಾಸ'ವಿದೆಯೆಂದಾಯಿತು. ಅಭ್ಯಾಸದಿಂದ ಕರ್ಮಭೇದವನ್ನು ಪ್ರತಿಪಾದಿಸಲಾಗಿದೆ. 'ಯ ಏವಂ... ಯಜತೇ' ಎಂಬ ವಾಕ್ಯಗಳಲ್ಲಿಯೂ 'ಯಜತೇ' 'ಯಜತೇ' ಎಂಬ ಅಭ್ಯಾಸವಿದೆ. ಅಭ್ಯಾಸವಿರುವುದರಿಂದ ಇವು

ಅತಿರಿಕ್ತಯಾಗವಿಧಾಯಕಗಳೆಂದೇ ಹೇಳಬೇಕಾಗುತ್ತದೆ. ಅತಿರಿಕ್ತಯಾಗಗಳಾದರೆ ದ್ರವ್ಯ-ದೇವತೆಗಳು ಇರಬೇಕಲ್ಲವೇ? ಎಂಬ ಸಂಶಯ ಬಂದರೆ 'ಸರ್ವಸ್ಮೈ ವಾ ಏತದ್ಯಜ್ಞಾಯ ಗೃಹ್ಯತೇ । ಯದ್ಧ್ರುವಾಯಾಮಾಜ್ಯಮ್ ।' ಎಂಬ ವಾಕ್ಯಾನುಸಾರಿಯಾಗಿ ಧ್ರುವಾಪಾತ್ರದಲ್ಲಿರುವ ಆಜ್ಯವೇ ದ್ರವ್ಯ. 'ವಾರ್ತ್ರಘ್ನೀ ಪೂರ್ಣಮಾಸೇಽನೂಚ್ಯೇತೇ' 'ವೃಧನ್ವತೀ ಅಮಾವಾಸ್ಯಾಯಾಮ್' ಎಂಬ ವಾಕ್ಯಗಳಿಂದ ಮಾಂತ್ರವರ್ಣಿಕದೇವತೆಗಳ ಪ್ರಾಪ್ತಿಯಾಗುತ್ತದೆ. ಅನುವಾದವೆಂದರೆ ವ್ಯರ್ಥವೆಂದೇ ಅರ್ಥ. ಆದುದರಿಂದ ಈ ವಾಕ್ಯದ್ವಯಗಳು ಅತಿರಿಕ್ತಯಾಗದ್ವಯವಿಧಿಗಳಾಗಿವೆ.

'ಅಗ್ನಿರ್ವೃತ್ರಾಣಿ', 'ತ್ವಗ್ಂ ಸೋಮಾಸಿ' ಇವು ವಾರ್ತ್ರಘ್ನಿಗಳು. 'ಅಗ್ನಿಃ ಪ್ರತ್ನೇನ' 'ಸೋಮ ಗೀರ್ಭಿಃ' ಇವು ವೃಧನ್ವತಿಗಳು. ಇವುಗಳು ಅಗ್ನೀಷೋಮಪ್ರಕಾಶಕಗಳು. ಲಿಂಗಕ್ರಮಗಳಿಂದ ಆಜ್ಯಭಾಗಾಂಗಮಂತ್ರಗಳಾಗಿವೆ. ಆದುದರಿಂದ 'ಯ ಏವಂ ವಿದ್ವಾನ್' ಎಂಬ ವಾಕ್ಯಗಳಲ್ಲಿ ಯಾಗವಿಧಿಯೆಂದರೆ ಅವುಗಳಿಗೆ ದೇವತೆಗಳೂ ಮಂತ್ರಗಳೂ ಉಕ್ತವಾಗಿಲ್ಲವಾದುದರಿಂದ ಯಾಗವಿಧಿಯು ಸರಿಹೋಗುವುದಿಲ್ಲ. 'ಯ ಏವಂ ವಿದ್ವಾನ್' ಎಂಬಲ್ಲಿರುವ 'ಯತ್' ಶಬ್ದವು ಪ್ರಾಪ್ತಿದ್ಯೋತಕವಾದುದರಿಂದ ಅಪ್ರಾಪ್ತಪ್ರಾಪಕವಾದ ವಿಧಿಶಕ್ತಿಗೆ ಪ್ರತಿಬಂಧಕವಾಗುತ್ತದೆ. ಆದುದರಿಂದ ಪೂರ್ಣಮಾಸ ಶಬ್ದವು ಪೂರ್ಣಮಾಸದಲ್ಲಿ ವಿಹಿತವಾದ ಆಗ್ನೇಯ, ಉಪಾಂಶುಯಾಜ ಮತ್ತು ಅಗ್ನೀಷೋಮೀಯಗಳಿಗೆ ಅನುವಾದಕವಾಗುತ್ತದೆ. ಅಮಾವಾಸ್ಯಾಶಬ್ದವು ಆಗ್ನೇಯ, ಸಾನ್ನಾಯ್ಯಪ್ರತಿನಿಧಿಯಾದ ಐಂದ್ರಾಗ್ನ, ಐಂದ್ರದ್ವಯ[ಮಾಹೇಂದ್ರ]ಗಳಿಗೆ ಅನುವಾದಕವಾಗುತ್ತದೆ. ಈ ಯಾಗಗಳಿಗೆ ಫಲಸಿದ್ಧಿಯುಂಟಾಗಿ ಪ್ರಾಧಾನ್ಯವು ಒದಗುವುದಕ್ಕಾಗಿ ಇಲ್ಲಿ ಅನುವಾದವೂ ಸಫಲವಾಗುತ್ತದೆ. ಆದುದರಿಂದ 'ಯ ಏವಂ ವಿದ್ವಾನ್...' ಮುಂತಾದ ವಾಕ್ಯಗಳು ಸಮುದಾಯಾನುವಾದಕಗಳೇ ಹೊರತು ಯಾಗವಿಧಾಯಕಗಳಲ್ಲ. ಇದು ಇಲ್ಲಿನ ಸಿದ್ಧಾಂತ.

**2. 'ಸರ್ವೇಭ್ಯಃ' ಇತ್ಯಾದಿ ವಾಕ್ಯಗಳು ಯಾವ ರೀತಿಯವು? [ಜೈ.ಸೂ. 4.8]**

'ಸರ್ವೇಭ್ಯೋ ದರ್ಶಪೂರ್ಣಮಾಸೌ' 'ಸರ್ವೇಭ್ಯೋ ಜ್ಯೋತಿಷ್ಟೋಮಃ' ಈ ವಾಕ್ಯಗಳು ಅನುವಾದಕಗಳೇ ಫಲವಿಧಿಗಳೇ? ಇದು ಸಂಶಯ.

ಇಲ್ಲಿ 'ಯಜೇತ' ಎಂಬ ಯಾಗವಿಧಿಯು ಇಲ್ಲ. ಆದುದರಿಂದ ಅಂಗಾದಿಸಹಿತ ಪ್ರಧಾನಯಾಗಗಳ ಫಲಾನುವಾದಕಗಳು ಎಂಬುದು ಪೂರ್ವಪಕ್ಷ.

ಇಲ್ಲಿಯ ಸಿದ್ಧಾಂತವು ಹೀಗಿದೆ: ಬೇರೆ ಯಾಗಗಳು ಒಂದೊಂದು ಫಲಕ್ಕಾಗಿ; ದರ್ಶ-ಪೂರ್ಣಮಾಸಯಾಗಗಳು, ಜ್ಯೋತಿಷ್ಟೋಮ–ಇವು ಸರ್ವಫಲಗಳಿಗೂ

ಎಂಬುದಾಗಿ ಬೇರೆಯ ವಾಕ್ಯಗಳಲ್ಲಿ ವಿಹಿತವಾದ ಯಾಗಗಳನ್ನು ಅನುವಾದ ಮಾಡಿ ಇಲ್ಲಿ ಫಲಸಂಬಂಧವಿಧಿಯಾಗಿವೆ.

**3. 'ವತ್ಸಂ ಚೋಪಾವಸೃಜತಿ' ಇತ್ಯಾದಿಗಳಿಗೆ ಕರ್ತೃ ಯಾರು?**

**[ಜೈ.ಸೂ. 3.8]**

'ವತ್ಸಂ ಚೋಪಾವಸೃಜತಿ' ಇತ್ಯಾದಿ ವಾಕ್ಯಗಳಿಂದ ವಿಹಿತವಾದ ಕಾರ್ಯಗಳಿಗೆ ಯಜಮಾನನು ಕರ್ತೃವೇ ಅಥವಾ ಅಧ್ವರ್ಯುವು ಕರ್ತನೇ? ಎಂಬುದು ಸಂಶಯ.

ಇದು ಯಾಜಮಾನಕಾಂಡವಾದುದರಿಂದ ಈ ಕಾರ್ಯಗಳಿಗೆ ಕರ್ತನು ಯಜಮಾನನೇ ಆಗಬೇಕು. ಇದು ಇಲ್ಲಿನ ಪೂರ್ವಪಕ್ಷ.

ಯಜಮಾನನ ಪ್ರತಿನಿಧಿಗಳಾಗಿ ಯಾಗಕ್ಕೆ ಸಂಬಂಧಿಸಿದ ಕಾರ್ಯಗಳನ್ನು ಅನುಷ್ಠಿಸಲು ಋತ್ವಿಜರನ್ನು ಆರಿಸಿಕೊಳ್ಳಲಾಗುತ್ತದೆ. ಈ ವಾಕ್ಯಗಳು ಯಾಜಮಾನ ಕಾಂಡದಲ್ಲಿದ್ದರೂ ಯಾಜಮಾನಕಾಂಡವು ಆಧ್ವರ್ಯವಕಾಂಡದಲ್ಲಿನ ಅವಾಂತರ ಕಾಂಡವಾಗಿದೆ. ಅಧ್ವರ್ಯುವು ಮಾಡಿದರೂ ಯಜಮಾನನೇ ಮಾಡಿದಂತೆ. ಆದುದರಿಂದ ದ್ವಾದಶದ್ವಂದ್ವಸಂಪತ್ತಿಯು ಇಲ್ಲಿ ಹೇಳಲ್ಪಡುತ್ತದೆ. ಅಧ್ವರ್ಯುವು ಈ ಕಾರ್ಯಗಳನ್ನು ಮಾಡಬೇಕು. ಯಜಮಾನನು ಅದನ್ನು ಪರಿಶೀಲಿಸಬೇಕು. ಇದು ಇಲ್ಲಿನ ಸಿದ್ಧಾಂತ.

---

## ॥ ದಶಮೋಽನುವಾಕಃ ॥

ಧ್ರುವೋಽಸಿ ಧ್ರುವೋಽಹಗ್ಂ ಸಜಾತೇಷು ಭೂಯಾಸಮಿ
ತ್ಯಾಹ ಧ್ರುವಾನೇವೈನಾನ್ಕುರುತ

---

ಧ್ರುವಃ । ಅಸಿ । ಧ್ರುವಃ । ಅಹಮ್ । ಸಜಾತೇಷ್ವಿತಿ ಸ-ಜಾತೇಷು । ಭೂಯಾಸಮ್।
ಇತಿ । ಆಹ । ಧ್ರುವಾನ್ । ಏವ । ಏನಾನ್ । ಕುರುತೇ ।

---

ಒಂಬತ್ತನೆಯ ಅನುವಾಕದಲ್ಲಿ ದ್ವಂದ್ವಸಂಪಾದನೆಯು ಹೇಳಲ್ಪಟ್ಟಿದೆ. ಈ ಹತ್ತನೆಯ ಅನುವಾಕದಲ್ಲಿ ಹವಿಸ್ಸಾದನವು ಹೇಳಲ್ಪಡುತ್ತದೆ. ಅದಕ್ಕೂ ಮೊದಲು ಎರಡನೆಯ ಅನುವಾಕದ ಮಂತ್ರಗಳ ವ್ಯಾಖ್ಯಾನವಿದೆ. ಆ ಮಂತ್ರಗಳ ಪೈಕಿ ಮೊದಲು ಪರಿಧ್ಯನುಮಂತ್ರಣಮಂತ್ರಗಳು ಹೇಳಲ್ಪಡುತ್ತವೆ.

---

### ಮಧ್ಯಮಪರಿಧಿಯ ಅನುಮಂತ್ರಣಮಂತ್ರದ ವಿವರಣೆ

| | |
|---|---|
| ಧ್ರುವಃ ಅಸಿ ಧ್ರುವಃ ಅಹಮ್ ಸಜಾತೇಷು ಭೂಯಾಸಮ್ ಇತಿ ಆಹ | [ಯಜಮಾನನು] 'ಧ್ರುವೋಽಸಿ*...... ಭೂಯಾಸಮ್' ಎಂದು [ಪ್ರಥಮಪರಿಧ್ಯನುಮಂತ್ರಣಮಂತ್ರವನ್ನು] ಹೇಳುತ್ತಾನೆ. |
| ಧ್ರುವಾನ್ ಏವ ಏನಾನ್ ಕುರುತೇ | [ಇದರಿಂದ] ಈ ಜ್ಞಾತಿಗಳನ್ನು ಸ್ಥಿರರನ್ನಾಗಿ ಮಾಡುತ್ತಾನೆ. ಯಜಮಾನನು ಜ್ಞಾತಿಗಳಲ್ಲಿ ಹೆಚ್ಚು ಧ್ರುವನಾಗುತ್ತಾನೆ. [ಎಂದು ಶ್ರುತಿಯು ಹೇಳುತ್ತದೆ]. |

---

ಈ ಅನುಮಂತ್ರಣಮಂತ್ರಗಳ ಪಾಠದಿಂದ ಯಜಮಾನನು ಧ್ರುವರಾದ

---

* 'ಧ್ರುವೋಽಸಿ' ಮೊದಲಾದ ಮಂತ್ರಗಳ ಅರ್ಥವು ಎರಡನೆಯ ಅನುವಾಕದಲ್ಲಿದೆ. ಇಲ್ಲಿ ಬ್ರಾಹ್ಮಣ ವಿವರಣೆಯು ಮಾತ್ರ ಇದೆ.

ಉಗ್ರೋಽಸ್ಯುಗ್ರೋಽಹಗ್ಂ ಸಜಾತೇಷು ಭೂಯಾಸಮಿ

ತ್ಯಾಹಾಪ್ರತಿವಾದಿನ ಏವೈನಾನ್ಕುರುತೇಽಭಿಭೂರಸ್ಯಭಿಭೂ

ರಹಗ್ಂ ಸಜಾತೇಷು ಭೂಯಾಸಮಿತ್ಯಾಹ

---

ಉಗ್ರಃ । ಅಸಿ । ಉಗ್ರಃ । ಅಹಮ್ । ಸಜಾತೇಷ್ವಿತಿ ಸ-ಜಾತೇಷು । ಭೂಯಾಸಮ್। ಇತಿ । ಆಹ । ಅಪ್ರತಿವಾದಿನ ಇತ್ಯಪ್ರತಿ-ವಾದಿನಃ । ಏವ । ಏನಾನ್ । ಕುರುತೇ। ಅಭಿಭೂರಿತ್ಯಭಿ-ಭೂಃ । ಅಸಿ । ಅಭಿಭೂರಿತ್ಯಭಿ-ಭೂಃ । ಅಹಮ್ । ಸಜಾತೇಷ್ವಿತಿ ಸ-ಜಾತೇಷು । ಭೂಯಾಸಮ್ । ಇತಿ । ಆಹ ।

---

**ದಕ್ಷಿಣಪರಿಧಿ**

| | |
|---|---|
| ಉಗ್ರಃ ಅಸಿ ಉಗ್ರಃ ಅಹಮ್ ಸಜಾತೇಷು ಭೂಯಾಸಮ್ ಇತಿ ಆಹ | [ಯಜಮಾನನು] 'ಉಗ್ರೋಽಸಿ' ಎಂದು [ದ್ವಿತೀಯಪರಿಧಿಯ ಅನುಮಂತ್ರಣ ಮಂತ್ರವನ್ನು] ಹೇಳುತ್ತಾನೆ. |
| ಅಪ್ರತಿವಾದಿನಃ ಏವ ಏನಾನ್ ಕುರುತೇ | [ಇದರಿಂದ ಯಜಮಾನನು ತನ್ನ ಉಗ್ರತ್ವದಿಂದ] ಈ ಜ್ಞಾತಿಗಳನ್ನು ಪ್ರತಿಯಾಗಿ ಮಾತನಾಡದವರನ್ನಾಗಿ ಮಾಡುತ್ತಾನೆ [ಎಂದು ಶ್ರುತಿಯು ಹೇಳುತ್ತದೆ] |

**ಉತ್ತರಪರಿಧಿ**

| | |
|---|---|
| ಅಭಿಭೂಃ ಅಸಿ ಅಭಿಭೂಃ ಅಹಮ್ ಸಜಾತೇಷು ಭೂಯಾಸಮ್ ಇತಿ ಆಹ | [ಯಜಮಾನನು] 'ಅಭಿಭೂರಸಿ' ಎಂದು [ತೃತೀಯ ಪರಿಧ್ಯನುಮಂತ್ರಣಮಂತ್ರವನ್ನು] ಹೇಳುತ್ತಾನೆ. |

---

ಜ್ಞಾತಿಗಳಲ್ಲಿ ಅತಿಧ್ರುವನೂ, ಜ್ಞಾತಿಗಳು ಪ್ರತಿಯಾಗಿ ಮಾತನಾಡಲಾರದಷ್ಟು

ಯ ಏವೈನಂ ಪ್ರತ್ಯುತ್ಪಿಪೀತೇ ತಮುಪಾಸ್ಯತೇ ಯುನಜ್ಮಿ ತ್ವಾ

ಬ್ರಹ್ಮಣಾ ದೈವ್ಯೇನೇತ್ಯಾಹೈಷ ವಾ ಅಗ್ನೇರ್ಯೋಗಸ್ತೇನೈವೈನಂ

[...ಸ್ತೇನ (೧) ಏವೈನಂ] ಯುನಕ್ತಿ

---

ಯಃ। ಏವ । ಏನಮ್ । ಪ್ರತ್ಯುತ್ಪಿಪೀತ ಇತಿ ಪ್ರತಿ-ಉತ್ಪಿಪೀತೇ। ತಮ್ । ಉಪೇತಿ। ಆಸ್ಯತೇ। ಯುನಜ್ಮಿ। ತ್ವಾ । ಬ್ರಹ್ಮಣಾ । ದೈವ್ಯೇನ । ಇತಿ । ಆಹ । ಏಷಃ । ವೈ। ಅಗ್ನೇಃ। ಯೋಗಃ । ತೇನ (೧) । ಏವ । ಏನಮ್ । ಯುನಕ್ತಿ ।

---



| | |
|---|---|
| ಯಃ ಏವ ಏನಮ್ ಪ್ರತ್ಯುತ್ಪಿಪೀತೇ ತಮ್ ಉಪಾಸ್ಯತೇ | [ಆದರಿಂದ ಯಜಮಾನನು ತನಗೆ] ಯಾವ ಜ್ಞಾತಿಯು ಪ್ರತಿಕೂಲವಾಗಿ ನಡೆದುಕೊಳ್ಳುತ್ತಾನೆಯೋ, ಅವನನ್ನು ತಿರಸ್ಕರಿಸಿಬಿಡುತ್ತಾನೆ. [ಸೋಲಿಸುತ್ತಾನೆ ಎಂದು ಶ್ರುತಿಯು ಹೇಳು ತ್ತದೆ] |

ಅಗ್ನಿಯೋಗಮಂತ್ರದ ವಿವರಣೆ

| | |
|---|---|
| ಯುನಜ್ಮಿ ತ್ವಾ ಬ್ರಹ್ಮಣಾ ದೈವ್ಯೇನ ಇತಿ ಆಹ | [ಯಜಮಾನನು] 'ಯುನಜ್ಮಿತ್ವಾ....' ಎಂಬ ಮಂತ್ರವನ್ನು ಹೇಳುತ್ತಾನೆ. [ಈ ಮಂತ್ರ ಪಾಠವೇ ಅಗ್ನಿಯೋಗ] |
| ಏಷಃ ವೈ | ಈ ಮಂತ್ರವೇ |
| ಅಗ್ನೇಃ ಯೋಗಃ | ಅಗ್ನಿಯ ಯೋಗ(ಬಂಧನ)ವಾಗಿದೆಯಷ್ಟೆ. |
| ತೇನ ಏವ ಏನಮ್ ಯುನಕ್ತಿ | ಈ ಮಂತ್ರಪಾಠದಿಂದ [ಯಜಮಾನನು] ಅಗ್ನಿಯನ್ನು ಯಜ್ಞಕ್ಕೆ ಸಂಬಂಧಿಸಿದವನನ್ನಾಗಿ ಮಾಡುತ್ತಾನೆ [ಎಂದು ಶ್ರುತಿಯು ಹೇಳುತ್ತದೆ.] |

---

ಉಗ್ರನೂ, ತನ್ನನ್ನು ಪ್ರತಿಭಟಿಸುವ ಜ್ಞಾತಿಯನ್ನು ತಿರಸ್ಕರಿಸಬಲ್ಲವನೂ ಆಗುತ್ತಾನೆ. ಎಂದು ಶ್ರುತಿಯು ಹೇಳುತ್ತದೆ.

ಯಜ್ಞಸ್ಯ ವೈ ಸಮೃದ್ಧೇನ ದೇವಾಸ್ಸುವರ್ಗಂ ಲೋಕಮಾಯನ್, ಯಜ್ಞಸ್ಯ ವ್ಯೃದ್ಧೇನಾಸುರಾನ್ಪರಾಭಾವಯನ್, ಯನ್ಮೇ ಅಗ್ನೇ ಅಸ್ಯ ಯಜ್ಞಸ್ಯ ರಿಷ್ಯಾದಿತ್ಯಾಹ ಯಜ್ಞಸ್ಯೈವ ತತ್ಸಮೃದ್ಧೇನ ಯಜಮಾನಸ್ಸುವರ್ಗಂ ಲೋಕಮೇತಿ

---

ಯಜ್ಞಸ್ಯ । ವೈ। ಸಮೃದ್ಧೇನೇತಿ ಸಮ್-ಋದ್ಧೇನ । ದೇವಾಃ । ಸುವರ್ಗಮಿತಿ ಸುವಃ-ಗಮ್। ಲೋಕಮ್। ಆಯನ್ । ಯಜ್ಞಸ್ಯ । ವ್ಯೃದ್ಧೇನೇತಿ ವಿ-ಋದ್ಧೇನ । ಅಸುರಾನ್। ಪರೇತಿ। ಅಭಾವಯನ್ । ಯತ್ । ಮೇ । ಅಗ್ನೇ । ಅಸ್ಯ । ಯಜ್ಞಸ್ಯ । ರಿಷ್ಯಾತ್। ಇತಿ। ಆಹ। ಯಜ್ಞಸ್ಯ। ಏವ। ತತ್ । ಸಮೃದ್ಧೇನೇತಿ ಸಮ್-ಋದ್ಧೇನ । ಯಜಮಾನಃ। ಸುವರ್ಗಮಿತಿ ಸುವಃ-ಗಮ್ । ಲೋಕಮ್ । ಏತಿ ।

---

## ಹವಿರಭಿಮಂತ್ರಣಮಂತ್ರದ ವಿವರಣೆ

| | |
|---|---|
| ಯಜ್ಞಸ್ಯ ವೈ ಸಮೃದ್ಧೇನ ದೇವಾಃ ಸುವರ್ಗಮ್ ಲೋಕಮ್ ಆಯನ್ | ದೇವತೆಗಳು ಯಜ್ಞದ *ಸಮೃದ್ಧದಿಂದ ಸ್ವರ್ಗ ಲೋಕವನ್ನು ಹೊಂದಿದರು. |
| ಯಜ್ಞಸ್ಯ ವ್ಯೃದ್ಧೇನ ಅಸುರಾನ್ ಪರಾಭಾವಯನ್ | ಯಜ್ಞದ *ವ್ಯೃದ್ಧಿಯಿಂದ ಅಸುರರನ್ನು ಪರಾಭವಗೊಳಿಸಿದರು. |
| ಯತ್ ಮೇ ಅಗ್ನೇ ಅಸ್ಯ ಯಜ್ಞಸ್ಯ ರಿಷ್ಯಾತ್ ಇತಿ ಆಹ | [ಯಜಮಾನನು] 'ಯನ್ಮೇ ಅಗ್ನೇ....' ಎಂಬ ಮಂತ್ರವನ್ನು ಹೇಳುತ್ತಾನೆ. |
| ಯಜ್ಞಸ್ಯ ಏವ ತತ್ ಸಮೃದ್ಧೇನ ಯಜಮಾನಃ ಸುವರ್ಗಮ್ ಲೋಕಮ್ ಏತಿ | [ಇದರಿಂದ] ಯಜ್ಞದ ಸಮೃದ್ಧಿಯಿಂದಲೇ ಯಜಮಾನನು ಸ್ವರ್ಗಲೋಕವನ್ನು ಹೊಂದುತ್ತಾನೆ. |

---

* ಹವಿರಾದಿಗಳಲ್ಲಿ ನ್ಯೂನತೆಯಿಲ್ಲದೆ ಯಥಾಶಾಸ್ತ್ರವಾಗಿ ಅನುಷ್ಠಾನವೇ ಯಜ್ಞದ ಸಮೃದ್ಧ.

* ಹವಿರಾದಿಗಳ ನ್ಯೂನತೆಯಿಂದ ಯಥಾಶಾಸ್ತ್ರವಲ್ಲದ ಅನುಷ್ಠಾನವೇ ಯಜ್ಞದ ವ್ಯೃದ್ಧಿ..

ಯಜ್ಞಸ್ಯ ವ್ಯೃದ್ಧೇನ ಭ್ರಾತೃವ್ಯಾನ್ಪರಾಭಾವಯತ್ಯಗ್ನಿಹೋತ್ರ
ಮೇತಾಭಿರ್ವ್ಯಾಹೃತೀಭಿರುಪಸಾದಯೇದ್ಯಜ್ಞಮುಖಂ ವಾ
ಅಗ್ನಿಹೋತ್ರಂ ಬ್ರಹ್ಮೈತಾ ವ್ಯಾಹೃತಯೋ

---

ಯಜ್ಞಸ್ಯ। ವ್ಯೃದ್ಧೇನೇತಿ ವಿ-ಋದ್ಧೇನ। ಭ್ರಾತೃವ್ಯಾನ್। ಪರೇತಿ । ಭಾವಯತಿ। ಅಗ್ನಿ ಹೋತ್ರಮಿತ್ಯಗ್ನಿ-ಹೋತ್ರಮ್। ಏತಾಭಿಃ। ವ್ಯಾಹೃತೀಭಿರಿತಿ ವ್ಯಾಹೃತಿ-ಭಿಃ । ಉಪೇತಿ। ಸಾದಯೇತ್ । ಯಜ್ಞಮುಖಮಿತಿ ಯಜ್ಞ-ಮುಖಮ್ । ವೈ । ಅಗ್ನಿಹೋತ್ರಮಿತ್ಯಗ್ನಿ-ಹೋತ್ರಮ್। ಬ್ರಹ್ಮ । ಏತಾಃ । ವ್ಯಾಹೃತಯ ಇತಿ ವಿ-ಆಹೃತಯಃ ।

---

| | |
|---|---|
| ಯಜ್ಞಸ್ಯ ವ್ಯೃದ್ಧೇನ ಭ್ರಾತೃವ್ಯಾನ್ ಪರಾಭಾವಯತಿ | ಯಜ್ಞದ ನ್ಯೂನಾತಿರಿಕ್ತರೂಪವಾದ ವ್ಯೃದ್ಧಿಯಿಂದ ಶತ್ರುಗಳನ್ನು ಪರಾಭವಗೊಳಿಸುತ್ತಾನೆ [ಎಂದು ಶ್ರುತಿಯು ಹೇಳುತ್ತದೆ] |

**ಹವಿರುಪಸಾಡನದಲ್ಲಿ ವ್ಯಾಹೃತಿಗಳ ವಿನಿಯೋಗ; ಅದರ ಪ್ರಶಂಸೆ**

| | |
|---|---|
| ಅಗ್ನಿಹೋತ್ರಮ್ | ಅಗ್ನಿಹೋತ್ರಹೋಮಸಂಬಂಧಿಯಾದ ಹವಿಸ್ಸನ್ನು |
| ಏತಾಭಿಃ ವ್ಯಾಹೃತೀಭಿಃ | 'ಭೂಃ' 'ಭುವಃ' 'ಸುವಃ' ಎಂಬ ವ್ಯಾಹೃತಿಗಳಿಂದ |
| ಉಪಸಾದಯೇತ್ | ಇಡಬೇಕು. [ವಿಧಿ] |
| ಯಜ್ಞಮುಖಮ್ ವೈ ಅಗ್ನಿಹೋತ್ರಮ್ | ಅಗ್ನಿಹೋತ್ರವು ಯಜ್ಞಮುಖವಾಗಿದೆಯಷ್ಟೆ. |
| ಬ್ರಹ್ಮ ಏತಾಃ ವ್ಯಾಹೃತಯಃ | ಈ ವ್ಯಾಹೃತಿಗಳು ಬ್ರಹ್ಮವೇ ಆಗಿದೆ. |

---

ಯಜಮಾನನು ಹೇಳುವ 'ಯನ್ಮೇ ಅಗ್ನೇ....' ಎಂಬ ಮಂತ್ರವು 'ಸಂಭವಿಸಬಹುದಾದ ಯಜ್ಞಾಂಗಗಳ ನಾಶದ ಅಥವಾ ಹವಿರಾದಿಗಳ ಚೆಲ್ಲುವಿಕೆಯ ದೋಷವು [ವ್ಯೃದ್ಧಿ ದೋಷವು] ಶತ್ರುನಾಶಕವಾಗಲಿ' ಎಂಬ ಅರ್ಥವನ್ನು ಕೊಡುತ್ತದೆ. ಇದರಿಂದ ಆ ದೋಷಗಳಿಲ್ಲದೆ ಯಥಾಶಾಸ್ತ್ರವಾಗಿ ನಡೆದ ಯಜ್ಞದ ಸಮೃದ್ಧತೆಯಿಂದ ಯಜಮಾನನು ದೇವತೆಗಳಂತೆ ಸ್ವರ್ಗವನ್ನು ಹೊಂದುತ್ತಾನೆ. ದೋಷಗಳಿಂದ ಶತ್ರುಗಳನ್ನು ಪರಾಭವ

ಯಜ್ಞಮುಖ ಏವ ಬ್ರಹ್ಮ [..ಬ್ರಹ್ಮ[೨] ಕುರುತೇ ಸಂವತ್ಸರೇ]
ಕುರುತೇ ಸಂವತ್ಸರೇ ಪರ್ಯಾಗತ ಏತಾಭಿರೇವೋಪಸಾ
ದಯೇದ್ಬ್ರಹ್ಮಣೈವೋಭಯತಸ್ಸಂವತ್ಸರಂ ಪರಿಗೃಹ್ಣಾತಿ

---

ಯಜ್ಞಮುಖ ಇತಿ ಯಜ್ಞ-ಮುಖೇ। ಏವ । ಬ್ರಹ್ಮ [೨] ಕುರುತೇ । ಸಂವತ್ಸರ ಇತಿ ಸಮ್-ವತ್ಸರೇ । ಪರ್ಯಾಗತ ಇತಿ ಪರಿ-ಆಗತೇ । ಏತಾಭಿಃ । ಏವ । ಉಪೇತಿ । ಸಾದಯೇತ್ । ಬ್ರಹ್ಮಣಾ । ಏವ। ಉಭಯತಃ । ಸಂವತ್ಸರಮಿತಿ ಸಮ್-ವತ್ಸರಮ್। ಪರೀತಿ । ಗೃಹ್ಣಾತಿ ।

---

| | |
|---|---|
| ಯಜ್ಞಮುಖೇ ಏವ ಬ್ರಹ್ಮ ಕುರುತೇ | ಯಜ್ಞಮುಖದಲ್ಲಿ [ಅಗ್ನಿಹೋತ್ರದ ಪ್ರಥಮ ಪ್ರಯೋಗದಲ್ಲಿ] ಬ್ರಹ್ಮರೂಪವಾದ ವ್ಯಾಹೃತಿ ತ್ರಯವನ್ನು ಮಾಡಿದವನಾಗುತ್ತಾನೆ. |
| ಸಂವತ್ಸರೇ ಪರ್ಯಾಗತೇ (ಸತಿ) | ಒಂದು ಸಂವತ್ಸರವು ಮುಗಿದಾಗ |
| ಏತಾಭಿಃ ಏವ ಉಪಸಾದಯೇತ್ | ಈ ವ್ಯಾಹೃತಿಗಳಿಂದಲೇ ಹವಿಸ್ಸುಗಳನ್ನು ಉಪಸಾದನ ಮಾಡಬೇಕು. |
| ಬ್ರಹ್ಮಣಾ ಏವ ಉಭಯತಃ ಸಂವತ್ಸರಮ್ ಪರಿಗೃಹ್ಣಾತಿ | ಬ್ರಹ್ಮರೂಪವಾದ ವ್ಯಾಹೃತಿಗಳಿಂದಲೇ [ಯಜಮಾನನು] ಆರಂಭ-ಅಂತ್ಯಗಳಲ್ಲಿ ಸಂವತ್ಸರವನ್ನು ಪರಿಗ್ರಹ ಮಾಡಿದವನಾಗುತ್ತಾನೆ. |

---

ಗೊಳಿಸುತ್ತಾನೆ ಎಂದು ಶ್ರುತಿಯು ಹೇಳುತ್ತದೆ.

### ಹವಿರುಪಸಾದನದಲ್ಲಿ ವ್ಯಾಹೃತಿ - ತಾತ್ಪರ್ಯ

ಅಗ್ನಿಹೋತ್ರದ ಪ್ರಥಮಪ್ರಯೋಗದಲ್ಲಿ 'ಭೂಃ' 'ಭುವಃ' 'ಸುವಃ' ಎಂಬ ಮೂರು ವ್ಯಾಹೃತಿಗಳಿಂದ ಅಗ್ನಿಹೋತ್ರಹವಿಸ್ಸನ್ನು ಇಡಬೇಕು [ವಿಧಿ]. ಆಧಾನಾನಂತರ ಮೊದಲು ಮಾಡುವ ಅಗ್ನಿಹೋತ್ರವು ಯಜ್ಞಮುಖವಾಗಿದೆ. ಲೋಕತ್ರಯಾತ್ಮಕನಾದ ವಿರಾಡ್ರೂಪನಾದ ಪರಬ್ರಹ್ಮನಲ್ಲಿ ಆರೋಪಿತವಾದ ಶರೀರವುಳ್ಳ ಬ್ರಹ್ಮವಾಚಕಗಳಾದ ಈ ವ್ಯಾಹೃತಿಗಳು ಬ್ರಹ್ಮಸ್ವರೂಪವಾಗಿವೆ/ಲೋಕತ್ರಯವಾಚಕಗಳಾದುದರಿಂದ ಲೋಕ ತ್ರಯಾತ್ಮಕಗಳಾದ ಇವು ಬ್ರಹ್ಮವೇ ಆಗಿವೆ. ಹೀಗಾಗಿ ಈ ವ್ಯಾಹೃತಿಗಳಿಂದ ಯಜಮಾನನು

ದರ್ಶಪೂರ್ಣಮಾಸೌ ಚಾತುರ್ಮಾಸ್ಯಾನ್ಯಾಲಭಮಾನ ಏತಾಭಿ
ರ್ವ್ಯಾಹೃತೀಭಿರ್ ಹವೀಗ್ಂಷ್ಯಾಸಾದಯೇದ್ಯಜ್ಞಮುಖಂ ವೈ
ದರ್ಶಪೂರ್ಣಮಾಸೌ ಚಾತುರ್ಮಾಸ್ಯಾನಿ

---

ದರ್ಶಪೂರ್ಣಮಾಸಾವಿತಿ ದರ್ಶ-ಪೂರ್ಣಮಾಸೌ। ಚಾತುರ್ಮಾಸ್ಯಾನೀತಿ ಚಾತುಃ-ಮಾಸ್ಯಾನಿ । ಆಲಭಮಾನ ಇತ್ಯಾ-ಲಭಮಾನಃ । ಏತಾಭಿಃ । ವ್ಯಾಹೃತೀಭಿರಿತಿ ವ್ಯಾಹೃತಿ-ಭಿಃ। ಹವೀಗ್ಂಷಿ। ಏತಿ। ಸಾದಯೇತ್ । ಯಜ್ಞಮುಖಮಿತಿ ಯಜ್ಞ-ಮುಖಮ್ । ವೈ । ದರ್ಶಪೂರ್ಣಮಾಸಾವಿತಿ ದರ್ಶ-ಪೂರ್ಣಮಾಸೌ । ಚಾತುರ್ಮಾಸ್ಯಾನೀತಿ ಚಾತುಃ ಮಾಸ್ಯಾನಿ ।

---

**ದರ್ಶ-ಪೂರ್ಣಮಾಸ, ಚಾತುರ್ಮಾಸ್ಯಗಳಲ್ಲಿ ಹವಿರಾಸಾದನದಲ್ಲಿ ವ್ಯಾಹೃತಿವಿಧಿ; ಅದರ ಪ್ರಶಂಸೆ**

| | |
|---|---|
| ದರ್ಶಪೂರ್ಣಮಾಸೌ ಚಾತುರ್ಮಾಸ್ಯಾನಿ ಆಲಭಮಾನಃ | *ದರ್ಶಪೂರ್ಣಮಾಸ ಚಾತುರ್ಮಾಸ್ಯಗಳನ್ನು ಆರಂಭಿಸುವಾಗ (ಮೊದಲನೆಯ ಪ್ರಯೋಗದಲ್ಲಿ) |
| ಏತಾಭಿಃ ವ್ಯಾಹೃತೀಭಿಃ ಹವೀಗ್ಂಷಿ ಆಸಾದಯೇತ್ | ಈ ವ್ಯಾಹೃತಿಗಳಿಂದ ಹವಿಸ್ಸುಗಳನ್ನು ಆಸಾದನ ಮಾಡಬೇಕು. [ವಿಧಿ] |
| ಯಜ್ಞಮುಖಮ್ ವೈ ದರ್ಶ ಪೂರ್ಣಮಾಸೌ ಚಾತುರ್ಮಾಸ್ಯಾನಿ | ದರ್ಶ-ಪೂರ್ಣಮಾಸ, ಚಾತುರ್ಮಾಸ್ಯಗಳು ಯಜ್ಞಮುಖಗಳಷ್ಟೆ.* |

---

ಹವಿರುಪಸಾದನ ಮಾಡುವುದರಿಂದ ಯಜ್ಞಮುಖವಾದ ಅಗ್ನಿಹೋತ್ರದ ಪ್ರಥಮ ಪ್ರಯೋಗದಲ್ಲಿಯೇ ಪ್ರಶಸ್ತವಾದ ಬ್ರಹ್ಮರೂಪವಾದ ವ್ಯಾಹೃತಿಗಳನ್ನು ಸ್ಥಾಪಿಸಿದವನಾಗುತ್ತಾನೆ. ಹಾಗೆಯೇ ಸಂವತ್ಸರವು ಮುಗಿದಾಗಲೂ ವ್ಯಾಹೃತಿಗಳಿಂದಲೇ ಹವಿರುಪಸಾದನವನ್ನು ಮಾಡಬೇಕು[ವಿಧಿ]. ಹೀಗೆ ಮಾಡುವುದರಿಂದ ಯಜಮಾನನು ಸಂವತ್ಸರವನ್ನು ಬ್ರಹ್ಮರೂಪವಾದ ವ್ಯಾಹೃತಿಗಳಿಂದ ಎರಡು ಕಡೆಗಳಲ್ಲಿಯೂ ಗ್ರಹಿಸಿದವನಾಗುತ್ತಾನೆ.

---

* ಇದು ದರ್ಶ-ಪೂರ್ಣಮಾಸಪ್ರಕರಣವಾದರೂ ಪ್ರಾಸಂಗಿಕವಾಗಿ ಅಗ್ನಿಹೋತ್ರದಲ್ಲಿ ಮತ್ತು ಚಾತುರ್ಮಾಸ್ಯದಲ್ಲಿ ವ್ಯಾಹೃತಿವಿಧಾನವನ್ನು ಹೇಳಲಾಗಿದೆ.

* ಅಗ್ನಿಷ್ಟೋಮಾದಿಗಳಿಗಿಂತಲೂ ಮೊದಲು ಮಾಡುವ ಯಜ್ಞಗಳಾದುದರಿಂದ ದರ್ಶ-ಪೂರ್ಣಮಾಸ, ಚಾತುರ್ಮಾಸ್ಯಗಳು ಯಜ್ಞಮುಖಗಳು.

ಬ್ರಹ್ಮೈತಾ ವ್ಯಾಹೃತಯೋ ಯಜ್ಞಮುಖ ಏವ ಬ್ರಹ್ಮ ಕುರುತೇ
ಸಂವತ್ಸರೇ ಪರ್ಯಾಗತ ಏತಾಭಿರೇವಾಸಾದಯೇದ್ಬ್ರಹ್ಮಣೈವೋ
ಭಯತಸ್ಸಂವತ್ಸರಂ ಪರಿಗೃಹ್ಣಾತಿ

---

ಬ್ರಹ್ಮ। ಏತಾಃ । ವ್ಯಾಹೃತಯ ಇತಿ ವಿ-ಆಹೃತಯಃ । ಯಜ್ಞಮುಖ ಇತಿ ಯಜ್ಞ-ಮುಖೇ। ಏವ। ಬ್ರಹ್ಮ । ಕುರುತೇ । ಸಂವತ್ಸರ ಇತಿ ಸಮ್-ವತ್ಸರೇ । ಪರ್ಯಾಗತ ಇತಿ ಪರಿ-ಆಗತೇ । ಏತಾಭಿಃ । ಏವ । ಏತಿ । ಸಾದಯೇತ್ । ಬ್ರಹ್ಮಣಾ । ಏವ। ಉಭಯತಃ। ಸಂವತ್ಸರಮಿತಿ ಸಮ್-ವತ್ಸರಮ್ । ಪರೀತಿ । ಗೃಹ್ಣಾತಿ ।

---

| | |
|---|---|
| ಬ್ರಹ್ಮ ಏತಾಃ ವ್ಯಾಹೃತಯಃ | ಈ ವ್ಯಾಹೃತಿಗಳು ಬ್ರಹ್ಮರೂಪವಾಗಿವೆ. |
| ಯಜ್ಞಮುಖೇ ಏವ ಬ್ರಹ್ಮ ಕುರುತೇ | [ಯಜಮಾನನು] ಯಜ್ಞಾರಂಭದಲ್ಲಿಯೇ ಬ್ರಹ್ಮರೂಪವಾದ ವ್ಯಾಹೃತಿಗಳನ್ನು ಇಟ್ಟವನಾಗುತ್ತಾನೆ. |
| ಸಂವತ್ಸರೇ ಪರ್ಯಾಗತೇ | ಸಂವತ್ಸರವು ಮುಗಿದಾಗ [ಕೊನೆಯ ಪ್ರಯೋಗದಲ್ಲಿ] |
| ಏತಾಭಿರೇವ ಆಸಾದಯೇತ್ | ಈ ವ್ಯಾಹೃತಿಗಳಿಂದಲೇ ಹವಿರಾಸಾದನ ಮಾಡಬೇಕು (ವಿಧಿ) |
| ಬ್ರಹ್ಮಣಾ ಏವ ಉಭಯತಃ ಸಂವತ್ಸರಂ ಪರಿಗೃಹ್ಣಾತಿ | [ಇದರಿಂದ ಯಜಮಾನನು] ಬ್ರಹ್ಮರೂಪ ವ್ಯಾಹೃತಿಗಳಿಂದಲೇ ಸಂವತ್ಸರವನ್ನು [ಎಲ್ಲಾ ಪ್ರಯೋಗಗಳನ್ನೂ] ಆದ್ಯಂತಗಳೆರಡರಲ್ಲಿಯೂ ಸಂಗ್ರಹಿಸಿದವನಾಗುತ್ತಾನೆ. |

---

**ಹವಿರಾಸಾದನ; ತಾತ್ಪರ್ಯ:** ದರ್ಶ-ಪೂರ್ಣಮಾಸ, ಚಾತುರ್ಮಾಸ್ಯಗಳನ್ನು ಆರಂಭಿಸುವಾಗ ಮೊದಲನೆಯ ಪ್ರಯೋಗದಲ್ಲಿ ಈ ವ್ಯಾಹೃತಿಗಳಿಂದ ಹವಿಸ್ಸುಗಳನ್ನು ಆಸಾದನ ಮಾಡಬೇಕು. [ವಿಧಿ]

ಯದ್ವೈ ಯಜ್ಞಸ್ಯ ಸಾಮ್ನಾ ಕ್ರಿಯತೇ ರಾಷ್ಟ್ರಂ [ರಾಷ್ಟ್ರಮ್ (೩)]
ಯಜ್ಞಸ್ಯಾಶೀರ್ಗಚ್ಛತಿ ಯದೃಚಾ ವಿಶಂ ಯಜ್ಞಸ್ಯಾಶೀರ್ಗಚ್ಛತ್ಯಥ

---

**ಯತ್।** ವೈ। ಯಜ್ಞಸ್ಯ। ಸಾಮ್ನಾ। ಕ್ರಿಯತೇ। ರಾಷ್ಟ್ರಮ್। ಯಜ್ಞಸ್ಯ। ಆಶೀರಿತ್ಯಾ-ಶೀಃ। ಗಚ್ಛತಿ । ಯತ್ । ಋಚಾ । ವಿಶಮ್ । ಯಜ್ಞಸ್ಯ । ಆಶೀರಿತ್ಯಾ-ಶೀಃ । ಗಚ್ಛತಿ । ಅಥ ।

---

### ಸಾಮಿಧೇನಿಗಳ ಆದಿಯಲ್ಲಿ ವ್ಯಾಹೃತಿವಿಧಿ; ಅದರ ಪ್ರಶಂಸೆ

| | |
|---|---|
| ಯತ್ ವೈ ಯಜ್ಞಸ್ಯ ಸಾಮ್ನಾ ಕ್ರಿಯತೇ | ಯಾವ ಯಜ್ಞಾಂಗವಾದ ಕರ್ಮವು [ಬಹಿಷ್ಪವಮಾನಾದಿ ಸ್ತೋತ್ರಾದಿ] ಸಾಮದಿಂದ ಮಾಡಲ್ಪಡುತ್ತದೆಯೋ |
| ರಾಷ್ಟ್ರಮ್ ಯಜ್ಞಸ್ಯ ಆಶೀಃ ಗಚ್ಛತಿ | ಆ ಅಂಗಸಹಿತವಾದ ಯಾಗದ ಫಲವು ಸಸ್ಯಾದ್ಯಭಿವೃದ್ಧಿರೂಪದಲ್ಲಿ ರಾಷ್ಟ್ರವನ್ನು ಹೊಂದುತ್ತದೆ. |
| ಯತ್ ಋಚಾ ವಿಶಮ್ ಯಜ್ಞಸ್ಯ ಆಶೀಃ ಗಚ್ಛತಿ | ಋಕ್ಕಿನಿಂದ ಮಾಡಿದ [ಯಜ್ಞಾದಿ] ಅಂಗ ಸಹಿತವಾದ ಯಜ್ಞದ ಫಲವು [ಆಯುರಾರೋಗ್ಯಪ್ರದವಾಗಿ] ಪ್ರಜೆಗಳನ್ನು ಹೊಂದುತ್ತದೆ. |

---

ಅಗ್ನಿಷ್ಟೋಮಾದಿಗಳಿಗಿಂತಲೂ ಮೊದಲು ಅನುಷ್ಠಿಸಲ್ಪಡುವ ಇವು ಯಜ್ಞಮುಖಗಳಾಗಿವೆ. ಈ ವ್ಯಾಹೃತಿಗಳು ತ್ರಿಲೋಕಾತ್ಮಕಬ್ರಹ್ಮಸ್ವರೂಪಗಳಾಗಿವೆ. ಆದುದರಿಂದ ಯಜ್ಞಮುಖದಲ್ಲಿಯೇ ಬ್ರಹ್ಮನನ್ನು ಸ್ಥಾಪಿಸಿದಂತೆ ಆಗುತ್ತದೆ.

ಸಂವತ್ಸರವು ಮುಗಿದಾಗ ಕೊನೆಯ ಪ್ರಯೋಗದಲ್ಲಿ ಈ ವ್ಯಾಹೃತಿಗಳಿಂದಲೇ ಹವಿರಾಸಾದನವನ್ನು ಮಾಡಬೇಕು. ಹೀಗೆ ಮಾಡುವುದರಿಂದ ಯಜಮಾನನು ಬ್ರಹ್ಮರೂಪವಾದ ವ್ಯಾಹೃತಿಗಳಿಂದ ಸಂವತ್ಸರವನ್ನು ಎರಡು ಕಡೆಗಳಲ್ಲಿಯೂ ಪರಿಗ್ರಹಿಸಿದವನಾಗುತ್ತಾನೆ.

ಬ್ರಾಹ್ಮಣೋऽನಾಶೀರ್ಕೇಣ ಯಜ್ಞೇನ ಯಜತೇ ಸಾಮಿಧೇ
ನೀರನುವಕ್ಷ್ಯನ್ನೇತಾ ವ್ಯಾಹೃತೀಃ ಪುರಸ್ತಾದ್ದಧ್ಯಾದ್ಬ್ರಹ್ಮೈವ
ಪ್ರತಿಪದಂ ಕುರುತೇ

---

ಬ್ರಾಹ್ಮಣಃ। ಅನಾಶೀರ್ಕೇಣ । ಯಜ್ಞೇನ । ಯಜತೇ । ಸಾಮಿಧೇನೀರಿತಿ ಸಾಮ್-ಇಧೇನೀಃ। ಅನುವಕ್ಷ್ಯನ್ನಿತ್ಯನು-ವಕ್ಷ್ಯನ್ । ಏತಾಃ । ವ್ಯಾಹೃತೀರಿತಿ ವಿ-ಆಹೃತೀಃ । ಪುರಸ್ತಾತ್। ದಧ್ಯಾತ್ । ಬ್ರಹ್ಮ । ಏವ । ಪ್ರತಿಪದಮಿತಿ ಪ್ರತಿ-ಪದಮ್ । ಕುರುತೇ ।

---

| | |
|---|---|
| ಅಥ ಬ್ರಾಹ್ಮಣಃ ಅನಾಶೀರ್ಕೇಣ ಯಜ್ಞೇನ ಯಜತೇ | ಹೀಗಾದರೆ ಯಜಮಾನನು [ಕರಣಮಂತ್ರಗಳಾದುದರಿಂದ] ಫಲಾಶಂಸನೆಯಿಲ್ಲದ ಯಜುರ್ಮಂತ್ರಗಳಿಂದ ಯುಕ್ತವಾದ ಯಾಗವನ್ನು ಮಾಡಿದವನಾಗುತ್ತಾನೆ. |
| ಸಾಮಿಧೇನೀಃ ಅನುವಕ್ಷ್ಯನ್ ಏತಾಃ ವ್ಯಾಹೃತೀಃ ಪುರಸ್ತಾತ್ ದಧ್ಯಾತ್ | [ಆದುದರಿಂದ ಹೋತೃವು 'ಪ್ರ ವೋ ವಾಜಾ' ಮೊದಲಾದ] ಸಾಮಿಧೇನಿಗಳನ್ನು ಹೇಳುವಾಗ ಮೊದಲು ಈ ವ್ಯಾಹೃತಿಗಳನ್ನು ಹೇಳಬೇಕು. [ವಿಧಿ] |
| ಬ್ರಹ್ಮ ಏವ ಪ್ರತಿಪದಮ್ ಕುರುತೇ | ಬ್ರಹ್ಮರೂಪವಾದ ಈ ವ್ಯಾಹೃತಿಗಳನ್ನೇ ಪ್ರಾರಂಭದ ಮಂತ್ರವನ್ನಾಗಿ ಮಾಡಿದವನಾಗುತ್ತಾನೆ. |

---

**ವ್ಯಾಹೃತಿವಿಧಿ: ತಾತ್ಪರ್ಯ:**—ಸಾಮ-ಋಕ್‌ಗಳಿಂದ ಮಾಡಲ್ಪಟ್ಟ ಅಂಗಸಹಿತವಾದ ಯಾಗಫಲವು ಕ್ರಮವಾಗಿ ರಾಷ್ಟ್ರಕ್ಕೂ, ಪ್ರಜೆಗಳಿಗೂ ಆಗುತ್ತದೆ. ಯಜುರ್ಮಂತ್ರಗಳು ಕರಣಮಂತ್ರಗಳು. ಇವುಗಳಲ್ಲಿ ಸಾಮಾನ್ಯವಾಗಿ ಫಲಾಶಂಸನೆ ಇರುವುದಿಲ್ಲ. ಇದರಿಂದ ಬ್ರಾಹ್ಮಣನಾದ ಯಜಮಾನನು ನಿಷ್ಫಲವಾದ ಯಾಗವನ್ನು ಮಾಡಿದಂತಾಗುತ್ತದೆ. ಆದಕ್ಕಾಗಿ ಹೋತೃವು ಸಾಮಿಧೇನಿಗಳನ್ನು ಅನುವಚನ ಮಾಡುವಾಗ ಮೊದಲು ಈ ವ್ಯಾಹೃತಿಗಳನ್ನು ಹೇಳಬೇಕು. ಇದರಿಂದ ಬ್ರಹ್ಮರೂಪವಾದ ವ್ಯಾಹೃತಿಮಂತ್ರಗಳನ್ನೇ

ತಥಾ ಬ್ರಾಹ್ಮಣಸ್ಸಾಶೀರ್ಕೇಣ ಯಜ್ಞೇನ ಯಜತೇ ಯಂ ಕಾಮಯೇತ ಯಜಮಾನಂ ಭ್ರಾತೃವ್ಯಮಸ್ಯ ಯಜ್ಞಸ್ಯಾಶೀರ್ಗಚ್ಛೇದಿತಿ ತಸ್ಯೈತಾ ವ್ಯಾಹೃತೀಃ ಪುರೋನುವಾಕ್ಯಾಯಾಂ

---

ತಥಾ । ಬ್ರಾಹ್ಮಣಃ । ಸಾಶೀರ್ಕೇಣೇತಿ ಸ-ಆಶೀರ್ಕೇಣ । ಯಜ್ಞೇನ । ಯಜತೇ । ಯಮ್ । ಕಾಮಯೇತ । ಯಜಮಾನಮ್ । ಭ್ರಾತೃವ್ಯಮ್ । ಅಸ್ಯ । ಯಜ್ಞಸ್ಯ। ಆಶೀರಿತ್ಯಾ-ಶೀಃ । ಗಚ್ಛೇತ್ । ಇತಿ । ತಸ್ಯ । ಏತಾಃ । ವ್ಯಾಹೃತೀ ರಿತಿ ವಿ-ಆಹೃತೀಃ। ಪುರೋನುವಾಕ್ಯಾಯಾಮಿತಿ ಪುರಃ-ಅನುವಾಕ್ಯಾಯಾಮ್ ।

---

| | |
|---|---|
| ತಥಾ ಬ್ರಾಹ್ಮಣಃ ಸಾಶೀರ್ಕೇಣ ಯಜ್ಞೇನ ಯಜತೇ | ಹೀಗೆ ಮಾಡುವುದರಿಂದ ಯಜಮಾನನು ಫಲಸಹಿತವಾದ ಯಾಗವನ್ನು ಮಾಡಿದವನಾಗುತ್ತಾನೆ. |

**ನಿಂದ್ಯವಾದ ವಿನಿಯೋಗ; ಅದರ ದುಷ್ಫಲ; ವಿವರಣೆ**

| | |
|---|---|
| ಯಮ್ ಕಾಮಯೇತ ಯಜಮಾನಮ್ ಭ್ರಾತೃವ್ಯಮ್ ಅಸ್ಯ ಯಜ್ಞಸ್ಯ ಆಶೀಃ ಗಚ್ಛೇತ್ ಇತಿ | ಹೋತೃವು ಯಜಮಾನನ ಶತ್ರುವಿಗೇ ಯಾಗದ ಫಲವು ಬರಲೆಂದು ಇಚ್ಛಿಸಿದರೆ* |
| ತಸ್ಯ ಏತಾಃ ವ್ಯಾಹೃತೀಃ ಪುರೋನುವಾಕ್ಯಾಯಾಮ್ | [ಆ ಯಜಮಾನನ ಯಜ್ಞದಲ್ಲಿ] ಪುರೋನುವಾಕ್ಯೆಗೆ ಮೊದಲು ಈ ವ್ಯಾಹೃತಿಗಳನ್ನು |

---

ಪ್ರಾರಂಭಮಂತ್ರವಾದ ಪ್ರತಿಪದವನ್ನು ಮಾಡಿದಂತಾಗುತ್ತದೆ. ಇದರಿಂದ ಯಜಮಾನನು ಫಲಾಶೀಸ್ಸಹಿತವಾದ ಯಾಗವನ್ನು ಮಾಡಿದವನಾಗುತ್ತಾನೆ.

---

* ವಿಸ್ಮೃತಿಯಿಂದ ಕೂಡ ಹೀಗೆ ಮಾಡಬಾರದು ಎಂದು ಇಂತಹ ವಿಧಿಗಳ ತಾತ್ಪರ್ಯ. ಋತ್ವಿಜರು ಯಾವಾಗಲೂ ಯಜಮಾನನಿಗೆ ಹಿತವನ್ನೇ ಕೋರಬೇಕು.

ದಧ್ಯಾದ್ಭ್ರಾತೃವ್ಯದೇವತ್ಯಾ ವೈ ಪುರೋನುವಾಕ್ಯಾ ಭ್ರಾತೃವ್ಯ ಮೇವಾಸ್ಯ ಯಜ್ಞಸ್ಯಾ [ಯಜ್ಞಸ್ಯ (೪) ಆಶೀರ್ಗಚ್ಛತಿ] ಶೀರ್ಗ ಚ್ಛತಿ ಯಾನ್ಕಾಮಯೇತ ಯಜಮಾನಾನ್ತ್ಸಮಾವತ್ಯೇನಾನ್, ಯಜ್ಞಸ್ಯಾಶೀರ್ಗಚ್ಛೇದಿತಿ

---

ದಧ್ಯಾತ್ । ಭ್ರಾತೃವ್ಯದೇವತ್ಯೇತಿ ಭ್ರಾತೃವ್ಯ-ದೇವತ್ಯಾ । ವೈ । ಪುರೋನುವಾಕ್ಯೇತಿ ಪುರಃ-ಅನುವಾಕ್ಯಾ । ಭ್ರಾತೃವ್ಯಮ್ । ಏವ । ಅಸ್ಯ । ಯಜ್ಞಸ್ಯ । ಆಶೀರಿತ್ಯಾ-ಶೀಃ। ಗಚ್ಛತಿ। ಯಾನ್। ಕಾಮಯೇತ। ಯಜಮಾನಾನ್। ಸಮಾವತೀ । ಏನಾನ್ । ಯಜ್ಞಸ್ಯ। ಆಶೀರಿತ್ಯಾ-ಶೀಃ । ಗಚ್ಛೇತ್ । ಇತಿ ।

---

| | |
|---|---|
| ದಧ್ಯಾತ್ | ಹೇಳಬೇಕು. |
| ಭ್ರಾತೃವ್ಯದೇವತ್ಯಾ ವೈ ಪುರೋನುವಾಕ್ಯಾ | ಪುರೋನುವಾಕ್ಯೆಯು ಶತ್ರುದೇವತಾಕವಾಗಿದೆ ಯಷ್ಟೆ. |
| ಭ್ರಾತೃವ್ಯಮ್ ಏವ ಅಸ್ಯ ಯಜ್ಞಸ್ಯ ಆಶೀಃ ಗಚ್ಛತಿ | ಈ ಯಜ್ಞದ ಫಲವು ಶತ್ರುವನ್ನೇ ಹೊಂದುತ್ತದೆ ಯಷ್ಟೆ. |

**ಅಹೀನ-ಸತ್ರಗಳಲ್ಲಿ ವ್ಯಾಹೃತಿಗಳ ವಿನಿಯೋಗ [ಪ್ರಾಸಂಗಿಕ]**

| | |
|---|---|
| ಯಾನ್ ಕಾಮಯೇತ ಯಜಮಾನಾನ್ ಸಮಾವತೀ ಏನಾನ್ ಯಜ್ಞಸ್ಯ ಆಶೀಃ ಗಚ್ಛೇತ್ ಇತಿ | [ಯಜಮಾನರೇ ಋತ್ವಿಜರಾಗಿರುವ, ಬಹು ಯಜಮಾನರುಳ್ಳ, ಸತ್ರ-ಅಹೀನಯಾಗಗಳ ಅಂಗಭೂತವಾದ ಇಷ್ಟಿಗಳಲ್ಲಿ ಹೋತೃವು] ಯಜ್ಞದ ಫಲವು ಯಜಮಾನರೆಲ್ಲರನ್ನೂ ಸಮಾನವಾಗಿಯೇ ಸೇರಬೇಕೆಂದು ಬಯಸಿದರೆ |

---

**ನಿಂದ್ಯ ವಿನಿಯೋಗ; ತಾತ್ಪರ್ಯ:—** ಯಜಮಾನನ ಶತ್ರುವಿಗೆ ಯಜ್ಞದ ಫಲವು ಸಿಕ್ಕಬೇಕೆಂದು ಹೋತೃವು ಅಪೇಕ್ಷಿಸಿದರೆ ಪುರೋನುವಾಕ್ಯೆಗೆ ಮೊದಲು ಈ ವ್ಯಾಹೃತಿ ಗಳನ್ನು ಹೇಳಬೇಕು. ಪುರೋನುವಾಕ್ಯೆಯು ಶತ್ರುದೇವತಾಕವಾದುದರಿಂದ ಯಜ್ಞದ ಫಲವು ಶತ್ರುವಿಗೇ ಸೇರುತ್ತದೆ.

ತೇಷಾಮೇತಾ ವ್ಯಾಹೃತೀಃ ಪುರೋನುವಾಕ್ಯಾಯಾ ಅರ್ಧರ್ಚ
ಏಕಾಂ ದಧ್ಯಾದ್ಯಾಜ್ಯಾಯೈ ಪುರಸ್ತಾದೇಕಾಂ ಯಾಜ್ಯಾಯಾ
ಅರ್ಧರ್ಚ ಏಕಾಂ ತಥೈನಾನ್ಸಮಾವತೀ ಯಜ್ಞಸ್ಯಾಶೀರ್ಗಚ್ಛತಿ

---

ತೇಷಾಮ್। ಏತಾಃ । ವ್ಯಾಹೃತೀರಿತಿ ವಿ-ಆಹೃತೀಃ । ಪುರೋನುವಾಕ್ಯಾಯಾ ಇತಿ ಪುರಃ-ಅನುವಾಕ್ಯಾಯಾಃ। ಅರ್ಧರ್ಚ ಇತ್ಯರ್ಧ-ಋಚೇ । ಏಕಾಮ್ । ದಧ್ಯಾತ್ । ಯಾಜ್ಯಾಯೈ। ಪುರಸ್ತಾತ್ । ಏಕಾಮ್ । ಯಾಜ್ಯಾಯಾಃ । ಅರ್ಧರ್ಚ ಇತ್ಯರ್ಧ-ಋಚೇ । ಏಕಾಮ್। ತಥಾ । ಏನಾನ್ । ಸಮಾವತೀ । ಯಜ್ಞಸ್ಯ । ಆಶೀರಿತ್ಯಾ-ಶೀಃ । ಗಚ್ಛತಿ ।

---

| | |
|---|---|
| ತೇಷಾಮ್ ಏತಾಃ ವ್ಯಾಹೃತೀಃ ಪುರೋನುವಾಕ್ಯಾಯಾಃ ಅರ್ಧರ್ಚೇ ಏಕಾಮ್ ದಧ್ಯಾತ್ | ಆ ಯಜಮಾನನ ಯಾಗಗಳಲ್ಲಿ [ಈ ವ್ಯಾಹೃತಿಗಳನ್ನು ಹೀಗೆ ವಿನಿಯೋಗಿಸಬೇಕು] ಪುರೋನುವಾಕ್ಯೆಯ ಋಕ್ಕಿನ ಅರ್ಧವನ್ನು ಹೇಳಿದ ಮೇಲೆ ಮೊದಲನೆಯ 'ಭೂಃ' ಎಂಬ ವ್ಯಾಹೃತಿಯನ್ನು ಹೇಳಬೇಕು. |
| ಯಾಜ್ಯಾಯೈ ಪುರಸ್ತಾತ್ ಏಕಾಮ್ [ದಧ್ಯಾತ್] | ಯಾಜ್ಯೆಗೆ ಮೊದಲು ಎರಡನೆಯ 'ಭುವಃ' ಎಂಬ ವ್ಯಾಹೃತಿಯನ್ನು ಹೇಳಬೇಕು. |
| ಯಾಜ್ಯಾಯಾಃ ಅರ್ಧರ್ಚೇ ಏಕಾಮ್ [ದಧ್ಯಾತ್] | ಯಾಜ್ಯಾಮಂತ್ರದ ಅರ್ಧವನ್ನು ಹೇಳಿದ ಮೇಲೆ ಮೂರನೆಯ 'ಸುವಃ' ಎಂಬ ವ್ಯಾಹೃತಿಯನ್ನು ಹೇಳಬೇಕು. [ವಿಧಿ] |
| ತಥಾ ಏನಾನ್ ಸಮಾವತೀ ಯಜ್ಞಸ್ಯ ಆಶೀಃ ಗಚ್ಛತಿ | ಹಾಗೆ ಮಾಡಿದರೆ ಯಜ್ಞದ ಫಲವು ಈ ಯಜಮಾನರನ್ನು ಸಮಾನವಾಗಿಯೇ ಸೇರುತ್ತದೆ. |

[ಭ.ಭಾ.ಭಾ. ಸಮಾ = ಅವಿಷಮಾ / ಸದಾ ಯಜಮಾನಗಾಮಿನೀ = ಯಜ್ಞದ ಫಲವು ಸದಾ ಯಜಮಾನನಿಗೇ ಸೇರುವುದಾಗಿರಬೇಕು ಎಂದು ಇಚ್ಛಿಸಿದರೆ ಈ ವ್ಯಾಹೃತಿಗಳನ್ನು ಹೀಗೆ ವಿನಿಯೋಗಿಸಬೇಕು.] [ಇದು ಕಾಮ್ಯವಿಧಿ.]

---

**ವ್ಯಾಹೃತಿವಿನಿಯೋಗ; ತಾತ್ಪರ್ಯ:**—ಬಹು ಯಜಮಾನರುಳ್ಳ ಸತ್ರ-ಅಹೀನಯಾಗಗಳ ಅಂಗವಾದ ಇಷ್ಟಿಗಳಲ್ಲಿ ಎಲ್ಲ ಯಜಮಾನರಿಗೂ ಯಜ್ಞಫಲವು ಸಮಾನವಾಗಿ ಸೇರ ಬೇಕೆಂದು ಹೋತೃವು ಬಯಸಿದರೆ/ಯಜ್ಞಫಲವು ಸದಾ ಯಜಮಾನನಿಗೇ ಸೇರಬೇಕೆಂದು ಬಯಸಿದರೆ ಪುರೋನುವಾಕ್ಯದ ಅರ್ಧಋಕ್ಕಿನ ನಂತರ, ಯಾಜ್ಯಾನುವಾಕ್ಯೆಯ ಮೊದಲು,

ಯಥಾ ವೈ ಪರ್ಜನ್ಯಸ್ಸುವೃಷ್ಟಂ ವರ್ಷತ್ಯೇವಂ ಯಜ್ಞೋ

ಯಜಮಾನಾಯ ವರ್ಷತಿ ಸ್ಥಲಯೋದಕಂ

ಪರಿಗೃಹ್ಣಂತ್ಯಾಶಿಷಾ

---

ಯಥಾ । ವೈ । ಪರ್ಜನ್ಯಃ । ಸುವೃಷ್ಟಮಿತಿ ಸು-ವೃಷ್ಟಮ್ । ವರ್ಷತಿ । ಏವಮ್। ಯಜ್ಞಃ। ಯಜಮಾನಾಯ । ವರ್ಷತಿ । ಸ್ಥಲಯಾ । ಉದಕಮ್ । ಪರಿಗೃಹ್ಣಂತೀತಿ ಪರಿ-ಗೃಹ್ಣಂತಿ । ಆಶಿಷೇತ್ಯಾ-ಶಿಷಾ ।

---

**ಸಮಾನಫಲಪ್ರಾಪ್ತಿಯ ದೃಷ್ಟಾಂತ**

| | |
|---|---|
| ಯಥಾ ವೈ ಪರ್ಜನ್ಯಃ ಸುವೃಷ್ಟಮ್ ವರ್ಷತಿ | [ಎಲ್ಲ ಕಡೆ ಹರಡಿಕೊಂಡಿರುವ] ಮೋಡವು ಹೇಗೆ ಸಸ್ಯಗಳಿಗೆ ವೃದ್ಧಿಯನ್ನುಂಟುಮಾಡುವ ಮಳೆಯನ್ನು [ಏಕರೂಪವಾಗಿ] ಸುರಿಸುತ್ತದೆಯೋ |
| ಏವಮ್ ಯಜ್ಞಃ ಯಜಮಾನಾಯ ವರ್ಷತಿ | ಹೀಗೆ ಯಜ್ಞವು ಎಲ್ಲಾ ಫಲಗಳನ್ನೂ ಯಜಮಾನ ಸಮೂಹಕ್ಕೆ ಸಮಾನವಾಗಿಯೇ ಸುರಿಸುತ್ತದೆ [ಉಂಟು ಮಾಡುತ್ತದೆ.] |

**ದೃಷ್ಟಾಂತದಿಂದ ಹಿಂದಿನ ವಿಧಿಯ ಪ್ರಶಂಸೆ**

| | |
|---|---|
| ಸ್ಥಲಯಾ ಉದಕಮ್ ಪರಿಗೃಹ್ಣಂತಿ | [ಸುವೃಷ್ಟಿಯಿಂದ ನದಿಯು ತುಂಬಿದಾಗ ಎಲ್ಲ ಜನರೂ] ದಡದಲ್ಲಿದ್ದು ನೀರನ್ನು ತೆಗೆದುಕೊಳ್ಳುತ್ತಾರೆ. [ತೀರದಿಂದ ನೀರನ್ನು ತಡೆಯುತ್ತಾರೆ.] |

---

ಯಾಜ್ಯಾನುವಾಕ್ಯೆಯ ಅರ್ಧಋಕ್ಕಿನ ನಂತರ ಭೂಃ, ಭುವಃ ಮತ್ತು ಸುವಃ ಎಂಬ ವ್ಯಾಹೃತಿಗಳನ್ನು ಕ್ರಮವಾಗಿ ಹೇಳಬೇಕು.

**ದೃಷ್ಟಾಂತ; ತಾತ್ಪರ್ಯ:—** ಮೋಡವು ಏಕರೂಪವಾಗಿ ಮಳೆ ಸುರಿಸುವಂತೆ ಯಜ್ಞವು ಎಲ್ಲ ಯಜಮಾನರಿಗೂ/ಯಜಮಾನನಿಗೂ ಸಮಾನಫಲವನ್ನು ನೀಡುತ್ತದೆ.

ಯಜ್ಞಂ ಯಜಮಾನಃ ಪರಿಗೃಹ್ಣಾತಿ ಮನೋಽಸಿ ಪ್ರಾಜಾ
ಪತ್ಯಂ(೫) ಮನಸಾ ಮಾ ಭೂತೇನಾವಿಶೇತ್ಯಾಹ
ಮನೋ ವೈ ಪ್ರಾಜಾಪತ್ಯಂ

---

ಯಜ್ಞಮ್ । ಯಜಮಾನಃ । ಪರೀತಿ । ಗೃಹ್ಣಾತಿ । ಮನಃ । ಅಸಿ । ಪ್ರಾಜಾಪತ್ಯಮಿತಿ ಪ್ರಾಜಾ-ಪತ್ಯಮ್ । ಮನಸಾ । ಮಾ । ಭೂತೇನ । ಏತಿ । ವಿಶ । ಇತಿ । ಆಹ। ಮನಃ । ವೈ । ಪ್ರಾಜಾಪತ್ಯಮಿತಿ ಪ್ರಾಜಾ-ಪತ್ಯಮ್ ।

---

ಆಶಿಷಾ ಯಜ್ಞಮ್ ಯಜಮಾನಃ ಪರಿಗೃಹ್ಣಾತಿ — [ಹಾಗೆಯೇ] ಯಜಮಾನಸಮೂಹವು ಎಲ್ಲರಿಗೂ ಸಮಾನಫಲವನ್ನು ಕೊಡುವ ಯಜ್ಞವನ್ನು ಪರಿಗ್ರಹಿಸುತ್ತಾರೆ.*

[ಯಜಮಾನನು ಯಾಗವು ಫಲವನ್ನು ಕೊಟ್ಟೇ ಕೊಡುವಂತೆ ಮಾಡುತ್ತಾನೆ.]

### ಸ್ರೌವಾಘಾರ [ಪ್ರಥಮಾಘಾರ]ಹೋಮದ ಅನುಮಂತ್ರಣಮಂತ್ರದ ವಿವರಣೆ

ಮನೋಽಸಿ ಪ್ರಾಜಾಪತ್ಯಂ ಮನಸಾ ಮಾ ಭೂತೇನ ಆ ವಿಶ ಇತಿ ಆಹ — [ಯಜಮಾನನು] 'ಮನೋಽಸಿ........ ವಿಶ' ಎಂಬ [ಪ್ರಥಮಾಘಾರ] ಅನುಮಂತ್ರಣ ಮಂತ್ರವನ್ನು ಹೇಳುತ್ತಾನೆ.

ಮನಃ ವೈ ಪ್ರಾಜಾಪತ್ಯಮ್ — ಪ್ರಜಾಪತಿಯಿಂದ ಮೊದಲು ಸೃಷ್ಟಿಸಲ್ಪಟ್ಟ ಮನಸ್ಸು ಪ್ರಾಜಾಪತ್ಯವಾಗಿದೆ.

---

ಇಂತಹ ಯಜ್ಞವನ್ನು ಎಲ್ಲರೂ–ತುಂಬಿದ ನದಿಯಿಂದ ದಡದಲ್ಲಿರುವ ಜನರು ನೀರನ್ನು ತೆಗೆದುಕೊಳ್ಳುವಂತೆ–ಪರಿಗ್ರಹಿಸುತ್ತಾರೆ.

---

* ಹಿಂದಿನ ವಿಧಿಗೆ ಅನ್ವಯಿಸಿ 'ಯಜಮಾನಃ' ಎಂಬ ಏಕವಚನವನ್ನು ಯಜಮಾನಸಮೂಹಪರವಾಗಿ ವಿವರಿಸಲಾಗಿದೆ. ಎಲ್ಲ ವಿಧಿಗಳಿಗೆ ಸಂಬಂಧಿಸಿದಂತೆ 'ಯಜಮಾನನು' ಎಂದು ಅರ್ಥ ಮಾಡಿದರೂ ಎಲ್ಲರಿಗೂ ಅನ್ವಯಿಸುತ್ತದೆ.

ಪ್ರಾಜಾಪತ್ಯೋ ಯಜ್ಞೋ ಮನ ಏವ ಯಜ್ಞಮಾತ್ಮನ್ಧತ್ತೇ

ವಾಗಸ್ಯೈಂದ್ರೀ ಸಪತ್ನಕ್ಷಯಣೀ ವಾಚಾ ಮೇಂದ್ರಿಯೇಣಾ

ವಿಶೇತ್ಯಾಹೈಂದ್ರೀ

---

ಪ್ರಾಜಾಪತ್ಯ ಇತಿ ಪ್ರಾಜಾ-ಪತ್ಯಃ। ಯಜ್ಞಃ । ಮನಃ । ಏವ । ಯಜ್ಞಮ್ । ಆತ್ಮನ್ನ್। ಧತ್ತೇ । ವಾಕ್। ಅಸಿ । ಐಂದ್ರೀ। ಸಪತ್ನಕ್ಷಯಣೀತಿ ಸಪತ್ನ-ಕ್ಷಯಣೀ । ವಾಚಾ । ಮಾ । ಇಂದ್ರಿಯೇಣ । ಏತಿ । ವಿಶ । ಇತಿ। ಆಹ । ಐಂದ್ರೀ ।

---

| | |
|---|---|
| ಪ್ರಾಜಾಪತ್ಯಃ ಯಜ್ಞಃ | ಯಜ್ಞವೂ ಪ್ರಾಜಾಪತ್ಯವಾಗಿದೆ*. |
| ಮನಃ ಏವ ಯಜ್ಞಮ್ ಆತ್ಮನ್ ಧತ್ತೇ | [ಈ ಅನುಮಂತ್ರಣದಿಂದ] ಯಜಮಾನನು ಮನಸ್ಸನ್ನೂ, ಯಜ್ಞವನ್ನೂ ತನ್ನಲ್ಲಿ ಧರಿಸುತ್ತಾನೆ/ಸ್ಥಾಪಿಸುತ್ತಾನೆಂದು [ಶ್ರುತಿಯು ಹೇಳುತ್ತದೆ.] |

**ದ್ವಿತೀಯಾಘಾರಹೋಮದ ಅನುಮಂತ್ರಣಮಂತ್ರದ ವಿವರಣೆ**

| | |
|---|---|
| ವಾಕ್ ಅಸಿ ಐಂದ್ರೀ ಸಪತ್ನಕ್ಷಯಣೀ ವಾಚಾ ಮಾ ಇಂದ್ರಿಯೇಣ ಆ ವಿಶ ಇತಿ ಆಹ ಐಂದ್ರೀ ವೈ ವಾಕ್ | [ಯಜಮಾನನು] 'ವಾಕ್... ವಿಶ' ಎಂಬ [ದ್ವಿತೀಯಾಘಾರ] ಅನುಮಂತ್ರಣಮಂತ್ರವನ್ನು ಹೇಳುತ್ತಾನೆ. [ಇಂದ್ರನಿಂದ ವ್ಯಾಕೃತವಾದ] ವಾಕ್ ಐಂದ್ರೀಯಾಗಿದೆಯಷ್ಟೆ. |

---

**ಸ್ರೌವಾಘಾರ ಅನುಮಂತ್ರಣ; ತಾತ್ಪರ್ಯ:—** ಪ್ರಜಾಪತಿಯಿಂದ ಮೊದಲು ಸೃಷ್ಟಿಸಲ್ಪಟ್ಟ ಮನಸ್ಸು ಪ್ರಾಜಾಪತ್ಯ. ಯಜ್ಞವೂ ಪ್ರಜಾಪತಿಯಿಂದಲೇ ಸೃಷ್ಟಿಸಲ್ಪಟ್ಟದ್ದು. ಈ ಅನುಮಂತ್ರಣದಿಂದ ಯಜಮಾನನು ಪ್ರಾಜಾಪತ್ಯಗಳಾದ ಮನಸ್ಸನ್ನೂ, ಯಜ್ಞವನ್ನೂ ತನ್ನಲ್ಲಿ ಸ್ಥಾಪಿಸಿಕೊಳ್ಳುತ್ತಾನೆ/ಸ್ಥಿರವಾಗಿ ಇರುವಂತೆ ಮಾಡುತ್ತಾನೆ.

---

* ಪ್ರಜಾಪತಿರ್ಯಜ್ಞಾನಸೃಜತ.....। ತೈ.ಸಂ. 1.6.9

ವೈ ವಾಗ್ವಾಚಮೇವೈಂದ್ರೀಮಾತ್ಮನ್ಧತ್ತೇ ||೩೮-10||

[ತೇನೈವ ಬ್ರಹ್ಮ ರಾಷ್ಟ್ರಮೇವಾಸ್ಯ ಯಜ್ಞಸ್ಯ ಪ್ರಾಜಾಪತ್ಯಗ್‌ಂ

ಷಟ್ತ್ರಿಗ್‌ಂಶಚ್ಚ||]

---

ವೈ । ವಾಕ್ । ವಾಚಮ್ । ಏವ । ಐಂದ್ರೀಮ್ । ಆತ್ಮನ್ನ್ । ಧತ್ತೇ || ೧೦||

---

| | |
|---|---|
| ವಾಚಮ್ ಏವ ಐಂದ್ರೀಮ್ ಆತ್ಮನ್ ಧತ್ತೇ | [ಈ ಅನುಮಂತ್ರಣಮಂತ್ರವನ್ನು ಹೇಳುವುದರಿಂದ ಯಜಮಾನನು] ಇಂದ್ರಸಂಬಂಧಿಯಾದ ವಾಕ್ ಅನ್ನು ತನ್ನಲ್ಲಿ ಸ್ಥಾಪಿಸಿಕೊಳ್ಳುತ್ತಾನೆ. |

---

ದ್ವಿತೀಯಾಘಾರ ಅನುಮಂತ್ರಣ; ತಾತ್ಪರ್ಯ:— ಮೊದಲ ಆಘಾರವು ಅಮಂತ್ರಕ. ಎರಡನೆಯ ಆಘಾರಹೋಮವು ಸಮಂತ್ರಕ. ಯಜಮಾನನು 'ವಾಗಸ್ಯೈಂದ್ರೀ' ಎಂಬ ಅನುಮಂತ್ರಣವನ್ನು ಹೇಳುತ್ತಾನೆ.

ಇಂದ್ರನು ವಾಕ್ಕಿಗೆ ವ್ಯಾಕರಣವನ್ನು ರಚಿಸಿರುವುದರಿಂದ ವಾಕ್ ಇಂದ್ರ ಸಂಬಂಧಿಯಾಗಿದೆ.

ಈ ಅನುಮಂತ್ರಣದಿಂದ ಯಜಮಾನನು ಇಂದ್ರಸಂಬಂಧಿಯಾದ ವಾಕ್ಕನ್ನು ತನ್ನಲ್ಲಿ ಧರಿಸುತ್ತಾನೆ ಎಂದು ಶ್ರುತಿಯು ಹೇಳುತ್ತದೆ.

---

## ॥ ಏಕಾದಶೋಽನುವಾಕಃ ॥

ಯೋ ವೈ ಸಪ್ತದಶಂ ಪ್ರಜಾಪತಿಂ ಯಜ್ಞಮನ್ವಾಯತ್ತಂ

ವೇದ ಪ್ರತಿ ಯಜ್ಞೇನ ತಿಷ್ಠತಿ ನ ಯಜ್ಞಾದ್ಭ್ರಗ್ಂಶತ

---

ಯಃ । ವೈ । ಸಪ್ತದಶಮಿತಿ ಸಪ್ತ-ದಶಮ್ । ಪ್ರಜಾಪತಿಮಿತಿ ಪ್ರಜಾ-ಪತಿಮ್ । ಯಜ್ಞಮ್। ಅನ್ವಾಯತ್ತಮಿತ್ಯನು-ಆಯತ್ತಮ್ । ವೇದ । ಪ್ರತೀತಿ । ಯಜ್ಞೇನ । ತಿಷ್ಠತಿ । ನ । ಯಜ್ಞಾತ್ । ಭ್ರಗ್ಂಶತೇ ।

---

ಹತ್ತನೆಯ ಅನುವಾಕದಲ್ಲಿ ಹವಿಸ್ಸಾದನವು ಹೇಳಲ್ಪಟ್ಟಿದೆ. ಈ ಹನ್ನೊಂದನೆಯ ಅನುವಾಕದಲ್ಲಿ ಆಶ್ರಾವಣಾದಿಮಂತ್ರಗಳು ಪ್ರಧಾನವಾಗಿ ಹೇಳಲ್ಪಡುತ್ತವೆ. ಪ್ರಧಾನ ಹೋಮಾನುಮಂತ್ರಣದ ಮಂತ್ರಗಳ ವಿವರಣೆಯೂ ಇದೆ. ಮೊದಲು 'ಆ ಶ್ರಾವಯ' ಮೊದಲಾದ ಐದು ಮಂತ್ರಗಳ ಉತ್ಪತ್ತಿಯನ್ನು ಹೇಳುವುದಕ್ಕಾಗಿ ಆ ಮಂತ್ರಗಳ ಸ್ತುತಿ ಇದೆ.

---

### ಸಪ್ತದಶಾಕ್ಷರರೂಪಪ್ರಜಾಪತಿಯ ಪ್ರಶಂಸೆ

| | |
|---|---|
| ಯಃ ವೈ ಸಪ್ತದಶಮ್ ಪ್ರಜಾಪತಿಮ್ ಯಜ್ಞಮ್ ಅನ್ವಾಯತ್ತಮ್ ವೇದ ಪ್ರತಿ ಯಜ್ಞೇನ ತಿಷ್ಠತಿ | ಯಾವನು ['ಆ ಶ್ರಾವಯ' ಮೊದಲಾದ] ಹದಿನೇಳು ಅಕ್ಷರಗಳುಳ್ಳ [ ಪ್ರಜಾಪತಿ ಸೃಷ್ಟವಾಗಿ] 'ಸಪ್ತದಶಪ್ರಜಾಪತಿ' [ಎಂಬ ಹೆಸರಿನ ಐದು ಮಂತ್ರಗಳನ್ನು]ಯನ್ನು ಎಲ್ಲ ಯಜ್ಞಗಳಲ್ಲಿ ಅನುಸರಿಸಿ ಇರುವುದನ್ನಾಗಿ ತಿಳಿಯುತ್ತಾನೆಯೋ [ಆತನು] ಸಂಪೂರ್ಣವಾದ ಯಜ್ಞದಿಂದ ಪ್ರತಿಷ್ಠಿತನಾಗುತ್ತಾನೆ. |
| ನ ಯಜ್ಞಾತ್ ಭ್ರಗ್ಂಶತೇ | [ವೈಕಲ್ಯವಿಲ್ಲದಿರುವುದರಿಂದ] ಯಜ್ಞದಿಂದ ಭ್ರಂಶವನ್ನು ಹೊಂದುವುದಿಲ್ಲ/ ಯಜ್ಞಭ್ರಷ್ಟನಾಗುವುದಿಲ್ಲ. |

ಆ ಶ್ರಾವಯೇತಿ ಚತುರಕ್ಷರಮಸ್ತು ಶ್ರೌಷಡಿತಿ ಚತುರಕ್ಷರಂ
ಯಜೇತಿ ದ್ವ್ಯಕ್ಷರಂ ಯೇ ಯಜಾಮಹ ಇತಿ ಪಂಚಾಕ್ಷರಂ

---

ಏತಿ । ಶ್ರಾವಯ । ಇತಿ । ಚತುರಕ್ಷರಮಿತಿ ಚತುಃ-ಅಕ್ಷರಮ್ । ಅಸ್ತು । ಶ್ರೌಷಟ್। ಇತಿ । ಚತುರಕ್ಷರಮಿತಿ ಚತುಃ-ಅಕ್ಷರಮ್ । ಯಜ । ಇತಿ । ದ್ವ್ಯಕ್ಷರಮಿತಿ ದ್ವಿ-ಅಕ್ಷರಮ್ । ಯೇ । ಯಜಾಮಹೇ । ಇತಿ । ಪಂಚಾಕ್ಷರಮಿತಿ ಪಂಚ-ಅಕ್ಷರಮ್ ।

---

**ಸಪ್ತದಶಪ್ರಜಾಪತಿಮಂತ್ರಗಳು**

| | |
|---|---|
| ಆ ಶ್ರಾವಯ ಇತಿ ಚತುರಕ್ಷರಮ್ | * 'ಆ ಶ್ರಾವಯ' ಎಂಬ ನಾಲ್ಕು ಅಕ್ಷರಗಳುಳ್ಳ ಮಂತ್ರವು ಮೊದಲನೆಯದು. |
| ಅಸ್ತು ಶ್ರೌಷಟ್ ಇತಿ ಚತುರಕ್ಷರಮ್ | *'ಅಸ್ತು ಶ್ರೌಷಟ್' ಎಂಬ ನಾಲ್ಕು ಅಕ್ಷರಗಳುಳ್ಳ ಮಂತ್ರವು ಎರಡನೆಯದು. |
| ಯಜ ಇತಿ ದ್ವ್ಯಕ್ಷರಮ್ | * 'ಯಜ' ಎಂಬ ಎರಡು ಅಕ್ಷರಗಳುಳ್ಳ ಮಂತ್ರವು ಮೂರನೆಯದು. |
| ಯೇ ಯಜಾಮಹೇ ಇತಿ ಪಂಚಾಕ್ಷರಮ್ | * 'ಯೇ ಯಜಾಮಹೇ' ಎಂಬ ಐದು ಅಕ್ಷರಗಳುಳ್ಳ ಮಂತ್ರವು ನಾಲ್ಕನೆಯದು. |

---

**ಸಪ್ತದಶಪ್ರಜಾಪತಿಪ್ರಶಂಸೆ-ತಾತ್ಪರ್ಯ:** ಎಲ್ಲ ಯಜ್ಞಗಳಲ್ಲಿಯೂ 'ಆ ಶ್ರಾವಯ' ಮೊದಲಾದ ಐದು ಮಂತ್ರಗಳು ವ್ಯಾಪಿಸಿವೆ. ಇವುಗಳಲ್ಲಿ ಒಟ್ಟು ಹದಿನೇಳು ಅಕ್ಷರಗಳಿವೆ. ಇವುಗಳನ್ನು ಪ್ರಜಾಪತಿಯು ಸೃಷ್ಟಿಸಿದನು. ಆದುದರಿಂದ

---

* 'ಅಧ್ವರ್ಯುವು ಆಗ್ನೀಧ್ರನಿಗೆ ಹೇಳುವ ಈ ಪದಕ್ಕೇ 'ಆಗ್ನೀಧ್ರನೇ! ಯಾಗದೇವತೆಗೆ 'ನಿನಗೆ ಈ ಹವಿಸ್ಸು ಕೊಡಲ್ಪಟ್ಟಿದೆ' ಎಂಬುದನ್ನು ಅಭಿಮುಖವಾಗಿ ಕೇಳಿಸು' ಎಂದು ಅರ್ಥ.

* ಆಗ್ನೀಧ್ರನು ಅಂಗೀಕರಿಸಿ ಹೇಳುವ ಈ ಎರಡು ಪದಗಳಿಗೆ 'ಎಲೈ! ಯಾಗದೇವತೆಗಳೇ ! ನಿಮ್ಮನ್ನು ಉದ್ದೇಶಿಸಿ ಈ ಹವಿಸ್ಸು ಕೊಡಲ್ಪಡುತ್ತದೆಯೆಂಬುದನ್ನು ಕೇಳಿರಿ' ಎಂದು ಅರ್ಥ.

* ಬಳಿಕ ಅಧ್ವರ್ಯುವು ಹೋತೃವನ್ನುದ್ದೇಶಿಸಿ ಹೇಳುವ ಈ ಪದಕ್ಕೆ 'ಎಲೈ! ಹೋತೃವೇ! ಯಾಜ್ಯಾಮಂತ್ರವನ್ನು ಪಠಿಸು' ಎಂದು ಅರ್ಥ.

* ಅನಂತರ ಹೋತೃವು ಹೇಳುವ ಈ ಎರಡು ಪದಗಳಿಗೆ "ಯಾವ ನಾವು 'ಯಜ' ಎಂದು ಅಧ್ವರ್ಯುವಿನಿಂದ ಪ್ರೇರಿತರಾಗಿದ್ದೇವೆಯೋ ಅಂತಹ ಹೋತೃಗಳಾದ ನಾವು ಯಾಜ್ಯೆಯನ್ನು ಪಠಿಸುತ್ತೇವೆ' ಎಂದು ಅರ್ಥ.

ದ್ವ್ಯಕ್ಷರೋ ವಷಟ್ಕಾರ ಏಷ ವೈ ಸಪ್ತದಶಃ ಪ್ರಜಾಪತಿರ್ಯ
ಜ್ಞಮನ್ವಾಯತ್ತೋ ಯ ಏವಂ ವೇದ ಪ್ರತಿ ಯಜ್ಞೇನ ತಿಷ್ಠತಿ

---

ದ್ವ್ಯಕ್ಷರ ಇತಿ ದ್ವಿ-ಅಕ್ಷರಃ । ವಷಟ್ಕಾರ ಇತಿ ವಷಟ್-ಕಾರಃ । ಏಷಃ । ವೈ । ಸಪ್ತದಶ ಇತಿ ಸಪ್ತ-ದಶಃ । ಪ್ರಜಾಪತಿರಿತಿ ಪ್ರಜಾ-ಪತಿಃ । ಯಜ್ಞಮ್ । ಅನ್ವಾಯತ್ತ ಇತ್ಯನು-ಆಯತ್ತಃ । ಯಃ । ಏವಮ್। ವೇದ । ಪ್ರತೀತಿ । ಯಜ್ಞೇನ । ತಿಷ್ಠತಿ ।

---

ದ್ವ್ಯಕ್ಷರೋ ವಷಟ್ಕಾರಃ — * 'ವೌಷಟ್' ಎಂಬ ಎರಡು ಅಕ್ಷರಗಳುಳ್ಳ ಮಂತ್ರವು ಐದನೆಯದು.

**ಸಪ್ತದಶಪ್ರಜಾಪತಿಯನ್ನು ತಿಳಿಯುವುದರ ಪ್ರಶಂಸೆ**

ಏಷಃ ವೈ ಸಪ್ತದಶಃ ಪ್ರಜಾಪತಿಃ ಯಜ್ಞಮ್ ಅನ್ವಾಯತ್ತಃ — ಇದೇ ['ಆ ಶ್ರಾವಯ' ಮುಂತಾದ ಹದಿನೇಳು ಅಕ್ಷರಗಳುಳ್ಳ ಐದು ಮಂತ್ರಗಳ ಸಮುದಾಯವಾದ] ಎಲ್ಲ ಯಜ್ಞಗಳಲ್ಲಿಯೂ ವ್ಯಾಪಿಸಿರುವ 'ಸಪ್ತದಶ ಪ್ರಜಾಪತಿ'ಯಾಗಿದೆ.

ಯಃ ಏವಂ ವೇದ ಪ್ರತಿ ಯಜ್ಞೇನ ತಿಷ್ಠತಿ — ಯಾವನು[ಯಜಮಾನನು] ಇದನ್ನು ತಿಳಿಯುತ್ತಾನೆಯೋ ಅವನು ಯಜ್ಞದ ಪ್ರಕೃಷ್ಟಸ್ಥಿತಿಯನ್ನು ಹೊಂದುತ್ತಾನೆ/ಅವನ ಯಜ್ಞವು ದೃಢವಾಗಿರುತ್ತದೆ.

---

'ಸಪ್ತದಶಪ್ರಜಾಪತಿ'ಯೆಂದು ಈ ಮಂತ್ರಗಳಿಗೆ ಹೆಸರಿದೆ. ಇದನ್ನು ತಿಳಿದವನು ಯಜ್ಞವನ್ನು ಸಂಪೂರ್ಣವಾಗಿ ಅನುಷ್ಠಾನ ಮಾಡಿ ಪ್ರಕೃಷ್ಟಸ್ಥಿತಿಯನ್ನು ಪಡೆದವನಾಗುತ್ತಾನೆ. ವೈಕಲ್ಯವಿಲ್ಲದಿರುವುದರಿಂದ ಆತನು ಯಜ್ಞಭ್ರಷ್ಟನಾಗುವುದಿಲ್ಲ.

---

* ವೌಷಟ್ ಅಥವಾ ವಷಟ್ ಎಂಬುದರ ಸಮಾನಾರ್ಥಕವಾದ ಈ ವಷಟ್ಕಾರಕ್ಕೆ 'ಎಲೈ! ದೇವತೆಯೇ! ನಿನಗೆ ಈ ಹವಿಸ್ಸು ಕೊಡಲ್ಪಡುತ್ತದೆ' ಎಂದು ಅರ್ಥ.

ನ ಯಜ್ಞಾದ್ಭ್ರಗ್ಂಶತೇ ಯೋ ವೈ ಯಜ್ಞಸ್ಯ ಪ್ರಾಯಣಂ

ಪ್ರತಿಷ್ಠಾಂ[ಪ್ರತಿಷ್ಠಾಮ್ (೧) ಉದಯನಮ್]ಮುದಯನಂ

ವೇದ ಪ್ರತಿಷ್ಠಿತೇನಾರಿಷ್ಟೇನ ಯಜ್ಞೇನ ಸಗ್ಂಸ್ಥಾಂ

---

ನ । ಯಜ್ಞಾತ್ । ಭ್ರಗ್ಂಶತೇ । ಯಃ । ವೈ । ಯಜ್ಞಸ್ಯ । ಪ್ರಾಯಣಮಿತಿ ಪ್ರ-ಆಯನಮ್ । ಪ್ರತಿಷ್ಠಾಮಿತಿ ಪ್ರತಿ-ಸ್ಥಾಮ್ । ಉದಯನಮಿತ್ಯುತ್-ಆಯನಮ್ । ವೇದ । ಪ್ರತಿಷ್ಠಿತೇನೇತಿ ಪ್ರತಿ-ಸ್ಥಿತೇನ । ಅರಿಷ್ಟೇನ । ಯಜ್ಞೇನ । ಸಗ್ಂಸ್ಥಾಮಿತಿ ಸಮ್-ಸ್ಥಾಮ್ ।

---

ನ ಯಜ್ಞಾತ್ ಭ್ರಗ್ಂಶತೇ — ಅವನು ಯಜ್ಞಭ್ರಷ್ಟನಾಗುವುದಿಲ್ಲ.

**ಐದು ಮಂತ್ರಗಳ ಮಹಿಮೆಯ ಪ್ರಶಂಸೆ**

ಯಃ ವೈ ಯಜ್ಞಸ್ಯ ಪ್ರಾಯಣಮ್ ಪ್ರತಿಷ್ಠಾಮ್ ಉದಯನಮ್ ವೇದ — ಯಾವ ಯಜಮಾನನು ಯಜ್ಞದ ಪ್ರಾರಂಭವನ್ನೂ, ಮಧ್ಯದ ಅನುಷ್ಠಾನವನ್ನೂ, ಯಜ್ಞದ ಸಮಾಪ್ತಿಯನ್ನೂ ತಿಳಿಯುತ್ತಾನೆಯೋ

ಪ್ರತಿಷ್ಠಿತೇನ ಅರಿಷ್ಟೇನ ಯಜ್ಞೇನ ಸಗ್ಂಸ್ಥಾಮ್ — [ಆ ಯಜಮಾನನು] ಸಾಂಗವಾದ, ವೈಕಲ್ಯವಿಲ್ಲದ ಯಜ್ಞದಿಂದ ಫಲಸಿದ್ಧಿರೂಪವಾದ ಸಮಾಪ್ತಿಯನ್ನು

---

**ಸಪ್ತದಶಪ್ರಜಾಪತಿಪ್ರಶಂಸೆ: ತಾತ್ಪರ್ಯ:-** ಸಪ್ತದಶಪ್ರಜಾಪತಿಯನ್ನು ತಿಳಿದ ಯಜಮಾನನು ಅನುಷ್ಠಿಸುವ ಯಾಗವು ದೃಢವಾಗಿರುತ್ತದೆ. ದೇವತೆಗಳನ್ನು ಉದ್ದೇಶಿಸಿ ದ್ರವ್ಯತ್ಯಾಗ ಮಾಡುವುದೇ ಯಾಗ. ಇಂತಹ ಯಾವ ಯಜಮಾನನು—ಯಜ್ಞದ ಪ್ರಾರಂಭ, ಸ್ಥಿತಿ ಮತ್ತು ಸಮಾಪ್ತಿಗಳು ಈ ಮಂತ್ರಗಳಿಂದಲೇ ನಡೆಯುವುದರಿಂದ ಇವುಗಳನ್ನು ತಿಳಿಯುತ್ತಾನೆಯೋ ಆವನು ಯಜ್ಞಫಲವನ್ನು ಪಡೆಯುತ್ತಾನೆ. 'ಆಶ್ರಾವಯ' ಮುಂತಾದ ಸಪ್ತದಶಪ್ರಜಾಪತಿಯು ಯಾಗದ ಶರೀರದಂತೆ. ಉಳಿದ ಅಂಗೋಪಾಂಗಗಳು ವಸ್ತ್ರಾಭರಣಗಳಂತೆ. ಹೀಗೆ ತಿಳಿದ ಯಜಮಾನನ ಯಜ್ಞವು ಸಾಂಗವಾಗಿ ವೈಕಲ್ಯರಹಿತವಾಗಿ ಫಲಪ್ರದವಾಗುತ್ತದೆ.

ಗಚ್ಛತ್ಯಾಶ್ರಾವಯಾಸ್ತು ಶ್ರೌಷಡ್ಯಜ ಯೇ ಯಜಾಮಹೇ
ವಷಟ್ಕಾರ ಏತದ್ವೈ ಯಜ್ಞಸ್ಯ ಪ್ರಾಯಣಮೇಷಾ ಪ್ರತಿಷ್ಠೈತದು
ದಯನಂ ಯ ಏವಂ ವೇದ

---

ಗಚ್ಛತಿ । ಏತಿ । ಶ್ರಾವಯ । ಅಸ್ತು । ಶ್ರೌಷಟ್ । ಯಜ । ಯೇ । ಯಜಾಮಹೇ। ವಷಟ್ಕಾರ ಇತಿ ವಷಟ್-ಕಾರಃ । ಏತತ್। ವೈ । ಯಜ್ಞಸ್ಯ । ಪ್ರಾಯಣಮಿತಿ ಪ್ರ-ಅಯನಮ್ । ಏಷಾ । ಪ್ರತಿಷ್ಠೇತಿ ಪ್ರತಿ-ಸ್ಥಾ । ಏತತ್ । ಉದಯನಮಿತ್ಯುತ್-ಅಯನಮ್ । ಯಃ । ಏವಮ್ । ವೇದ ।

---

ಗಚ್ಛತಿ — ಹೊಂದುತ್ತಾನೆ.

**ಮುಂದುವರೆದ ಪ್ರಶಂಸೆ**

1) ಆ ಶ್ರಾವಯ 2) ಅಸ್ತುಶ್ರೌಷಟ್ 3) ಯಜ 4) ಯೇ ಯಜಾಮಹೇ 5) ವಷಟ್ಕಾರಃ — ಈ ಐದು ಮಂತ್ರಗಳೇ [ಪ್ರಾಯಣ ಮೊದಲಾದವುಗಳಾಗಿವೆ].

ಏತತ್ ವೈ ಯಜ್ಞಸ್ಯ ಪ್ರಾಯಣಮ್ — 'ಆ ಶ್ರಾವಯ' ಎನ್ನುವುದು ಯಜ್ಞದ ಆರಂಭ.

ಏಷಾ ಪ್ರತಿಷ್ಠಾ — **'ಅಸ್ತುಶ್ರೌಷಟ್' 'ಯಜ' 'ಯೇ ಯಜಾಮಹೇ'** ಎಂಬ ಮೂರು ಮಂತ್ರಗಳು ಯಜ್ಞದ ಪ್ರತಿಷ್ಠೆ. [ಅನುಷ್ಠಾಪಕಗಳು]

ಏತತ್ ಉದಯನಮ್ ಯಃ ಏವಮ್ ವೇದ — ವಷಟ್ಕಾರವು [ವೌಷಟ್] ಸಮಾಪ್ತಿಯಾಗಿದೆ. ಯಾವ ಯಜಮಾನನು ಹೀಗೆ ತಿಳಿಯುತ್ತಾನೆಯೋ,

ಪ್ರತಿಷ್ಠಿತೇನಾರಿಷ್ಟೇನ ಯಜ್ಞೇನ ಸಗ್ಂಸ್ಥಾಂ ಗಚ್ಛತಿ ಯೋ ವೈ ಸೂನೃತಾಯೈ ದೋಹಂ ವೇದ ದುಹ ಏವೈನಾಂ ಯಜ್ಞೋ ವೈ

---

ಪ್ರತಿಷ್ಠಿತೇನೇತಿ ಪ್ರತಿ-ಸ್ಥಿತೇನ । ಅರಿಷ್ಟೇನ । ಯಜ್ಞೇನ । ಸಗ್ಂಸ್ಥಾಮಿತಿ ಸಮ್-ಸ್ಥಾಮ್ । ಗಚ್ಛತಿ । ಯಃ । ವೈ । ಸೂನೃತಾಯೈ । ದೋಹಮ್ । ವೇದ। ದುಹೇ । ಏವ । ಏನಾಮ್ । ಯಜ್ಞಃ । ವೈ ।

| | |
|---|---|
| ಪ್ರತಿಷ್ಠಿತೇನ ಅರಿಷ್ಟೇನ ಯಜ್ಞೇನ ಸಗ್ಂಸ್ಥಾಮ್ ಗಚ್ಛತಿ | ಅವನು ಸಾಂಗವಾದ, ದೋಷರಹಿತವಾದ ಯಜ್ಞದಿಂದ [ಫಲಸಿದ್ಧಿರೂಪವಾದ] ಸಮಾಪ್ತಿಯನ್ನು ಪಡೆಯುತ್ತಾನೆ. |

**ಗೋದೋಹನರೀತಿಯಲ್ಲಿ ಪ್ರಶಂಸೆ.**

| | |
|---|---|
| ಯಃ ವೈ ಸೂನೃತಾಯೈ ದೋಹಮ್ ವೇದ | ಯಾವ ಯಜಮಾನನು [ಯಜ್ಞವೆಂಬ ಕಾಮಧೇನುರೂಪವಾದ] *ಸೂನೃತೆಯ ಕರೆಯುವಿಕೆಯನ್ನು ತಿಳಿಯುತ್ತಾನೆಯೋ, |
| ದುಹೇ ಏವ ಏನಾಮ್ | [ಆ ಯಜಮಾನನು] ಈ ಕಾಮಧೇನುವಿನಿಂದಲೇ [ಸಕಲೇಷ್ಟಾರ್ಥರೂಪವಾದ ಹಾಲನ್ನು] ಕರೆದುಕೊಳ್ಳುತ್ತಾನೆ. |

**ದೋಹನಪ್ರಕಾರದ ವಿವರಣೆ**

| | |
|---|---|
| ಯಜ್ಞಃ ವೈ ಸೂನೃತಾ | ಯಜ್ಞವೇ ಸತ್ಯಪ್ರಿಯವಾಗ್ರೂಪವಾದ ಕಾಮಧೇನುವಾಗಿದೆ. |

---

**ಗೋದೋಹನರೀತಿಯಲ್ಲಿ ಪ್ರಶಂಸೆ: ತಾತ್ಪರ್ಯ:-** ಯಜ್ಞವು ಪ್ರಿಯವಾಗಿಯೂ, ಸತ್ಯವಾಗಿಯೂ ಇರುವ ಒಳ್ಳೆಯ ಮಾತಿನಂತಿದೆ. ಈ ಯಜ್ಞವು ಸಕಲ ಇಷ್ಟಾರ್ಥಗಳನ್ನೂ ನೀಡುವ ಕಾಮಧೇನುವಾಗಿದೆ.

---

* ಪ್ರಿಯವಾಗಿಯೂ, ಸತ್ಯವಾಗಿಯೂ ಇರುವ ಮಾತು 'ಸೂನೃತಾ' [ಒಳ್ಳೆಯ ಮಾತು] ಎನಿಸಿಕೊಳ್ಳುತ್ತದೆ. ಇಂತಹ ಮಾತು ಕಾಮಧೇನುವಿನಂತೆ ಎಲ್ಲವನ್ನೂ ಕೊಡಬಲ್ಲದು.

ಸೂನೃತಾऽऽಶ್ರಾವಯೇತ್ಯೈವೈನಾಮಹ್ವದಸ್ತು[..ದಸ್ತು[೨]

ಶ್ರೌಷ...] ಶ್ರೌಷಡಿತ್ಯುಪಾವಾಸ್ರಾಗ್ಯಜೇತ್ಯುದನ್ನೈಷೀದ್ಯೇ

ಯಜಾಮಹ ಇತ್ಯುಪಾಸದದ್ವಷಟ್ಕಾರೇಣ ದೋಗ್ಧ್ಯೇಷ ವೈ

ಸೂನೃತಾಯೈ ದೋಹೋ

---

ಸೂನೃತಾ । ಏತಿ । ಶ್ರಾವಯ। ಇತಿ । ಏತಿ। ಏವ । ಏನಾಮ್। ಅಹ್ವತ್ । ಅಸ್ತು[೨]। ಶ್ರೌಷಟ್। ಇತಿ। ಉಪಾವಾಸ್ರಾಗಿತ್ಯುಪ-ಅವಾಸ್ರಾಕ್। ಯಜ। ಇತಿ । ಉದಿತಿ। ಅನ್ನೈಷೀತ್। ಯೇ। ಯಜಾಮಹೇ। ಇತಿ । ಉಪೇತಿ । ಅಸದತ್ । ವಷಟ್ಕಾರೇಣೇತಿ ವಷಟ್-ಕಾರೇಣ। ದೋಗ್ಧಿ । ಏಷಃ । ವೈ । ಸೂನೃತಾಯೈ । ದೋಹಃ ।

---

| | |
|---|---|
| ಆ ಶ್ರಾವಯ ಇತಿ ಏವ ಏನಾಮ್ ಆ ಅಹ್ವತ್ | **'ಆ ಶ್ರಾವಯ'** ಎಂದು ಹೇಳುವುದೇ ಹಾಲು ಕೊಡುವ ಹಸುವನ್ನು ಪ್ರೀತಿಯಿಂದ ಸಂಬೋಧಿಸಿ ಆಹ್ವಾನಿಸುವುದಾಗಿದೆ. |
| ಅಸ್ತು ಶ್ರೌಷಟ್ ಇತಿ ಉಪಾವಾಸ್ರಾಕ್ | **'ಅಸ್ತು ಶ್ರೌಷಟ್'** ಎಂದು ಹೇಳುವುದೇ [ಹಸುವಿನ ಬಳಿಗೆ ಕರುವನ್ನು ಹಾಲು ಕುಡಿಯಲು ಬಿಡುವುದಾಗಿದೆ.] |
| ಯಜ ಇತಿ ಉದನ್ನೈಷೀತ್ | **'ಯಜ'** ಎಂದು ಹೇಳುವುದೇ [ಹಾಲು ಕರೆಯುವ ಪಾತ್ರವನ್ನು] ಮೇಲೆತ್ತುವುದಾಗಿದೆ. |
| ಯೇ ಯಜಾಮಹೇ ಇತಿ ಉಪಾಸದತ್ | **'ಯೇ ಯಜಾಮಹೇ'** ಎಂದು ಹೇಳುವುದೇ [ಹಾಲನ್ನು ಕರೆಯಲು ಸಮೀಪದಲ್ಲಿ] ಕೂರುವುದಾಗಿದೆ. |
| ವಷಟ್ಕಾರೇಣ ದೋಗ್ಧಿ | **'ವೌಷಟ್'** ಎಂದು ಹೇಳುವುದೇ ಹಾಲು ಕರೆಯುವುದಾಗಿದೆ. |
| ಏಷಃ ವೈ ಸೂನೃತಾಯೈ ದೋಹಃ | ಇದು ಯಜ್ಞವೆಂಬ ಕಾಮಧೇನುವಿನ ದೋಹನ ಪ್ರಕಾರವಾಗಿದೆ. |

ಯ ಏವಂ ವೇದ ದುಹ ಏವೈನಾಂ ದೇವಾ ವೈ ಸತ್ರಮಾಸತ
ತೇಷಾಂ ದಿಶೋऽದಸ್ಯನ್ತ ಏತಾಮಾದ್ರ್ರಾಂ ಪಙ್ಕ್ತಿಮಪಶ್ಯ
ನ್ನಾಶ್ರಾವಯೇತಿ

---

ಯಃ । ಏವಮ್ । ವೇದ । ದುಹೇ । ಏವ । ಏನಾಮ್ । ದೇವಾಃ । ವೈ । ಸತ್ರಮ್ । ಆಸತ । ತೇಷಾಮ್ । ದಿಶಃ । ಅದಸ್ಯನ್ನ್ । ತೇ । ಏತಾಮ್ । ಆರ್ದ್ರಾಮ್। ಪಂಕ್ತಿಮ್ । ಅಪಶ್ಯನ್ನ್ । ಏತಿ । ಶ್ರಾವಯ । ಇತಿ ।

---

| | |
|---|---|
| ಯಃ ಏವಂ ವೇದ | ಯಾವನು ಹೀಗೆ ತಿಳಿಯುತ್ತಾನೆಯೋ, |
| ದುಹೇ ಏವ ಏನಾಮ್ | [ಅವನು] ಯಜ್ಞರೂಪವಾದ ಕಾಮಧೇನು ಏನಿಂದ ತನಗೆ ಬೇಕಾದ ಇಷ್ಟಾರ್ಥಗಳೆಂಬ ಹಾಲನ್ನು ಕರೆದುಕೊಳ್ಳುತ್ತಾನೆ. |

**ವೃಷ್ಟಿಯ ರೀತಿಯಲ್ಲಿ ಈ ಮಂತ್ರಗಳ ಪ್ರಶಂಸೆ, ಉಪಾಖ್ಯಾನ**

| | |
|---|---|
| ದೇವಾಃ ವೈ ಸತ್ರಮ್ ಆಸತ | ದೇವತೆಗಳು [ಬಹುಕಾಲ ಮಾಡುವ] ಸತ್ರವೆಂಬ ಸೋಮಯಾಗವನ್ನು ಮಾಡಿದರು. |
| ತೇಷಾಮ್ ದಿಶಃ ಅದಸ್ಯನ್ನ್ | ಅವರ [ಯಾಗದ ಯಾವುದೋ ವೈಕಲ್ಯದಿಂದ] ಎಲ್ಲಾ ದಿಕ್ಕುಗಳಲ್ಲಿರುವ ಸಸ್ಯಗಳು [ಮಳೆಯಿಲ್ಲದೆ] ಒಣಗುವಂತಾದವು. |
| ತೇ ಏತಾಮ್ ಆರ್ದ್ರಾಮ್ ಪಂಕ್ತಿಮ್ ಅಪಶ್ಯನ್ನ್ | ಆ ದೇವತೆಗಳು ಮಳೆ ಸುರಿಸುವ ಮೋಡಗಳ ಸಾಲಿನಂತಿರುವ ಈ ಐದು ಮಂತ್ರಗಳ ಸಾಲನ್ನು ಕಂಡರು. |
| ಆ ಶ್ರಾವಯ ಇತಿ | 'ಆ ಶ್ರಾವಯ' ಎಂಬ ಮಂತ್ರದಿಂದ |

---

**ದೋಹನಪ್ರಕಾರ-ತಾತ್ಪರ್ಯ:** ಹಾಲು ಕರೆಯುವವನು ಮೊದಲು ಪ್ರೀತಿಯಿಂದ ಹಸುವನ್ನು ಕರೆದು, ಅದಕ್ಕೆ ತಿಂಡಿ-ತಿನಿಸುಗಳನ್ನು ಕೊಡುತ್ತಾನೆ. ಅನಂತರ ಕರುವನ್ನು ಹಾಲು ಕುಡಿಯಲು ಹಸುವಿನ ಬಳಿ ಬಿಡುತ್ತಾನೆ. ಹಾಲಿನ ಪಾತ್ರವನ್ನು ಮೇಲಕ್ಕೆ ಎತ್ತುತ್ತಾನೆ. ಹಸುವಿನ ಸಮೀಪದಲ್ಲಿ ಹಾಲು ಕರೆಯಲು ಕುಳಿತುಕೊಳ್ಳುತ್ತಾನೆ.

ಪುರೋವಾತಮಜನಯನ್ನಸ್ತು ಶ್ರೌಷಡಿತ್ಯಭ್ರಗ್ಂ ಸಮಪ್ಲಾವಯನ್ ಯಜೇತಿ ವಿದ್ಯುತ[ವಿದ್ಯುತಮ್(ಖ) ಅಜನಯನ್] ಮಜನಯನ್ ಯೇ ಯಜಾಮಹ ಇತಿ ಪ್ರಾವರ್ಷಯನ್ನ

---

ಪುರೋವಾತಮಿತಿ ಪುರಃ-ವಾತಮ್ । ಅಜನಯನ್ನ್ । ಅಸ್ತು । ಶ್ರೌಷಟ್ । ಇತಿ। ಅಭ್ರಮ್ । ಸಮಿತಿ । ಅಪ್ಲಾವಯನ್ನ್ । ಯಜ । ಇತಿ । ವಿದ್ಯುತಮಿತಿ ವಿ-ದ್ಯುತಮ್। ಅಜನಯನ್ನ್ । ಯೇ । ಯಜಾಮಹೇ । ಇತಿ । ಪ್ರೇತಿ । ಅವರ್ಷಯನ್ನ್ ।

---

| | |
|---|---|
| ಪುರೋವಾತಮ್ ಅಜನಯನ್ನ್ | ಪೂರ್ವದಿಕ್ಕಿನಿಂದ ಬೀಸುವ ಗಾಳಿಯನ್ನುಂಟು ಮಾಡಿದರು. |
| ಅಸ್ತು ಶ್ರೌಷಟ್ ಇತಿ ಅಭ್ರಮ್ ಸಮಪ್ಲಾವಯನ್ನ್ | 'ಅಸ್ತು ಶ್ರೌಷಟ್' ಎಂಬ ಮಂತ್ರದಿಂದ ಆಕಾಶದಲ್ಲಿ ಮೋಡಗಳು ತುಂಬಿಕೊಳ್ಳುವಂತೆ ಮಾಡಿದರು. |
| ಯಜ ಇತಿ ವಿದ್ಯುತಮ್ ಅಜನಯನ್ನ್ | 'ಯಜ' ಎಂಬ ಮಂತ್ರದಿಂದ ಮಿಂಚನ್ನುಂಟು ಮಾಡಿದರು. |
| ಯೇ ಯಜಾಮಹೇ ಇತಿ ಪ್ರಾವರ್ಷಯನ್ನ್ | 'ಯೇ ಯಜಾಮಹೇ' ಎಂಬ ಮಂತ್ರದಿಂದ ಹೆಚ್ಚಾಗಿ ಮಳೆಯನ್ನು ಸುರಿಸಿದರು. |

---

ಅನಂತರ ಬೇಕಾದಷ್ಟು ಹಾಲನ್ನು ಕರೆದುಕೊಳ್ಳುತ್ತಾನೆ. ಅದರಂತೆ 'ಆಶ್ರಾವಯ' ಎಂದು ಹೇಳುವುದು ಹಸುವಿನ ಆಹ್ವಾನ. 'ಅಸ್ತು ಶ್ರೌಷಟ್' ಎನ್ನುವುದು ಕರುವನ್ನು ಬಿಡುವುದು; 'ಯಜ' ಎನ್ನುವುದು ಹಾಲಿನ ಪಾತ್ರೆಯನ್ನು ಮೇಲೆತ್ತುವುದು. 'ಯೇ ಯಜಾಮಹೇ' ಎನ್ನುವುದು ಸಮೀಪಸ್ಥಿತಿ. 'ವೌಷಟ್' ಎನ್ನುವುದು ಹಾಲು ಕರೆಯುವಿಕೆ. ಹೀಗೆ

ಭ್ಯಸ್ತನಯನ್ವಷಟ್ಕಾರೇಣ ತತೋ ವೈ ತೇಭ್ಯೋ ದಿಶಃ

ಪ್ರಾಪ್ಯಾ ಯಂತ ಯ ಏವಂ ವೇದ ಪ್ರಾಸ್ಮೈ ದಿಶಃ

ಪ್ಯಾಯಂತೇ ಪ್ರಜಾಪತಿಂ ತ್ವೋವೇದ ಪ್ರಜಾಪತಿಸ್ತ್ವಂವೇದ

---

ಅಭೀತಿ । ಅಸ್ತನಯನ್ನ್ । ವಷಟ್ಕಾರೇಣೇತಿ ವಷಟ್-ಕಾರೇಣ। ತತಃ । ವೈ । ತೇಭ್ಯಃ। ದಿಶಃ । ಪ್ರೇತಿ । ಅಪ್ಯಾಯಂತ । ಯಃ । ಏವಮ್ । ವೇದ । ಪ್ರೇತಿ । ಅಸ್ಮೈ। ದಿಶಃ । ಪ್ಯಾಯಂತೇ । ಪ್ರಜಾಪತಿಮಿತಿ ಪ್ರಜಾ-ಪತಿಮ್ । ತ್ವೋವೇದೇತಿ ತ್ವಃ-ವೇದ। ಪ್ರಜಾಪತಿರಿತಿ ಪ್ರಜಾ-ಪತಿಃ । ತ್ವಂವೇದೇತಿ ತ್ವಮ್-ವೇದ ।

---

| | |
|---|---|
| ಅಭಿ ಅಸ್ತನಯನ್ನ್ ವಷಟ್ಕಾರೇಣ | 'ವೌಷಟ್' ಎಂಬ ವಷಟ್ಕಾರಮಂತ್ರದಿಂದ ಜೋರಾದ ಗುಡುಗನ್ನುಂಟುಮಾಡಿದರು. |
| ತತಃ ವೈ ತೇಭ್ಯಃ ದಿಶಃ ಪ್ರಾಪ್ಯಾಯಂತ | ಅನಂತರ ಆ ದೇವತೆಗಳಿಗೆ ದಿಕ್ಕುಗಳು [ಎಲ್ಲಾ ದಿಕ್ಕುಗಳಲ್ಲಿರುವ ಸಸ್ಯಗಳು] ವೃದ್ಧಿ ಹೊಂದಿದವು. |
| ಯಃ ಏವಂ ವೇದ | ಯಾವ ಯಜಮಾನನು ಹೀಗೆ ತಿಳಿಯುತ್ತಾನೆಯೋ, |
| ಪ್ರ ಅಸ್ಮೈ ದಿಶಃ ಪ್ಯಾಯಂತೇ | ಅವನಿಗೆ ಕಾಲಕಾಲಕ್ಕೆ ಸುವೃಷ್ಟಿಯಾಗಿ ಎಲ್ಲೆಡೆಯೂ ಸಸ್ಯ ಸಮೃದ್ಧಿಯುಂಟಾಗುತ್ತದೆ. |

**ಇನ್ನೊಂದು ರೀತಿಯಲ್ಲಿ ಮಂತ್ರಗಳ ಪ್ರಶಂಸೆ**

| | |
|---|---|
| ಪ್ರಜಾಪತಿಮ್ | ಈ ಸಪ್ತದಶಾಕ್ಷರರೂಪವಾದ ಪ್ರಜಾಪತಿಯನ್ನು |
| ತ್ವೋವೇದ | ಒಬ್ಬನು [ಇಂತಹ ಮಹತ್ತ್ವಪೂರ್ಣವನ್ನಾಗಿ] ತಿಳಿಯುತ್ತಾನೆ. |
| ಪ್ರಜಾಪತಿಃ | ಪ್ರಜಾಪತಿಯೂ |
| ತ್ವಂವೇದ | ಆ ಒಬ್ಬ ಯಜಮಾನನನ್ನು ತಿಳಿಯುತ್ತಾನೆ. [ಅನುಗ್ರಹಿಸುತ್ತಾನೆ] |

---

ತಿಳಿದ ಯಜಮಾನನು ಯಜ್ಞದಿಂದ ತನಗೆ ಬೇಕಾದುದೆಲ್ಲವನ್ನೂ ಪಡೆದುಕೊಳ್ಳುತ್ತಾನೆ. ಸಪ್ತದಶಪ್ರಜಾಪತಿಯ ಮಹಿಮೆಯಿದು.

ಯಂ ಪ್ರಜಾಪತಿರ್ವೇದ ಸ ಪುಣ್ಯೋ ಭವತ್ಯೇಷ ವೈ

ಛಂದಸ್ಯಃ ಪ್ರಜಾಪತಿರಾಶ್ರಾವಯಾಸ್ತು ಶ್ರೌಷಡ್ಯಜ

---

ಯಮ್ । ಪ್ರಜಾಪತಿರಿತಿ ಪ್ರಜಾ-ಪತಿಃ । ವೇದ । ಸಃ । ಪುಣ್ಯಃ । ಭವತಿ । ಏಷಃ। ವೈ । ಛಂದಸ್ಯಃ। ಪ್ರಜಾಪತಿರಿತಿ ಪ್ರಜಾ-ಪತಿಃ । ಏತಿ । ಶ್ರಾವಯ। ಅಸ್ತು । ಶ್ರೌಷಟ್। ಯಜ ।

---

| | |
|---|---|
| ಯಮ್ ಪ್ರಜಾಪತಿಃ ವೇದ | ಯಾವನನ್ನು ಪ್ರಜಾಪತಿಯು ತಿಳಿದು [ಅನುಗ್ರಹಿಸುತ್ತಾನೆಯೋ] |
| ಸಃ ಪುಣ್ಯಃ ಭವತಿ | ಆ ಯಜಮಾನನು [ಬೇರೆಯ ಯಜಮಾನರಿಗಿಂತಲೂ] ಅತಿಶಯಪುಣ್ಯವಂತನಾಗುತ್ತಾನೆ. |
| ಏಷಃ ವೈ ಛಂದಸ್ಯಃ ಪ್ರಜಾಪತಿಃ | ಈ ಸಪ್ತದಶಾಕ್ಷರರೂಪಪ್ರಜಾಪತಿಯೇ ವೇದಸಾರಭೂತನಾಗಿದ್ದಾನೆ. |
| ಆ ಶ್ರಾವಯ, ಅಸ್ತು ಶ್ರೌಷಟ್ ಯಜ | 'ಆ ಶ್ರಾವಯ', 'ಅಸ್ತು ಶ್ರೌಷಟ್' 'ಯಜ' |

**ವೃಷ್ಟಿರೀತಿಯ ಪ್ರಶಂಸೆ: ತಾತ್ಪರ್ಯ:-** ದೇವತೆಗಳು *ಸತ್ರಯಾಗವನ್ನು ಮಾಡುತ್ತಿದ್ದರು. ಆಗ ಮಳೆಯಿಲ್ಲದೆ ಎಲ್ಲಾ ದಿಕ್ಕುಗಳ ಸಸ್ಯಗಳೂ ಒಣಗುವಂತಾಯಿತು. ಆಗ ಅವರು ಮಳೆಯನ್ನು ಸುರಿಸುವ ಮೋಡಗಳ ಸಾಲಿನಂತಿರುವ ಈ ಐದು ಮಂತ್ರಗಳ ಸಾಲನ್ನು ಕಂಡರು. 'ಆ ಶ್ರಾವಯ' ಎಂಬ ಮಂತ್ರದಿಂದ *ಪುರೋವಾತವನ್ನುಂಟು ಮಾಡಿದರು. **'ಅಸ್ತು ಶ್ರೌಷಟ್'** ಎಂಬ ಮಂತ್ರದಿಂದ ಆಕಾಶವನ್ನು ಮೋಡಗಳಿಂದ ತುಂಬಿದರು. **'ಯಜ'** ಎಂಬ ಮಂತ್ರದಿಂದ ಮಿಂಚನ್ನು ಹುಟ್ಟಿಸಿದರು. **'ಯೇ ಯಜಾಮಹೇ'** ಎಂಬ ಮಂತ್ರದಿಂದ ಘನವೃಷ್ಟಿಯನ್ನು ಸುರಿಸಿದರು. **'ವೌಷಟ್'** ಎಂಬ ಮಂತ್ರದಿಂದ ಗುಡುಗನ್ನುಂಟುಮಾಡಿದರು. ಅನಂತರ ಮಳೆಯಿಂದ ಸಸ್ಯಸಮೃದ್ಧಿಯಾಗಿ ದಿಕ್ಕುಗಳೆಲ್ಲವೂ ತುಂಬಿಹೋದವು. ಹೀಗೆ ಯಾವ ಯಜಮಾನನು ತಿಳಿಯುತ್ತಾನೆಯೋ, ಅವನಿಗೆ ಕಾಲಕಾಲಕ್ಕೆ ಸುವೃಷ್ಟಿಯಾಗಿ ಸಸ್ಯಸಂಪತ್ತಿಯು ಲಭಿಸುತ್ತದೆ. ಎಲ್ಲ ಕಾಮನೆಗಳೂ ಕೈಗೂಡುತ್ತವೆ.

---

* ಸತ್ರಯಾಗವು ಯಜಮಾನರೇ ಋತ್ವಿಜರಾಗಿರುವ, ದೀರ್ಘಕಾಲ ಮಾಡುವ ಸೋಮಯಾಗವಿಶೇಷ.

* ಪೂರ್ವದಿಕ್ಕಿನಿಂದ ಬೀಸುವ ಗಾಳಿಯು ಮಳೆಯನ್ನು ತರುತ್ತದೆಯೆಂದು ಪ್ರಸಿದ್ಧಿ.

ಯೇ ಯಜಾಮಹೇ ವಷಟ್ಕಾರೋ ಯ ಏವಂ ವೇದ

ಪುಣ್ಯೋ ಭವತಿ ವಸಂತ[ವಸಂತಮ್ (೪) ಋತೂನಾಂ]-

ಮೃತೂನಾಂ ಪ್ರೀಣಾಮೀತ್ಯಾಹರ್ತವೋ

---

ಯೇ। ಯಜಾಮಹೇ। ವಷಟ್ಕಾರ ಇತಿ ವಷಟ್-ಕಾರಃ। ಯಃ । ಏವಮ್। ವೇದ। ಪುಣ್ಯಃ। ಭವತಿ । ವಸಂತಮ್ । ಋತೂನಾಮ್ । ಪ್ರೀಣಾಮಿ । ಇತಿ। ಆಹ । ಋತವಃ।

---

ಯೇ ಯಜಾಮಹೇ, ವಷಟ್ಕಾರಃ
ಯಃ ಏವಮ್ ವೇದ
ಪುಣ್ಯಃ ಭವತಿ

'ಯೇ ಯಜಾಮಹೇ', 'ವಷಟ್ಕಾರಃವೌಷಟ್]' [ಈ ಐದು ಮಂತ್ರಗಳ ಸಮೂಹವೇ ಛಂದೋವೀರ್ಯರೂಪಪ್ರಜಾಪತಿಯಾಗಿದೆ] ಯಾವ ಯಜಮಾನನು ಹೀಗೆ ತಿಳಿಯುತ್ತಾನೆಯೋ, ಅವನು ಬೇರೆಯ ಯಜಮಾನರಿಗಿಂತಲೂ ಪುಣ್ಯವಂತನಾಗುತ್ತಾನೆ.

***ಪ್ರಯಾಜಾನುಮಂತ್ರಣಮಂತ್ರಗಳ ವ್ಯಾಖ್ಯಾನ**

ವಸಂತಮ್ ಋತೂನಾಮ್

[ಯಜಮಾನನು] 'ವಸಂತಮೃತೂನಾಂ ಪ್ರೀಣಾಮಿ' ಮೊದಲಾದ ಮಂತ್ರಗಳನ್ನು ಹೇಳುತ್ತಾನೆ.

---

**ಇನ್ನೊಂದು ಬಗೆಯ ಪ್ರಶಂಸೆ: ತಾತ್ಪರ್ಯ:-** ಇಂತಹ ಸಪ್ತದಶಾಕ್ಷರರೂಪ ಪ್ರಜಾಪತಿಯ ಮಹಿಮೆಯನ್ನು ಒಬ್ಬ ಯಜಮಾನನು ತಿಳಿಯುತ್ತಾನೆ. ಪ್ರಜಾಪತಿಯೂ ಅಂತಹ ಒಬ್ಬ ಯಜಮಾನನನ್ನು ತಿಳಿದು ಅನುಗ್ರಹಿಸುತ್ತಾನೆ. ಹೀಗೆ ಪ್ರಜಾಪತಿಯು ತಿಳಿದು ಅನುಗ್ರಹಿಸಿದವನು ಬೇರೆ ಯಜಮಾನರಿಗಿಂತಲೂ ಪುಣ್ಯವಂತನಾಗುತ್ತಾನೆ. 'ಆ ಶ್ರಾವಯ' ಮೊದಲಾದ ಹದಿನೇಳು ಅಕ್ಷರಗಳುಳ್ಳ ಐದು ಮಂತ್ರಗಳ ಸಮೂಹವೇ ಛಂದಸ್ಸಿನ ಸಾರಭೂತವಾದ ಪ್ರಜಾಪತಿಯಾಗಿದೆ. ಹೀಗೆ ತಿಳಿದ ಯಜಮಾನನು ಪುಣ್ಯವಂತನಾಗುತ್ತಾನೆ.

---

* ಈ ಅನುವಾಕದಲ್ಲಿರುವ ಬ್ರಾಹ್ಮಣಭಾಗದ ವಿವರಣೆಯನ್ನು ಮಾತ್ರ ನೀಡಲಾಗಿದೆ. ಮಂತ್ರಗಳ ಅರ್ಥವು ಎರಡನೆಯ ಅನುವಾಕದಲ್ಲಿದೆ.

ವೈ ಪ್ರಯಾಜಾ ಋತೂನೇವ ಪ್ರೀಣಾತಿ ತೇಽಸ್ಮೈ ಪ್ರೀತಾ

ಯಥಾಪೂರ್ವಂ ಕಲ್ಪಂತೇ ಕಲ್ಪಂತೇಽಸ್ಮಾ ಋತವೋ ಯ

ಏವಂ ವೇದಾಗ್ನೀಷೋಮಯೋರಹಂ

---

ವೈ । ಪ್ರಯಾಜಾ ಇತಿ ಪ್ರ-ಯಾಜಾಃ । ಋತೂನ್ । ಏವ । ಪ್ರೀಣಾತಿ । ತೇ। ಅಸ್ಮೈ। ಪ್ರೀತಾಃ। ಯಥಾಪೂರ್ವಮಿತಿ ಯಥಾ-ಪೂರ್ವಮ್। ಕಲ್ಪಂತೇ । ಕಲ್ಪಂತೇ। ಅಸ್ಮೈ । ಋತವಃ । ಯಃ । ಏವಮ್ । ವೇದ । ಅಗ್ನೀಷೋಮಯೋರಿತ್ಯಗ್ನೀ-ಸೋಮ ಯೋಃ । ಅಹಮ್ ।

---

| | |
|---|---|
| ಋತವಃ ವೈ ಪ್ರಯಾಜಾಃ ಋತೂನೇವ ಪ್ರೀಣಾತಿ | ಪ್ರಯಾಜಗಳು ಋತುಗಳೇ ದೇವತೆಗಳಾಗಿರುವ ಯಾಗ ಗಳಾಗಿವೆ. ಆದುದರಿಂದ [ಈ ಮಂತ್ರಗಳನ್ನು ಹೇಳುವು ದರಿಂದ] ಯಜಮಾನನು ಋತುದೇವತೆಗಳನ್ನು ಸಂತೋಷಪಡಿಸುತ್ತಾನೆ. |
| ತೇ ಅಸ್ಮೈ ಪ್ರೀತಾಃ ಯಥಾಪೂರ್ವಂ ಕಲ್ಪಂತೇ | ಆ ಋತುದೇವತೆಗಳು ಈ ಯಜಮಾನನ ವಿಷಯದಲ್ಲಿ ಪ್ರಸನ್ನರಾಗಿ ತಮ್ಮ ತಮ್ಮ ಕಾಲಕ್ಕೆ ತಕ್ಕಂತೆ ಹೂ, ಹಣ್ಣು, ಬಿಸಿಲು, ಮಳೆ, ಹಿಮ ಮೊದಲಾದವುಗಳ ನ್ನುಂಟುಮಾಡುತ್ತಾರೆ. |
| ಕಲ್ಪಂತೇ ಅಸ್ಮೈ ಋತವಃ ಯಃ ಏವಮ್ ವೇದ | ಹೀಗೆ ಯಾವ ಯಜಮಾನನು ತಿಳಿಯುತ್ತಾನೆಯೋ, ಅವನಿಗೂ ಋತುದೇವತೆಗಳು ಪ್ರಸನ್ನರಾಗುತ್ತಾರೆ. |

**ಆಜ್ಯಭಾಗಾನುಮಂತ್ರಣಮಂತ್ರಗಳ ವ್ಯಾಖ್ಯಾಸ**

| | |
|---|---|
| ಅಗ್ನೀಷೋಮಯೋಃ ಅಹಮ್ | ಯಜಮಾನನು '**ಅಗ್ನೀಷೋಮಯೋ: .....**' ಎಂಬ |

---

**ಪ್ರಯಾಜಾನುಮಂತ್ರಣ:ತಾತ್ಪರ್ಯ:-** ಪ್ರಯಾಜಗಳಿಗೆ ಋತುಗಳೇ ದೇವತೆಗಳು. ಆದುದರಿಂದ ಯಜಮಾನನು ಹೇಳುವ 'ವಸಂತಮೃತೂನಾಂ.' ಮೊದಲಾದ ಮಂತ್ರ ಗಳಿಂದ ಋತುದೇವತೆಗಳು ಪ್ರಸನ್ನರಾಗಿ, ಕಾಲಕಾಲಕ್ಕೆ ವೃಷ್ಟ್ಯಾದಿಗಳನ್ನು ಕೊಟ್ಟು

ದೇವಯಜ್ಯಯಾ ಚಕ್ಷುಷ್ಮಾನ್ಭೂಯಾಸಮಿತ್ಯಾಹಾಗ್ನೀಷೋಮಾ
ಭ್ಯಾಂ ವೈ ಯಜ್ಞಶ್ಚಕ್ಷುಷ್ಮಾನ್ತಾಭ್ಯಾಮೇವ ಚಕ್ಷುರಾತ್ಮನ್ಧತ್ತೇಽಗ್ನೇ
ರಹಂ ದೇವಯಜ್ಯಯಾನ್ನಾದೋ ಭೂಯಾಸಮಿತ್ಯಾಹಾ-

---

ದೇವಯಜ್ಯಯೇತಿ ದೇವ-ಯಜ್ಯಯಾ। ಚಕ್ಷುಷ್ಮಾನ್। ಭೂಯಾಸಮ್। ಇತಿ । ಆಹ।
ಅಗ್ನೀಷೋಮಾಭ್ಯಾಮಿತ್ಯಗ್ನೀ-ಸೋಮಾಭ್ಯಾಮ್ । ವೈ । ಯಜ್ಞಃ । ಚಕ್ಷುಷ್ಮಾನ್ ।
ತಾಭ್ಯಾಮ್ । ಏವ । ಚಕ್ಷುಃ । ಆತ್ಮನ್ನ್ । ಧತ್ತೇ । ಅಗ್ನೇಃ । ಅಹಮ್ । ದೇವಯಜ್ಯಯೇತಿ
ದೇವ-ಯಜ್ಯಯಾ । ಅನ್ನಾದ ಇತ್ಯನ್ನ-ಅದಃ । ಭೂಯಾಸಮ್। ಇತಿ । ಆಹ ।

---

| | |
|---|---|
| ದೇವಯಜ್ಯಯಾ ಚಕ್ಷುಷ್ಮಾನ್ ಭೂಯಾಸಮ್ ಇತಿ ಆಹ ಅಗ್ನೀಷೋಮಾಭ್ಯಾಮ್ ವೈ ಯಜ್ಞಃ ಚಕ್ಷುಷ್ಮಾನ್ | ಆಜ್ಯಭಾಗಾನುಮಂತ್ರಣಮಂತ್ರವನ್ನು ಹೇಳುತ್ತಾನೆ. ಅಗ್ನಿ ಮತ್ತು ಸೋಮ [ಆಜ್ಯಭಾಗ ದೇವತೆಗಳು] ಇವರಿಂದಲೇ ಯಜ್ಞವು ಕಣ್ಣುಳ್ಳದ್ದಾಗಿದೆ.* |
| ತಾಭ್ಯಾಮೇವ ಚಕ್ಷುಃ ಆತ್ಮನ್ನ್ ಧತ್ತೇ | ಅಗ್ನೀಷೋಮದೇವತೆಗಳ ಅನುಗ್ರಹದಿಂದಲೇ ಯಜಮಾನನು ಒಳ್ಳೆಯ ಕಣ್ಣುಗಳನ್ನು [ದೃಷ್ಟಿ ಪಾಟವವನ್ನು] ಪಡೆಯುತ್ತಾನೆ. |

### ಆಗ್ನೇಯಪುರೋಡಾಶಯಾಗದ ಅನುಮಂತ್ರಣಮಂತ್ರದ ವಿವರಣೆ

| | |
|---|---|
| ಅಗ್ನೇಃ ಅಹಮ್ ದೇವಯಜ್ಯಯಾ ಅನ್ನಾದಃ ಭೂಯಾಸಮ್ ಇತಿ ಆಹ | ಯಜಮಾನನು 'ಅಗ್ನೇರಹಂ...' ಎಂಬ ಆಗ್ನೇಯಯಾಗಾನುಮಂತ್ರಣಮಂತ್ರವನ್ನು ಹೇಳುತ್ತಾನೆ. |

---

ಅನುಗ್ರಹಿಸುತ್ತಾರೆ. ಹೀಗೆ ತಿಳಿದ ಯಜಮಾನನಿಗೂ ಋತುದೇವತೆಗಳ ಅನುಗ್ರಹದಿಂದ ಸಸ್ಯಾದಿಸಂಪತ್ತಿಯು ಒದಗುತ್ತದೆ.

---

* ಚಕ್ಷುಷೀ ವಾ ಏತೇ ಯಜ್ಞಸ್ಯ ಯದಾಜ್ಯಭಾಗೌ' [ತೈ.ಸಂ. 2-6-2]

ಗ್ನಿರ್ವೈ ದೇವಾನಾಮನ್ನಾದಸ್ತೇನೈವಾ[ತೇನೈವ [೫]ಅನ್ನಾ

ದ್ಯ...]ನ್ನಾದ್ಯಮಾತ್ಮನ್ಧತ್ತೇ ದಬ್ಧಿರಸ್ಯದಬ್ಧೋ

ಭೂಯಾಸಮಮುಂ ದಭೇಯಮಿತ್ಯಾಹೈತಯಾ

---

ಅಗ್ನಿಃ । ವೈ । ದೇವಾನಾಮ್ । ಅನ್ನಾದ ಇತ್ಯನ್ನ-ಅದಃ । ತೇನ । ಏವ । ಅನ್ನಾದ್ಯಮಿತ್ಯನ್ನ-ಅದ್ಯಮ್। ಆತ್ಮನ್ನ್ । ಧತ್ತೇ। ದಬ್ಧಿಃ । ಅಸಿ। ಅದಬ್ಧಃ । ಭೂಯಾಸಮ್। ಅಮುಮ್। ದಭೇಯಮ್ । ಇತಿ । ಆಹ । ಏತಯಾ ।

---

| | |
|---|---|
| ಅಗ್ನಿಃ ವೈ ದೇವಾನಾಮ್. ಅನ್ನಾದಃ | ದೇವತೆಗಳಲ್ಲಿ ಅಗ್ನಿಯು ಅನ್ನಭೋಜನಶಕ್ತಿಯುಳ್ಳವನಾಗಿದ್ದಾನೆ. |
| ತೇನ ಏವ ಅನ್ನಾದ್ಯಮ್ ಆತ್ಮನ್ನ್ ಧತ್ತೇ | ಆ ಅಗ್ನಿದೇವತೆಯ ಅನುಗ್ರಹದಿಂದ [ಯಜಮಾನನು] ಅನ್ನಭೋಜನಶಕ್ತಿಯನ್ನು ಪಡೆಯುತ್ತಾನೆ. |

**ಉಪಾಂಶುಯಾಜಯಾಗದ ಅನುಮಂತ್ರಣಮಂತ್ರದ ವಿವರಣೆ**

| | |
|---|---|
| ದಬ್ಧಿಃ ಅಸಿ ಅದಬ್ಧಃ ಭೂಯಾಸಮ್ ಅಮುಮ್ ದಭೇಯಮ್ | ಯಜಮಾನನು 'ದಬ್ಧಿರಸಿ' ಎಂಬ ಅನುಮಂತ್ರಣಮಂತ್ರವನ್ನು ಹೇಳುತ್ತಾನೆ. |
| ಇತಿ ಆಹ ಏತಯಾ | ಈ ಉಪಾಂಶು ಯಾಜ ರೂಪವಾದ ಶತ್ರು- |

---

**ಆಜ್ಯಭಾಗಾನುಮಂತ್ರಣ: ತಾತ್ಪರ್ಯ:-** ಅಗ್ನಿ ಮತ್ತು ಸೋಮ ಇವರು ಆಜ್ಯಭಾಗ ದೇವತೆಗಳು. ಇವರಿಂದಲೇ ಯಜ್ಞವು ಕಣ್ಣುಳ್ಳದ್ದಾಗಿದೆ. 'ಅಗ್ನೀಷೋಮಯೋಃ' ಎಂಬ ಮಂತ್ರವನ್ನು ಹೇಳುವುದರಿಂದ ಯಜಮಾನನು ಅವರ ಅನುಗ್ರಹದಿಂದ ನೇತ್ರಪಾಟವವನ್ನು ಪಡೆಯುತ್ತಾನೆ.

**ಆಗ್ನೇಯಯಾಗಾನುಮಂತ್ರಣ: ತಾತ್ಪರ್ಯ:-** ದೇವತೆಗಳಲ್ಲಿ ಅಗ್ನಿಯು ಅನ್ನಭೋಜನಶಕ್ತಿಯುಳ್ಳವನಾಗಿದ್ದಾನೆ. 'ಅಗ್ನೇರಹಂ' ಎಂಬ ಮಂತ್ರವನ್ನು ಹೇಳುವುದರಿಂದ ಅಗ್ನಿಯು ಅನುಗ್ರಹವುಂಟಾಗಿ ಆದರಿಂದ ಯಜಮಾನನು ಅನ್ನಭೋಜನಶಕ್ತಿಯನ್ನು ಪಡೆಯುತ್ತಾನೆ.

ವೈ ದಬ್ಧ್ಯಾ ದೇವಾ ಅಸುರಾನದಭ್ನುವನ್ತಯೈವ ಭ್ರಾತೃವ್ಯಂ

ದಭ್ನೋತ್ಯಗ್ನೀಷೋಮಯೋರಹಂ ದೇವಯಜ್ಯಯಾ ವೃತ್ರ

ಹಾ ಭೂಯಾಸಮಿತ್ಯಾಹಾಗ್ನೀಷೋಮಾಭ್ಯಾಂ ವಾ ಇಂದ್ರೋ

---

ವೈ । ದಬ್ಧ್ಯಾ । ದೇವಾಃ । ಅಸುರಾನ್ । ಅದಭ್ನುವನ್ । ತಯಾ । ಏವ । ಭ್ರಾತೃವ್ಯಮ್।

ದಭ್ನೋತಿ । ಅಗ್ನೀಷೋಮಯೋರಿತ್ಯಗ್ನೀ-ಸೋಮಯೋಃ । ಅಹಮ್ । ದೇವಯಜ್ಯ

ಯೇತಿ ದೇವ-ಯಜ್ಯಯಾ । ವೃತ್ರಹೇತಿ ವೃತ್ರ-ಹಾ । ಭೂಯಾಸಮ್ । ಇತಿ । ಆಹ।

ಅಗ್ನೀಷೋಮಾಭ್ಯಾಮಿತ್ಯಗ್ನೀ-ಸೋಮಾಭ್ಯಾಮ್ । ವೈ । ಇಂದ್ರಃ ।

| | |
|---|---|
| ವೈ ದಬ್ಧ್ಯಾ ದೇವಾಃ ಅಸುರಾನ್ ಅದಭ್ನುವನ್ | ಘಾತಕವಾದ ಆಯುಧದಿಂದ ದೇವತೆಗಳು ಅಸುರರನ್ನು ಹಿಂಸಿಸಿದರು. |
| ತಯಾ ಏವ ಭ್ರಾತೃವ್ಯಂ ದಭ್ನೋತಿ | [ಯಜಮಾನನು ಉಪಾಂಶುಯಾಜರೂಪವಾದ] ಈ ಆಯುಧದಿಂದಲೇ ಶತ್ರುಗಳನ್ನು ಹಿಂಸಿಸುತ್ತಾನೆ/ ಸೋಲಿಸುತ್ತಾನೆ. |

**ಅಗ್ನೀಷೋಮೀಯಯಾಗದ ಅನುಮಂತ್ರಣಮಂತ್ರದ ವ್ಯಾಖ್ಯಾನ**

| | |
|---|---|
| ಅಗ್ನೀಷೋಮಯೋಃ ಅಹಮ್ ದೇವಯಜ್ಯಯಾ ವೃತ್ರಹಾ ಭೂಯಾಸಮ್ ಇತಿ ಆಹ | ಯಜಮಾನನು 'ಅಗ್ನೀಷೋಮಯೋಃ' ಎಂಬ ಅನುಮಂತ್ರಣಮಂತ್ರವನ್ನು ಹೇಳುತ್ತಾನೆ. |
| ಅಗ್ನೀಷೋಮಾಭ್ಯಾಮ್ ವೈ ಇಂದ್ರಃ | ಇಂದ್ರನು ಅಗ್ನೀಷೋಮರಿಂದಲೇ |

---

**ಉಪಾಂಶುಯಾಜಾನುಮಂತ್ರಣ: ತಾತ್ಪರ್ಯ:-** ಈ ಉಪಾಂಶುಯಾಜರೂಪವಾದ ಶತ್ರುಘಾತಕಆಯುಧದಿಂದ ದೇವತೆಗಳು ಅಸುರರನ್ನು ಹಿಂಸಿಸಿದರು. ಯಜಮಾನನು 'ದಬ್ಧಿರಸಿ' ಎಂಬ ಮಂತ್ರವನ್ನು ಹೇಳುವುದರಿಂದ ಈ ಉಪಾಂಶುಯಾಜರೂಪವಾದ ಆಯುಧದಿಂದಲೇ ಶತ್ರುಗಳನ್ನು ಸೋಲಿಸುತ್ತಾನೆ.

ವೃತ್ರಮಹನ್ತಾಭ್ಯಾಮೇವ ಭ್ರಾತೃವ್ಯಗ್ಗ್ಂ ಸ್ತೃಣುತ

ಇಂದ್ರಾಗ್ನಿಯೋರಹಂ ದೇವಯಜ್ಯಯೇಂದ್ರಿಯಾವ್ಯನ್ನಾದೋ

ಭೂಯಾಸಮಿತ್ಯಾಹೇಂದ್ರಿಯಾವ್ಯೇವಾನ್ನಾದೋ

ಭವತೀಂದ್ರಸ್ಯಾ[ಇಂದ್ರಸ್ಯ....[೬] ಅಹಂ]ಹಂ

---

ವೃತ್ರಮ್ । ಅಹನ್ । ತಾಭ್ಯಾಮ್ । ಏವ । ಭ್ರಾತೃವ್ಯಮ್। ಸ್ತೃಣುತೇ । ಇಂದ್ರಾಗ್ನಿಯೋರಿತೀಂದ್ರ-ಅಗ್ನಿಯೋಃ। ಅಹಮ್ । ದೇವಯಜ್ಯಯೇತಿ ದೇವ-ಯಜ್ಯಯಾ । ಇಂದ್ರಿಯಾವೀ । ಅನ್ನಾದ ಇತ್ಯನ್ನ-ಅದಃ । ಭೂಯಾಸಮ್ । ಇತಿ । ಆಹ । ಇಂದ್ರಿಯಾವೀ। ಏವ । ಅನ್ನಾದ ಇತ್ಯನ್ನ-ಅದಃ । ಭವತಿ । ಇಂದ್ರಸ್ಯ[೬] ಅಹಮ್ ।

---

| | |
|---|---|
| ವೃತ್ರಮ್ ಅಹನ್ | ವೃತ್ರಾಸುರನನ್ನು ಸಂಹರಿಸಿದನು. |
| ತಾಭ್ಯಾಮ್ ಏವ | ಆ ಅಗ್ನೀಷೋಮರ ಅನುಗ್ರಹದಿಂದಲೇ ಯಜ |
| ಭ್ರಾತೃವ್ಯಮ್ ಸ್ತೃಣುತೇ | ಮಾನನು ತನ್ನ ಶತ್ರುಗಳನ್ನು ನಾಶಪಡಿಸುತ್ತಾನೆ. |

**ಅಮಾವಾಸ್ಯೆಯಲ್ಲಿ ಎರಡನೆಯ ಹವಿಸ್ಸಾದ**
**ಪುರೋಡಾಶಯಾಗಾನುಮಂತ್ರಣಮಂತ್ರದ ವಿವರಣೆ**

| | |
|---|---|
| ಇಂದ್ರಾಗ್ನಿಯೋಃ ಅಹಮ್ | [ಯಜಮಾನನು] 'ಇಂದ್ರಾಗ್ನಿಯೋರಹಮ್' |
| ದೇವಯಜ್ಯಯಾ ಇಂದ್ರಿಯಾವೀ | ಎಂಬ ಅನುಮಂತ್ರಣಮಂತ್ರವನ್ನು ಹೇಳು |
| ಅನ್ನಾದಃ ಭೂಯಾಸಮ್ ಇತಿ | ತ್ತಾನೆ. [ಇಂದ್ರನ ಅನುಗ್ರಹದಿಂದ] ಇಂದ್ರಿಯ |
| ಆಹ ಇಂದ್ರಿಯಾವೀ ಏವ | ಸಾಮರ್ಥ್ಯವುಳ್ಳವನೂ, [ಅಗ್ನಿಯ ಅನುಗ್ರಹ |
| ಅನ್ನಾದಃ ಭವತಿ | ದಿಂದ] ಅನ್ನಭೋಜನಸಾಮರ್ಥ್ಯವುಳ್ಳವನೂ |
| | ಆಗುತ್ತಾನೆ. |

**ಅಮಾವಾಸ್ಯೆಯ ಸಾನ್ನಾಯ್ಯಯಾಗದ ಅನುಮಂತ್ರಣಮಂತ್ರದ ವಿವರಣೆ**

| | |
|---|---|
| ಇಂದ್ರಸ್ಯ ಅಹಮ್ | [ಯಜಮಾನನು] 'ಇಂದ್ರಸ್ಯಾಹಮ್' |

---

**ಅಗ್ನೀಷೋಮೀಯಯಾಗಾನುಮಂತ್ರಣ: ತಾತ್ಪರ್ಯ:-** ಯಜಮಾನನು 'ಅಗ್ನೀಷೋಮಯೋಃ' ಎಂಬ ಅನುಮಂತ್ರಣಮಂತ್ರವನ್ನು ಹೇಳುತ್ತಾನೆ. ಇಂದ್ರನು ಅಗ್ನೀಷೋಮರಿಂದಲೇ ವೃತ್ರಾಸುರನನ್ನು ಸಂಹರಿಸಿದನು. ಅವರ ಅನುಗ್ರಹದಿಂದ ಯಜಮಾನನೂ ತನ್ನ ಶತ್ರುಗಳನ್ನು ನಾಶಪಡಿಸುತ್ತಾನೆಂದು ಶ್ರುತಿಯು ಹೇಳುತ್ತದೆ.

ದೇವಯಜ್ಯಯೇಂದ್ರಿಯಾವೀ ಭೂಯಾಸಮಿತ್ಯಾಹೇಂದ್ರಿ
ಯಾವ್ಯೇವ ಭವತಿ ಮಹೇಂದ್ರಸ್ಯಾಹಂ ದೇವಯಜ್ಯಯಾ
ಜೇಮಾನಂ ಮಹಿಮಾನಂ ಗಮೇಯಮಿತ್ಯಾಹ

---

ದೇವಯಜ್ಯಯೇತಿ ದೇವ-ಯಜ್ಯಯಾ। ಇಂದ್ರಿಯಾವೀ। ಭೂಯಾಸಮ್। ಇತಿ । ಆಹ। ಇಂದ್ರಿಯಾವೀ। ಏವ। ಭವತಿ । ಮಹೇಂದ್ರಸ್ಯೇತಿ ಮಹಾ-ಇಂದ್ರಸ್ಯ। ಅಹಮ್। ದೇವ ಯಜ್ಯಯೇತಿ ದೇವ-ಯಜ್ಯಯಾ । ಜೇಮಾನಮ್ । ಮಹಿಮಾನಮ್। ಗಮೇಯಮ್। ಇತಿ । ಆಹ ।

---

| | |
|---|---|
| ದೇವಯಜ್ಯಯಾ ಇಂದ್ರಿಯಾವೀ ಭೂಯಾಸಮ್ ಇತಿ ಆಹ | ಎಂಬ ಅನುಮಂತ್ರಣಮಂತ್ರವನ್ನು ಹೇಳುತ್ತಾನೆ. |
| ಇಂದ್ರಿಯಾವೀ ಏವ ಭವತಿ | [ಆ ಯಜಮಾನನು ಇಂದ್ರನ ಅನುಗ್ರಹದಿಂದ] ಇಂದ್ರಿಯಸಾಮರ್ಥ್ಯವುಳ್ಳವನಾಗುತ್ತಾನೆ. |

*** ಶ್ರೀಮಂತರಾದ ರಾಜನ್ಯಾದಿಗಳ ಸಾನ್ನಾಯ್ಯಯಾಗದ**
**ಅನುಮಂತ್ರಣಮಂತ್ರದ ವಿವರಣೆ**

| | |
|---|---|
| ಮಹೇಂದ್ರಸ್ಯ ಅಹಮ್ ದೇವ ಯಜ್ಯಯಾ ಜೇಮಾನಮ್ ಮಹಿಮಾನಮ್ ಗಮೇಯಮ್ ಇತಿ ಆಹ | ಯಜಮಾನನು 'ಮಹೇಂದ್ರಸ್ಯ.....' ಎಂಬ ಅನುಮಂತ್ರಣಮಂತ್ರವನ್ನು ಹೇಳುತ್ತಾನೆ. |

---

**ಪುರೋಡಾಶಯಾಗದ ಅನುಮಂತ್ರಣ: ತಾತ್ಪರ್ಯ:-** ಯಜಮಾನನು **'ಇಂದ್ರಾಗ್ನಿಯೋರಹಮ್'** ಎಂಬ ಅನುಮಂತ್ರಣಮಂತ್ರವನ್ನು ಹೇಳುವುದರಿಂದ ಇಂದ್ರಾಗ್ನಿಗಳ ಅನುಗ್ರಹದಿಂದ ಇಂದ್ರಿಯಸಾಮರ್ಥ್ಯ ಮತ್ತು ಅನ್ನಭೋಜನಸಾಮರ್ಥ್ಯವನ್ನು ಪಡೆಯುತ್ತಾನೆ.

---

* ಶ್ರೀಮಂತರು = ಗತಶ್ರೀಕರು.

'ತ್ರಯೋ ವೈ ಗತಶ್ರಿಯಃ ಶುಶ್ರುವಾನ್ ಗ್ರಾಮಣೀ ರಾಜನ್ಯಸ್ತೇಷಾಂ ಮಹೇಂದ್ರೋ ದೇವತಾ... ತೈ.ಸಂ. 2.5.4.

ಗತಶ್ರೀಕರಾದ ತ್ರಿವೇದವಿತ್, ವೈಶ್ಯಮುಖ್ಯ, ಅಭಿಷಿಕ್ತನಾದ ರಾಜನ ಪುತ್ರ- ಇವರು ಮಾಡುವ ಸಾನ್ನಾಯ್ಯಯಾಗಕ್ಕೆ ಮಹೇಂದ್ರನು ದೇವತೆ.

ಜೇಮಾನಮೇವ ಮಹಿಮಾನಂ ಗಚ್ಛತ್ಯಗ್ನೇಃ ಸ್ವಿಷ್ಟಕೃತೋಽಹಂ

ದೇವಯಜ್ಯಯಾಯುಷ್ಮಾನ್, ಯಜ್ಞೇನ ಪ್ರತಿಷ್ಠಾಂ ಗಮೇ

---

ಜೇಮಾನಮ್। ಏವ । ಮಹಿಮಾನಮ್ । ಗಚ್ಛತಿ । ಅಗ್ನೇಃ । ಸ್ವಿಷ್ಟಕೃತ ಇತಿ ಸ್ವಿಷ್ಟ-ಕೃತಃ। ಅಹಮ್। ದೇವಯಜ್ಯಯೇತಿ ದೇವ-ಯಜ್ಯಯಾ। ಆಯುಷ್ಮಾನ್। ಯಜ್ಞೇನ ಪ್ರತಿಷ್ಠಾಮಿತಿ ಪ್ರತಿ-ಸ್ಥಾಮ್ । ಗಮೇಯಮ್ । ಇತಿ । ಆಹ ।

---

| | |
|---|---|
| ಜೇಮಾನಮ್ ಏವ ಮಹಿಮಾನಮ್ ಗಚ್ಛತಿ | [ಯಜಮಾನನು ಮಹೇಂದ್ರನ ಅನುಗ್ರಹ ದಿಂದ] ಜಯಶೀಲತೆಯನ್ನೂ / ಸರ್ವೋತ್ಕೃಷ್ಟ ತೆಯನ್ನೂ, ಮಹತ್ತ್ವವನ್ನೂ ಸರ್ವಪೂಜ್ಯತ್ವ ವನ್ನೂ ಹೊಂದುತ್ತಾನೆ. |

**ಸ್ವಿಷ್ಟಕೃದನುಮಂತ್ರಣಮಂತ್ರದ ವ್ಯಾಖ್ಯಾನ**

| | |
|---|---|
| ಅಗ್ನೇಃ ಸ್ವಿಷ್ಟಕೃತಃ ಅಹಮ್ ದೇವಯಜ್ಯಯಾ ಆಯುಷ್ಮಾನ್ ಯಜ್ಞೇನ ಪ್ರತಿಷ್ಠಾಮ್ ಗಮೇಯಮ್ ಇತಿ ಅಹ | ಯಜಮಾನನು 'ಅಗ್ನೇಃ ಸ್ವಿಷ್ಟಕೃತಃ' ಎಂಬ ಅನುಮಂತ್ರಣಮಂತ್ರವನ್ನು ಹೇಳುತ್ತಾನೆ. |

---

**ಸಾನ್ನಾಯ್ಯಯಾಗದ ಅನುಮಂತ್ರಣ: ತಾತ್ಪರ್ಯ:-** ಯಜಮಾನನು 'ಇಂದ್ರಸ್ಯಾಹಮ್' ಎಂಬ ಅನುಮಂತ್ರಣಮಂತ್ರವನ್ನು ಹೇಳುತ್ತಾನೆ. ಇದರಿಂದ ಇಂದ್ರನ ಅನುಗ್ರಹವುಂಟಾಗಿ ಇಂದ್ರಿಯಸಾಮರ್ಥ್ಯವುಳ್ಳವನಾಗುತ್ತಾನೆ.

**ರಾಜನ್ಯಾದಿಗಳ ಸಾನ್ನಾಯ್ಯಯಾಗದ ಅನುಮಂತ್ರಣ: ತಾತ್ಪರ್ಯ:-** ಯಜಮಾನನು 'ಮಹೇಂದ್ರಸ್ಯಾಹಂ.....' ಎಂಬ ಅನುಮಂತ್ರಣಮಂತ್ರವನ್ನು ಹೇಳುತ್ತಾನೆ. ಆಗ ಮಹೇಂದ್ರನ ಅನುಗ್ರಹವುಂಟಾಗಿ ಯಜಮಾನನು ಜಯಶೀಲತೆ ಯನ್ನೂ [ಸರ್ವೋತ್ಕೃಷ್ಟತೆಯನ್ನೂ] ಮಹತ್ತ್ವವನ್ನೂ [ಸರ್ವಪೂಜ್ಯತೆಯನ್ನೂ] ಹೊಂದುತ್ತಾನೆ.

ಯಮಿತ್ಯಾಹಾಯುರೇವಾತ್ಮನ್ಧತ್ತೇ ಪ್ರತಿ ಯಜ್ಞೇನ

ತಿಷ್ಠತಿ ||೧೧-45||

[ಪ್ರತಿಷ್ಠಾಮಹ್ವದಸ್ತು ವಿದ್ಯುತಂ ವಸಂತಂ ತೇನ್ಯೈವೇಂದ್ರ ಸ್ಯಾಷ್ಟಾತ್ರಿಗ್ಂಶಚ್ಚ||]

---

ಆಯುಃ । ಏವ । ಆತ್ಮನ್ನ್ । ಧತ್ತೇ । ಪ್ರತೀತಿ । ಯಜ್ಞೇನ । ತಿಷ್ಠತಿ ||೧೧||

---

ಆಯುಃ ಏವ ಆತ್ಮನ್ನ್ ಧತ್ತೇ ಪ್ರತಿ ಯಜ್ಞೇನ ತಿಷ್ಠತಿ

[ಯಜಮಾನನು ಸ್ವಿಷ್ಟಕೃದಗ್ನಿಯ ಅನುಗ್ರಹ ದಿಂದ] ದೀರ್ಘಾಯುಸ್ಸನ್ನೂ, ಯಜ್ಞದ *ಪ್ರತಿಷ್ಠೆಯನ್ನೂ ಹೊಂದುತ್ತಾನೆ/ಪರಮಾತ್ಮ ನನ್ನು ಹೊಂದುತ್ತಾನೆ.

---

**ಸ್ವಿಷ್ಟಕೃದನುಮಂತ್ರಣತ ತಾತ್ಪರ್ಯ:-** ಯಜಮಾನನು **'ಅಗ್ನೇಃ ಸ್ವಿಷ್ಟಕೃತಃ'** ಎಂಬ ಅನುಮಂತ್ರಣಮಂತ್ರವನ್ನು ಹೇಳುತ್ತಾನೆ. ಸ್ವಿಷ್ಟಕೃದಗ್ನಿಯ ಅನುಗ್ರಹದಿಂದ ದೀರ್ಘ ಆಯುಸ್ಸನ್ನೂ, ಯಜ್ಞವು ತನ್ನಲ್ಲಿ ಸ್ಥಿರವಾಗಿರುವಿಕೆಯನ್ನೂ/ಪರಮಾತ್ಮನನ್ನು ಹೊಂದು ತ್ತಾನೆ.

## ಅನುವಾಕದ ವಿಶೇಷ ವಿಷಯಗಳು

### ಅ) ಮೀಮಾಂಸಾ

**1. ವರಣ—ಯೇ ಯಜಾಮಹೇ ಇವುಗಳಿಗೆ ವಿಕಲ್ಪವೇ? [ಜೈ.ಸೂ.10-8]**

ಮಹಾಪಿತೃಯಜ್ಞದಲ್ಲಿ ಅತಿದೇಶದಿಂದ ಪ್ರಾಪ್ತವಾದ ವರಣದ ವಿಷಯದಲ್ಲಿ **'ನಾರ್ಷೇಯಂ ವೃಣೀತೇ । ನ ಹೋತಾರಮ್' ।** ಹೀಗೆ ವಿಶೇಷವನ್ನು ಹೇಳಲಾಗಿದೆ. **'ಆ ಶ್ರಾವಯ'** ಎಂಬ ಪಂಚಕದ ವಿಷಯದಲ್ಲಿ **'ನಾನುಯಾಜೇಷು ಯೇ ಯಜಾಮಹಂ ಕರೋತಿ'** ಎಂಬ ವಿಶೇಷವು ಶ್ರುತವಾಗಿದೆ. ಹೀಗೆ ವಿಧಿಪ್ರತಿಷೇಧವಚನಗಳಿಗೆ ಸಾರ್ಥಕ್ಯ ಕ್ಕಾಗಿ ವರಣ ಮತ್ತು 'ಯೇ ಯಜಾಮಹೇ' ಇವುಗಳಿಗೆ ವಿಕಲ್ಪವೇ? ಇಲ್ಲವೇ? ಇದು ಸಂಶಯ.

---

* ಯಜಮಾನನಲ್ಲಿ ಯಜ್ಞವು ಸ್ಥಿರವಾಗಿರುವುದೇ ಯಜ್ಞದ ಪ್ರತಿಷ್ಠೆ.

ಇಲ್ಲಿಯ ಪೂರ್ವಪಕ್ಷ ಹೀಗಿದೆ; ವರಣವು ಅತಿದೇಶದಿಂದ ಪ್ರಾಪ್ತವಾಗುತ್ತದೆ. ಹಾಗೆಯೇ 'ಯೇ ಯಜಾಮಹೇ' ಎಂಬ ಮಂತ್ರವೂ ಪ್ರಾಪ್ತವಾಗುತ್ತದೆ. ನಿಷೇಧ ವಚನವಿರುವುದರಿಂದ 'ಅತಿರಾತ್ರೇ ಷೋಡಶಿನಂ ಗೃಹ್ಣಾತಿ' 'ನಾತಿರಾತ್ರೇ ಷೋಡಶಿನಂ ಗೃಹ್ಣಾತಿ' ಎಂಬ ವಾಕ್ಯಗಳಲ್ಲಿರುವಂತೆ ವಿಧಿ-ಪ್ರತಿಷೇಧಗಳಿರುವುದರಿಂದ ವಿಕಲ್ಪ.

'ನಾರ್ಷೇಯಂ ವೃಣೀತೇ' 'ನಾನುಯಾಜೇಷು ಯೇ ಯಜಾಮಹಂ ಕರೋತಿ' ಎಂಬ ವಾಕ್ಯಗಳಲ್ಲಿ 'ನ ವೃಣೀತೇ' 'ನ ಕರೋತಿ' ಎಂದು ಕ್ರಿಯೆಯೊಡನೆ ನಿಷೇಧವನ್ನು ಅನ್ವಯ ಮಾಡಿದರೆ ಅದು ಪ್ರತಿಷೇಧವಾಗುತ್ತದೆ. ಆಗ ವಿಕಲ್ಪದ ಪ್ರಸಕ್ತಿ. ವಿಕಲ್ಪವು ಅಷ್ಟದೋಷ ದುಷ್ಟವಾಗಿದೆ. ಆದುದರಿಂದ 'ನ' ಎಂಬುದನ್ನು 'ನ ಹೋತಾರಮ್' 'ನ ಅನುಯಾಜೇಷು' ಎಂದು ಅನ್ವಯ ಮಾಡಿದರೆ 'ಹೋತೃವರಣಭಿನ್ನಂ ಕುರ್ಯಾತ್' [ಹೋತೃವರಣಕ್ಕಿಂತಲೂ ಭಿನ್ನವಾದುದನ್ನು ಮಾಡಬೇಕು]. 'ಅನೂಯಾಜಭಿನ್ನೇಷು ಯೇ ಯಜಾಮಹಂ ಕುರ್ಯಾತ್' [ಅನೂಯಾಜಕ್ಕಿಂತಲೂ ಬೇರೆಡೆ 'ಯೇ ಯಜಾಮಹೇ' ಎಂಬುದನ್ನು ಹೇಳಬೇಕು ಎಂದು ಅರ್ಥ ಮಾಡುವುದರಿಂದ ನಿಷೇಧವಿಲ್ಲ. ಆದುದರಿಂದ ವಿಕಲ್ಪವೂ ಇಲ್ಲ. ಇದು ಇಲ್ಲಿನ ಸಿದ್ಧಾಂತ.

---

## ॥ ದ್ವಾದಶೋಽನುವಾಕಃ ॥

ಇಂದ್ರಂ ವೋ ವಿಶ್ವತಸ್ಪರಿ ಹವಾಮಹೇ ಜನೇಭ್ಯಃ ।

ಅಸ್ಮಾಕಮಸ್ತು ಕೇವಲಃ ॥

---

॥ ವೈ ॥ ಇಂದ್ರಮ್ । ವಃ । ವಿಶ್ವತಃ । ಪರೀತಿ । ಹವಾಮಹೇ । ಜನೇಭ್ಯಃ ॥

ಅಸ್ಮಾಕಮ್ । ಅಸ್ತು । ಕೇವಲಃ ॥

---

ಏಳನೆಯ ಅನುವಾಕವು ಮೊದಲುಗೊಂಡು ಐದು ಅನುವಾಕಗಳಲ್ಲಿ ಯಾಜಮಾನ ಬ್ರಾಹ್ಮಣವೂ, ಪ್ರಾಸಂಗಿಕವಾಗಿ* ಸ್ವಲ್ಪಮಟ್ಟಿಗೆ ಆಧ್ವರ್ಯವಬ್ರಾಹ್ಮಣವೂ ಹೇಳಲ್ಪಟ್ಟಿದೆ. ಈ ಹನ್ನೆರಡನೆಯ ಅನುವಾಕದಲ್ಲಿ ಯಾಜ್ಯಾ–ಪುರೋನುವಾಕ್ಯೆಗಳು ಹೇಳಲ್ಪಟ್ಟಿವೆ.

---

| ಮಂತ್ರ | ವಿನಿಯೋಗ |
|---|---|
| ಇಂದ್ರಂ ವೋ..... ಕೇವಲಃ । | ಪಶುಕಾಮನಿಗೆ ವಿಹಿತವಾದ ಐಂದ್ರ ಚರುಯಾಗದ ಪುರೋನುವಾಕ್ಯೆ. |

---

[ಎಲೈ! ಋತ್ವಿಗ್ಯಜಮಾನರೇ!] **ವಃ ಜನೇಭ್ಯಃ** = ನಿಮ್ಮ ಮತ್ತು [ನಮ್ಮ] ಪುತ್ರ-ಭೃತ್ಯಾದಿ ಜನರಿಗಾಗಿ / ಜನಸಮೃದ್ಧಿಗಾಗಿ; **ವಿಶ್ವತಃ ಪರಿ** = ಎಲ್ಲರಿಗಿಂತಲೂ ಮೇಲಿರುವ ಉತ್ಕೃಷ್ಟನಾದ / ಎಲ್ಲರಿಗಿಂತಲೂ ಮೇಲಾಗಿ; **ಇಂದ್ರಮ್** = ಇಂದ್ರನನ್ನು; **ಹವಾಮಹೇ** = ಆಹ್ವಾನಿಸುತ್ತೇವೆ; **ಅಸ್ಮಾಕಮ್** = ನಿಮಗೂ ಮತ್ತು ನಮಗೂ; **ಕೇವಲಃ** = ಇತರರಿಗಿಂತಲೂ ನಮ್ಮ ವಿಷಯದಲ್ಲಿ ಹೆಚ್ಚಾಗಿ ಅನುಗ್ರಹ ಮಾಡುವನಾಗಿ; **ಅಸ್ತು** = ಆಗಲಿ.

---

ಎಲೈ! ಋತ್ವಿಗ್ಯಜಮಾನರೇ! ನಿಮ್ಮ ಮತ್ತು ನಮ್ಮ ಪುತ್ರಭೃತ್ಯಾದಿಗಳಿಗಾಗಿ ಎಲ್ಲರಿಗಿಂತಲೂ ಮೇಲಿರುವ/ಸರ್ವೋತ್ಕೃಷ್ಟನಾದ ಇಂದ್ರನನ್ನು ಹವಿಸ್ಸಿನ ಸ್ವೀಕಾರಕ್ಕಾಗಿ ಆಹ್ವಾನಿಸುತ್ತೇವೆ. ಆ ಇಂದ್ರನು ನಮ್ಮ ವಿಷಯದಲ್ಲಿ ಇತರರಿಗಿಂತಲೂ ಹೆಚ್ಚಾಗಿ

---

* **ಸ್ಮೃತಸ್ಯ ಉಪೇಕ್ಷಾನರ್ಹತ್ವಮ್ ಪ್ರಸಂಗಃ ।** ಸ್ಮರಣೆಗೆ ಬಂದ ವಿಷಯವನ್ನು ಉಪೇಕ್ಷೆ ಮಾಡದೇ ಪ್ರತಿಪಾದಿಸುವುದು.

**ಇಂದ್ರಂ ನರೋ ನೇಮಧಿತಾ ಹವಂತೇ ಯತ್ಪಾರ್ಯಾ ಯುನಜತೇ ಧಿಯಸ್ತಾಃ। ಶೂರೋ ನೃಷಾತಾ ಶವಸಶ್ಚಕಾನ ಆ ಗೋಮತಿ ವ್ರಜೇ ಭಜಾ ತ್ವಂ ನಃ॥**

---

**ಇಂದ್ರಮ್** । ನರಃ । ನೇಮಧಿತೇತಿ ನೇಮ-ಧಿತಾ । ಹವಂತೇ । ಯತ್ । ಪಾರ್ಯಾಃ। ಯುನಜತೇ । ಧಿಯಃ । ತಾಃ ॥ ಶೂರಃ । ನೃಷಾತೇತಿ ನೃ-ಸಾತಾ । ಶವಸಃ । ಚಕಾನಃ। ಏತಿ । ಗೋಮತೀತಿ ಗೋ-ಮತಿ । ವ್ರಜೇ । ಭಜ । ತ್ವಮ್ । ನಃ ॥

---

| ಮಂತ್ರ | ವಿನಿಯೋಗ |
|---|---|
| ಇಂದ್ರಂ ನರೋ.... ಭಜಾ ತ್ವಂ ನಃ । | ಐಂದ್ರ ಚರುಯಾಗದ ಯಾಜ್ಯೆ. |

---

❖ **ಯತ್** = ಯಾವ ಕಾರಣದಿಂದ / ಯಾವಾಗ; **ಪಾರ್ಯಾಃ** = [ಅಗ್ನಿಚಯನಾನಂತರ ಅಗ್ನಿಷ್ಟೋಮಾದಿಯಾಗಗಳ] ಕೊನೆಯನ್ನು ಹೊಂದತಕ್ಕವರಾಗಿ; **ಧಿಯಃ ತಾಃ** = ಆ ಅಗ್ನಿಷ್ಟೋಮಾದಿಕರ್ಮಗಳನ್ನು; **ಯುನಜತೇ** = ಅನುಷ್ಠಿಸುತ್ತಾರೆಯೋ [ಆ ಕಾರಣದಿಂದ/ಆಗ] **ನರಃ** = ಅಗ್ನಿಚಯನವನ್ನು ಮಾಡುವ ಯಜಮಾನರು; **ಇಂದ್ರಮ್** = ಇಂದ್ರದೇವನನ್ನು; **ನೇಮಧಿತಾ** =[ಅಗ್ನ್ಯಾದಿದೇವತೆಗಳೊಡನೆ] ಹವಿಸ್ಸಿನ ಅರ್ಧವನ್ನು ಧರಿಸುವುದಕ್ಕಾಗಿ; **ಹವಂತೇ** = ಆಹ್ವಾನಿಸುತ್ತಾರೆ; / [ಪಾರ್ಯಾಃ = ಪರಲೋಕದಲ್ಲಿ ಸಾಧುವಾದ; / ದುಃಖದ ಕೊನೆಯನ್ನು ಹೊಂದಿಸುವುದರಲ್ಲಿ ಸಾಧುವಾದ; ಧಿಯಃ = ಕರ್ಮಗಳನ್ನು ಆಚರಿಸುತ್ತಾರೆಯೋ] [ನೇಮಧಿತಾ = ನೇಮ ಧಿತಮ್ = ಅರ್ಧ ಹವಿಸ್ಸನ್ನು ಹೊಂದುವ ಇಂದ್ರನನ್ನು] [ಅಂತಹ ಇಂದ್ರನೇ] **ತ್ವಮ್** = ನೀನು; **ಶೂರಃ** =[ರಾಕ್ಷಸರಿಂದ ಸೋಲಿಸಲ್ಪಡದ] ವೀರನಾಗಿರುವೆ; **ನೃಷಾತಾ** = ಮನುಷ್ಯರಿಗೆ ಧನವನ್ನು ಕೊಡುವವನಾಗಿರುವೆ; **ಶವಸಃ** = ನಮ್ಮ ಬಲಕ್ಕೆ; **ಚಕಾನಃ** = ತೃಪ್ತಿಯನ್ನು/ವೃದ್ಧಿಯನ್ನು ಮಾಡುವವನಾಗಿ; **ನಃ** = ನಮ್ಮನ್ನು; **ಗೋಮತಿ** = ಬಹುಗವಾದಿಯುಕ್ತವಾದ; **ವ್ರಜೇ**= ಪಶುಸಮೂಹದಲ್ಲಿ; **ಆ ಭಜ** = ಎದುರಾಗಿ ಸ್ಥಾಪಿಸು; [ಶವಸಃ = ಬಲಸ್ಯ ದಾತಾ; ಚಕಾನಃ = ತೃಪ್ತಿಶೀಲಃ; ಗೋಮತಿ ವ್ರಜೇ = ಗೋವುಗಳುಳ್ಳ ಕೊಟ್ಟಿಗೆಯಲ್ಲಿ]

---

ಅನುಗ್ರಹ ಮಾಡಲಿ/ನಮಗೆ ಮಾತ್ರವೇ ಹೆಚ್ಚಾಗಿ ಅನುಗ್ರಹ ಮಾಡಲಿ.

ಇಂದ್ರಿಯಾಣಿ ಶತಕ್ರತೋ ಯಾ ತೇ ಜನೇಷು ಪಂಚಸು।
ಇಂದ್ರ ತಾನಿ ತ ಆ ವೃಣೇ ॥ ಅನು ತೇ ದಾಯಿ ಮಹ
ಇಂದ್ರಿಯಾಯ ಸತ್ರಾ ತೇ

---

ಇಂದ್ರಿಯಾಣಿ । ಶತಕ್ರತೋ ಇತಿ ಶತ-ಕ್ರತೋ । ಯಾ । ತೇ । ಜನೇಷು । ಪಂಚಸ್ವಿತಿ ಪಂಚ-ಸು ॥ ಇಂದ್ರ । ತಾನಿ । ತೇ । ಏತಿ । ವೃಣೇ॥ ಅನ್ವಿತಿ । ತೇ । ದಾಯಿ। ಮಹೇ । ಇಂದ್ರಿಯಾಯ । ಸತ್ರಾ । ತೇ ।

---

| ಮಂತ್ರ | ವಿನಿಯೋಗ |
|---|---|
| ಇಂದ್ರಿಯಾಣಿ.... ವೃಣೇ ॥ | [ಪಶುಕಾಮನಿಗೆ ವಿಹಿತವಾದ] ಇಂದ್ರಿಯಾವಂತನಾದ* ಇಂದ್ರನ ಇಷ್ಟಿಯಲ್ಲಿನ ಪುರೋನುವಾಕ್ಯೆ. |
| ಅನು ತೇ ..... ನ್ವೃಷಹ್ಯೇ । | ಹಿಂದಿನ ಐಂದ್ರೇಷ್ಟಿಯ ಯಾಜ್ಯಾನುವಾಕ್ಯೆ. |

---

∴ **ಶತಕ್ರತೋ** = ನೂರು ಅಶ್ವಮೇಧಯಾಗಗಳನ್ನು ಮಾಡಿ ಶತಕ್ರತುವೆನಿಸಿಕೊಂಡಿರುವ ಇಂದ್ರನೇ! **ಪಂಚಸು ಜನೇಷು** = ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಮತ್ತು ನಿಷಾದರಲ್ಲಿ/ದೇವ, ಮನುಷ್ಯ, ಪಿತೃ, ರಕ್ಷಃ ಮತ್ತು ಗಂಧರ್ವರಲ್ಲಿ **ತೇ** = ನಿನ್ನ [ಅನುಗ್ರಹದಿಂದ] **ಯಾ ಇಂದ್ರಿಯಾಣಿ** = ಯಾವ ಸಾಮರ್ಥ್ಯಗಳು [ಸಂತಿ = ಇವೆಯೋ;] **ಇಂದ್ರ** = ಹೇ! ಇಂದ್ರನೇ; **ತೇ** = ನಿನ್ನ; **ತಾನಿ** = ಆ ಸಾಮರ್ಥ್ಯಗಳನ್ನು; **ಆ ವೃಣೇ** = [ನಿನ್ನ ಅನುಗ್ರಹದಿಂದ] ಸ್ವೀಕರಿಸುತ್ತೇನೆ. ∴ **ಯಜತ್ರ** = ಯಾಗಗಳಿಂದ ಆರಾಧಿಸಲ್ಪಡತಕ್ಕವನೇ! **ಇಂದ್ರ** = ಇಂದ್ರನೇ! **ಮಹೇ** = ಎಲ್ಲ ದೇವತೆಗಳಿಗಿಂತಲೂ ಅಧಿಕನಾದ; **ತೇ** = ನಿನಗೆ ; **ಸತ್ರಾ** = ಸತ್ರಯಾಗಗಳಲ್ಲಿ;

---

ಇಂದ್ರನೇ! ಅಗ್ನಿಷ್ಟೋಮಾದಿಯಾಗಗಳನ್ನು ಮಾಡುವ ಯಜಮಾನರು ಅಗ್ನಿಚಯನದಲ್ಲಿ ಅಗ್ನ್ಯಾದಿದೇವತೆಗಳೊಡನೆ ಹವಿಸ್ಸಿನ ಅರ್ಧವನ್ನು ಸ್ವೀಕರಿಸುವುದಕ್ಕಾಗಿ

---

* ಇಲ್ಲಿಂದ ಮುಂದಿನ ಮೂರು ಇಷ್ಟಿಗಳನ್ನು ಭೂತಿರೂಪಫಲಕ್ಕೂ ವಿನಿಯೋಗಿಸಿರುತ್ತಾರೆ. ಇದು ವಿನಿಯೋಗಾಂತರ.

**ವಿಶ್ವಮನು ವೃತ್ರಹತ್ಯೇ । ಅನು [೧] ಕ್ಷತ್ರಮನು ಸಹೋ**

**ಯಜತ್ರೇಂದ್ರ ದೇವೇಭಿರನು ತೇ ನೃಷಹ್ಯೇ ।**

---

ವಿಶ್ವಮ್ । ಅನ್ವಿತಿ । ವೃತ್ರಹತ್ಯ ಇತಿ ವೃತ್ರ-ಹತ್ಯೇ । ಅನ್ವಿತಿ ।[೧] ಕ್ಷತ್ರಮ್। ಅನ್ವಿತಿ । ಸಹಃ । ಯಜತ್ರ । ಇಂದ್ರ । ದೇವೇಭಿಃ । ಅನ್ವಿತಿ । ತೇ । ನೃಷಹ್ಯ ಇತಿ ನೃ-ಸಹ್ಯೇ ॥

---

**ದೇವೇಭಿಃ** = ಅಗ್ನ್ಯಾದಿದೇವತೆಗಳಿಂದ/ಋತ್ವಿಜರಿಂದ. **ವಿಶ್ವಮ್** = ಎಲ್ಲ ಹವಿಸ್ಸೂ; **ಅನು ದಾಯಿ**=ಅನುಸರಿಸಿ ಕೊಡಲ್ಪಡುತ್ತದೆ; [ಏತಕ್ಕೆಂದರೆ] **ವೃತ್ರಹತ್ಯೇ ಅನು** = ವೃತ್ರಾಸುರನನ್ನು ಕೊಂದಿರುವುದನ್ನು ಅನುಸರಿಸಿ; **ತೇ ಇಂದ್ರಿಯಾಯ** = ನಿನ್ನ ಬಲವೃದ್ಧಿಗಾಗಿಯೂ; **ಕ್ಷತ್ರಮ್ ಅನು** = ಕ್ಷತ್ರಿಯಜಾತಿಯ ಅಭಿಮಾನವನ್ನನುಸರಿಸಿ; [ಧನವನ್ನನುಸರಿಸಿ] **ಸಹಃ** = ಬಲವನ್ನು; **ಅನು** = ಅನುಸರಿಸಿ; **ನೃಷಹ್ಯೇ ಅನು** = ವೈರಿಗಳೆಲ್ಲರನ್ನೂ ಸೋಲಿಸಿರುವುದನ್ನನುಸರಿಸಿ; **ದಾಯಿ** = ಕೊಡಲ್ಪಡುತ್ತದೆ.

---

ನಿನ್ನನ್ನು ಆಹ್ವಾನಿಸುತ್ತಾರೆ*. ನೀನು ಶೂರನು. ಮಾನವರಿಗೆ ಧನವನ್ನು ನೀಡತಕ್ಕವನು. ಬಲವನ್ನು ಕೊಡತಕ್ಕವನು. ನೀನು ತೃಪ್ತಿಶೀಲನು. ನಮ್ಮ ಬಲವನ್ನು ವೃದ್ಧಿಗೊಳಿಸುವವನಾಗು. ನಮಗೆ ಗವಾದಿಪಶುಸಂಪತ್ತಿಯನ್ನು ನೀಡು/ನಮ್ಮ ಕೊಟ್ಟಿಗೆಯು ಗೋವುಗಳಿಂದ ತುಂಬಿರುವಂತೆ ಮಾಡು.

ಶತಕ್ರತುವಾದ ಇಂದ್ರನೇ! ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಶೂದ್ರ, ನಿಷಾದರಲ್ಲಿ/ದೇವ-ಮನುಷ್ಯ-ಪಿತೃ-ರಕ್ಷೋ-ಗಂಧರ್ವರಲ್ಲಿ ನಿನ್ನ ಅನುಗ್ರಹದಿಂದ ಯಾವ ಸಾಮರ್ಥ್ಯಗಳಿವೆಯೋ/ಅವರನ್ನು ರಕ್ಷಿಸುವ ಯಾವ ಸಾಮರ್ಥ್ಯಗಳು ನಿನ್ನಲ್ಲಿವೆಯೋ ಅವುಗಳನ್ನು ಅನುಗ್ರಹಿಸು. ನಿನ್ನ ಅನುಗ್ರಹದಿಂದ ಇಂದ್ರಿಯಸಾಮರ್ಥ್ಯವುಳ್ಳವನೂ, ಪಶುಸಂಪತ್ತಿಯುಳ್ಳವನೂ ಆಗುವೆನು.

ಇಂದ್ರನು ಯಾಗಗಳಲ್ಲಿ ಪ್ರಧಾನವಾಗಿ ಹವಿಸ್ಸುಗಳಿಂದ ಆರಾಧಿಸಬೇಕಾದವನು. ಪರಮೈಶ್ವರ್ಯಯುಕ್ತನು. ಇಂತಹ ಇಂದ್ರನಿಗೆ ಹವಿಸ್ಸೆಲ್ಲವನ್ನೂ, ಅಗ್ನ್ಯಾದಿದೇವತೆಗಳು/ಋತ್ವಿಜರು ಸತ್ರಗಳಲ್ಲಿ [ಯಾಗಗಳಲ್ಲಿ] ಸಮರ್ಪಿಸುತ್ತಾರೆ.

---

* 'ಅರ್ಧೇಂದ್ರಾಣಿ ಜುಹೋತಿ' ಯತ್ಸರ್ವೇಷಾಮರ್ಧಮಿಂದ್ರಃಋ 'ಅಗ್ನಿಶ್ಚಮ ಇಂದ್ರಶ್ಚಮೇ' ಹೀಗೆ ಚಯನ ಪ್ರಕರಣದಲ್ಲಿದೆ.

**ಆ ಯಸ್ಮಿನ್ತ್ಸಪ್ತ ವಾಸವಾಸ್ತಿಷ್ಠಂತಿ ಸ್ವಾರುಹೋ ಯಥಾ ।**

**ಋಷಿರ್ ಹ ದೀರ್ಘಶ್ರುತ್ತಮ ಇಂದ್ರಸ್ಯ ಘರ್ಮೋ ಅತಿಥಿಃ॥**

**ಆಮಾಸು ಪಕ್ವಮೈರಯ ಆ ಸೂರ್ಯಗ್ಂ ರೋಹಯೋ ದಿವಿ ।**

---

ಏತಿ । ಯಸ್ಮಿನ್ನ್ । ಸಪ್ತ । ವಾಸವಾಃ । ತಿಷ್ಠಂತಿ । ಸ್ವಾರುಹ ಇತಿ ಸ್ವ-ರುಹಃ। ಯಥಾ ॥ ಋಷಿಃ । ಹ । ದೀರ್ಘಶ್ರುತ್ತಮ ಇತಿ ದೀರ್ಘಶ್ರುತ್-ತಮಃ । ಇಂದ್ರಸ್ಯ। ಘರ್ಮಃ । ಅತಿಥಿಃ ॥ ಆಮಾಸು । ಪಕ್ವಮ್। ಐರಯಃ । ಏತಿ । ಸೂರ್ಯಮ್। ರೋಹಯಃ । ದಿವಿ ॥

---

| ಮಂತ್ರ | ವಿನಿಯೋಗ |
|---|---|
| ಆ ಯಸ್ಮಿನ್..... ಅತಿಥಿಃ ॥ | [ಬ್ರಹ್ಮವರ್ಚಸಕಾಮನಾದವನಿಗೆ ವಿಹಿತವಾದ] ಇಂದ್ರಘರ್ಮವದಿಷ್ಟಿಯಲ್ಲಿನ ಪುರೋನುವಾಕ್ಯೆ. |
| ಆಮಾಸು........ ಗಿರಃ ॥ | ಹಿಂದಿನ ಇಷ್ಟಿಯ ಯಾಜ್ಯಾನುವಾಕ್ಯೆ. |

---

∴ **ಸಪ್ತ ವಾಸವಾಃ** = ಏಳು ಸೂರ್ಯರಥದ ಕುದುರೆಗಳು; [ಜಗತ್ತಿನ ವಾಸಕ್ಕೆ ಕಾರಣವಾದ ಕಿರಣಗಳು] **ಯಸ್ಮಿನ್** = ಯಾವ ಸೂರ್ಯನಲ್ಲಿ; **ಸ್ವಾರುಹಃ ಯಥಾ** = [ಸುಶಿಕ್ಷಿತವಾಗಿರುವುದರಿಂದ] ಸ್ವತಂತ್ರವಾಗಿ ರಥವನ್ನು ಎಳೆದುಕೊಂಡು ಹೋಗುವಂತೆ; **ಆ ತಿಷ್ಠಂತಿ** =ಇರುತ್ತವೆಯೋ; **ದೀರ್ಘಶ್ರುತ್ತಮಃ** = [ತ್ರೈಲೋಕ್ಯಪ್ರಕಾಶದಿಂದ] ಅತ್ಯಂತ ಪ್ರಸಿದ್ಧನಾದ; ಸಃ **ಋಷಿಃ ಹ** = ಆ ವೇದಾತ್ಮಕನಾಗಿ ಅತೀಂದ್ರಿಯಜ್ಞಾನಿಯಾದ; **ಘರ್ಮಃ** = ಬೆಳಗುವ ಸೂರ್ಯನು; **ಇಂದ್ರಸ್ಯ** = ಇಂದ್ರನ; **ಅತಿಥಿಃ** = ಅತಿಥಿಯಾಗಿರುತ್ತಾನೆ. [ಇಂದ್ರನು ಕೊಡುವ ನೀರನ್ನು ಅಪೇಕ್ಷಿಸುತ್ತಾನೆ] ∴ [ಎಲೈ! ಇಂದ್ರನೇ!] **ಆಮಾಸು** = ಫಲಪಾಕವಿಲ್ಲದ ಸಸ್ಯಗಳಲ್ಲಿ; **ಪಕ್ವಮ್** = ಸುಪಕ್ವವಾದ ಫಲವನ್ನು; **ಐರಯಃ** = [ಮಳೆಯನ್ನು ಸುರಿಸುವ ಮೂಲಕ] ಉಂಟುಮಾಡಿದ್ದೀಯೆ; [ಭೂಮಿಯ ಮೇಲಿನ ನೀರುಗಳಲ್ಲಿ ಮಳೆಯ ನೀರನ್ನು ಸುರಿಸುತ್ತೀಯೆ.] **ಸೂರ್ಯಮ್** = ಸೂರ್ಯನನ್ನು; **ದಿವಿ** = ಅಂತರಿಕ್ಷದಲ್ಲಿ; **ಆ ರೋಹಯಃ** = ಏರಿಸಿರುತ್ತೀಯೆ/ಸುತ್ತುವ ಸಾಮರ್ಥ್ಯವನ್ನು ಕೊಟ್ಟು ಪ್ರಕಾಶಗೊಳಿಸಿರುತ್ತೀಯೆ; [ಎಲೈ! ಯಜಮಾನರೇ!] [**ಹೇತಿಭಿಃ** = ಅಗ್ನಿಜ್ವಾಲೆಗಳಿಂದ]

ಘರ್ಮಂ ನ ಸಾಮನ್ತಪತಾ ಸುವೃಕ್ತಿಭಿರ್ಜುಷ್ಟಂ ಗಿರ್ವಣಸೇ ಗಿರಃ॥ ಇಂದ್ರಮಿದ್ಗಾಥಿನೋ ಬೃಹದಿಂದ್ರಮರ್ಕೇಭಿರರ್ಕಿಣಃ । ಇಂದ್ರಂ ವಾಣೀರನೂಷತ ॥

---

ಘರ್ಮಮ್ । ನ । ಸಾಮನ್ । ತಪತ । ಸುವೃಕ್ತಿಭಿರಿತಿ ಸುವೃಕ್ತಿ-ಭಿಃ । ಜುಷ್ಟಮ್। ಗಿರ್ವಣಸೇ । ಗಿರಃ ॥ ಇಂದ್ರಮ್ । ಇತ್ । ಗಾಥಿನಃ । ಬೃಹತ್ । ಇಂದ್ರಮ್। ಅರ್ಕೇಭಿಃ । ಅರ್ಕಿಣಃ ॥ ಇಂದ್ರಮ್ । ವಾಣೀಃ । ಅನೂಷತ ॥

---

| ಮಂತ್ರ | ವಿನಿಯೋಗ |
|---|---|
| ಇಂದ್ರಮ್ ..... ಅನೂಷತ । | [ಅನ್ನಕಾಮನಿಗೆ ವಿಹಿತವಾದ] ಅರ್ಕವದಿಂದ್ರೇಷ್ಟಿಯಲ್ಲಿ ಪುರೋನುವಾಕ್ಯೆ. |

---

**ಸುವೃಕ್ತಿಭಿಃ** = [ಹಿಂಕಾರ, ಉದ್ಗೀಥ, ಪ್ರಸ್ತಾವ, ಪ್ರತಿಹಾರ, ನಿಧನಗಳೆಂಬ] ಭಕ್ತಿ[ಭಾಗ]ಗಳಿಂದ ಕೂಡಿದೆ; **ಸಾಮನ್** = ಸಾಮಗಳಿಂದ; **ಘರ್ಮಂ ನ** = ಪ್ರವರ್ಗ್ಯವನ್ನು ಹೇಗೋ ಹಾಗೆ; **ಜುಷ್ಟಮ್** = [ಇಂದ್ರನಿಗೆ] ಪ್ರಿಯವಾದ ಪುರೋಡಾಶರೂಪಹವಿಸ್ಸನ್ನು; **ತಪತ** = ಚೆನ್ನಾಗಿ ಹುತವಾಗುವಂತೆ [ಸುಪಕ್ವವಾಗುವಂತೆ] ಮಾಡಿರಿ; **ಗಿರ್ವಣಸೇ**= ಸ್ತುತಿವಾಣಿಗಳಿಂದ ಸ್ತುತ್ಯನಾದ ಇಂದ್ರನಿಗೆ; **ಗಿರಃ** = ಸ್ತುತಿರೂಪವಾಕ್ಕುಗಳನ್ನು ಪ್ರಯೋಗಿಸಿರಿ. ∵ **ಗಾಥಿನಃ** = ಸಾಮಗಾನ ಮಾಡುವ ಉದ್ಗಾತೃ ಮೊದಲಾದವರು; **ಬೃಹತ್** = ಬೃಹತ್ಸಾಮದಿಂದ; **ಇಂದ್ರಮ್ ಇತ್** = ಇಂದ್ರನನ್ನೇ; **ಅನೂಷತ** = ಸ್ತುತಿಸಿದರು; **ಅರ್ಕಿಣಃ** = ಸ್ತುತಿರೂಪವಾದ ಋಕ್ಕುಗಳನ್ನು ಹೇಳುವ ಹೋತೃ ಮುಂತಾದವರು; **ಅರ್ಕೇಭಿಃ**= ಸ್ತುತಿರೂಪವಾದ ಋಙ್ಮಂತ್ರಗಳಿಂದ; **ಇಂದ್ರಮ್** = ಇಂದ್ರನನ್ನು; **ಅನೂಷತ** = ಸ್ತುತಿಸಿದರು; **ವಾಣೀಃ** = [ಅಧ್ವರ್ಯುಗಳ ಯಜುರ್ಮಂತ್ರರೂಪವಾದ] ವಾಕ್ಕುಗಳು; **ಇಂದ್ರಮ್** = ಇಂದ್ರನನ್ನು; **ಅನೂಷತ** = ಸ್ತುತಿಸಿದವು/ಸ್ತುತಿಸುತ್ತಾರೆ/ಸ್ತುತಿಸುತ್ತವೆ.

---

ಏಕೆಂದರೆ ಇಂದ್ರನು ಎಲ್ಲ ದೇವತೆಗಳಿಗಿಂತಲೂ ಶ್ರೇಷ್ಠನು. ವೃತ್ರಾಸುರನನ್ನು ಸಂಹರಿಸಿದ ಸಾಮರ್ಥ್ಯವುಳ್ಳವನು. ಕ್ಷತ್ರಿಯಾಭಿಮಾನಿಯು. [ಕ್ಷತಾತ್ ತ್ರಾಯತೇ = ಅನ್ಯರು ಕೊಡುವ ಹಿಂಸೆಯಿಂದ ರಕ್ಷಿಸುವವನು], ಧನವುಳ್ಳವನು. ಬಲವುಳ್ಳವನು. ವೈರಿಗಳನ್ನಡಗಿಸುವವನು. ಇಂತಹ ಗುಣಗಳುಳ್ಳ ಇಂದ್ರನಿಗೆ ಹವಿಸ್ಸನ್ನು ಅಧಿಕವಾಗಿ ಅರ್ಪಿಸುತ್ತಾರೆ.

**ಗಾಯಂತಿ ತ್ವಾ ಗಾಯತ್ರಿಣೋಽರ್ಚಂತ್ಯರ್ಕಮರ್ಕಿಣಃ ।**
**[ಗಾಯತ್ರಿಣಃ (೨) ಅರ್ಚಂತ್ಯರ್ಕಮರ್ಕಿಣಃ ।]**

---

**ಗಾಯಂತಿ । ತ್ವಾ । ಗಾಯತ್ರಿಣಃ । ಅರ್ಚಂತಿ । ಅರ್ಕಮ್ । ಅರ್ಕಿಣಃ ।**

---

| ಮಂತ್ರ | ವಿನಿಯೋಗ |
|---|---|
| ಗಾಯಂತಿ...... ಯೇಮಿರೇ ॥ | ಅರ್ಕವಂದಿಂದ್ರೇಷ್ಟಿಯ ಯಾಜ್ಯೆ. |

---

∴ ಶತಕ್ರತೋ = ಎಲೈ ಇಂದ್ರನೇ ! ಗಾಯತ್ರಿಣಃ = ಗಾಯತ್ರಸಾಮಗಾನ ಮಾಡುವ ಉದ್ಗಾತೃ ಮೊದಲಾದವರು; ತ್ವಾ = ನಿನ್ನನ್ನು; ಗಾಯಂತಿ = ಸಾಮಗಾನಗಳಿಂದ ಸ್ತುತಿಸುತ್ತಾರೆ; ಅರ್ಕಿಣಃ = ಋಗ್ರೂಪವಾದ ಸ್ತುತಿಗಳನ್ನು ಹೇಳುವ ಹೋತೃ ಮೊದಲಾದವರು; ಅರ್ಕಮ್ = ಸ್ತುತ್ಯರ್ಹನಾದ ನಿನ್ನನ್ನು; ಅರ್ಚಂತಿ = [ಋಕ್ಕುಗಳಿಂದ] ಹೊಗಳುತ್ತಾರೆ.

---

ಆ ಇಂದ್ರನು ಇಂದ್ರಿಯಶಕ್ತಿಯನ್ನೂ, ಪಶುಗಳನ್ನೂ ನಮಗೆ ಕರುಣಿಸಲಿ.

ಸೂರ್ಯನ ರಥಕ್ಕೆ ಏಳು ಕುದುರೆಗಳು ಇರುವುದರಿಂದ ಸೂರ್ಯನು ಸಪ್ತಾಶ್ವನಾಗಿದ್ದಾನೆ. ['ಏಕೋ ಅಶ್ವೋ ವಹತಿ ಸಪ್ತನಾಮಾ' ಎಂದು ಮತ್ತೊಂದು ಕಡೆ ಇದೆ. ಒಮ್ಮೊಮ್ಮೆ ಏಕಾಶ್ವನೂ ಆಗಬಹುದು. ಆದುದರಿಂದ ವಿರೋಧವಿಲ್ಲ.] ಜಗತ್ತಿನ ವಾಸಕ್ಕೆ ಪ್ರಕಾಶ, ಜಲಹರಣ, ಜಲಪ್ರದಾನಗಳಿಗೆ ಕಾರಣವಾದ ಪ್ರಧಾನವಾದ ಸೂರ್ಯರಶ್ಮಿಗಳು ಏಳು. ಸೂರ್ಯಾಶ್ವಗಳು ಸೂರ್ಯನ ಅಧೀನವಾಗಿದ್ದರೂ, ಸುಶಿಕ್ಷಿತವಾಗಿರುವುದರಿಂದ ಸ್ವತಂತ್ರವಾಗಿ ಹೋಗುತ್ತಿರುವಂತೆಯೇ ಸೂರ್ಯನನ್ನು ಒಯ್ಯುತ್ತವೆ. ಇಂತಹ ತ್ರಯೀಮಯನಾದ, ಸರ್ವಸಾಕ್ಷಿಯಾದ, ಅತೀಂದ್ರಿಯಜ್ಞಾನಿಯಾದ, ತೇಜೋಮಯನಾದ, ಅತಿಪ್ರಸಿದ್ಧಕೀರ್ತಿಯುಳ್ಳವನಾದ ಸೂರ್ಯನೂ ಇಂದ್ರನ ಅತಿಥಿಯಾಗಿರುತ್ತಾನೆ. ಇಂದ್ರನು ಕೊಡುವ ನೀರನ್ನು ಅಪೇಕ್ಷಿಸುತ್ತಾನೆ. ಇಂತಹ ಘರ್ಮವಂತನಾದ ಇಂದ್ರನು ನಮಗೆ ಬ್ರಹ್ಮವರ್ಚಸವನ್ನೀಯಲಿ.

ಇಂದ್ರನೇ! ನೀನು ಮಳೆಯನ್ನು ಸುರಿಸಿ ಫಲಪಾಕವಿಲ್ಲದ ಸಸ್ಯಗಳು ಸುಪಕ್ವವಾದ ಫಲವನ್ನು ಕೊಡುವಂತೆ ಮಾಡುತ್ತೀಯೆ. ಭೂಮಿಯ ಮೇಲಿನ ನೀರುಗಳಲ್ಲಿ ಮಳೆಯ ನೀರನ್ನು ಸುರಿಸುತ್ತೀಯೆ. ಸೂರ್ಯನನ್ನು ಅಂತರಿಕ್ಷಕ್ಕೆ ಏರಿಸಿ ಪ್ರಕಾಶಮಾನನಾಗಿ ಸುತ್ತು

ಬ್ರಹ್ಮಾಣಸ್ತ್ವಾ ಶತಕ್ರತವುದ್ವಗ್ಂಶಮಿವ ಯೇಮಿರೇ ॥

---

ಬ್ರಹ್ಮಾಣಃ । ತ್ವಾ । ಶತಕ್ರತವಿತಿ ಶತ-ಕ್ರತೋ । ಉದಿತಿ । ವಗ್ಂಶಮ್ । ಇವ । ಯೇಮಿರೇ ॥

---

ಬ್ರಹ್ಮಾಣಃ = ಬ್ರಹ್ಮ, ಅಧ್ವರ್ಯು ಮೊದಲಾದವರು; ತ್ವಾ = ನಿನ್ನನ್ನು; ವಗ್ಂಶಮ್ ಇವ = ತಮ್ಮ ವಂಶವನ್ನು ಹೇಗೋ ಹಾಗೆ; ಉತ್ ಯೇಮಿರೇ = ಮೇಲಕ್ಕೆ ಎತ್ತುತ್ತಾರೆ/ ಸ್ತುತಿಗಳಿಂದ ವೃದ್ಧಿಗೊಳಿಸುತ್ತಾರೆ. [ಅರ್ಕಮ್ = ಅನ್ನಮ್]

---

ವಂತೆ ಮಾಡುತ್ತಿಯೆ. ಎಲೈ! ಯಜಮಾನರೇ! ಅಗ್ನಿಜ್ವಾಲೆಗಳಿಂದ ಇಂದ್ರನಿಗೆ ಪ್ರಿಯವಾದ ಪುರೋಡಾಶವು – ಪಂಚಭಕ್ತಿಗಳುಳ್ಳ ಸಾಮಗಳಿಂದ ಪ್ರವರ್ಗ್ಯವು ಚೆನ್ನಾಗಿ ಕಾಯುವಂತೆ–ಹುತವಾಗುವಂತೆ [ಪಕ್ವ] ಮಾಡಿರಿ. ಸ್ತುತ್ಯರ್ಹನಾದ ಇಂದ್ರನನ್ನು ಋಕ್ಕುಗಳಿಂದ ಸ್ತುತಿಸಿರಿ. ಹೀಗೆ ಘರ್ಮವಂತನಾದ ಇಂದ್ರನು ನಮಗೆ ಬ್ರಹ್ಮವರ್ಚಸವನ್ನೀಯಲಿ.

ಸಾಮಗಾನ ಮಾಡುವ ಉದ್ಗಾತ್ರಾದಿಗಳು ಇಂದ್ರನನ್ನೇ 'ಬೃಹತ್' ಮೊದಲಾದ ಸಾಮಗಳಿಂದ ಸ್ತುತಿಸುತ್ತಾರೆ. ಹೋತ್ರಾದಿಗಳು ಸ್ತುತಿರೂಪವಾದ ಋಕ್‌ಗಳಿಂದ ಇಂದ್ರನನ್ನೇ ಹೊಗಳುತ್ತಾರೆ. ಹಾಗೆಯೇ ಯಜುರ್ಮಂತ್ರಗಳಿಂದ ಅಧ್ವರ್ಯು ಮೊದಲಾದವರೂ ಇಂದ್ರನನ್ನೇ ಆರಾಧಿಸುತ್ತಾರೆ. ಇಂತಹ ಅರ್ಕವಂತನಾದ ಇಂದ್ರನು ನಮಗೆ ಅನ್ನಸಮೃದ್ಧಿಯನ್ನೀಯಲಿ.

ಶತಾಶ್ವಮೇಧಕರ್ತನಾದ ಇಂದ್ರನೇ! ಗಾಯತ್ರಾದಿ ಸಾಮಗಾನ ಮಾಡುವ ಉದ್ಗಾತ್ರಾದಿಗಳು ಸಾಮಗಳಿಂದ ನಿನ್ನನ್ನು ಗಾನ ಮಾಡುತ್ತಾರೆ. ಋಗ್ವೇದಿಗಳಾದ ಹೋತ್ರಾದಿಗಳು ಋಕ್ಕುಗಳಿಂದ ನಿನ್ನನ್ನು ಅರ್ಚಿಸುತ್ತಾರೆ. ಅಧ್ವರ್ಯು ಮೊದಲಾದವರು ಅನ್ನಾದಿ ಹವಿಸ್ಸುಗಳಿಂದ ನಿನ್ನನ್ನು ಆರಾಧಿಸುತ್ತಾರೆ. ಬ್ರಹ್ಮ, ಅಧ್ವರ್ಯು ಮೊದಲಾದವರು–ಸತ್ಪುರುಷರು ತಮ್ಮ ಒಳ್ಳೆಯ ಗುಣಗಳಿಂದ ತಮ್ಮ ಕುಲವನ್ನು ಉದ್ಧರಿಸುವಂತೆ/ ತಮ್ಮ ಗ್ರಾಮಗಳನ್ನು ಉದ್ಧರಿಸುವಂತೆ – ನಿನ್ನನ್ನು ವೃದ್ಧಿಗೊಳಿಸುತ್ತಾರೆ/ಮೇಲಕ್ಕೆ ಎತ್ತುತ್ತಾರೆ. ಅಂತಹ ಅರ್ಕವಂತನಾದ ನೀನು ನಮಗೆ ಅನ್ನವನ್ನು ನೀಡು.

**ಅಗ್ಂಹೋಮುಚೇ ಪ್ರ ಭರೇಮಾ ಮನೀಷಾಮೋಷಿಷ್ಠ**

**ದಾವ್ನ್ನೇ ಸುಮತಿಂ ಗೃಣಾನಾಃ । ಇದಮಿಂದ್ರ ಪ್ರತಿ**

**ಹವ್ಯಂ ಗೃಭಾಯ ಸತ್ಯಾಸ್ಸಂತು ಯಜಮಾನಸ್ಯ ಕಾಮಾಃ ॥**

---

ಅಗ್ಂಹೋಮುಚ ಇತ್ಯಗ್ಂಹಃ-ಮುಚೇ । ಪ್ರೇತಿ । ಭರೇಮ । ಮನೀಷಾಮ್।
ಓಷಿಷ್ಠದಾವ್ನ್ನ ಇತ್ಯೋಷಿಷ್ಠ-ದಾವ್ನ್ನೇ। ಸುಮತಿಮಿತಿ ಸು-ಮತಿಮ್। ಗೃಣಾನಾಃ ॥
ಇದಮ್ । ಇಂದ್ರ । ಪ್ರತೀತಿ । ಹವ್ಯಮ್ । ಗೃಭಾಯ । ಸತ್ಯಾಃ । ಸಂತು ।
ಯಜಮಾನಸ್ಯ । ಕಾಮಾಃ ॥

---

| ಮಂತ್ರ | ವಿನಿಯೋಗ |
|---|---|
| ಅಗ್ಂಹೋಮುಚೇ.... ಕಾಮಾಃ ॥ | [ಪಾಪಪರಿಹಾರಕಾಮನಿಗೆ ವಿಹಿತವಾದ] ಅಗ್ಂಹೋಮುಚನಾದ ಇಂದ್ರನ ಇಷ್ಟಿಯ ಪುರೋನುವಾಕ್ಯೆ. |

---

∴ ಇಂದ್ರ =ಇಂದ್ರನೇ! **ಅಗ್ಂಹೋಮುಚೇ** = ಪಾಪಗಳಿಂದ ಬಿಡಿಸುವ; **ಓಷಿಷ್ಠದಾವ್ನ್ನೇ** = [ಗ್ರೀಷ್ಮರ್ತುವಿನಲ್ಲಿ ಕಾಡುಗಿಚ್ಚಿನಿಂದ] ಸುಟ್ಟುಹೋಗಿರುವ ಭೂಪ್ರದೇಶಗಳಿಗೆ / ಭೂಮಿಯನ್ನು ಗ್ರೀಷ್ಮರ್ತುವಿನಲ್ಲಿ ಸುಡುವ ಸೂರ್ಯನಿಗೆ [ಮಳೆಗಾಲದಲ್ಲಿ ಮಳೆಯನ್ನು] ಕೊಡುವ; [ನಿನಗೆ] **ಗೃಣಾನಾಃ** = ಸ್ತೋತ್ರಮಾಡುವ ವರಾದ ನಾವು; **ಮನೀಷಾಮ್** = ಮನನಶೀಲವಾದ; **ಸುಮತಿಮ್** = [ನಿನ್ನನ್ನು ಸ್ತುತಿಸಬೇಕೆಂಬ] ಒಳ್ಳೆಯ ಬುದ್ಧಿಯನ್ನು; **ಪ್ರ ಭರೇಮ** = ಸ್ವೀಕರಿಸುತ್ತೇವೆ. [ಎಲೈ ಇಂದ್ರನೇ!] **ಇದಮ್ ಹವ್ಯಮ್** = [ನಾವು ಕೊಡುವ] ಈ ಪುರೋಡಾಶಹವಿಸ್ಸನ್ನು; **ಪ್ರತಿ ಗೃಭಾಯ** = ಪ್ರತಿಗ್ರಹಿಸು; **ಯಜಮಾನಸ್ಯ ಕಾಮಾಃ** = ಯಜಮಾನನ ಕೋರಿಕೆಗಳು; **ಸತ್ಯಾಃ ಸಂತು** = ಸತ್ಯವಾಗಲಿ/ಪೂರ್ಣವಾಗಲಿ.

---

ಇಂದ್ರನೇ! ನೀನು ಪಾಪಗಳನ್ನು ಹೋಗಲಾಡಿಸತಕ್ಕವನು. ಬೇಸಿಗೆಯಲ್ಲಿ ಕಾಡ್ಗಿಚ್ಚಿನಿಂದ ಸುಟ್ಟುಹೋಗಿರುವ ಭೂಭಾಗಕ್ಕೆ ಮಳೆಗಾಲದಲ್ಲಿ ಮಳೆಯನ್ನು ಕೊಟ್ಟುಸಸ್ಯವೃದ್ಧಿಯಾಗುವಂತೆ ಮಾಡುವವನು. ನಿನ್ನನ್ನು ನಾವು ಸ್ತುತಿಸುತ್ತೇವೆ. ನಿನ್ನನ್ನು

ವಿವೇಷ ಯನ್ಮಾ ಧಿಷಣಾ ಜಜಾನ ಸ್ತವೈ ಪುರಾ ಪಾರ್ಯಾ ದಿಂದ್ರಮಹ್ನಃ । ಅಗ್ಂಹಸೋ ಯತ್ರ ಪೀಪರದ್ಯಥಾ ನೋ ನಾವೇವ ಯಾಂತಮುಭಯೇ ಹವಂತೇ ॥

---

ವಿವೇಷ । ಯತ್। ಮಾ । ಧಿಷಣಾ। ಜಜಾನ । ಸ್ತವೈ । ಪುರಾ । ಪಾರ್ಯಾತ್। ಇಂದ್ರಮ್ । ಅಹ್ನಃ ॥ ಅಗ್ಂಹಸಃ । ಯತ್ರ । ಪೀಪರತ್ । ಯಥಾ। ನಃ । ನಾವಾ। ಇವ । ಯಾಂತಮ್ । ಉಭಯೇ । ಹವಂತೇ ॥

---

| ಮಂತ್ರ | ವಿನಿಯೋಗ |
|---|---|
| ವಿವೇಷ .... ಹವಂತೇ ॥ | ಹಿಂದಿನ ಇಷ್ಟಿಯ ಯಾಜ್ಯಾನುವಾಕ್ಯೆ. |

---

∴ ಯತ್ = ಯಾವ ಕಾರಣದಿಂದ; ಧಿಷಣಾ = [ಇಂದ್ರನನ್ನು ಸ್ತುತಿಸಬೇಕೆಂಬ] ಬುದ್ಧಿಯು; ಮಾ = ನನ್ನನ್ನು; ವಿವೇಷ = ವ್ಯಾಪಿಸಿತೋ [ಅದರಿಂದ]; ಜಜಾನ = ನಾನು ಹುಟ್ಟಿದವನಾದೆನು / ಒಳ್ಳೆಯ ಬುದ್ಧಿಯುಳ್ಳವನಾದೆನು; [ಆದುದರಿಂದ] ಪಾರ್ಯಾತ್ ಅಹ್ನಃ ಪುರಾ = ಕೊನೆಯ ದಿವಸಕ್ಕಿಂತಲೂ ಮೊದಲಿನವರೆಗೂ / ಆಮರಣಪರ್ಯಂತವೂ; ಇಂದ್ರಮ್ ಸ್ತವೈ= ಇಂದ್ರನನ್ನು ಸ್ತುತಿಸುವೆನು; ಯತ್ರ = ಯಾವ ಬುದ್ಧಿಯುಂಟಾಗಲಾಗಿ; [ಇಂದ್ರನು] ಅಗ್ಂಹಸಃ = ಪಾಪದ ದೆಸೆಯಿಂದ; ಪೀಪರತ್ = ಮೇಲಕ್ಕೆತ್ತುವನೋ/ಬಿಡಿಸುವನೋ[ಅಂತಹ ಇಂದ್ರನನ್ನು ಸ್ತುತಿಸಬೇಕೆಂಬ ಬುದ್ಧಿಯುಂಟಾಯಿತು] ಯಥಾ= ಹೇಗೆ; ನಾವಾ = ಹಡಗಿನಲ್ಲಿ; ಯಾಂತಮ್ ಇವ = ಹೋಗುತ್ತಿರುವ ನಾವಿಕನನ್ನು ಹೇಗೋ ಹಾಗೆ; ಉಭಯೇ = ಎರಡು ಕಡೆಯ ದಡದಲ್ಲಿರುವವರೂ; ಹವಂತೇ = [ನಮ್ಮನ್ನು ದಾಟಿಸೆಂದು] ಆಹ್ವಾನಿಸುತ್ತಾರೆಯೋ; [ಹಾಗೆಯೇ ಪಾಪಮುಕ್ತರಾದ] ನಃ = ನಮ್ಮನ್ನು[ಆತ್ಮರಕ್ಷಣಾರ್ಥವಾಗಿ ಆಹ್ವಾನಿಸುವಂತೆ ಮಾಡು.]

---

ಸ್ತುತಿಸಬೇಕೆಂಬ ಒಳ್ಳೆಯ ಮನನಶೀಲವಾದ ಬುದ್ಧಿಯನ್ನೇ ಹೊಂದಿರುತ್ತೇವೆ. ನಾವು ಕೊಡುವ ಈ ಹವ್ಯವನ್ನು ಸ್ವೀಕರಿಸು. ಯಜಮಾನನ ಪಾಪಪರಿಹಾರವೇ ಮೊದಲಾದ ಸಕಲಕಾಮನೆಗಳೂ ಸಹ ಪರಿಪೂರ್ಣವಾಗಲಿ.

ಪ್ರ ಸಮ್ರಾಜಂ ಪ್ರಥಮಮಧ್ವರಾಣಾ [... ಮಧ್ವರಾಣಾಮ್ (೩)ಅಗ್ಂಹೋಮುಚಂ]ಮಗ್ಂಹೋಮುಚಂ ವೃಷಭಂ ಯಜ್ಞಿಯಾನಾಮ್ ।

---

ಪ್ರೇತಿ । ಸಮ್ರಾಜಮಿತಿ ಸಮ್-ರಾಜಮ್ । ಪ್ರಥಮಮ್ । ಅಧ್ವರಾಣಾಮ್ (೩)। ಅಗ್ಂಹೋಮುಚಮಿತ್ಯಗ್ಂಹಃ-ಮುಚಮ್ । ವೃಷಭಮ್ । ಯಜ್ಞಿಯಾನಾಮ್ ॥

---

| ಮಂತ್ರ | ವಿನಿಯೋಗ |
|---|---|
| ಪ್ರ ಸಮ್ರಾಜಮ್... ಧತ್ತಮೋಜಃ ॥ | ಹಿಂದಿನ ಅಂಹೋಮುಗಿಂದ್ರೇಷ್ಟಿಯಲ್ಲಿನ ವೈಕಲ್ಪಿಕಯಾಜ್ಯಾನುವಾಕ್ಯೆ. |

---

∻ ನರಃ = ಎಲೈ! ಮನುಷ್ಯರೇ ! [ಋತ್ವಿಜರೇ!] ಸಮ್ರಾಜಮ್ = ಚೆನ್ನಾಗಿ ಪ್ರಕಾಶಿಸುವ; ಅಧ್ವರಾಣಾಮ್ ಪ್ರಥಮಮ್ = ಅಗ್ನಿಷ್ಟೋಮಾದಿಯಾಗಗಳಿಗೆ ಪ್ರಧಾನದೇವತೆಯಾಗಿರುವ; ಅಗ್ಂಹೋಮುಚಮ್ = ಪಾಪಗಳಿಂದ ಬಿಡಿಸುವವನಾದ; ಯಜ್ಞಿಯಾನಾಮ್ ವೃಷಭಮ್ = ಯಾಗಸಂಬಂಧಿಯಾದ ಫಲಗಳನ್ನು ಸುರಿಸುವ;

---

ಯಾವ ಕಾರಣದಿಂದ ಜೀವನದ ಕೊನೆಯ ದಿನದವರೆಗೂ ಇಂದ್ರನನ್ನು ಸ್ತುತಿಸುವೆನೆಂಬ ಬುದ್ಧಿಯು ನನ್ನನ್ನು ವ್ಯಾಪಿಸಿತೋ ಆ ಕಾರಣದಿಂದ ಒಳ್ಳೆಯ ಬುದ್ಧಿಯುಳ್ಳವನಾದೆನು; ಯಾವ ಬುದ್ಧಿಯುಂಟಾದರೆ ಇಂದ್ರನು ಪಾಪದಿಂದ ಬಿಡಿಸುವನೋ ಅಂತಹ ಬುದ್ಧಿಯು ನನಗೆ ಉಂಟಾಯಿತು. ಪಾಪಪರಿಹಾರವಾಗುವವರೆಗೂ ಇಂದ್ರನನ್ನು ಸ್ತುತಿಸುವೆನು. ನದಿಯಲ್ಲಿ ನಾವೆಯನ್ನು ನಡೆಸುತ್ತಿರುವ ನಾವಿಕನನ್ನು ಎರಡು ದಡಗಳಲ್ಲಿ ಇರುವವರೂ ತಮ್ಮನ್ನು ದಾಟಿಸಬೇಕೆಂದು ಆಹ್ವಾನಿಸುವಂತೆ ಪಾಪರಹಿತರಾದ ನಮ್ಮನ್ನು ತಮ್ಮ ಪಾಪಪರಿಹಾರಕ್ಕಾಗಿ ಆಹ್ವಾನಿಸಲಿ. ಇಂತಹ ಪಾಪಪರಿಹಾರಕನಾದ ಇಂದ್ರನು ನಮ್ಮನ್ನು ಪಾಪಗಳಿಂದ ಬಿಡಿಸಲಿ.

ಎಲೈ ಮನುಷ್ಯರೇ! / ಋತ್ವಿಜರೇ! ಅಗ್ನಿಷ್ಟೋಮಾದಿಯಾಗಗಳ ಪ್ರಧಾನ ದೇವತೆಯಾದ, ಪಾಪನಿವರ್ತಕನಾದ, ಯಾಗಗಳ ಫಲವನ್ನು ನೀಡುವ, ಸಂಪತ್ತನ್ನು ನೀಡುವ, ವೃಷ್ಟಿಪ್ರದನೂ ಆಗಿರುವ ಇಂದ್ರನನ್ನು ಸೇವಿಸಿರಿ. ಅಶ್ವಿನೀದೇವತೆಗಳಿಂದ

ಅಪಾಂ ನಪಾತಮಶ್ವಿನಾ ಹಯಂತಮಸ್ಮಿನ್ನರ ಇಂದ್ರಿಯಂ ಧತ್ತಮೋಜಃ ॥ ವಿ ನ ಇಂದ್ರ ಮೃಧೋ ಜಹಿ ನೀಚಾ ಯಚ್ಛ ಪೃತನ್ಯತಃ । ಅಧಸ್ಪದಂ ತಮೀಂ ಕೃಧಿ ಯೋ ಅಸ್ಮಾಗ್‌ಂ ಅಭಿದಾಸತಿ ॥

ಅಪಾಮ್ । ನಪಾತಮ್ । ಅಶ್ವಿನಾ । ಹಯಂತಮ್ । ಅಸ್ಮಿನ್ನ್ । ನರಃ । ಇಂದ್ರಿಯಮ್। ಧತ್ತಮ್ । ಓಜಃ ॥ ವೀತಿ । ನಃ । ಇಂದ್ರ । ಮೃಧಃ। ಜಹಿ । ನೀಚಾ । ಯಚ್ಛ। ಪೃತನ್ಯತಃ ॥ ಅಧಸ್ಪದಮಿತ್ಯಧಃ-ಪದಮ್ । ತಮ್ । ಈಮ್। ಕೃಧಿ । ಯಃ । ಅಸ್ಮಾನ್। ಅಭಿದಾಸತೀತ್ಯಭಿ-ದಾಸತಿ ।

| ಮಂತ್ರ | ವಿನಿಯೋಗ |
|---|---|
| ವಿ ನ.... ಅಭಿದಾಸತಿ ॥ | [ಶತ್ರುಗಳಿಂದ ಆಕ್ರಾಂತನಾದ ಯಜಮಾನನಿಗೆ ವಿಹಿತವಾದ] ಇಂದ್ರ-ವೈಮೃಧೇಷ್ಟಿಯಲ್ಲಿ ಪುರೋನುವಾಕ್ಯೆ. |

**ಅಪಾಮ್ ನಪಾತಮ್** = ನೀರುಗಳನ್ನು ನಾಶಗೊಳಿಸದಿರುವ; **ಹಯಂತಮ್** = ಐಶ್ವರ್ಯವನ್ನು ಕೊಡುವವನಾದ ಇಂದ್ರನನ್ನು; ಪ್ರ [ಭಜತ] = ಹೆಚ್ಚಾಗಿ ಸೇವಿಸಿರಿ; **ಅಶ್ವಿನಾ** = ಎಲೈ! ಅಶ್ವಿನೀದೇವತೆಗಳೇ! **ಅಸ್ಮಿನ್** = ಈ ಯಜಮಾನನಲ್ಲಿ; [ಇಂದ್ರ ಪ್ರೇರಣೆಯಿಂದ] **ಇಂದ್ರಿಯಮ್** = ಇಂದ್ರಿಯಗಳ ಸಾಮರ್ಥ್ಯವನ್ನೂ; **ಓಜಃ** = ಬಲವನ್ನೂ; **ಧತ್ತಮ್** = ನೆಲೆಗೊಳಿಸಿರಿ. ✣ **ಇಂದ್ರ** = ಎಲೈ! ಇಂದ್ರನೇ!; **ನಃ** = ನಮ್ಮ; **ಮೃಧಃ**=ಯುದ್ಧಮಾಡುವ ಶತ್ರುಗಳನ್ನು; **ವಿ ಜಹಿ**= ವಿಶೇಷವಾಗಿ ನಾಶಮಾಡು; **ಪೃತನ್ಯತಃ**=[ನಮ್ಮೊಡನೆ ಯುದ್ಧಮಾಡಲು] ಸೈನ್ಯವನ್ನು ಸಜ್ಜುಗೊಳಿಸುವ ಶತ್ರುಗಳನ್ನು, **ನೀಚಾ ಯಚ್ಛ** = ಕೆಳಗೆ ಬಿದ್ದವರನ್ನಾಗಿ ಮಾಡು; **ಯಃ** = ಯಾವ [ಶತ್ರುವು] **ಅಸ್ಮಾನ್ ಅಭಿದಾಸತಿ**= ನಮ್ಮನ್ನು ಕ್ಷಯಹೊಂದುವಂತೆ ಮಾಡುತ್ತಾನೆಯೋ; **ತಮ್**=ಅವನನ್ನು; **ಅಧಸ್ಪದಮ್ ಈಮ್ ಕೃಧಿ** = [ನಮ್ಮ] ಕಾಲುಗಳಲ್ಲಿ ಬಿದ್ದವನನ್ನಾಗಿಯೇ ಮಾಡು.

ಕೂಡಿದ ಇಂದ್ರನು ಪಾಪವನ್ನು ಹೋಗಲಾಡಿಸಿ ಚಕ್ಷುರಾದಿಯಾದ ಇಂದ್ರಿಯಗಳ

ಇಂದ್ರ ಕ್ಷತ್ರಮಭಿ ವಾಮಮೋಜೋಽಜಾಯಥಾ ವೃಷಭ ಚರ್ಷಣೀನಾಮ್ । ಅಪಾನುದೋ ಜನಮಮಿತ್ರಯಂತ ಮುರುಂ ದೇವೇಭ್ಯೋ ಅಕೃಣೋರು ಲೋಕಮ್ ॥

---

ಇಂದ್ರ । ಕ್ಷತ್ರಮ್ । ಅಭೀತಿ । ವಾಮಮ್। ಓಜಃ । ಅಜಾಯಥಾಃ । ವೃಷಭ। ಚರ್ಷಣೀನಾಮ್ ॥ ಅಪೇತಿ । ಅನುದಃ । ಜನಮ್ । ಅಮಿತ್ರಯಂತಮಿತ್ಯಮಿತ್ರ-ಯಂತಮ್ । ಉರುಮ್ । ದೇವೇಭ್ಯಃ । ಅಕೃಣೋಃ । ಉ । ಲೋಕಮ್ ।

---

| ಮಂತ್ರ | ವಿನಿಯೋಗ |
|---|---|
| ಇಂದ್ರ ಕ್ಷತ್ರಮ್..... ಲೋಕಮ್ ॥ | ಹಿಂದಿನ ವೈಮೃಧೇಷ್ಟಿಯ ಯಾಜ್ಯೆ |

---

✣ **ಇಂದ್ರ** = ಇಂದ್ರದೇವನೇ ! **ವಾಮಮ್** = ಯಜಮಾನರಿಗೆ ಅಪೇಕ್ಷಿತವಾದ; **ಕ್ಷತ್ರಮ್** = ಪರಹಿಂಸೆಯಿಂದ ರಕ್ಷಣವನ್ನೂ; **ಓಜಃ** = ಬಲವನ್ನೂ; **ಅಭಿ ಅಜಾಯಥಾಃ** = ಉದ್ದೇಶಿಸಿಯೇ ಹುಟ್ಟಿದವನಾಗಿದ್ದೀಯೆ; **ಚರ್ಷಣೀನಾಮ್** = ಮನುಷ್ಯರಿಗೆ; **ವೃಷಭ** = ಇಷ್ಟಾರ್ಥಗಳನ್ನು ಸುರಿಸುವ; [ಇಂದ್ರನೇ!] **ಅಮಿತ್ರಯಂತಮ್** = ಶತ್ರುಭಾವವನ್ನು ಅಪೇಕ್ಷಿಸುವ; **ಜನಮ್** = ಶತ್ರುಜನವನ್ನು; **ಅಪ ಅನುದಃ** = ನಾಶಗೊಳಿಸಿದ್ದೀಯೆ/ ನಾಶಗೊಳಿಸು. **ದೇವೇಭ್ಯಃ** = [ಹವಿಸ್ಸುಗಳನ್ನು] ಕೊಡುವ ಯಜಮಾನರಿಗೆ; **ಉರು ಲೋಕಮ್** = ವಿಸ್ತೀರ್ಣವಾದ ಭೋಗಸ್ಥಾನವನ್ನು; **ಅಕೃಣೋಃ ಉ** = ಮಾಡಿದವ ನಾಗಿಯೇ ಇರುವೆ / ದೇವತೆಗಳ ವಿಸ್ತಾರವಾದ ಲೋಕವನ್ನು ನಮಗೂ ಕೊಡು.

---

ಪಾಟವವನ್ನೂ, ಶಕ್ತಿಯನ್ನೂ ಯಜಮಾನನಲ್ಲಿ ಸ್ಥಿರವಾಗಿ ನೆಲೆಸುವಂತೆ ಮಾಡಲಿ.

ಇಂದ್ರನೇ! ನಮ್ಮೊಡನೆ ಯುದ್ಧಮಾಡುವ ಶತ್ರುಗಳನ್ನು ನಾಶಮಾಡು. ನಮ್ಮೊಡನೆ ಹೋರಾಡಲು ಸೈನ್ಯವನ್ನು ಸಜ್ಜುಗೊಳಿಸುವ ಶತ್ರುಗಳನ್ನು ನೆಲದಲ್ಲಿ ಬಿದ್ದವರನ್ನಾಗಿ ಮಾಡಿ, ನಮಗೆ ಕ್ಷಯವನ್ನುಂಟುಮಾಡುವ ಶತ್ರುವನ್ನು ನಮ್ಮ ಕಾಲಿನ ಕೆಳಗೆ ಬೀಳುವಂತೆ ಮಾಡು. ★ ಇಂದ್ರದೇವನೇ! ಪರಹಿಂಸೆಯಿಂದ ರಕ್ಷಣೆಯು ಅಪೇಕ್ಷಣೀಯವಾದುದಷ್ಟೆ. ಆ ರಕ್ಷಣೆಯನ್ನೂ/ಧನವನ್ನೂ, ಬಲವನ್ನೂ ಗುರಿಯಲ್ಲಿಟ್ಟು

ಮೃಗೋ ನ ಭೀಮಃ ಕುಚರೋ ಗಿರಿಷ್ಠಾಃ ಪರಾವತ [ಪರಾವತಃ(ಳ)] ಆ ಜಗಾಮಾ ಪರಸ್ಯಾಃ । ಸೃಕಗ್ಂ ಸಗ್ಂಶಾಯ ಪವಿಮಿಂದ್ರ ತಿಗ್ಮಂ ವಿ ಶತ್ರೂನ್ತಾಢಿ ವಿ ಮೃಧೋ ನುದಸ್ವ ॥

---

ಮೃಗಃ । ನ । ಭೀಮಃ । ಕುಚರಃ । ಗಿರಿಷ್ಠಾ ಇತಿ ಗಿರಿ-ಸ್ಥಾಃ । ಪರಾವತ ಇತಿ ಪರಾ-ವತಃ(ಳ)। ಏತಿ । ಜಗಾಮ । ಪರಸ್ಯಾಃ ॥ ಸೃಕಮ್ । ಸಗ್ಂಶಾಯೇತಿ ಸಮ್-ಶಾಯ । ಪವಿಮ್। ಇಂದ್ರ । ತಿಗ್ಮಮ್ । ವೀತಿ । ಶತ್ರೂನ್। ತಾಢಿ । ವೀತಿ । ಮೃಧಃ । ನುದಸ್ವ॥

---

| ಮಂತ್ರ | ವಿನಿಯೋಗ |
|---|---|
| ಮೃಗೋ....ನುದಸ್ವ ॥ | ವೈಮೃಧಯಾಗದಲ್ಲಿನ ವಿಕಲ್ಪಿತವಾದ ಪುರೋನುವಾಕ್ಯೆ/ಯಾಜ್ಯಾನುವಾಕ್ಯೆ [ಭ.ಭಾ.] |

---

❖ **ಇಂದ್ರ** = ಇಂದ್ರನೇ ! **ಭೀಮಃ** = ಭಯಂಕರವಾದ; **ಕುಚರಃ** = [(ಪ್ರಾಣಿಹಿಂಸನಾದಿ) ಕುತ್ಸಿತಕರ್ಮಾಸಕ್ತವಾದ/ಭೂಮಿಯಲ್ಲಿ ಸಂಚರಿಸುವ; **ಗಿರಿಷ್ಠಾಃ** = ಪರ್ವತದಲ್ಲಿರುವ; **ಮೃಗೋ ನ** = ಸಿಂಹವ್ಯಾಘ್ರಾದಿಮೃಗದಂತೆ; [ನೀನು] **ಪರಸ್ಯಾಃ ಪರಾವತಃ**= ಬಹಳ ದೂರದಿಂದ; **ಆ ಜಗಾಮ** = [ನಮ್ಮ ವಿರೋಧಿಗಳನ್ನು ಕೊಲ್ಲಲು] ಬಂದಿರುತ್ತೀಯೆ; [ನೀನು] **ಸೃಕಮ್** = ಶತ್ರುಶರೀರಗಳಲ್ಲಿ ಪ್ರವೇಶಿಸುವ; **ತಿಗ್ಮಮ್** = ತೀಕ್ಷ್ಣವಾದ; **ಪವಿಮ್** = ವಜ್ರಾಯುಧವನ್ನು; **ಸಗ್ಂಶಾಯ** = ಹರಿತ ಮಾಡಿ; **ಶತ್ರೂನ್** = ಶತ್ರುಗಳನ್ನು **ವಿ ತಾಢಿ** = ಹೆಚ್ಚಾಗಿ ಪ್ರಹರಿಸು; **ಮೃಧಃ** = ಯುದ್ಧಮಾಡುವ ಶತ್ರುಗಳನ್ನು; **ವಿ ನುದಸ್ವ** = ನಾಶಪಡಿಸು.

---

ಕೊಂಡೇ ಹುಟ್ಟಿದವನಾಗಿರುವೆ. ಮನುಷ್ಯರಿಗೆ ಕಾಮ್ಯಫಲಗಳನ್ನು ಮಳೆಗರೆಯುವಂತೆ ಸುರಿಸುವವನು ನೀನು. ನಮಗೆ ವೈರಿಯಾಗಬಯಸುವ ಜನರನ್ನು ನಾಶಗೊಳಿಸಿರುವೆ/ನಾಶಗೊಳಿಸು. ಹವಿರಾದಿಗಳನ್ನು ಕೊಡುವ ಯಜಮಾನರಿಗೆ ವಿಸ್ತೀರ್ಣವಾದ ಭೋಗಲೋಕಗಳನ್ನು ನೀನು ಮಾಡಿಯೇ ಇರುವೆ/ದೇವತೆಗಳ ಭೋಗಲೋಕವನ್ನು ನಮಗೂ ಕೊಡು.

ವಿ ಶತ್ರೂನ್ ವಿ ಮೃಧೋ ನುದ ವಿ ವೃತ್ರಸ್ಯ ಹನೂ ರುಜ।

ವಿ ಮನ್ಯುಮಿಂದ್ರ ಭಾಮಿತೋಽಮಿತ್ರಸ್ಯಾಭಿದಾಸತಃ ॥

---

ವೀತಿ । ಶತ್ರೂನ್। ವೀತಿ । ಮೃಧಃ । ನುದ । ವೀತಿ । ವೃತ್ರಸ್ಯ। ಹನೂ ಇತಿ । ರುಜ ॥ ವೀತಿ । ಮನ್ಯುಮ್ । ಇಂದ್ರ । ಭಾಮಿತಃ । ಅಮಿತ್ರಸ್ಯ । ಅಭಿದಾಸತ ಇತ್ಯಭಿ-ದಾಸತಃ ॥

---

| ಮಂತ್ರ | ವಿನಿಯೋಗ |
|---|---|
| ವಿ ಶತ್ರೂನ್..... ದಾಸತಃ । | ವೈಮೃಧಯಾಗದ ವೈಕಲ್ಪಿಕ ಯಾಜ್ಯೆ. |

---

∴ ಇಂದ್ರ = ಇಂದ್ರನೇ! ಶತ್ರೂನ್ = ಹಗೆಗಳನ್ನು; ವಿ ನುದ = ದೂರಕ್ಕೆ ಓಡಿಸು; ಮೃಧಃ = ಯುದ್ಧ ಮಾಡುವ ಶತ್ರುಗಳನ್ನು; ವಿ ನುದ = ನಾಶಗೊಳಿಸು; ವೃತ್ರಸ್ಯ = ವೃತ್ರಾಸುರನ; ಹನೂ = ದವಡೆಗಳನ್ನು; ವಿ ರುಜ = ಭೇದಿಸು / ಭೇದಿಸಿದವನಾಗಿದ್ದೀಯೆ; [ಮೇಘದ ಪಾರ್ಶ್ವಗಳನ್ನು ಮಳೆ ಸುರಿಸುವಂತೆ] ಒಡೆದು ಹಾಕು; [ನೀನು] **ಭಾಮಿತಃ** = [ಶತ್ರುವಿಷಯದಲ್ಲಿ] ಕೋಪಗೊಂಡವನಾಗಿ; **ಅಭಿದಾಸತಃ** = ನಮಗೆ ಉಪಕ್ಷಯವನ್ನುಂಟುಮಾಡುವ; **ಅಮಿತ್ರಸ್ಯ** = ಶತ್ರುವಿನ; **ಮನ್ಯುಮ್** = ಕೋಪವನ್ನು; ವಿ ನುದ = ಹೋಗಲಾಡಿಸು;

---

ಇಂದ್ರನೇ! ಭಯಂಕರವಾದ, ಬೆಟ್ಟದಲ್ಲಿರುವ ಸಿಂಹವ್ಯಾಘ್ರಾದಿಪ್ರಾಣಿಗಳಂತೆ ಶತ್ರುಭಯಂಕರನಾದ/ಮೇಘದಲ್ಲಿರುವ/ಐರಾವತಾರೂಢನಾದ ನೀನು ನಮ್ಮ ರಕ್ಷಣೆಗಾಗಿ ಬಲುದೂರದಿಂದ ಬಂದಿರುವೆ. ವೈರಿದೇಹಗಳನ್ನು ಭೇದಿಸುವ ಹರಿತವಾದ ವಜ್ರಾಯುಧವನ್ನು ಚೆನ್ನಾಗಿ ಮಸೆದು ಅದರಿಂದ ಶತ್ರುಗಳನ್ನು ಪ್ರಹರಿಸು. ನಮ್ಮೊಡನೆ ಯುದ್ಧ ಮಾಡುವವರನ್ನು ನಾಶಗೊಳಿಸು. ★ಇಂದ್ರನೇ! ನಮ್ಮಲ್ಲಿ ಹಗೆತನವನ್ನು ಹೊಂದಿದವರನ್ನು ದೂರಕ್ಕೆ ಓಡಿಸು. ಯುದ್ಧ ಮಾಡುವ ವೈರಿಗಳನ್ನು ಪರಾಭವಗೊಳಿಸು. ವೃತ್ರಾಸುರನಂತೆ ನಮ್ಮನ್ನು ಆವರಿಸಿ, ನಾಶಪಡಿಸಲು ಯತ್ನಿಸುವ ವೈರಿಗಳ ದವಡೆಗಳನ್ನು ಹಿಂದೆ ವೃತ್ರಾಸುರನ ದವಡೆಗಳನ್ನು ಸೀಳಿದಂತೆ ಸೀಳಿ ಹಾಕು. ★ [ವೃತ್ರನನ್ನು ಮೇಘವೆಂದು ವರ್ಣಿಸಿರುತ್ತಾರೆ. 'ಮೇಘವನ್ನು ಭೇದಿಸಿ, ಇಂದ್ರನು ಮಳೆಗರೆಯುತ್ತಾನೆ' ಎಂಬ ವಿವರಣೆಯೂ ಇದೆ. ಇಲ್ಲಿ ಭೇದಿಸುವ ವಿಷಯದಲ್ಲಿ ಮಾತ್ರ ಹೋಲಿಕೆ. ಮಳೆಗರೆದು ಸಸ್ಯಸಮೃದ್ಧಿಯನ್ನುಂಟುಮಾಡುವಂತೆ ಶತ್ರುನಾಶ ಮಾಡಿ, ನಮಗೆ ಸಕಲ ಸಮೃದ್ಧಿಯನ್ನುಂಟುಮಾಡು' ಎಂದೂ ವಿವರಿಸಬಹುದು]

ತ್ರಾತಾರಮಿಂದ್ರ ಮವಿತಾರಮಿಂದ್ರ ಗ್ಂ ಹವೇಹವೇ ಸುಹ ವಗ್ಂ ಶೂರಮಿಂದ್ರ ಮ್ । ಹುವೇ ನು ಶಕ್ರಂ ಪುರುಹೂತ ಮಿಂದ್ರಗ್ಗ್ಂ ಸ್ವಸ್ತಿ ನೋ ಮಘವಾ ಧಾತ್ವಿಂದ್ರಃ ॥

---

ತ್ರಾತಾರಮ್ । ಇಂದ್ರಮ್ । ಅವಿತಾರಮ್ । ಇಂದ್ರಮ್। ಹವೇಹವ ಇತಿ ಹವೇ-ಹವೇ। ಸುಹವಮಿತಿ ಸು-ಹವಮ್ । ಶೂರಮ್ । ಇಂದ್ರಮ್ ॥ ಹುವೇ । ನು । ಶಕ್ರಮ್। ಪುರುಹೂತಮಿತಿ ಪುರು-ಹೂತಮ್ । ಇಂದ್ರಮ್। ಸ್ವಸ್ತಿ । ನಃ । ಮಘವೇತಿ ಮಘ-ವಾ। ಧಾತು । ಇಂದ್ರಃ ॥

---

| ಮಂತ್ರ | ವಿನಿಯೋಗ |
|---|---|
| ತ್ರಾತಾರಮ್... ಧಾತ್ವಿಂದ್ರಃ । | [ಬಂಧನಕ್ಕೆ ಒಳಗಾದವನಿಗೆ ವಿಹಿತವಾದ] ತ್ರಾತ್ರೀಂದ್ರೇಷ್ಟಿಯ ಪುರೋನುವಾಕ್ಯೆ. |

---

❖ **ತ್ರಾತಾರಮ್ ಇಂದ್ರಮ್** = [ಬೇಡಿಗಳಿಂದ ಬಂಧಿಸಲ್ಪಟ್ಟವನನ್ನು] ರಕ್ಷಿಸುವ/ ದೇವ ರಕ್ಷಕನಾದ ಇಂದ್ರನನ್ನು; **ಹುವೇ ನು**= ಕರೆದೇ ಕರೆಯುತ್ತೇನೆ; **ಅವಿತಾರಮ್** = [ಗೃಹ ಬಂಧನದಲ್ಲಿರುವವನನ್ನು] ರಕ್ಷಿಸುವ/ಸರ್ವರಕ್ಷಕನಾದ/ಸರ್ವರಿಗೂ ತೃಪ್ತಿ ಯನ್ನುಂಟು ಮಾಡುವ. **ಇಂದ್ರಮ್** = ಇಂದ್ರನನ್ನು; ಹುವೇ ನು= ಆಹ್ವಾನಿಸುತ್ತೇನೆ; **ಹವೇ ಹವೇ ಸುಹವಮ್** = ಎಲ್ಲ ಹೋಮಗಳಲ್ಲಿಯೂ/ಎಲ್ಲ ಆಹ್ವಾನಗಳಲ್ಲಿಯೂ ಸುಖವಾಗಿ ಆಹ್ವಾನಿಸಬಹುದಾದ; **ಇಂದ್ರಮ್** = ಇಂದ್ರನನ್ನು; ಹುವೇ ನು = ಆಹ್ವಾನಿಸುತ್ತೇನೆ; **ಶೂರಮ್** = ಬಂಧಕರನ್ನೂ, ಮುತ್ತಿರುವವರನ್ನೂ ಸೋಲಿಸಲು ಸಮರ್ಥನಾದ; ಇಂದ್ರಮ್ = ಇಂದ್ರನನ್ನು; ಹುವೇ ನು = ಆಹ್ವಾನಿಸುತ್ತೇನೆ; **ಶಕ್ರಮ್** = ಸರ್ವಕಾರ್ಯ ಗಳನ್ನು ಸಾಧಿಸುವ ಶಕ್ತಿಯುಳ್ಳ; **ಇಂದ್ರಮ್**= ಇಂದ್ರನನ್ನು; **ಪುರುಹೂತಮ್** = ಬಹು ಯಜಮಾನರಿಂದ ತಮ್ಮ ತಮ್ಮ ಯಾಗಗಳಿಗೆ/ಹಲವು ಯಾಗಗಳಲ್ಲಿ ಆಹ್ವಾನಿಸಲ್ಪಡುವ; ಇಂದ್ರಮ್ ಹುವೇಮ = ಇಂದ್ರನನ್ನು ಕರೆದೇ ಕರೆಯುತ್ತೇನೆ; *[ಅಂತಹ ಗುಣಸಂಪನ್ನನಾಗಿ/ಪರಮೈಶ್ವರ್ಯಯುಕ್ತನಾಗಿ ಇಂದ್ರನೆನಿಸಿ ಕೊಳ್ಳುವ]; **ಮಘವಾ** = ಧನವಂತನಾದ/ಹವಿಸ್ಸುಗಳುಳ್ಳವನಾದ; **ಇಂದ್ರಃ** = ಇಂದ್ರನು; **ನಃ** = ನಮಗೆ; **ಸ್ವಸ್ತಿ** = ನಾಶವಿಲ್ಲದಿರುವಿಕೆಯನ್ನು/ಕ್ಷೇಮವನ್ನು; **ಧಾತು** = ಕೊಡಲಿ/ಬಂಧನದಿಂದ ರಕ್ಷಿಸಲಿ.

---

* 'ಇಂದ್ರ ಆಗಚ್ಛ' 'ಹರಿವ ಆಗಚ್ಛ' ಮೊದಲಾದ ಕಡೆಗಳಲ್ಲಿರುವಂತೆ ಆದರಾತಿಶಯದಿಂದ ಮತ್ತೆ ಮತ್ತೆ ಇಂದ್ರನ ಆಹ್ವಾನ.

**ಮಾ ತೇ ಅಸ್ಯಾಗ್ಂ [ಅಸ್ಯಾಮ್(೫) ಸಹಸಾವನ್] ಸಹಸಾವನ್ಪರಿಷ್ಟಾವಘಾಯ ಭೂಮ ಹರಿವಃ ಪರಾದೈ । ತ್ರಾಯಸ್ವ ನೋಽವೃಕೇಭಿರ್ವರೂಥೈಸ್ತವ ಪ್ರಿಯಾಸಸ್ಸೂರಿಷು ಸ್ಯಾಮ ॥**

---

ಮಾ । ತೇ । ಅಸ್ಯಾಮ್[೫]। ಸಹಸಾವನ್ನಿತಿ ಸಹಸಾ-ವನ್। ಪರಿಷ್ಟೌ। ಅಘಾಯ। ಭೂಮ। ಹರಿವ ಇತಿ ಹರಿ-ವಃ । ಪರಾದಾ ಇತಿ ಪರಾ-ದೈ ॥ ತ್ರಾಯಸ್ವ। ನಃ । ಅವೃಕೇಭಿಃ । ವರೂಥೈಃ । ತವ । ಪ್ರಿಯಾಸಃ । ಸೂರಿಷು । ಸ್ಯಾಮ ॥

---

| ಮಂತ್ರ | ವಿನಿಯೋಗ |
|---|---|
| ಮಾ ತೇ ...... ಸ್ಯಾಮ । | ತ್ರಾತ್ರಿಂದ್ರೇಷ್ಟಿಯ ಯಾಜ್ಯೆ |

---

∴ **ಸಹಸಾವನ್** = ಬಲವಂತನಾದ ಇಂದ್ರನೇ! **ತೇ** = ನಿನ್ನ/ನಿನ್ನ ಅನುಗ್ರಹಕ್ಕಾಗಿ ಮಾಡುವ; **ಅಸ್ಯಾಮ್ ಪರಿಷ್ಟೌ** = ರಕ್ಷಣೆಗಾಗಿ ಮಾಡುವ ಈ ಇಷ್ಟಿಯಲ್ಲಿ; [ನಾವು] **ಅಘಾಯ ಮಾ ಭೂಮ** = ವೈಕಲ್ಯವನ್ನುಂಟುಮಾಡದಿರೋಣ. **ಹರಿವಃ** = ಹರಿತವರ್ಣದ ಕುದುರೆಗಳುಳ್ಳ ಇಂದ್ರನೇ! **ಪರಾದೈ ಮಾ ಭೂಮ**= [ಯಾವಾಗಲೂ ನಿನ್ನ] ತಿರಸ್ಕಾರವನ್ನು ಮಾಡದಿರೋಣ / ನೀನು ನಮ್ಮನ್ನು ತ್ಯಾಗ ಮಾಡದಿರು; [ನೀನು] **ನಃ** = ನಮ್ಮನ್ನು; **ಅವೃಕೇಭಿಃ** = ಹಿಂಸೆ ಮಾಡುವವರಿಲ್ಲದ; **ವರೂಥೈಃ** = ಮನೆಗಳಿಂದ; **ತ್ರಾಯಸ್ವ** = ರಕ್ಷಿಸು; / ಮನೆಗಳಲ್ಲಿ ಹಿಂಸೆಯಾಗದಂತೆ ಕಾಪಾಡು; [ನಾವು] **ಸೂರಿಷು** = ವಿದ್ವಾಂಸರಾದ ಯಜಮಾನರಲ್ಲಿ; **ತವ**= ನಿನಗೆ; **ಪ್ರಿಯಾಸಃ** = ಪ್ರಿಯರಾದವರಾಗಿ; **ಸ್ಯಾಮ**= ಆಗೋಣ.

---

**ಶತ್ರುವಿನಲ್ಲಿ ಕೋಪಗೊಂಡ ನೀನು ನಮ್ಮನ್ನು ಹಿಂಸಿಸುವ ಶತ್ರುವಿನ ಕೋಪವನ್ನು ಹೋಗಲಾಡಿಸು. ನಮಗೆ ಹಿಂಸೆಯಾಗದಂತೆ ರಕ್ಷಿಸು.**

ಇಂದ್ರನು ಶೃಂಖಲಾಬಂಧನದಿಂದಲೂ ರಕ್ಷಿಸಬಲ್ಲನು/ದೇವರಕ್ಷಕನು. ಗೃಹ ಬಂಧನಕ್ಕೆ ಒಳಗಾದವರನ್ನು ರಕ್ಷಿಸಬಲ್ಲನು/ಸರ್ವರಕ್ಷಕನು. ಎಲ್ಲ ಹೋಮಗಳಲ್ಲಿಯೂ ಸುಖವಾಗಿ ಕರೆಯಲ್ಪಡತಕ್ಕವನು. ಸರ್ವವಿಪತ್ತುಗಳಿಂದಲೂ ರಕ್ಷಿಸಬಲ್ಲ ಶೂರನು. ಹಲವರು ಯಜಮಾನರಿಂದ ಹವಿಸ್ಸುಗಳ ಸ್ವೀಕಾರಕ್ಕಾಗಿ ಆಹ್ವಾನಿಸಲ್ಪಡತಕ್ಕವನು; ಸರ್ವಕಾರ್ಯಸಮರ್ಥನು. ಹೀಗೆ ಪರಮೈಶ್ವರ್ಯಯುಕ್ತನಾದ, ಧನವಂತನಾದ ಇಂದ್ರನು

**ಅನವಸ್ತೇ ರಥಮಶ್ವಾಯ ತಕ್ಷನ್ತ್ವಷ್ಟಾ ವಜ್ರಂ ಪುರುಹೂತ ದ್ಯುಮಂತಮ್ । ಬ್ರಹ್ಮಾಣ ಇಂದ್ರಂ**

---

ಅನವಃ । ತೇ । ರಥಮ್ । ಅಶ್ವಾಯ । ತಕ್ಷನ್ನ್ । ತ್ವಷ್ಟಾ । ವಜ್ರಮ್ । ಪುರುಹೂತೇತಿ ಪುರು-ಹೂತ । ದ್ಯುಮಂತಮಿತಿ ದ್ಯು-ಮಂತಮ್ ॥ ಬ್ರಹ್ಮಾಣಃ । ಇಂದ್ರಮ್ ।

---

| ಮಂತ್ರ | ವಿನಿಯೋಗ |
|---|---|
| ಅನವಸ್ತೇ... ಹಂತ್ವಾ ಉ ॥ | [ಮಹಾಯಜ್ಞಪ್ರಾಪ್ತಿಗಾಗಿ ಮಾಡುವ] ಅರ್ಕಾಶ್ವಮೇಧವದಿಂದ್ರೇಷ್ಟಿಯಲ್ಲಿನ ಪುರೋನುವಾಕ್ಯೆ. |

---

⁘ ಪುರುಹೂತ = ಬಹು ಯಜಮಾನರಿಂದ [ತಮ್ಮ ತಮ್ಮ ಯಜ್ಞಗಳಿಗಾಗಿ] ಆಹ್ವಾನಿಸಲ್ಪಡುವ ಇಂದ್ರನೇ! ಅನವಃ = ಮನುಷ್ಯರು; ತೇ = ನಿನ್ನ; ರಥಮ್ = ರಥವನ್ನು; ಅಶ್ವಾಯ = ಕುದುರೆಗಳನ್ನು ಕಟ್ಟುವುದಕ್ಕೆ ತಕ್ಕಂತೆ; ತಕ್ಷನ್ನ್ = ಸಜ್ಜುಗೊಳಿಸಲಿ; ತ್ವಷ್ಟಾ = ದೇವಶಿಲ್ಪಿಯಾದ ತ್ವಷ್ಟೃದೇವನು; ದ್ಯುಮಂತಮ್ = ಪ್ರಕಾಶಮಾನವಾದ; ತೇ ವಜ್ರಮ್ = ನಿನ್ನ ವಜ್ರಾಯುಧವನ್ನು; [ತಕ್ಷತು = ಹರಿತಗೊಳಿಸಲಿ] ಬ್ರಹ್ಮಾಣಃ = ಬ್ರಾಹ್ಮಣರಾದ ಋತ್ವಿಜರು;

---

ನಮಗೆ ಕ್ಷೇಮವನ್ನುಂಟುಮಾಡಲಿ. ನಮ್ಮನ್ನು ಬಂಧನದಿಂದ ಬಿಡಿಸಿ ರಕ್ಷಿಸಲಿ.

ಬಲವಂತನಾದ ಇಂದ್ರನೇ! ನಿನ್ನ ಅನುಗ್ರಹಕ್ಕಾಗಿ ಮಾಡುತ್ತಿರುವ ಈ ಯಾಗದಲ್ಲಿ ಲೋಪವುಂಟಾಗದಿರಲಿ. ಹರ್ಯಶ್ವನಾದ ಇಂದ್ರನೇ! ನಿನ್ನನ್ನು ನಾವು ಎಂದೂ ತಿರಸ್ಕರಿಸದಂತಾಗಲಿ. ನೀನು ನಮ್ಮನ್ನು ಎಂದೂ ತ್ಯಾಗ ಮಾಡದಿರುವಂತಾಗಲಿ. ನಮ್ಮ ರಕ್ಷಣಾಯುಕ್ತವಾದ ಮನೆಗಳನ್ನು ಚೋರಾದಿಹಿಂಸಕರು ಇಲ್ಲದಂತೆ ಮಾಡಿ ನಮ್ಮನ್ನು ರಕ್ಷಿಸು. ವಿದ್ವಾಂಸರಾದ ಯಜಮಾನರಲ್ಲಿ ನಾವು ನಿನಗೆ ಪ್ರಿಯರಾಗುವಂತೆ ಆಗಲಿ.

ಚಯನವು [ಅಗ್ನಿಯು] ಅರ್ಕನು. ಆದಿತ್ಯನು ಅಶ್ವಮೇಧವು. ಮಹಾಯಜ್ಞಗಳ ಮೊದಲನೆ ತನುವು/ಶರೀರವು ಅರ್ಕನು. ಕೊನೆಯ ತನುವು ಅಶ್ವಮೇಧವು. ಹೀಗೆ ಅರ್ಕಾಶ್ವಮೇಧವಂತನಾದ ಇಂದ್ರನು ಮಹಾಯಜ್ಞಪ್ರಾಪ್ತಿಯ ಪ್ರತಿಬಂಧಕಗಳನ್ನು ಹೋಗಲಾಡಿಸತಕ್ಕವನಾಗಿರುತ್ತಾನೆ. ಮನುಷ್ಯರು ಇಂತಹ ಇಂದ್ರನ ರಥವನ್ನು ಕುದುರೆಗಳನ್ನು

ಮಹಯಂತೋ ಅರ್ಕೈರವರ್ಧಯನ್ನಹಯೇ ಹಂತವಾ ಉ॥

ವೃಷ್ಣೇ ಯತ್ತೇ ವೃಷಣೋ ಅರ್ಕಮರ್ಚಾನಿಂದ್ರ

---

ಮಹಯಂತಃ । ಅರ್ಕೈಃ । ಅವರ್ಧಯನ್ । ಅಹಯೇ । ಹಂತವೈ । ಉ॥ ವೃಷ್ಣೇ। ಯತ್ । ತೇ । ವೃಷಣಃ । ಅರ್ಕಮ್। ಅರ್ಚಾನ್ । ಇಂದ್ರ ।

---

| ಮಂತ್ರ | ವಿನಿಯೋಗ |
|---|---|
| ವೃಷ್ಣೇ... ದಸ್ಯೂನ್ ॥ | ಅರ್ಕಾಶ್ವಮೇಧವದಿಂದ್ರೇಷ್ಟಿಯ ಯಾಜ್ಯೆ |

---

**ಅರ್ಕೈಃ** = ಅರ್ಚನಸಾಧನವಾದ ಮಂತ್ರಗಳಿಂದ; **ಮಹಯಂತಃ** = ಪೂಜಿಸುವವರಾಗಿ; **ಇಂದ್ರಮ್** = ಇಂದ್ರನಾದ ನಿನ್ನನ್ನು; **ಅಹಯೇ ಹಂತವೈ ಉ** = [ಮಹಾಯಜ್ಞ ಪ್ರಾಪ್ತಿಪ್ರತಿಬಂಧಕವಾದ] ಪಾಪವನ್ನು ಹೋಗಲಾಡಿಸುವುದಕ್ಕಾಗಿಯೇ/[ಸರ್ಪಾದಿ ಪ್ರತಿಬಂಧಕವನ್ನು]; **ಅವರ್ಧಯನ್** = ವೃದ್ಧಿಗೊಳಿಸಲಿ/ನೀನು ನಮಗೆ ಮಹಾಯಜ್ಞ ಪ್ರಾಪ್ತಿಯನ್ನು ಕೊಡು. **ಇಂದ್ರ** = ಎಲೈ! ಇಂದ್ರದೇವನೇ! **ಯತ್** = ಯಾವಾಗ; **ವೃಷ್ಣೇ ತೇ** = ಯಜಮಾನರ ಕೋರಿಕೆಗಳನ್ನು ಈಡೇರಿಸುವ ನಿನ್ನ; **ಅರ್ಕಮ್** = ಸ್ತುತ್ಯರ್ಹವಾದ ಯಾಗವನ್ನು; **ವೃಷಣಃ ಗ್ರಾವಾಣಃ** = ಯಜ್ಞಸಾಧನವಾಗಿ ಫಲವನ್ನು ಕೊಡುವ ದೃಷದುಪಲಾದಿಗಳು; **ಅರ್ಚಾನ್** = ಅಲಂಕರಿಸುತ್ತವೆಯೋ;

---

ಕಟ್ಟುವುದಕ್ಕೆ ತಕ್ಕಂತೆ ಸಜ್ಜುಗೊಳಿಸಲಿ. ದೇವಶಿಲ್ಪಿಯಾದ ತ್ವಷ್ಟನು ಪ್ರಕಾಶಮಾನವಾದ ಇಂದ್ರನ ವಜ್ರಾಯುಧವನ್ನು ಮತ್ತಷ್ಟು ಹರಿತ ಮಾಡಲಿ. ಬಲವಂತನಾದ ಪುರುಹೂತ ನಾದ ಇಂದ್ರನನ್ನು ಸ್ತುತಿಸುವ ಮಂತ್ರಗಳಿಂದ/ಹವಿಸ್ಸುಗಳಿಂದ ಋತ್ವಿಜರು ಸ್ತುತಿಸಿ, ಪೂಜಿಸುತ್ತಾ, ಮಹಾಯಜ್ಞಪ್ರಾಪ್ತಿಗೆ ಪ್ರತಿಬಂಧಕವಾಗಿರುವ ಪಾಪದ/ಸರ್ಪಾದಿಹಿಂಸಕರ ನಾಶಕ್ಕಾಗಿ ವೃದ್ಧಿಗೊಳಿಸಲಿ/ಉತ್ಸಾಹಗೊಳಿಸಲಿ.

ಇಂದ್ರನೇ! ನೀನು ಯಜಮಾನರು ಬೇಡಿದುದನ್ನು ಕೊಡತಕ್ಕವನು. ನಿನ್ನ ಈ ಯಾಗವೆಂಬ ಸ್ತುತ್ಯರ್ಹವಾದ ಕರ್ಮವನ್ನು ಯಜ್ಞಸಾಧನವಾಗಿ ಫಲವರ್ಷಕಗಳಾದ ದೃಷ ದುಪಲಾದಿಗಳು ಅಲಂಕರಿಸಲಿ. ವೇದಿರೂಪಳಾದ ಅದಿತಿಯು/ಪೃಥಿವಿಯು ನಿನ್ನೊಡನೆ

**ಗ್ರಾವಾಣೋ ಅದಿತಿಸ್ಸಜೋಷಾಃ ॥ ಅನಶ್ವಾಸೋ ಯೇ ಪವಯೋಽರಥಾ ಇಂದ್ರೇಷಿತಾ ಅಭ್ಯವರ್ತಂತ ದಸ್ಯೂನ್ ॥ ೧೨-51 ॥**

**[ವೃತ್ರಹತ್ಯೇಽನು ಗಾಯತ್ರಿಣೋಽದ್ಧ್ವರಾಣಾಂ ಪರಾವತೋಽಸ್ಯಾಮಷ್ಟಾ ಚತ್ವಾರಿಗ್‌ಂಶಚ್ಚ ॥]**

---

ಗ್ರಾವಾಣಃ । ಅದಿತಿಃ । ಸಜೋಷಾ ಇತಿ ಸ-ಜೋಷಾಃ ॥ ಅನಶ್ವಾಸಃ । ಯೇ । ಪವಯಃ । ಅರಥಾಃ । ಇಂದ್ರೇಷಿತಾ ಇತೀಂದ್ರ-ಇಷಿತಾಃ । ಅಭ್ಯವರ್ತಂತೇತ್ಯಭಿ-ಅವರ್ತಂತ । ದಸ್ಯೂನ್ ॥ ೧೨ ॥

---

[ಆಗ] **ಅದಿತಿಃ** = ವೇದಿರೂಪವಾದ ಪೃಥಿವಿಯು; **ಸಜೋಷಾಃ** = ನಿನ್ನೊಡನೆ ಸಮಾನವಾದ ಪ್ರೀತಿಯುಳ್ಳವಳಾಗಲಿ. [ವೃಷಣಃ ಗ್ರಾವಾಣಃ = ವೃಷ್ಟಿಯನ್ನು ಸುರಿಸುವ ಮೋಡಗಳು ಇಂದ್ರನಾದ ನಿನ್ನ ಯಾಗವನ್ನು ಪೂಜಿಸುತ್ತವೆ. ಅದಿತಿಯೂ/ಪೃಥಿವಿಯೂ ಮಳೆಯಿಂದ ಒಳ್ಳೆಯ ಬೆಳೆಗಳನ್ನು ಪಡೆದು ನಿನ್ನ ಯಾಗಮಹಿಮೆಯನ್ನು ಪ್ರಕಾಶಪಡಿಸುತ್ತಾಳೆ.] **ಯೇ** = ಯಾವ; **ಅನಶ್ವಾಸಃ** = ಕುದುರೆಗಳಿಲ್ಲದ; **ಅರಥಾಃ** = ರಥಗಳಿಲ್ಲದ/ಬೇರೆ ಯಾವ ಸಹಾಯವೂ ಇಲ್ಲದ; **ಪವಯಃ** = ವಜ್ರಾಯುಧಾದಿಗಳಿವೆಯೋ [ಅವು] **ಇಂದ್ರೇಷಿತಾಃ** = ಇಂದ್ರನಾದ ನಿನ್ನಿಂದ ಪ್ರೇರಿಸಲ್ಪಟ್ಟವುಗಳಾಗಿ; **ದಸ್ಯೂನ್** = [ಮಹಾಯಜ್ಞಪ್ರಾಪ್ತಿಗೆ ಪ್ರತಿಬಂಧಕರಾಗಿರುವ]ಅಸುರಾದಿಗಳನ್ನು; **ಅಭ್ಯವರ್ತಂತ** = [ನಾಶಪಡಿಸಲು] ಉದ್ಯುಕ್ತವಾಗಲಿ. [ನಿನ್ನ ಅನುಗ್ರಹದಿಂದ ನಮಗೆ ಅಶ್ವಮೇಧಾದಿಮಹಾಯಜ್ಞಪ್ರಾಪ್ತಿಯುಂಟಾಗಲಿ.

---

ಸಮಾನಪ್ರೀತಿಯುಳ್ಳವಳಾಗಲಿ/ಮೇಘಗಳು ಮಳೆಯನ್ನು ಸುರಿಸಲಿ. ಭೂಮಿಯು ಸಸ್ಯಸಮೃದ್ಧವಾಗಲಿ. ಇದೆಲ್ಲವೂ ನಿನ್ನ ಯಾಗದ ಫಲಗಳಾಗಿ ನಿನ್ನನ್ನು ಹೊಗಳುತ್ತವೆ. ಕುದುರೆ, ರಥ ಮೊದಲಾದ ಬೇರೆ ಯಾವ ಯುದ್ಧಸಾಧನಗಳನ್ನೂ ಅಪೇಕ್ಷಿಸದ ನಿನ್ನ ವಜ್ರಾಯುಧಾದಿಗಳು ಯಜ್ಞಪ್ರತಿಬಂಧಕರಾದ ಅಸುರಾದಿಗಳನ್ನು ಕೊಲ್ಲಲು ನಿನ್ನಿಂದ ಪ್ರಯೋಗಿಸಲ್ಪಟ್ಟು ಶತ್ರುಗಳ ಕಡೆಗೆ ಬರಲಿ. ನೀನು ನಮಗೆ ಮಹಾಯಜ್ಞಪ್ರಾಪ್ತಿಯನ್ನು ಕೊಡು.

ಸಂ ತ್ವಾ ಸಿಂಚಾಮಿ ಧ್ರುವೋಽಸ್ಯಗ್ನಿರ್ಮಾ ಬರ್‍ಹಿಷೋಽಹಮಾ-
ಪ್ಯಾಯತಾಮಗನ್ಮ ಯಥಾ ವೈ ಯೋ ವೈ ಶ್ರದ್ಧಾಂ
ಪ್ರಜಾಪತಿರ್ಯಜ್ಞಾನ್ಧ್ರುವೋಽಸೀತ್ಯಾಹ ಯೋ ವೈ
ಸಪ್ತದಶಮಿಂದ್ರಂ ವೋ ದ್ವಾದಶ ॥ ೧೨ ॥

ಸಂ ತ್ವಾ ಬರ್‍ಹಿಷೋಽಹಂ ಯಥಾ ವಾ ಏವಂ ವಿದ್ವಾ-
ಞ್ಛೌಷಟ್ಸಹಸಾವನ್ನೇಕಪಂಚಾಶತ್ ॥ ೫೧ ॥

**॥ ಸಂ ತ್ವಾ ಸಿಂಚಾಮಿ ದಶ್ಯೂನ್ ॥**

**॥ ಹರಿಃ ಓಂ ॥ ಶ್ರೀಕೃಷ್ಣಾರ್ಪಣಮಸ್ತು ॥**
**॥ ಇತಿ ಪ್ರಥಮಕಾಂಡೇ ಷಷ್ಠಃ ಪ್ರಶ್ನಃ ॥**

---

## ವಿನಿಯೋಗ ಸಂಗ್ರಹ

[1-2]ಇಂದ್ರಂ ವೋ ವಿಶ್ವತೋಽಮುಷ್ಮಿಂಶ್ಚರಾವೈಂದ್ರ್ಯ ಋಚೋರ್ದ್ವ್ಯಯಮ್ ॥
[3-4]ಇಂದ್ರಿಯಂದ್ರಿಯಾವದ್ಯಾಗೇ ಸ್ಯಾದಾ ಯಸ್ಮಿನ್[5-6] ಘರ್ಮವದ್ಯಜೌ ॥
[7-8]ಇಂದ್ರಂ ಸ್ಯಾದರ್ಕವದ್ಯಾಗೇ [9-11]ತಿಸ್ರೋಽಂಽಹೋಮುಗ್ಯಜಾವೃಚಃ ॥
[12-15]ವಿ ನೋ ಮೃಧೇ ಚತಸ್ರಃ ಸ್ಯುಸ್ತ್ರಾತಾರಂ [16-17]ತ್ರಾತೃಮದ್ಯಜೌ ॥
[18-19]ಆನವೋಽರ್ಕಾಶ್ವವದ್ಯಾಗೇ ಮಂತ್ರಾ ಏಕೋನವಿಂಶತಿಃ ॥

ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ -19

## ಛಂದಸ್ಸು

| | ಮಂತ್ರ | ಅನುವಾಕ | ಛಂದಸ್ಸು |
|---|---|---|---|
| 1. | ಸಂ ತ್ವಾ ಸಿಂಚಾಮಿ .... ರಿಷತ್ ॥ | ೧ | ಅನುಷ್ಟುಪ್ |
| 2. | ಸಹೋಽಸಿ......ಅರಾತ್ರೀಯತಃ ॥ | ೧ | ತ್ರಿಪದಾ ಗಾಯತ್ರೀ |
| 3. | ಸಹಸ್ವ ಪೃತನಾಃ.... ವೀರ್ಯಮಸಿ ॥ | ೧ | ತ್ರಿಪದಾ ಗಾಯತ್ರೀ |
| 4. | ಯುನಜ್ಮಿ ತ್ವಾ .... ಜಾತವೇದಃ ॥ | ೨ | ದ್ವಿಪದಾ ತ್ರಿಷ್ಟುಪ್ |
| 5. | ಇಂಧಾನಾಸ್ತ್ವಾ.... ವಯಂ ತೇ ॥ | ೨ | ದ್ವಿಪದಾ ತ್ರಿಷ್ಟುಪ್ |
| 6. | ಯನ್ಮೇ ಅಗ್ನೇ...... ಉಪಸ್ಥೇ ॥ | ೨ | ತ್ರಿಷ್ಟುಪ್ |
| 7. | ಉಚ್ಛುಷ್ಮೋ ಅಗ್ನೇ....ಸುವೀರ್ಯಾಯ ॥ | ೨ | ಪಿಪೀಲಿಕಾಮಧ್ಯಾ ತ್ರಿಪದಾ ಯಜುರಂತಾ ತ್ರಿಷ್ಟುಪ್ |
| 8. | ಅಸ್ಮಾಸ್ವಿಂದ್ರ... ಗಮೇಯಮ್ ॥ | ೩ | ತ್ರಿಪದೋಷ್ಣಿಕ್/ ತತಃ ಪರಾ ತ್ರಿಷ್ಟುಪ್/ ಮಧ್ಯೇಜ್ಯೋತಿಸ್ತ್ರಿಷ್ಟುಪ್ |

| | | | |
|---|---|---|---|
| 9. | ಮನೋ ಜ್ಯೋತಿಃ...ಮಾದಯಂತಾಮ್ ॥ | ೩ | ವಿರಾಟ್ |
| 10. | ವಾಜಸ್ಯ ಮಾ.... ಅಕಃ ॥ | ೪ | ಅನುಷ್ಟುಪ್ |
| 11. | ಉದ್ಗ್ರಾಭಂ ಚ .... ವ್ಯಸ್ಯತಾಮ್ ॥ | ೪ | ಅನುಷ್ಟುಪ್ |
| 12. | ಏಮಾ ಅಗ್ಮನ್ನ್... ಇಷಮ್ ॥ | ೪ | ಪುರ ಉಷ್ಣಿಕ್ |
| 13. | ವಿ ತೇ ಮುಂಚಾಮಿ... ದೇವತಾಸು ॥ | ೪ | ತ್ರಿಷ್ಟುಪ್ |
| 14. | ವೇದೋಽಸಿ...ವಾಜಿನಮ್ ॥ | ೪ | ಷಟ್ಪದಾ ಶಕ್ವರೀ |
| 15. | ಆ ಪ್ಯಾಯತಾಂ.... ಅಸ್ಮಿನ್ನ್ ॥ | ೫ | ವಿರಾಟ್ ತ್ರಿಷ್ಟುಪ್ |
| 16. | ಅಗ್ನ ಆಯೂಗ್‌ಂಷಿ... ದುಚ್ಛುನಾಮ್ ॥ | ೬ | ಗಾಯತ್ರೀ |
| 17. | ಅಗ್ನೇ ಪವಸ್ವ......ಮಯಿ ॥ | ೬ | ಗಾಯತ್ರೀ |
| 18. | ಯಜ್ಞೋ ಬಭೂವ.... ರಯೀಣಾಮ್ ॥ | ೬ | ಪಂಚಪದಾ ಜಗತೀ |
| 19. | ಗೋಮಾಗ್‌ಂ ಅಗ್ನೇ....ಸಭಾವಾನ್ ॥ | ೬ | ತ್ರಿಷ್ಟುಪ್ |
| 20. | ಇಂದ್ರಂ ವೋ..... ಕೇವಲಃ ॥ | ೧೨ | ಗಾಯತ್ರೀ |
| 21. | ಇಂದ್ರಂ ನರೋ.... ತ್ವಂ ನಃ ॥ | ೧೨ | ತ್ರಿಷ್ಟುಪ್ |
| 22. | ಇಂದ್ರಿಯಾಣಿ... ವೃಣೇ ॥ | ೧೨ | ಗಾಯತ್ರೀ |
| 23. | ಅನು ತೇ ದಾಯಿ.....ನ್ವೃಷಹ್ಯೇ ॥ | ೧೨ | ತ್ರಿಷ್ಟುಪ್ |
| 24. | ಆ ಯಸ್ಮಿನ್..... ಅತಿಥಿಃ ॥ | ೧೨ | ಅನುಷ್ಟುಪ್ |
| 25. | ಆಮಾಸು.... ಗಿರಃ ॥ | ೧೨ | ಪಥ್ಯಾಬೃಹತೀ |
| 26. | ಇಂದ್ರಮಿತ್......ಅನೂಷತ ॥ | ೧೨ | ಗಾಯತ್ರೀ |

| | | | |
|---|---|---|---|
| 27. | ಗಾಯಂತಿ....ಯೇಮಿರೇ ॥ | ೧೨ | ಅನುಷ್ಟುಪ್ |
| 28. | ಅಗ್ಂಹೋಮುಚೇ... ಕಾಮಾಃ ॥ | ೧೨ | ತ್ರಿಷ್ಟುಪ್ |
| 29. | ವಿವೇಷ... ಹವಂತೇ ॥ | ೧೨ | ತ್ರಿಷ್ಟುಪ್ |
| 30. | ಪ್ರ ಸಮ್ರಾಜಂ.... ಧತ್ತಮೋಜಃ ॥ | ೧೨ | ತ್ರಿಷ್ಟುಪ್ |
| 31. | ವಿ ನ ಇಂದ್ರ.... ಅಭಿದಾಸತಿ ॥ | ೧೨ | ಅನುಷ್ಟುಪ್ |
| 32. | ಇಂದ್ರ ಕ್ಷತ್ರಮ್...ಲೋಕಮ್ ॥ | ೧೨ | ತ್ರಿಷ್ಟುಪ್ |
| 33. | ಮೃಗೋ ನ...... ನುದಸ್ವ ॥ | ೧೨ | ತ್ರಿಷ್ಟುಪ್ |
| 34. | ವಿ ಶತ್ರೂನ್... ಅಭಿದಾಸತಃ ॥ | ೧೨ | ಅನುಷ್ಟುಪ್ |
| 35. | ತ್ರಾತಾರಮ್... ಇಂದ್ರಃ ॥ | ೧೨ | ತ್ರಿಷ್ಟುಪ್ |
| 36. | ಮಾ ತೇ ಅಸ್ಯಾಮ್... ಸ್ಯಾಮ । | ೧೨ | ತ್ರಿಷ್ಟುಪ್ |
| 37. | ಅನವಸ್ತೇ.... ಉ । | ೧೨ | ತ್ರಿಷ್ಟುಪ್ |
| 38. | ವೃಷ್ಣೇ ಯತ್ತೇ... ದಸ್ಯೂನ್ ॥ | ೧೨ | ತ್ರಿಷ್ಟುಪ್ |

---

# ತೈತ್ತಿರೀಯ ಸಂಹಿತಾ

## ಪ್ರಥಮಕಾಂಡಃ ಸಪ್ತಮಃ ಪ್ರಶ್ನಃ

ಹರಿಃ ಓಂ ॥

ಪಾಕಯಜ್ಞಂ ವಾ ಅನ್ವಾಹಿತಾಗ್ನೇಃ

---

ಪಾಕಯಜ್ಞಮಿತಿ ಪಾಕ-ಯಜ್ಞಮ್ । ವೈ । ಅನ್ವಿತಿ । ಆಹಿತಾಗ್ನೇರಿತ್ಯಾಹಿತ-ಅಗ್ನೇಃ ।

---

ಈ ಏಳನೆಯ ಪ್ರಶ್ನೆಯಲ್ಲಿ ಹದಿಮೂರು ಅನುವಾಕಗಳಿವೆ. ಮೊದಲಿನ ಆರು ಅನುವಾಕಗಳು ಯಾಜಮಾನಬ್ರಾಹ್ಮಣದ ಶೇಷವಾಗಿವೆ. ಅನಂತರದ ಆರು ಅನುವಾಕಗಳು ವಾಜಪೇಯಮಂತ್ರಗಳು. ಕೊನೆಯ ಅನುವಾಕದಲ್ಲಿ ಯಾಜ್ಯಾನುವಾಕ್ಯಾ ಮಂತ್ರಗಳಿವೆ. ಮೊದಲ ಆರು ಅನುವಾಕಗಳು ಕಾಂಡಪಾಠದಂತೆ ಪ್ರಾಜಾಪತ್ಯಕಾಂಡಕ್ಕೆ ಸೇರಿವೆ. ನಂತರದ ಆರು ಅನುವಾಕಗಳು ಸೌಮ್ಯಕಾಂಡಕ್ಕೆ ಸೇರಿದವುಗಳಾಗಿವೆ. ಕಡೆಯ ಅನುವಾಕವು ವೈಶ್ವದೇವಕಾಂಡಕ್ಕೆ ಒಳಪಟ್ಟಿದೆ.

ಈ ಪ್ರಶ್ನೆಯ 13 ಅನುವಾಕಗಳಲ್ಲಿ ಹೇಳಿರುವ ವಿಷಯಗಳು ಇವು:

| ಅನುವಾಕ | ವಿಷಯ |
|---|---|
| ೧ | ಇಡಾನುಮಂತ್ರಣ |

---

### ಇಡಾಭಕ್ಷಣದ ಪ್ರಶಂಸೆ

| ಬ್ರಾಹ್ಮಣಭಾಗ | ವಿವರಣೆ |
|---|---|
| ಪಾಕಯಜ್ಞಂ ವೈ ಅನ್ವಾಹಿತಾಗ್ನೇಃ | ಯಜಮಾನನ ಯಾವುದೊಂದು *ಪಾಕಯಜ್ಞವನ್ನು ಅನುಸರಿಸಿ |

---

* ಪಾಕಯಜ್ಞಗಳು ಏಳು ಎಂದು ಆಪಸ್ತಂಬರ ಮತ. 1) ಔಪಾಸನಹೋಮ 2) ವೈಶ್ವದೇವ 3) ಪಾರ್ವಣ 4) ಅಷ್ಟಕಾ 5) ಮಾಸಿಶ್ರಾದ್ಧ 6) ಸರ್ಪಬಲಿ 7) ಈಶಾನಬಲಿ ಎಂದು ವ್ಯಾಖ್ಯಾನಕಾರರು ವಿವರಿಸಿದ್ದಾರೆ.

# ಪಶವ ಉಪತಿಷ್ಠಂತ ಇಡಾ ಖಲು ವೈ ಪಾಕಯಜ್ಞಃ

---

ಪಶವಃ । ಉಪೇತಿ । ತಿಷ್ಠಂತೇ । ಇಡಾ । ಖಲು । ವೈ । ಪಾಕಯಜ್ಞ ಇತಿ ಪಾಕ-ಯಜ್ಞಃ

---

| | |
|---|---|
| ೨ | ಇಡಾಪ್ರಶಂಸನ |
| ೩ | ಅನ್ವಾಹಾರ್ಯ |
| ೪-೫-೬ | ಮಂತ್ರಾನುವಾಕವ್ಯಾಖ್ಯೆ |
| ೭ | ರಥಮಂತ್ರಗಳು |
| ೮ | ಧಾವನಮಂತ್ರಗಳು |
| ೯ | ರೋಹಣಮಂತ್ರಗಳು |
| ೧೦ | ವಾಜಹೋಮಗಳು |
| ೧೧ | ಉಜ್ಜಿತಿಮಂತ್ರಗಳು |
| ೧೨ | ಅತಿಗ್ರಾಹ್ಯಮಂತ್ರಗಳು |
| ೧೩ | ಯಾಜ್ಯಾನುವಾಕ್ಯಾಮಂತ್ರಗಳು |

---

| | |
|---|---|
| ಪಶವಃ ಉಪತಿಷ್ಠಂತೇ | ಪಶುಗಳು ಯಜಮಾನನನ್ನು ಆಶ್ರಯಿಸುತ್ತವೆ. ಪಾಕಯಜ್ಞದಿಂದ ಪಶುಪ್ರಾಪ್ತಿಯಾಗುತ್ತದೆ. |
| ಇಡಾ ಖಲು ವೈ ಪಾಕಯಜ್ಞಃ | ಇಡೆಯನ್ನು ಬ್ರಾಹ್ಮಣರು [ಋತ್ವಿಜರು] ಭಕ್ಷಿಸುವುದರಿಂದ ಇಡಾಭಕ್ಷಣವು ಪಾಕಯಜ್ಞವಾಗಿದೆ. |

---

* 1) ಹುತ 2) ಪ್ರಹುತ 3) ಆಹುತ 4) ಶೂಲಗವ 5) ಬಲಿಹರಣ 6) ಪ್ರತ್ಯವರೋಹಣ 7) ಅಷ್ಟಕಾಹೋಮ-ಈ 7 ಪಾಕಯಜ್ಞಗಳೆಂದು ಬೌಧಾಯನಮತ. ಕೆಲವರು ಅಲ್ಪಯಜ್ಞಗಳನ್ನು ಪಾಕಯಜ್ಞಗಳೆನ್ನುವರು. ಕೆಲವರು ಪಾಕಯಜ್ಞಗಳು ಅಪರಿಮಿತವಾಗಿವೆ ಯೆಂದು ಅಭಿಪ್ರಾಯಪಡುತ್ತಾರೆ. 'ಹುತಾಃ = ಅಗ್ನೌ ಹೂಯಮಾನಾಃ' 'ಅನಗ್ನೌ = ಪ್ರಹುತಾಃ' 'ಬ್ರಾಹ್ಮಣಭೋಜನೇ = ಬ್ರಹ್ಮಣಿ ಹುತಾಃ'. ಹೀಗೆ ಪಾಕಯಜ್ಞಗಳು ಮೂರು ವಿಧವೆಂದು ಆಶ್ವಲಾಯನ ಮಹರ್ಷಿಗಳು ಹೇಳಿರುತ್ತಾರೆ. ಇಡಾಭಕ್ಷಣರೂಪಪಾಕಯಜ್ಞವು 'ಬ್ರಹ್ಮಣಿ ಹುತಾಃ' ಎಂಬ ಭಾಗಕ್ಕೆ ಸೇರುತ್ತದೆ.

ಪಾಕಯಜ್ಞವು ಪಕ್ವಯಜ್ಞವೆಂದು ಕೆಲವರ ಅಭಿಪ್ರಾಯ.

ಸೈಷಾಂತರಾ ಪ್ರಯಾಜಾನೂಯಾಜಾನ್ ಯಜಮಾನಸ್ಯ

ಲೋಕೇಽವಹಿತಾ ತಾಮಾಹ್ರಿಯಮಾಣಾಮಭಿ

ಮಂತ್ರಯೇತ ಸುರೂಪವರ್ಷವರ್ಣ ಏಹೀತಿ

---

ಸಾ । ಏಷಾ । ಅಂತರಾ । ಪ್ರಯಾಜಾನೂಯಾಜಾನಿತಿ ಪ್ರಯಾಜ-ಅನೂಯಾಜಾನ್। ಯಜಮಾನಸ್ಯ । ಲೋಕೇ । ಅವಹಿತೇತ್ಯವ-ಹಿತಾ । ತಾಮ್ । ಆಹ್ರಿಯಮಾಣಾಮಿತ್ಯಾ-ಹ್ರಿಯಮಾಣಾಮ್ । ಅಭೀತಿ । ಮಂತ್ರಯೇತ । ಸುರೂಪವರ್ಷವರ್ಣ ಇತಿ ಸುರೂಪ-ವರ್ಷವರ್ಣೇ । ಏತಿ । ಇಹಿ । ಇತಿ ।

---

| | |
|---|---|
| ಸಾ ಏಷಾ ಅಂತರಾ ಪ್ರಯಾಜಾ ನೂಯಾಜಾನ್ ಯಜಮಾನಸ್ಯ ಲೋಕೇ ಅವಹಿತಾ | ಈ ಇಡಾಭಕ್ಷಣವು ಪ್ರಯಾಜ, ಆಜ್ಯಭಾಗ, ಪ್ರಧಾನಯಾಗ, ಸ್ವಿಷ್ಟಕೃತ್‌ಗಳಾದ ಮೇಲೆ ಅನೂಯಾಜಹೋಮಗಳಿಗೆ ಮೊದಲು ಯಜಮಾನನ ಯಾಗದಲ್ಲಿ [ಸ್ಥಾನದಲ್ಲಿ] ವ್ಯವಸ್ಥಿತವಾಗಿದೆ.* |

**ಇಡಾಭಿಮಂತ್ರಣವಿಧಿ**

| | |
|---|---|
| ಆಹ್ರಿಯಮಾಣಾಮ್ | [ಅವದಾನ ಮಾಡಿ ಹೋತೃವಿನ ಸಮೀಪಕ್ಕೆ] |
| ತಾಮ್ | ತರಲ್ಪಡುತ್ತಿರುವ ಇಡೆಯನ್ನು |
| ಸುರೂಪವರ್ಷವರ್ಣೇ | 'ಸುರೂಪವರ್ಷವರ್ಣೆಯೇ! ಬಾ' ಎಂಬ |
| ಏಹಿ ಇತಿ | [ಇಡೆಯು ಗೋರೂಪವಾದುದರಿಂದ 'ಒಳ್ಳೆಯ ರೂಪ ಮತ್ತು ವೃಷ್ಟಿಯುಳ್ಳವಳೇ! ಬಾ' ಎಂಬ ಅರ್ಥ ಕೊಡುವ] ಮಂತ್ರದಿಂದ |
| ಅಭಿಮಂತ್ರಯೇತ | ಅಭಿಮಂತ್ರಣ ಮಾಡಬೇಕು. |

---

* ಇಲ್ಲಿಯ ಬ್ರಾಹ್ಮಣಭಾಗಗಳ ತಾತ್ಪರ್ಯವು ಸುಗಮವಿರುವುದರಿಂದ ಪ್ರತ್ಯೇಕ ನೀಡಿಲ್ಲ.

ಪಶವೋ ವಾ ಇಡಾ ಪಶೂನೇವೋಪಹ್ವಯತೇ ಯಜ್ಞಂ

ವೈ ದೇವಾ ಅದುಹ್ರನ್ ಯಜ್ಞೋಽಸುರಾಗ್ಂ

ಅದುಹತ್ತೇಽಸುರಾ ಯಜ್ಞದುಗ್ಧಾಃ ಪರಾಭವನ್

---

ಪಶವಃ । ವೈ । ಇಡಾ । ಪಶೂನ್ । ಏವ । ಉಪೇತಿ । ಹ್ವಯತೇ । ಯಜ್ಞಮ್।
ವೈ। ದೇವಾಃ । ಅದುಹ್ರನ್ನ್ । ಯಜ್ಞಃ । ಅಸುರಾನ್ । ಅದುಹತ್ । ತೇ । ಅಸುರಾಃ।
ಯಜ್ಞದುಗ್ಧಾ ಇತಿ ಯಜ್ಞ-ದುಗ್ಧಾಃ । ಪರೇತಿ । ಅಭವನ್ನ್ ।

---

### ಅಭಿಮಂತ್ರಣದ ಪ್ರಶಂಸೆ

| | |
|---|---|
| ಪಶವಃ ವೈ ಇಡಾ ಪಶೂನ್ ಏವ ಉಪಹ್ವಯತೇ | ಇಡೆಯು ಪಶುಸಾಧನವಾಗಿದೆ. ಗೋ ರೂಪವೂ ಆಗಿದೆ. [ಆದ್ದರಿಂದ] ಮಂತ್ರ ದಲ್ಲಿರುವ 'ಏಹಿ' ಎಂಬ ಪದದಿಂದ ಪಶುಗಳನ್ನೇ ಕರೆದಂತೆ ಆಗುತ್ತದೆ. |

### 'ಸಾ ಮೇ ಸತ್ಯಾಶೀಃ....' ಎಂಬ ಮಂತ್ರದ ಪ್ರಶಂಸೆ

| | |
|---|---|
| ಯಜ್ಞಮ್ ವೈ ದೇವಾಃ ಅದುಹ್ರನ್ನ್ | ದೇವತೆಗಳು ಯಜ್ಞದ ಫಲರೂಪವಾದ ಸಾರವನ್ನು ಕರೆದುಕೊಂಡರು [ಸ್ವೀಕರಿಸಿ ದರು] |
| ಯಜ್ಞಃ ಅಸುರಾನ್ ಅದುಹತ್ | ಯಜ್ಞವು ಅಸುರರ ಸಾರರೂಪವಾದ ಬಲವನ್ನು ಎಳೆದುಕೊಂಡು ಅವರನ್ನು ಶಕ್ತಿಹೀನರನ್ನಾಗಿ ಮಾಡಿತು. |
| ತೇ ಅಸುರಾಃ ಯಜ್ಞದುಗ್ಧಾಃ ಪರಾಭವನ್ನ್ | ಹೀಗೆ ಯಜ್ಞವು ಸಾರವನ್ನು ಸ್ವೀಕರಿಸಿದ ಮೇಲೆ ದುರ್ಬಲರಾದ ಅಸುರರು ಸೋತು ಹೋದರು/ಯಜ್ಞದ ದೋಹ ವನ್ನು ತಿಳಿಯದೇ ನಾಶಹೊಂದಿದರು. |

ಯೋ ವೈ ಯಜ್ಞಸ್ಯ ದೋಹಂ ವಿದ್ವಾನ್ [೧]

ಯಜತೇಽಪ್ಯನ್ಯಂ ಯಜಮಾನಂ ದುಹೇ ಸಾ ಮೇ

ಸತ್ಯಾಽಽಶೀರಸ್ಯ ಯಜ್ಞಸ್ಯ ಭೂಯಾದಿತ್ಯಾಹೈಷ ವೈ ಯಜ್ಞಸ್ಯ

---

ಯಃ । ವೈ । ಯಜ್ಞಸ್ಯ । ದೋಹಮ್ । ವಿದ್ವಾನ್(೧) । ಯಜತೇ । ಅಪೀತಿ । ಅನ್ಯಮ್ । ಯಜಮಾನಮ್ । ದುಹೇ । ಸಾ । ಮೇ । ಸತ್ಯಾ । ಆಶೀರಿತ್ಯಾ-ಶೀಃ । ಅಸ್ಯ । ಯಜ್ಞಸ್ಯ । ಭೂಯಾತ್ । ಇತಿ । ಆಹ । ಏಷಃ । ವೈ । ಯಜ್ಞಸ್ಯ ।

---

### ಮುಂದುವರೆದ ಪ್ರಶಂಸೆ

| | |
|---|---|
| ಯಃ ವೈ ಯಜ್ಞಸ್ಯ ದೋಹಮ್ ವಿದ್ವಾನ್ ಯಜತೇ | ಯಾವ ಯಜಮಾನನು ಯಜ್ಞದ ದೋಹವನ್ನು [ದೇವತೆಗಳು ಮಾಡಿದ ಯಜ್ಞಫಲಗ್ರಹಣವನ್ನೂ, ಯಜ್ಞವು ಮಾಡಿದ ಅಸುರಬಲಗ್ರಹಣವನ್ನೂ] ತಿಳಿದವನಾಗಿ ಯಾಗ ಮಾಡುತ್ತಾನೆಯೋ |
| ಅನ್ಯಮ್ ಯಜಮಾನಮ್ ಅಪಿ ದುಹೇ | [ಅವನು] ಬೇರೆ ಯಜಮಾನನು ಮಾಡಿದ ಯಜ್ಞದ ಫಲವನ್ನೂ ಎಳೆದುಕೊಳ್ಳುತ್ತಾನೆ.* |

### ಪುನಃ ಮಂತ್ರಪ್ರಶಂಸೆ

| | |
|---|---|
| ಸಾ ಮೇ ಸತ್ಯಾ ಆಶೀಃ ಅಸ್ಯ ಯಜ್ಞಸ್ಯ ಭೂಯಾತ್ ಇತಿ ಆಹ | [ಉಪಹೂತೋಽಯಂ ಯಜಮಾನಃ, ಉತ್ತರಸ್ಯಾಂ ದೇವಯಜ್ಯಾಯಾಮುಪಹೂತ/ ಮೊದಲಾಗಿರುವ] 'ಯಜ್ಞದ ಫಲಾಶಂಸನೆಯು ನನಗೆ ಸತ್ಯವಾಗಲಿ' ಎಂದು ಶ್ರುತಿಯು ಹೇಳುತ್ತದೆ. |
| ಏಷಃ ವೈ ಯಜ್ಞಸ್ಯ ದೋಹಃ | ಇದೇ ದೇವತೆಗಳು ಮಾಡಿದ ಯಜ್ಞದೋಹ; ಯಜ್ಞವು ಮಾಡಿದ ಅಸುರದೋಹ. |

---

* ಇದು ಸ್ತುತಿಯಾದುದರಿಂದ ಅನ್ಯ ಯಜಮಾನನಿಗೆ ಹಾನಿಯೇನೂ ಇಲ್ಲ.

ದೋಹಸ್ತೇನೈವೈನಂ ದುಹೇ ಪ್ರತ್ತಾ ವೈ ಗೌರ್ದುಹೇ
ಪ್ರತ್ತೇಡಾ ಯಜಮಾನಾಯ ದುಹ ಏತೇ ವಾ ಇಡಾಯೈ
ಸ್ತನಾ ಇಡೋಪಹೂತೇತಿ ವಾಯುರ್ವತ್ಸೋ ಯರ್‌ಹಿ
ಹೋತೇಡಾಮುಪಹ್ವಯೇತ

---

ದೋಹಃ । ತೇನ । ಏವ । ಏನಮ್ । ದುಹೇ । ಪ್ರತ್ತಾ । ವೈ । ಗೌಃ । ದುಹೇ।
ಪ್ರತ್ತಾ । ಇಡಾ । ಯಜಮಾನಾಯ । ದುಹೇ । ಏತೇ । ವೈ । ಇಡಾಯೈ । ಸ್ತನಾಃ।
ಇಡಾ । ಉಪಹೂತೇತ್ಯುಪ-ಹೂತಾ । ಇತಿ । ವಾಯುಃ । ವತ್ಸಃ । ಯರ್‌ಹಿ ।
ಹೋತಾ । ಇಡಾಮ್ । ಉಪಹ್ವಯೇತೇತ್ಯುಪ-ಹ್ವಯೇತ ।

---

| | |
|---|---|
| ತೇನ ಏವ ಏನಮ್ ದುಹೇ | ಆದರಿಂದಲೇ ಬೇರೆ ಯಜಮಾನನ ಫಲ ರೂಪಸಾರವನ್ನು ಗ್ರಹಿಸುತ್ತಾನೆ. |

**ವಾಯುಧ್ಯಾನವಿಧಿಯ ಪ್ರಸ್ತಾವ**

| | |
|---|---|
| ಪ್ರತ್ತಾ ವೈ ಗೌಃ ದುಹೇ | [ಕರುವು ಹಾಲನ್ನು ಕುಡಿಯಲು ಮೊದಲು ಮಾಡಿದಾಗ] ಹಾಲನ್ನು ಸುರಿಸಲು ಪ್ರಾರಂಭಿಸುವ ಹಸುವು ಹಾಲನ್ನು ಕೊಡುತ್ತದೆ.* |
| ಪ್ರತ್ತಾ ಇಡಾ ಯಜಮಾನಾಯ ದುಹೇ | [ಹಾಗೆಯೇ ವಾಯುವೆಂಬ ಕರುವಿನಿಂದ ಪ್ರೇರಿತವಾದ] ಇಡೆಯೆಂಬ ಧೇನುವು ಯಜಮಾನನಿಗೆ ಫಲವೆಂಬ ಹಾಲನ್ನು ನೀಡುತ್ತದೆ. |
| ಏತೇ ವೈ ಇಡಾಯೈ ಸ್ತನಾಃ ಇಡಾ ಉಪಹೂತಾ ಇತಿ ವಾಯುಃ ವತ್ಸಃ | 'ಇಡೋಪ ಹೂತಾ' ಮೊದಲಾದ ಮಂತ್ರಭಾಗಗಳೇ ಇಡಾಧೇನುವಿನ ಮೊಲೆಗಳಂತೆ. ವಾಯುದೇವತೆಯು ಕರುವಿನಂತೆ. |

**ವಾಯುಧ್ಯಾನದ ವಿಧಿ**

| | |
|---|---|
| ಯರ್‌ಹಿ ಹೋತಾ ಇಡಾಮ್ ಉಪಹ್ವಯೇತ | ಯಾವಾಗ ಹೋತೃವು ಇಡಾದೇವಿಯನ್ನು ಕರೆಯುತ್ತಾನೆಯೋ, |

---

* ಇಲ್ಲಿ ಇಡಾದೇವತೆಯನ್ನು ಗೋವಿನಂತೆಯೂ, 'ಇಡೋಪಹೂತಾ' ಮುಂತಾದ ಮಂತ್ರಗಳನ್ನು ಗೋವಿನ ಮೊಲೆಗಳಂತೆಯೂ ವಾಯುವನ್ನು ಕರುವಿನಂತೆಯೂ ರೂಪಿಸಿ, ವರ್ಣಿಸಿರುತ್ತಾರೆ.

ತರ್ಹಿಯಜಮಾನೋ ಹೋತಾರಮೀಕ್ಷಮಾಣೋ ವಾಯುಂ ಮನಸಾ ಧ್ಯಾಯೇನ್ಮಾತ್ರೇ [ಧ್ಯಾಯೇತ್ (೨) ಮಾತ್ರೇ...] ವತ್ಸಮುಪಾವಸೃಜತಿ ಸರ್ವೇಣ ವೈ ಯಜ್ಞೇನ ದೇವಾಸ್ಸುವರ್ಗಂ ಲೋಕಮಾಯನ್ಪಾಕಯಜ್ಞೇನ ಮನುರಶ್ರಾಮ್ಯತ್ಸೇಡಾ ಮನುಮುಪಾವರ್ತತ

---

ತರ್ಹಿ । ಯಜಮಾನಃ । ಹೋತಾರಮ್ । ಈಕ್ಷಮಾಣಃ । ವಾಯುಮ್ । ಮನಸಾ। ಧ್ಯಾಯೇತ್ (೨)। ಮಾತ್ರೇ । ವತ್ಸಮ್ । ಉಪಾವಸೃಜತೀತ್ಯುಪ-ಅವಸೃಜತಿ । ಸರ್ವೇಣ। ವೈ । ಯಜ್ಞೇನ। ದೇವಾಃ । ಸುವರ್ಗಮಿತಿ ಸುವಃ-ಗಮ್ । ಲೋಕಮ್ । ಆಯನ್ನ್। ಪಾಕಯಜ್ಞೇನೇತಿ ಪಾಕ-ಯಜ್ಞೇನ। ಮನುಃ । ಅಶ್ರಾಮ್ಯತ್ । ಸಾ । ಇಡಾ । ಮನುಮ್। ಉಪಾವರ್ತತೇತ್ಯುಪ-ಆವರ್ತತ ।

---

| | |
|---|---|
| ತರ್ಹಿ ಯಜಮಾನಃ ಹೋತಾರಮ್ ಈಕ್ಷಮಾಣಃ ವಾಯುಮ್ ಮನಸಾ ಧ್ಯಾಯೇತ್ | ಆಗ ಯಜಮಾನನು ಹೋತೃವನ್ನು ನೋಡುತ್ತಾ ವಾಯುದೇವನನ್ನು 'ವಾಯವಿಡಾ ತೇ ಮಾತಾ' ಎಂದು ಮನಸ್ಸಿನಿಂದ ಧ್ಯಾನಿಸಬೇಕು. |

**ವಾಯುಧ್ಯಾನದ ಪ್ರಶಂಸೆ**

| | |
|---|---|
| ಮಾತ್ರೇ ವತ್ಸಮ್ ಉಪಾವಸೃಜತಿ | [ಈ ವಾಯುಧ್ಯಾನದಿಂದ] ತಾಯಿಹಸುವಿನ ಬಳಿ ಕರುವನ್ನು ಬಿಟ್ಟಂತಾಗುತ್ತದೆ. |

**ಇಡೋಪಾಖ್ಯಾನದಲ್ಲಿ ಹೇಯೋಪಾದೇಯಪಕ್ಷಗಳ ವ್ಯಾಖ್ಯಾನ**

| | |
|---|---|
| ಸರ್ವೇಣ ವೈ ಯಜ್ಞೇನ ದೇವಾಃ ಸುವರ್ಗಂ ಲೋಕಮ್ ಆಯನ್ನ್ | [ಮನುಸಹಿತರಾದ]ಸರ್ವದೇವತೆಗಳೂ ಸಂಪೂರ್ಣವಾದ ದರ್ಶ-ಪೂರ್ಣಮಾಸಯಾಗದಿಂದ ಸ್ವರ್ಗಲೋಕವನ್ನು ಹೊಂದಲು ಉದ್ಯುಕ್ತರಾದರು. |
| ಪಾಕಯಜ್ಞೇನ ಮನುಃ ಅಶ್ರಾಮ್ಯತ್ | ಮನುವು ಇಡಾರೂಪವಾದ ಪಾಕಯಜ್ಞದಿಂದಲೇ ವಿಶ್ರಾಂತನಾದನು. |
| ಸಾ ಇಡಾ ಮನುಮ್ ಉಪಾವರ್ತತ | ಆ ಇಡೆಯೂ ಮನುವನ್ನನುಸರಿಸಿ ಅಲ್ಲಿಯೇ ನಿಂತಿತು. |

ತಾಂ ದೇವಾಸುರಾ ವ್ಯಹ್ವಯಂತ ಪ್ರತೀಚೀಂ ದೇವಾಃ ಪರಾಚೀ

ಮಸುರಾಃ ಸಾ ದೇವಾನುಪಾವರ್ತತ ಪಶವೋ ವೈ

ತದ್ದೇವಾನವೃಣತ ಪಶವೋಽಸುರಾನಜಹುರ್ಯಂ

ಕಾಮಯೇತಾಪಶುಸ್ಸ್ಯಾದಿತಿ

---

ತಾಮ್ । ದೇವಾಸುರಾ ಇತಿ ದೇವ-ಅಸುರಾಃ । ವೀತಿ । ಅಹ್ವಯಂತ । ಪ್ರತೀಚೀಮ್। ದೇವಾಃ । ಪರಾಚೀಮ್ । ಅಸುರಾಃ । ಸಾ । ದೇವಾನ್ । ಉಪಾವರ್ತತೇತ್ಯುಪ-ಆವರ್ತತ। ಪಶವಃ । ವೈ । ತತ್ । ದೇವಾನ್ । ಅವೃಣತ । ಪಶವಃ । ಅಸುರಾನ್। ಅಜಹುಃ। ಯಮ್ । ಕಾಮಯೇತ । ಅಪಶುಃ । ಸ್ಯಾತ್ । ಇತಿ ।

---

| | |
|---|---|
| ತಾಮ್ ದೇವಾಸುರಾಃ ವ್ಯಹ್ವಯಂತ | ಆ ಇಡಾದೇವಿಯನ್ನು ದೇವತೆಗಳು ಮತ್ತು ರಾಕ್ಷಸರೂ ಬೇರೆಬೇರೆ ವಿಧವಾಗಿ ಕರೆದರು. |
| ಪ್ರತೀಚೀಮ್ ದೇವಾಃ | 'ಇಡೋಪಹೂತಾ' ಎಂದು ಅಭಿಮುಖವಾಗಿ ದೇವತೆಗಳು ಇಡಾದೇವಿಯನ್ನು ಕರೆದರು. |
| ಪರಾಚೀಮ್ ಅಸುರಾಃ | 'ಉಪಹೂತೇಡಾ' ಎಂದು 'ಇಡಾ' ಶಬ್ದವು ಅನಂತರದಲ್ಲಿರುವಂತೆ ಅಸುರರು ಇಡೆಯನ್ನು ಕರೆದರು. |

**ಹೇಯೋಪಾದೇಯಪಕ್ಷಗಳ ವಿವರಣೆ**

| | |
|---|---|
| ಸಾ ದೇವಾನ್ ಉಪಾವರ್ತತ | ಆ ಇಡಾದೇವಿಯು [ಆದಿಯಲ್ಲಿ ಇಡಾ ಶಬ್ದವಿರುವಂತೆ ಆಹ್ವಾನಿಸಿದ] ದೇವತೆಗಳನ್ನು ಹೊಂದಿದಳು. |
| ಪಶವಃ ವೈ ತತ್ ದೇವಾನ್ ಅವೃಣತ | [ಇಡಾದೇವಿಯು ಪಶುಸ್ವರೂಪಳಾದುದರಿಂದ] ಪಶುಗಳು ದೇವತೆಗಳನ್ನು ಹೊಂದಿದಂತಾಯಿತು. |
| ಪಶವಃ ಅಸುರಾನ್ ಅಜಹುಃ | ಪಶುಗಳು ಅಸುರರನ್ನು ತ್ಯಜಿಸಿದವು. |
| ಯಮ್ ಕಾಮಯೇತ ಅಪಶುಃ ಸ್ಯಾತ್ ಇತಿ | [ಹೋತೃವು] ಯಾವ ಯಜಮಾನನನ್ನು ಪಶುಗಳಿಲ್ಲದವನಾಗಲೆಂದು ಬಯಸುತ್ತಾನೆಯೋ, |

ಪರಾಚೀಂ ತಸ್ಯೇಡಾಮುಪಹ್ವಯೇತಾಪಶುರೇವ ಭವತಿ

ಯಂ[ಯಮ್(ಇ)] ಕಾಮಯೇತ ಪಶುಮಾನ್ತ್ಸ್ಯಾದಿತಿ

ಪ್ರತೀಚೀಂ ತಸ್ಯೇಡಾಮುಪಹ್ವಯೇತ ಪಶುಮಾನೇವ ಭವತಿ

---

ಪರಾಚೀಮ್ । ತಸ್ಯ । ಇಡಾಮ್ । ಉಪೇತಿ । ಹ್ವಯೇತ । ಅಪಶುಃ । ಏವ। ಭವತಿ । ಯಮ್ । ಕಾಮಯೇತ । ಪಶುಮಾನಿತಿ ಪಶು-ಮಾನ್ । ಸ್ಯಾತ್ । ಇತಿ। ಪ್ರತೀಚೀಮ್ । ತಸ್ಯ । ಇಡಾಮ್ । ಉಪೇತಿ । ಹ್ವಯೇತ । ಪಶುಮಾನಿತಿ ಪಶು-ಮಾನ್। ಏವ । ಭವತಿ ।

---

| | |
|---|---|
| ಪರಾಚೀಮ್ ತಸ್ಯ ಇಡಾಮ್ ಉಪಹ್ವಯೇತ | ಆ ಯಜಮಾನನ [ಯಜ್ಞದಲ್ಲಿ] ಪರಾಚಿಯಾದ ಇಡೆಯನ್ನು 'ಉಪಹೂತೇಡಾ' ಎಂದು ಆಹ್ವಾನಿಸಬೇಕು. |
| ಅಪಶುಃ ಏವ ಭವತಿ | ಆ ಯಜಮಾನನು ಪಶುಗಳಿಲ್ಲದವನೇ ಆಗುತ್ತಾನೆ. |
| ಯಮ್ ಕಾಮಯೇತ ಪಶುಮಾನ್ ಸ್ಯಾತ್ ಇತಿ | [ಹೋತೃವು] ಯಾವ ಯಜಮಾನನನ್ನು ಪಶು ಸಮೃದ್ಧಿಯುಳ್ಳವನಾಗಲಿ ಎಂದು ಬಯಸುತ್ತಾನೆಯೋ*, |
| ಪ್ರತೀಚೀಮ್ ತಸ್ಯ ಇಡಾಮ್ ಉಪಹ್ವಯೇತ | ಆ ಯಜಮಾನನ [ಯಜ್ಞದಲ್ಲಿ] 'ಇಡೋಪಹೂತಾ' ಎಂದು ಪ್ರತೀಚಿಯಾದ ಇಡೆಯನ್ನು ಆಹ್ವಾನಿಸಬೇಕು. |
| ಪಶುಮಾನ್ ಏವ ಭವತಿ | ಆ ಯಜಮಾನನು ಪಶುಗಳುಳ್ಳವನೇ ಆಗುತ್ತಾನೆ. |

---

* ಋತ್ವಿಜರು ಯಜಮಾನನ ಹಿತವನ್ನೇ ಬಯಸತಕ್ಕವರು. ಅವರು ಯಜಮಾನನಿಗೆ ಕೇಡನ್ನು ಬಯಸಬಾರದು. ಆದುದರಿಂದ ಹೀಗೆ ಶ್ರುತಿಯಲ್ಲಿ ಪಕ್ಷದ್ವಯಗಳಿದ್ದಾಗ ಯಜಮಾನನಿಗೆ ಅಹಿತವಾದ ಪಕ್ಷವನ್ನು ಬಿಡಬೇಕೆಂಬುದೇ ಶ್ರುತಿಯ ತಾತ್ಪರ್ಯ.

ಬ್ರಹ್ಮವಾದಿನೋ ವದಂತಿ ಸ ತ್ವಾ ಇಡಾಮುಪಹ್ವಯೇತ

ಯ ಇಡಾಮುಪಹೂಯಾತ್ಮಾನಮಿಡಾಯಾಮುಪಹ್ವಯೇ

ತೇತಿ ಸಾ ನಃ ಪ್ರಿಯಾ ಸುಪ್ರತೂರ್ತಿರ್ಮಘೋನೀತ್ಯಾ-

---

ಬ್ರಹ್ಮವಾದಿನ ಇತಿ ಬ್ರಹ್ಮ-ವಾದಿನಃ । ವದಂತಿ । ಸಃ । ತು । ವೈ। ಇಡಾಮ್ । ಉಪೇತಿ । ಹ್ವಯೇತ । ಯಃ । ಇಡಾಮ್ । ಉಪಹೂಯೇತ್ಯುಪ-ಹೂಯ। ಆತ್ಮಾನಮ್ । ಇಡಾಯಾಮ್ । ಉಪಹ್ವಯೇತೇತ್ಯುಪ-ಹ್ವಯೇತ । ಇತಿ । ಸಾ। ನಃ । ಪ್ರಿಯಾ । ಸುಪ್ರತೂರ್ತಿರಿತಿ ಸು-ಪ್ರತೂರ್ತಿಃ । ಮಘೋನೀ । ಇತಿ । ಆಹ।

---

**'ಸಾ ನಃ ಪ್ರಿಯಾ....' ಎಂಬ ಮಂತ್ರದ ವ್ಯಾಖ್ಯಾನದ ಪೀಠಿಕೆ**

| | |
|---|---|
| ಬ್ರಹ್ಮವಾದಿನಃ ವದಂತಿ | ವೇದಾರ್ಥವಿಚಾರ ಮಾಡುವ ವಿದ್ವಾಂಸರು ಪರಸ್ಪರ ಹೀಗೆ ಹೇಳುತ್ತಾರೆ; |
| ಯಃ ಇಡಾಮ್ ಉಪಹೂಯ | [ಯಾವ ಬುದ್ಧಿವಂತನು] 'ಇಡ ಏಹಿ' 'ಅದಿತ ಏಹಿ' ಮೊದಲಾದ ಮಂತ್ರದಿಂದ ಇಡಾದೇವತೆಯನ್ನು ಆಹ್ವಾನಿಸಿ |
| ಆತ್ಮಾನಮ್ ಇಡಾಯಾಮ್ ಉಪಹ್ವಯೇತ | ತನ್ನನ್ನು ಇಡೆಯೊಂದಿಗೆ ಯೋಜಿಸುತ್ತಾನೆಯೋ |
| ಸಃ ತು ವೈ ಇಡಾಮ್ ಉಪಹ್ವಯೇತ ಇತಿ | ಅವನೇ ಸರಿಯಾದ ರೀತಿಯಲ್ಲಿ ಇಡೆಯನ್ನು ಆಹ್ವಾನಿಸಿದವನಾಗುತ್ತಾನೆ [ಎಂದು ಹೇಳುತ್ತಾರೆ.] |

**'ಸಾ ನಃ ಪ್ರಿಯಾ' ಮೊದಲಾದ ಮಂತ್ರಭಾಗದ ಬ್ರಾಹ್ಮಣ**

| | |
|---|---|
| ಸಾ | [ನಾವು ಆಹ್ವಾನಿಸಿರುವ] ಆ ಇಡೆಯು |
| ಸುಪ್ರತೂರ್ತಿಃ | ನಮ್ಮ ಶತ್ರುಗಳನ್ನು ಸಂಹರಿಸುವುದಾಗಿಯೂ [ಸಂಹರಿಸುವ] |
| ಮಘೋನೀ | ಧನವತಿಯಾಗಿಯೂ ಇದ್ದು [ಇರುವ] |
| ನಃ ಪ್ರಿಯಾ | ನಮಗೆ ಪ್ರಿಯೆಯಾಗಿದೆ. [ನೀನು ನಮಗೆ ಪ್ರಿಯಳಾಗಿರುವೆ.] |

ಹೇಡಾಮೇವೋಪಹೂಯಾತ್ಮಾನಮಿಡಾಯಾಮುಪಹ್ವಯತೇ

ವ್ಯಸ್ತಮಿವ ವಾ ಏತದ್ಯಜ್ಞಸ್ಯ ಯದಿಡಾ ಸಾಮಿ ಪ್ರಾಶ್ನಂತಿ

[4] ಸಾಮಿ ಮಾರ್ಜಯಂತ ಏತತ್ಪ್ರತಿ ವಾ

ಅಸುರಾಣಾಂ ಯಜ್ಞೋ ವ್ಯಚ್ಛಿದ್ಯತ

---

ಇಡಾಮ್ । ಏವ । ಉಪಹೂಯೇತ್ಯುಪ-ಹೂಯ । ಆತ್ಮಾನಮ್ । ಇಡಾಯಾಮ್।
ಉಪೇತಿ । ಹ್ವಯತೇ । ವ್ಯಸ್ತಮಿತಿ ವಿ-ಅಸ್ತಮ್ । ಇವ । ವೈ । ಏತತ್ । ಯಜ್ಞಸ್ಯ।
ಯತ್ । ಇಡಾ । ಸಾಮಿ । ಪ್ರಾಶ್ನಂತೀತಿ ಪ್ರ-ಅಶ್ನಂತಿ[೪] । ಸಾಮಿ । ಮಾರ್ಜಯಂತೇ।
ಏತತ್ । ಪ್ರತೀತಿ । ವೈ । ಅಸುರಾಣಾಮ್ । ಯಜ್ಞಃ । ವೀತಿ । ಅಚ್ಛಿದ್ಯತ ।

---

| | |
|---|---|
| ಇತಿ ಆಹ | ಎಂದು ಮಂತ್ರವು ಹೇಳುತ್ತದೆ. |
| ಇಡಾಮ್ ಏವ ಉಪಹೂಯ ಆತ್ಮಾನಮ್ ಇಡಾಯಾಮ್ ಉಪಹ್ವಯತೇ | ಇಡೆಯನ್ನೇಆಹ್ವಾನಿಸಿ ತನ್ನನ್ನು ಇಡೆಯೊಂದಿಗೆ ಯೋಜಿಸಿದವನಾಗುತ್ತಾನೆ.[ಅವನೇ ಸರಿಯಾಗಿ ಇಡಾಹ್ವಾನವನ್ನು ಮಾಡಿದವನಾಗುತ್ತಾನೆ.] |

**ಮಾರ್ಜನಾರ್ಥವಾದ 'ಮನೋ ಜ್ಯೋತಿಃ' ಮಂತ್ರದ ವ್ಯಾಖ್ಯಾನದ ಪೀಠಿಕೆ**

| | |
|---|---|
| ವ್ಯಸ್ತಮ್ ಇವ ವೈ ಏತತ್ ಯಜ್ಞಸ್ಯ ಯತ್ ಇಡಾ | ಇಡಾಭಕ್ಷಣವೆಂಬ ಕರ್ಮವು ಯಾವುದುಂಟೋ ಅದು ಯಜ್ಞದ [ದರ್ಶ-ಪೂರ್ಣಮಾಸದ] ವಿಚ್ಛೇದವೋ ಎಂಬಂತಾಗುತ್ತದೆ. |
| ಸಾಮಿ ಪ್ರಾಶ್ನಂತಿ | ಪುರೋಡಾಶದ ಅಲ್ಪಭಾಗವನ್ನು ಋತ್ವಿಗ್ಯಜಮಾನರು ಭಕ್ಷಿಸುತ್ತಾರೆ. |
| ಸಾಮಿ ಮಾರ್ಜಯಂತೇ | ಸ್ವಲ್ಪವಾದ ಉದಕವನ್ನು ಪ್ರೋಕ್ಷಿಸಿಕೊಳ್ಳುತ್ತಾರೆ.* |
| ಏತತ್ ಪ್ರತಿ ವೈ ಅಸುರಾಣಾಮ್ ಯಜ್ಞಃ ವ್ಯಚ್ಛಿದ್ಯತ | [ಮಾಡಬೇಕಾದ ಅನೂಯಾಜಾದಿಗಳನ್ನು ಮರೆತಿದ್ದರಿಂದ] ಈ ಭಕ್ಷಣ-ಪ್ರೋಕ್ಷಣಗಳ ಸಮಯದಲ್ಲಿ ಅಸುರರ ಯಜ್ಞವು ವಿಚ್ಛಿನ್ನವಾಯಿತು. |

---

* ಪ್ರಧಾನಯಾಗ-ಅನೂಯಾಜಗಳ ನಡುವೆ ಬರುವ ಈ ಭಕ್ಷಣ-ಪ್ರೋಕ್ಷಣಗಳು ಯಾಗಸ್ವರೂಪವಲ್ಲವಾದುದರಿಂದ ಯಾಗವು ವಿಚ್ಛಿನ್ನವಾದಂತಾಗುತ್ತದೆ.

ಬೃಹ್ಮಣಾ ದೇವಾಸ್ಸಮದಧುರ್ಬೃಹಸ್ಪತಿಸ್ತನುತಾಮಿಮಂ ನ

ಇತ್ಯಾಹ ಬ್ರಹ್ಮ ವೈ ದೇವಾನಾಂ ಬೃಹಸ್ಪತಿರ್ಬೃಹ್ಮಣ್ಯೈವ

ಯಜ್ಞಗ್ಂ ಸಂದಧಾತಿ

---

ಬೃಹ್ಮಣಾ । ದೇವಾಃ । ಸಮಿತಿ । ಆದಧುಃ । ಬೃಹಸ್ಪತಿಃ । ತನುತಾಮ್ । ಇಮಮ್। ನಃ । ಇತಿ । ಆಹ । ಬ್ರಹ್ಮ । ವೈ । ದೇವಾನಾಮ್ । ಬೃಹಸ್ಪತಿಃ । ಬೃಹ್ಮಣಾ। ಏವ । ಯಜ್ಞಮ್ । ಸಮಿತಿ । ದಧಾತಿ ।

---

'ಮನೋ ಜ್ಯೋತಿಃ' ಎಂಬ ಮಂತ್ರದ ವ್ಯಾಖ್ಯಾನ

| | |
|---|---|
| ಬೃಹ್ಮಣಾ ದೇವಾಃ ಸಮದಧುಃ | [ಆದರೆ ಎಚ್ಚರ ವಹಿಸಿದ ದೇವತೆಗಳು] ಸಮರ್ಥನಾದ ಪುರುಷನಿಂದ ಈ ಯಜ್ಞ ಭಾಗಗಳನ್ನು ಸೇರಿಸಿ ವಿಚ್ಛಿನ್ನವಾಗದಂತೆ ಮಾಡಿದರು. |
| [ಮನೋ ಜ್ಯೋತಿಃ ಜುಷತಾಮ್ ಆಜ್ಯಮ್] | [ಮಾನನೀಯವಾದ ಅಗ್ನಿಜ್ವಾಲೆಯು ಆಜ್ಯವನ್ನು ಸೇವಿಸಲಿ.] |
| ಬೃಹಸ್ಪತಿಃ ತನುತಾಮ್ ಇಮಮ್ ನಃ | 'ದೇವಪೂಜ್ಯನಾದ ಬೃಹಸ್ಪತಿಯು ನಮ್ಮ ಈ ಯಜ್ಞವನ್ನು ವಿಚ್ಛಿನ್ನವಾಗದಂತೆ ವಿಸ್ತರಿಸಲಿ' |
| ಇತಿ ಆಹ | [ಈ ಮಂತ್ರದ ತೃತೀಯಭಾಗವು] ಹೀಗೆ ಹೇಳುತ್ತದೆ. |
| ಬ್ರಹ್ಮ ವೈ ದೇವಾನಾಮ್ ಬೃಹಸ್ಪತಿಃ | ದೇವಗುರುವಾದ ಬೃಹಸ್ಪತಿಯು ದೇವತೆಗಳಲ್ಲಿ ಸಮರ್ಥನಾದವನಷ್ಟೆ. |
| ಬೃಹ್ಮಣಾ ಏವ ಯಜ್ಞಮ್ ಸಮ್ ದಧಾತಿ | [ಈ ಮಂತ್ರವನ್ನು ಹೇಳುವುದರಿಂದ] ಬೃಹಸ್ಪತಿಯಿಂದಲೇ ಯಜ್ಞಭಾಗಗಳನ್ನು ಜೋಡಿಸಿದಂತಾಗುತ್ತದೆ. |

ವಿಚ್ಛಿನ್ನಂ ಯಜ್ಞಗ್ಂ ಸಮಿಮಂ ದಧಾತ್ವಿತ್ಯಾಹ ಸಂತತ್ಯೈ

ವಿಶ್ವೇ ದೇವಾ ಇಹ ಮಾದಯಂತಾಮಿತ್ಯಾಹ ಸಂತತ್ಯೈವ

ಯಜ್ಞಂ ದೇವೇಭ್ಯೋಽನುದಿಶತಿ ಯಾಂ ವೈ [೫] ಯಜ್ಞೇ

ದಕ್ಷಿಣಾಂ ದದಾತಿ

---

ವಿಚ್ಛಿನ್ನಮಿತಿ ವಿ-ಛಿನ್ನಮ್ । ಯಜ್ಞಮ್ । ಸಮಿತಿ । ಇಮಮ್ । ದಧಾತು । ಇತಿ। ಆಹ । ಸಂತತ್ಯಾ-ಇತಿ ಸಮ್-ತತ್ಯೈ । ವಿಶ್ವೇ । ದೇವಾಃ । ಇಹ । ಮಾದಯಂತಾಮ್। ಇತಿ । ಆಹ । ಸಂತತ್ಯೇತಿ ಸಮ್-ತತ್ಯ । ಏವ । ಯಜ್ಞಮ್ । ದೇವೇಭ್ಯಃ । ಅನ್ವಿತಿ। ದಿಶತಿ । ಯಾಮ್ । ವೈ [೫] ಯಜ್ಞೇ । ದಕ್ಷಿಣಾಮ್ । ದದಾತಿ ।

---

| | |
|---|---|
| ವಿಚ್ಛಿನ್ನಮ್ ಯಜ್ಞಮ್ ಸಮ್ ಇಮಮ್ ದಧಾತು ಇತಿ ಆಹ [ಯಜ್ಞಮ್ ಸಂದಧಾತು] ಸಂತತ್ಯೈ | 'ವಿಚ್ಛಿನ್ನವಾದ ಈ ಯಜ್ಞವನ್ನು ಚೆನ್ನಾಗಿ ಸೇರಿಸಲಿ' ಎಂದು ಮಂತ್ರದ ದ್ವಿತೀಯ ಭಾಗವು ಹೇಳುತ್ತದೆ. [ಇದು ಯಜ್ಞದ] ಸೇರಿಸುವಿಕೆಗಾಗಿ [ಆಗುತ್ತದೆ] |
| ವಿಶ್ವೇ ದೇವಾಃ ಇಹ ಮಾದಯಂತಾಮ್ ಇತಿ ಆಹ | 'ಎಲ್ಲ ದೇವತೆಗಳೂ ಈ ಯಜ್ಞದಲ್ಲಿ ಹವಿಸ್ಸನ್ನು ಸೇವಿಸಿ ತೃಪ್ತಿಯನ್ನು ಹೊಂದಲಿ' ಎಂದು ಈ ಮಂತ್ರದ ಚತುರ್ಥಭಾಗವು ಹೇಳುತ್ತದೆ. |
| ಸಂತತ್ಯ ಏವ ಯಜ್ಞಮ್ ದೇವೇಭ್ಯಃ ಅನುದಿಶತಿ | [ಇದರಿಂದ]ವಿಚ್ಛಿತ್ತಿಯಿಲ್ಲದಂತೆ ಜೋಡಿಸಿದ ಯಜ್ಞವನ್ನು ಎಲ್ಲ ದೇವತೆ ಗಳಿಗೂ ಸಮರ್ಪಿಸಿದವನಾಗುತ್ತಾನೆ, |

**ಪುರೋಡಾಶಾಭಿಮಂತ್ರಣದ 'ಬ್ರಧ್ನ ಪಿನ್ವಸ್ವ' ಮಂತ್ರದ ವ್ಯಾಖ್ಯಾನದ ಪೀಠಿಕೆ**

| | |
|---|---|
| ಯಾಮ್ ವೈ ಯಜ್ಞೇ ದಕ್ಷಿಣಾಮ್ ದದಾತಿ | [ಯಜಮಾನನು] ಯಜ್ಞದಲ್ಲಿ ಗವಾನ್ನಾಹಾರ್ಯಾದಿರೂಪವಾದ ಯಾವ ದಕ್ಷಿಣೆಯನ್ನು ಕೊಡುವನೋ, |

ತಾಮಸ್ಯ ಪಶವೋಽನು ಸಂಕ್ರಾಮಂತಿ ಸ ಏಷ ಈಜಾ -
ನೋಽಪಶುರ್ಭಾವುಕೋ ಯಜಮಾನೇನ ಖಲು ವೈ ತತ್ಕಾರ್ಯ
ಮಿತ್ಯಾಹುರ್ಯಥಾ ದೇವತ್ರಾ ದತ್ತಂ ಕುರ್ವೀತಾತ್ಮನ್ಪಶೂ
ನ್ರಮಯೇತೇತಿ ಬ್ರಧ್ನ ಪಿನ್ವಸ್ವೇತ್ಯಾಹ

---

ತಾಮ್ । ಅಸ್ಯ । ಪಶವಃ । ಅನು । ಸಮಿತಿ । ಕ್ರಾಮಂತಿ । ಸಃ । ಏಷಃ । ಈಜಾನಃ। ಅಪಶುಃ । ಭಾವುಕಃ । ಯಜಮಾನೇನ । ಖಲು । ವೈ । ತತ್ । ಕಾರ್ಯಮ್ । ಇತಿ । ಆಹುಃ । ಯಥಾ । ದೇವತ್ರೇತಿ ದೇವ-ತ್ರಾ । ದತ್ತಮ್ । ಕುರ್ವೀತ । ಆತ್ಮನ್ನ್। ಪಶೂನ್ । ರಮಯೇತ । ಇತಿ । ಬ್ರಧ್ನ । ಪಿನ್ವಸ್ವ । ಇತಿ । ಆಹ ।

---

| | |
|---|---|
| ತಾಮ್ ಅಸ್ಯ ಪಶವಃ ಅನು ಸಂಕ್ರಾಮಂತಿ | ಆ ದಕ್ಷಿಣೆಯನ್ನು ಅನುಸರಿಸಿ ಈ ಯಜಮಾನನ ಪಶುಗಳು ಹೊರಟು ಹೋಗುತ್ತವೆ. |
| ಸಃ ಏಷಃ ಈಜಾನಃ ಅಪಶುಃ ಭಾವುಕಃ | ಆದುದರಿಂದ ಯಾಗ ಮಾಡುವ ಆ ಈ ಯಜಮಾನನು ಪಶುರಹಿತನಾಗುತ್ತಾನೆ. |
| ಯಥಾ ದೇವತ್ರಾ ದತ್ತಮ್ ಕುರ್ವೀತ | ಹೇಗೆ ತಾನು ಕೊಟ್ಟ ದಕ್ಷಿಣೆಯು ಋತ್ವಿಜರಲ್ಲಿ ಕೊಟ್ಟಂತೆ ಆಗುತ್ತದೆಯೋ, |
| ಯಥಾ ಆತ್ಮನ್ನ್ ಪಶೂನ್ ರಮಯೇತ ಇತಿ | ಹೇಗೆ ತನ್ನಲ್ಲಿ ಪಶುಗಳು ವೃದ್ಧಿ ಹೊಂದಿ ಇರುವಂತಾಗುತ್ತದೆಯೋ, |
| ತಥಾ ಯಜಮಾನೇವ ತತ್ ಕಾರ್ಯಮ್ ಖಲು ವೈ ಇತಿ ಆಹುಃ | ಹಾಗೆ ಯಜಮಾನನಿಂದ ಆ ಎರಡೂ ಕಾರ್ಯಗಳು ಮಾಡಲ್ಪಡಬೇಕಷ್ಟೆ. ಹೀಗೆ [ತಿಳಿದವರು] ಹೇಳುತ್ತಾರೆ. |

'ಬ್ರಧ್ನ ಪಿನ್ವಸ್ವ' ಮಂತ್ರದ ವ್ಯಾಖ್ಯಾನ

| | |
|---|---|
| ಬ್ರಧ್ನ ಪಿನ್ವಸ್ವ ಇತಿ ಆಹ | 'ಎಲೈ! ಯಜ್ಞಪುರುಷನೇ! ತೃಪ್ತನಾಗು' ಎಂದು ಈ ಮಂತ್ರಭಾಗವು ಹೇಳುತ್ತದೆ. |

ಯಜ್ಞೋ ವೈ ಬ್ರಧ್ನೋ ಯಜ್ಞಮೇವ ತನ್ಮಹಯತ್ಯಥೋ

ದೇವತ್ರೈವ ದತ್ತಂ ಕುರುತ ಆತ್ಮನ್ಪಶೂನ್ರಮಯತೇ

ದದತೋ ಮೇ ಮಾ ಕ್ಷಾಯೀತ್ಯಾಹಾಕ್ಷಿತಿಮೇವೋಪೈತಿ

---

ಯಜ್ಞಃ । ವೈ । ಬ್ರಧ್ನಃ । ಯಜ್ಞಮ್ । ಏವ । ತತ್ । ಮಹಯತಿ । ಅಥೋ ಇತಿ । ದೇವತ್ರೇತಿ ದೇವ-ತ್ರಾ । ಏವ । ದತ್ತಮ್ । ಕುರುತೇ । ಆತ್ಮನ್ನ್ । ಪಶೂನ್। ರಮಯತೇ । ದದತಃ । ಮೇ । ಮಾ । ಕ್ಷಾಯಿ । ಇತಿ । ಆಹ । ಅಕ್ಷಿತಿಮ್ । ಏವ। ಉಪೇತಿ । ಏತಿ ।

---

| | |
|---|---|
| ಯಜ್ಞಃ ವೈ ಬ್ರಧ್ನಃ | ಬ್ರಧ್ನವೆಂದರೆ ಯಜ್ಞವೇ ಆಗಿದೆ. |
| ಯಜ್ಞಮ್ ಏವ ತತ್ ಮಹಯತಿ | ಆದುದರಿಂದ ಈ ಮಂತ್ರಪಾಠವು ಯಜ್ಞವನ್ನೇ ಪೂಜಿಸುತ್ತದೆ/ಮಹಾಂತ ನನ್ನಾಗಿ ಮಾಡುತ್ತದೆ. |
| ಅಥೋ ದೇವತ್ರಾ ಏವ ದತ್ತಂ ಕುರುತೇ | ಮತ್ತು ಋತ್ವಿಜರಲ್ಲಿಯೇ ದಾನವನ್ನು ಇಡುವಂತೆ ಮಾಡುತ್ತದೆ. |
| ಆತ್ಮನ್ನ್ ಪಶೂನ್ ರಮಯತೇ | ತನ್ನಲ್ಲಿ ಪಶುಗಳು ಸಂತೋಷ ಹೊಂದಿ ವರ್ಧಿಸುವಂತೆಯೂ ಮಾಡುತ್ತದೆ. |

**'ದದತೋ ಮೇ' ಎಂಬ ಮಂತ್ರಭಾಗದ ವ್ಯಾಖ್ಯಾನ**

| | |
|---|---|
| ದದತಃ ಮೇ ಮಾ ಕ್ಷಾಯಿ | 'ಕೊಡುತ್ತಿರುವ ನನಗೆ ಪಶುಗಳು ಕ್ಷೀಣಿಸುವುದು ಬೇಡ'. |
| ಇತಿ ಆಹ | ಹೀಗೆಂದು ಈ ಮಂತ್ರಭಾಗವು ಹೇಳು ತ್ತದೆ. |
| ಅಕ್ಷಿತಿಮ್ ಏವ ಉಪೈತಿ | [ದಾನದಿಂದ ಉಂಟಾಗುವ] ದ್ರವ್ಯಕ್ಷಯ ವಿಲ್ಲದಿರುವಿಕೆಯನ್ನೇ ಯಜಮಾನನು ಹೊಂದುತ್ತಾನೆ. |

ಕುರ್ವತೋ ಮೇ ಮೋಪ ದಸದಿತ್ಯಾಹ

ಭೂಮಾನಮೇವೋಪೈತಿ ॥ ೧-6 ॥

[ವಿದ್ವಾನ್ಧ್ಯೇಧ್ಯವತಿ ಯಂ ಪ್ರಾಶ್ನಂತಿ ಯಾಂ ವೈ ಮ

ಏಕಾನ್ನವಿಗ್ಂಶತಿಶ್ಚ ॥]

---

ಕುರ್ವತಃ । ಮೇ । ಮಾ । ಉಪೇತಿ । ದಸತ್ । ಇತಿ । ಆಹ । ಭೂಮಾನಮ್।
ಏವ । ಉಪೇತಿ । ಏತಿ ॥ ೧ ॥

---

**'ಕುರ್ವತೋ.....' ಎಂಬ ಮಂತ್ರಭಾಗದ ವ್ಯಾಖ್ಯಾನ**

| | |
|---|---|
| ಕುರ್ವತಃ ಮೇ ಮಾ ಉಪ ದಸತ್ | '[ಯಜ್ಞವನ್ನು] ಮಾಡುತ್ತಿರುವ ನನ್ನ ದ್ರವ್ಯಾದಿಗಳು ಹಾನಿಯಿಲ್ಲದೆ ವೃದ್ಧಿಯನ್ನು ಹೊಂದಲಿ' |
| ಇತಿ ಆಹ | ಎಂದು ಈ ಮಂತ್ರಭಾಗವು ಹೇಳುತ್ತದೆ. |
| ಭೂಮಾನಮ್ ಏವ ಉಪೈತಿ | [ಈ ಮಂತ್ರಪಾಠದಿಂದ] ಬಹುವಿಧವಾದ ಅಭಿವೃದ್ಧಿಯನ್ನೇ ಹೊಂದುತ್ತಾನೆ. |

---

# ॥ ದ್ವಿತೀಯೋಽನುವಾಕಃ ॥

ಸಗ್ಂಶ್ರವಾ ಹ ಸೌವರ್ಚನಸಸ್ತುಮಿಂಜಮೌಪೋದಿತಿ-

ಮುವಾಚ ಯತ್ಸತ್ರಿಣಾಗ್ಂ ಹೋತಾಽಭೂಃ

ಕಾಮಿಡಾಮುಪಾಹ್ವಥಾ ಇತಿ

---

**ಸಗ್ಂಶ್ರವಾ ಇತಿ ಸಮ್-ಶ್ರವಾಃ । ಹ । ಸೌವರ್ಚನಸಃ । ತುಮಿಂಜಮ್ । ಔಪೋದಿತಿ ಮಿತ್ಯಾಪ-ಉದಿತಿಮ್ । ಉವಾಚ । ಯತ್ । ಸತ್ರಿಣಾಮ್ । ಹೋತಾ । ಅಭೂಃ। ಕಾಮ್ । ಇಡಾಮ್ । ಉಪೇತಿ । ಅಹ್ವಥಾಃ । ಇತಿ ।**

---

ಮೊದಲನೆಯ ಅನುವಾಕದಲ್ಲಿ ಇಡಾಭಿಮಂತ್ರಣ, ಅದರ ಪ್ರಶಂಸೆಗಳು ಹೇಳಲ್ಪಟ್ಟಿವೆ. ಈ ಎರಡನೆಯ ಅನುವಾಕದಲ್ಲಿ ಇಡೆಯ ಪ್ರಶಂಸೆಯೇ ಇಬ್ಬರು ಮುನಿಗಳ ಪ್ರಶ್ನೋತ್ತರರೂಪವಾಗಿ ಹೇಳಲ್ಪಟ್ಟಿದೆ.

ಇದು ಪ್ರಾಸಂಗಿಕವಾದ ಹೌತ್ರರೂಪವಾಗಿದೆಯೆಂದು ಭಟ್ಟಭಾಸ್ಕರರು ವಿವರಿಸಿರುತ್ತಾರೆ.

**ಮುನಿಗಳ ಪ್ರಶ್ನೋತ್ತರ; ಸಂಶ್ರವಮುನಿಯ ಪ್ರಶ್ನೆ**

| | |
|---|---|
| ಸಗ್ಂಶ್ರವಾ ಹ ಸೌವರ್ಚನಸಃ | **ಸುವರ್ಚನಸ ಮುನಿಯ ಮಗನಾದ ಸಗ್ಂಶ್ರವನೆಂಬ ಮುನಿಯು** |
| ತುಮಿಂಜಮ್ ಔಪೋದಿತಿಮ್ ಉವಾಚ | **ಉಪೋದಿತ ಮುನಿಯ ಪುತ್ರನಾದ ತುಮಿಂಜ ಮಹರ್ಷಿಯನ್ನು ಕುರಿತು ಹೇಳಿದನು/ ಪ್ರಶ್ನಿಸಿದನು.** |
| ಯತ್ ಸತ್ರಿಣಾಮ್ ಹೋತಾ ಅಭೂಃ | **ಯಾವಾಗ ಸತ್ರಯಾಗಕರ್ತರ ಯಾಗದಲ್ಲಿ ಹೋತೃವಾಗಿದ್ದೆಯೋ** |
| ಕಾಮ್ ಇಡಾಮ್ ಉಪಾಹ್ವಥಾಃ ಇತಿ | ಆಗ ಎಂತಹ ಗುಣವುಳ್ಳ ಇಡಾದೇವತೆಯನ್ನು ನೀನು ಆಹ್ವಾನಿಸಿದೆ? ಎಂದು [ಪ್ರಶ್ನಿಸಿದನು] |

ತಾಮುಪಾಹ್ವ ಇತಿ ಹೋವಾಚ ಯಾ ಪ್ರಾಣೇನ ದೇವಾನ್ದಾಧಾರ ವ್ಯಾನೇನ ಮನುಷ್ಯಾನಪಾನೇನ ಪಿತೄನಿತಿ ಛಿನತ್ತಿ ಸಾ ನ ಛಿನತ್ತೀ3 ಇತಿ ಛಿನತ್ತೀತಿ ಹೋವಾಚ

---

ತಾಮ್ । ಉಪೇತಿ । ಅಹ್ವೇ । ಇತಿ । ಹ । ಉವಾಚ। ಯಾ । ಪ್ರಾಣೇನೇತಿ ಪ್ರ-ಅನೇನ। ದೇವಾನ್ । ದಾಧಾರ । ವ್ಯಾನೇನೇತಿ ವಿ-ಅನೇನ । ಮನುಷ್ಯಾನ್ । ಅಪಾನೇನೇತ್ಯಪ-ಅನೇನ । ಪಿತೄನ್ । ಇತಿ । ಛಿನತ್ತಿ । ಸಾ । ನ । ಛಿನತ್ತೀ3 । ಇತಿ । ಛಿನತ್ತಿ। ಇತಿ । ಹ । ಉವಾಚ ।

---

**ತುಮಿಂಜಮುನಿಯ ಉತ್ತರ**

| | |
|---|---|
| ಯಾ ಪ್ರಾಣೇನ ದೇವಾನ್ ದಾಧಾರ | ಯಾವ ಇಡಾದೇವಿಯು ಪ್ರಾಣವೃತ್ತಿಯಿಂದ ದೇವತೆಗಳನ್ನು ಧರಿಸಿರುತ್ತಾಳೆಯೋ, |
| ವ್ಯಾನೇನ ಮನುಷ್ಯಾನ್ ಅಪಾನೇನ ಪಿತೄನ್ [ದಾಧಾರ] | ವ್ಯಾನವಾಯುವಿನ ವೃತ್ತಿಯಿಂದ ಮನುಷ್ಯರನ್ನೂ, ಅಪಾನವಾಯುವೃತ್ತಿಯಿಂದ ಪಿತೃದೇವತೆಗಳನ್ನೂ ಧರಿಸಿರುತ್ತಾಳೆಯೋ, |
| ತಾಮ್ ಉಪಾಹ್ವೇ ಇತಿ ಹ ಉವಾಚ | ಆ ಇಡಾದೇವಿಯನ್ನು ಆಹ್ವಾನಿಸಿದೆನು ಎಂದು ತುಮಿಂಜನು ಉತ್ತರಿಸಿದನು. |

**ಮತ್ತೆ ಸಂಶ್ರವಸನ ಪ್ರಶ್ನೆ**

| | |
|---|---|
| ಛಿನತ್ತಿ ಸಾ ನ ಛಿನತ್ತೀ3 ಇತಿ * | ಆ ಇಡಾದೇವಿಯು [ಪ್ರತಿಗ್ರಹದೋಷದಿಂದ ಪ್ರತಿಗ್ರಹ ಮಾಡಿದವನನ್ನು] ನಾಶಪಡಿಸುತ್ತದೆಯೋ ಅಥವಾ ನಾಶಪಡಿಸುವುದಿಲ್ಲವೋ ಎಂದು [ಸಂಶ್ರವನು ಮತ್ತೆ ಪ್ರಶ್ನಿಸಿದನು] |

**ತುಮಿಂಜನ ಉತ್ತರ**

| | |
|---|---|
| ಛಿನತ್ತಿ ಇತಿ ಹ ಉವಾಚ | ಪ್ರತಿಗ್ರಹದೋಷದಿಂದ ನಾಶಪಡಿಸುತ್ತದೆಯೆಂದು [ತುಮಿಂಜನು] ಉತ್ತರಿಸಿದನು. |

---

* **ವಿಚಾರಾರ್ಥವಾದ ಪ್ಲುತ/**ಪ್ರಶ್ನಾಂತ

ಶರೀರಂ ವಾ ಅಸ್ಯೈ ತದುಪಾಹ್ವಥಾ ಇತಿ ಹೋವಾಚ

ಗೌರ್ವಾ [ಗೌರ್ವೈ (೧) ಅಸ್ಯೈ] ಅಸ್ಯೈ ಶರೀರಂ ಗಾಂ

ವಾವ ತೌ ತತ್ಪರ್ಯವದತಾಂ ಯಾ ಯಜ್ಞೇ ದೀಯತೇ

---

ಶರೀರಮ್ । ವೈ । ಅಸ್ಯೈ । ತತ್ । ಉಪೇತಿ । ಅಹ್ವಥಾಃ । ಇತಿ । ಹ । ಉವಾಚ।

ಗೌಃ । ವೈ (೧) ಅಸ್ಯೈ । ಶರೀರಮ್ । ಗಾಮ್ । ವಾವ । ತೌ । ತತ್ । ಪರೀತಿ।

ಅವದತಾಮ್ । ಯಾ । ಯಜ್ಞೇ । ದೀಯತೇ ।

---

### ಸಂಶ್ರವಸನ ಆಕ್ಷೇಪ

| | |
|---|---|
| ಅಸ್ಯೈ ಶರೀರಮ್ ವೈ ತತ್ | ಈ ಇಡೆಯ ಶರೀರವನ್ನು ತಾನೇ ಆಗ/ಶರೀರವು ಯಾವುದಿದೆಯೋ ಅದನ್ನು ತಾನೇ |
| ಉಪಾಹ್ವಥಾಃ ಇತಿ ಹ ಉವಾಚ | ಆಹ್ವಾನಿಸಿದೆ [ಇದು ಮುಖ್ಯವಾದ ಇಡಾದೇವತೆಯಲ್ಲ] ಎಂದು ಸಂಶ್ರವನು ಆಕ್ಷೇಪಿಸಿದನು. |

### ಶ್ರುತಿಯ ವಿವರಣೆ

| | |
|---|---|
| ಗೌಃ ವೈ ಅಸ್ಯೈ ಶರೀರಮ್ | ಗೋವೇ ಈ ಇಡೆಯ ಶರೀರವಾಗಿದೆ. |
| ತೌ ಗಾಮ್ ವಾವ ತತ್ ಪರ್ಯವದತಾಮ್ | ಆ ಮುನಿಗಳಿಬ್ಬರು ಗೋವನ್ನೇ ಆಗ ನಿಂದಿಸಿದರು. [ಪ್ರತಿಗ್ರಹದೋಷದಿಂದ ನಾಶಕ್ಕೆ ಕಾರಣವಾಗುತ್ತದೆಯೆಂದು ನಿಂದೆ] |

### ವೇದಪುರುಷನ ವಿವರಣೆ

| | |
|---|---|
| ಯಾ ಯಜ್ಞೇ ದೀಯತೇ | ಯಾವ ಗೋವು ಯಜ್ಞದಲ್ಲಿ ದಕ್ಷಿಣಾ ರೂಪದಿಂದ ಕೊಡಲ್ಪಡುತ್ತದೆಯೋ, |

ಸಾ ಪ್ರಾಣೇನ ದೇವಾನ್ದಾಧಾರ ಯಯಾ ಮನುಷ್ಯಾ ಜೀವಂತಿ

ಸಾ ವ್ಯಾನೇನ ಮನುಷ್ಯಾನ್ ಯಾಂ ಪಿತೃಭ್ಯೋ ಘ್ನಂತಿ

ಸಾಽಪಾನೇನ ಪಿತ್ರೄನ್, ಯ ಏವಂ ವೇದ ಪಶುಮಾನ್ಭವತ್ಯ-

---

ಸಾ । ಪ್ರಾಣೇನೇತಿ ಪ್ರ-ಅನೇನ । ದೇವಾನ್ । ದಾಧಾರ । ಯಯಾ । ಮನುಷ್ಯಾಃ। ಜೀವಂತಿ । ಸಾ । ವ್ಯಾನೇನೇತಿ ವಿ-ಅನೇನ । ಮನುಷ್ಯಾನ್ । ಯಾಮ್ । ಪಿತೃಭ್ಯ ಇತಿ ಪಿತೃ-ಭ್ಯಃ । ಘ್ನಂತಿ । ಸಾ । ಅಪಾನೇನೇತ್ಯಪ-ಅನೇನ । ಪಿತ್ರೄನ್ । ಯಃ। ಏವಮ್ । ವೇದ । ಪಶುಮಾನಿತಿ ಪಶು-ಮಾನ್ । ಭವತಿ ।

---

| | |
|---|---|
| ಸಾ ಪ್ರಾಣೇನ ದೇವಾನ್ ದಾಧಾರ | ಆ ಧೇನುವು ಪ್ರಾಣವೃತ್ತಿಯಿಂದ ದೇವತೆಗಳನ್ನು ತೃಪ್ತಿಪಡಿಸಿ, ಧರಿಸುತ್ತದೆ. |
| ಯಯಾ ಮನುಷ್ಯಾಃ ಜೀವಂತಿ | ಯಾವ ಹಸುವಿನಿಂದ [ಹಾಲು, ಮೊಸರು ಇತ್ಯಾದಿಗಳನ್ನು ಪಡೆದು] ಮನುಷ್ಯರು ಜೀವಿಸುತ್ತಾರೆಯೋ |
| ಸಾ ವ್ಯಾನೇನ ಮನುಷ್ಯಾನ್ | ಆ ಧೇನುವು ವ್ಯಾನ [ಮಧ್ಯಮ] ವೃತ್ತಿಯಿಂದ ಮನುಷ್ಯರನ್ನು ಧರಿಸುತ್ತದೆ. |
| ಯಾಮ್ ಪಿತೃಭ್ಯಃ ಘ್ನಂತಿ | ಯಾವ ಹಸುವನ್ನು ಅಷ್ಟಕಾಶ್ರಾದ್ಧಾದಿಗಳಲ್ಲಿ ಪಿತೃಗಳಿಗಾಗಿ ವಧಿಸುತ್ತಾರೆಯೋ, |
| ಸಾ ಅಪಾನೇನ ಪಿತ್ರೄನ್ | ಆ ಹಸುವು ಅಪಾನ (ಅಧಮ) ವೃತ್ತಿಯಿಂದ ಪಿತೃದೇವತೆಗಳನ್ನು ಧರಿಸುತ್ತದೆ. |
| ಯಃ ಏವಮ್ ವೇದ ಪಶುಮಾನ್ ಭವತಿ | ಯಾವ ಯಜಮಾನನು ಹೀಗೆ ತಿಳಿದಿರುತ್ತಾನೆಯೋ ಅವನು ಪಶುಮಂತನಾಗುತ್ತಾನೆಂದು [ಶ್ರುತಿಯು ಹೇಳುತ್ತದೆ] |

ಥ ವೈ ತಾಮುಪಾಹ್ವ ಇತಿ ಹೋವಾಚ ಯಾ ಪ್ರಜಾಃ
ಪ್ರಭವಂತೀಃ ಪ್ರತ್ಯಾಭವತೀತ್ಯನ್ನಂ ವಾ ಅಸ್ಯೈ ತದುಪಾಹ್ವಥಾ
[ಅಸ್ಯೈ ತತ್ (೨) ಉಪಾಹ್ವಥಾ] ಇತಿ ಹೋವಾಚೌಷಧಯೋ
ವಾ ಅಸ್ಯಾ ಅನ್ನಮೋಷಧಯೋ ವೈ ಪ್ರಜಾಃ ಪ್ರಭವಂತೀಃ

---

ಅಥ । ವೈ । ತಾಮ್ । ಉಪೇತಿ । ಅಹ್ವೇ । ಇತಿ । ಹ । ಉವಾಚ । ಯಾ। ಪ್ರಜಾ ಇತಿ ಪ್ರ-ಜಾಃ । ಪ್ರಭವಂತೀರಿತಿ ಪ್ರ-ಭವಂತೀಃ । ಪ್ರತೀತಿ । ಆ ಭವತೀತ್ಯಾ-ಭವತಿ ಇತಿ । ಅನ್ನಮ್। ವೈ । ಅಸ್ಯೈ । ತತ್ [೨] ಉಪೇತಿ । ಅಹ್ವಥಾಃ । ಇತಿ । ಹ। ಉವಾಚ । ಓಷಧಯಃ । ವೈ । ಅಸ್ಯಾಃ । ಅನ್ನಮ್ । ಓಷಧಯಃ । ವೈ । ಪ್ರಜಾ ಇತಿ ಪ್ರ-ಜಾಃ । ಪ್ರಭವಂತೀರಿತಿ ಪ್ರ-ಭವಂತೀಃ ।

---

### ತುಮಿಂಜನು ಆಹ್ವಾನಿಸಿದ ಗುಣಾಂತರಯುಕ್ತವಾದ ಇಡಾದೇವತೆ

| | |
|---|---|
| ಅಥ ವೈ ಯಾ ಪ್ರಜಾಃ ಪ್ರಭವಂತೀಃ ಪ್ರತಿ ಆಭವತೀತಿ ತಾಮ್ ಉಪಾಹ್ವೇ ಇತಿ ಹ ಉವಾಚ | ಅಥವಾ 'ಯಾವ ಇಡೆಯು ಪ್ರಭುಗಳಾದ ಪ್ರಜೆಗಳನ್ನು ಪ್ರತ್ಯಕ್ಷವಾಗಿ ಆಶ್ರಯಿಸಿರುತ್ತದೆಯೋ ಅಂತಹ ಇಡಾದೇವಿ ಯನ್ನು ಆಹ್ವಾನಿಸಿದೆನು' ಎಂದು[ತುಮಿಂಜನು ಇಡೆಯ ಪ್ರಾಮುಖ್ಯಕ್ಕಾಗಿ] ಹೇಳಿದನು. |

### ಸಂಶ್ರವಸನ ಆಕ್ಷೇಪ

| | |
|---|---|
| ತತ್ ಅಸ್ಯೈ ಅನ್ನಮ್ ವೈ ಉಪಾಹ್ವಥಾಃ ಇತಿ ಹ ಉವಾಚ | [ಸಗ್ಗ್‌ಶ್ರವಸನು] ಆಗ ಈ ಇಡೆಯ ಅನ್ನವ ನ್ನಷ್ಟೇ ನೀವು ಆಹ್ವಾನಿಸಿದೆ ಎಂದು ಹೇಳಿದನು. |

### ಶ್ರುತಿಯಿಂದ ಈ ವಿಷಯದ ವಿವರಣೆ

| | |
|---|---|
| ಓಷಧಯಃ ವೈ ಅಸ್ಯಾಃ ಅನ್ನಮ್ | ಸಸ್ಯಾದಿಗಳೇ ಈ ಗೋರೂಪಳಾದ ಇಡೆಯ ಅನ್ನವಾಗಿದೆ. |
| ಓಷಧಯಃ ವೈ ಪ್ರಭವಂತೀಃ ಪ್ರಜಾಃ | ವ್ರೀಹಿಯೇ ಮೊದಲಾದ ಓಷಧಿಗಳೇ ಸಮರ್ಥ ರಾದ ಯಜಮಾನರನ್ನು |

ಪ್ರತ್ಯಾಭವಂತಿ ಯ ಏವಂ ವೇದಾನ್ನಾದೋ ಭವತ್ಯಥ ವೈ

ತಾಮುಪಾಹ್ವ ಇತಿ ಹೋವಾಚ ಯಾ ಪ್ರಜಾಃ ಪರಾಭವಂತೀ

ರನುಗೃಹ್ಣಾತಿ ಪ್ರತ್ಯಾಭವಂತೀರ್ಗೃಹ್ಣಾತೀತಿ

---

ಪ್ರತಿ । ಏತಿ । ಭವಂತಿ । ಯಃ । ಏವಮ್ । ವೇದ । ಅನ್ನಾದ ಇತ್ಯನ್ನ-ಅದಃ। ಭವತಿ । ಅಥ । ವೈ । ತಾಮ್ । ಉಪೇತಿ। ಅಹ್ವೇ । ಇತಿ । ಹ । ಉವಾಚ। ಯಾ। ಪ್ರಜಾ ಇತಿ ಪ್ರ-ಜಾಃ । ಪರಾಭವಂತೀರಿತಿ ಪರಾ-ಭವಂತೀಃ । ಅನುಗೃಹ್ಣಾತೀತ್ಯನು-ಗೃಹ್ಣಾತಿ । ಪ್ರತೀತಿ । ಆಭವಂತೀರಿತ್ಯಾ-ಭವಂತೀಃ । ಗೃಹ್ಣಾತಿ । ಇತಿ ।

---

| | |
|---|---|
| ಪ್ರತಿ ಆ ಭವಂತಿ | ಆಶ್ರಯಿಸಿ ಅವರ ಮನೆಯಲ್ಲಿರುತ್ತವೆ [ಓಷಧಿಗಳಿಂದ ಯಜಮಾನರು ಅನ್ನದಾನ ಮಾಡಲು ಸಮರ್ಥರಾಗುತ್ತಾರೆ.] |
| ಯಃ ಏವಮ್ ವೇದ<br>ಅನ್ನಾದಃ ಭವತಿ | ಯಾವ ಯಜಮಾನನು ಹೀಗೆ ತಿಳಿದಿರುತ್ತಾನೆಯೋ ಅವನು ಅನ್ನಭೋಜನಶಕ್ತಿಯನ್ನು ಪಡೆದಿರುತ್ತಾನೆ. [ಎಂದು ವೇದಪುರುಷನು ಹೇಳುತ್ತಾನೆ] |

**ತುಮಿಂಜನು ಮಾಡುವ ಇಡೆಯ ಗುಣಾಂತರದ ಪ್ರಶಂಸೆ**

| | |
|---|---|
| ಅಥ ವೈ ಯಾ ಪರಾಭವಂತೀಃ<br>ಪ್ರಜಾಃ ಅನುಗೃಹ್ಣಾತಿ | ಅಥವಾ ಯಾವ ಇಡೆಯು ರೋಗಾದಿಗಳಿಂದ ಪೀಡಿಸಲ್ಪಡುತ್ತಿರುವ ಪ್ರಜೆಗಳನ್ನು ಔಷಧಾದಿಗಳಿಂದ ಸ್ವಸ್ಥರನ್ನಾಗಿ ಮಾಡುತ್ತದೆಯೋ |
| ಆ ಭವಂತೀಃ ಪ್ರತಿ<br>ಗೃಹ್ಣಾತಿ ಇತಿ | ತನ್ನನ್ನು ಆಶ್ರಯಿಸುವ ಪ್ರಜೆಗಳನ್ನು ತಕ್ಕ ಸ್ಥಾನಾದಿಗಳನ್ನಿತ್ತು ಸ್ಥಿರವಾಗಿರುವಂತೆ ಮಾಡುತ್ತದೆಯೋ |
| ತಾಮ್ ಉಪಾಹ್ವೇ<br>ಇತಿ ಹ ಉವಾಚ | ಅಂತಹ ಇಡೆಯನ್ನು ಆಹ್ವಾನಿಸಿದೆನು ಎಂದು [ತುಮಿಂಜನು] ಹೇಳಿದನು. |

ಪ್ರತಿಷ್ಠಾಂ ವಾ ಅಸ್ಯೈ ತದುಪಾಹ್ವಥಾ ಇತಿ ಹೋವಾಚೇಯಂ

ವಾ ಅಸ್ಯೈ [ಪ್ರತಿಷ್ಠಾ(ಇ)ಇಯಂ...] ಪ್ರತಿಷ್ಠೇಯಂ ವೈ

ಪ್ರಜಾಃ ಪರಾಭವಂತೀರನುಗೃಹ್ಣಾತಿ

ಪ್ರತ್ಯಾಭವಂತೀರ್ಗೃಹ್ಣಾತಿ ಯ ಏವಂ ವೇದ

---

ಪ್ರತಿಷ್ಠಾಮಿತಿ ಪ್ರತಿ-ಸ್ಥಾಮ್ । ವೈ । ಅಸ್ಯೈ । ತತ್ । ಉಪೇತಿ । ಅಹ್ವಥಾಃ। ಇತಿ। ಹ । ಉವಾಚ । ಇಯಮ್ । ವೈ । ಅಸ್ಯೈ । ಪ್ರತಿಷ್ಠೇತಿ ಪ್ರತಿ-ಸ್ಥಾ(ಇ)ಇಯಮ್। ವೈ । ಪ್ರಜಾ ಇತಿ ಪ್ರ-ಜಾಃ । ಪರಾಭವಂತೀರಿತಿ ಪರಾ-ಭವಂತೀಃ । ಅನ್ವಿತಿ । ಗೃಹ್ಣಾತಿ। ಪ್ರತೀತಿ । ಆಭವಂತೀರಿತ್ಯಾ-ಭವಂತೀಃ । ಗೃಹ್ಣಾತಿ । ಯಃ । ಏವಮ್ । ವೇದ।

---

### ಸಂಶ್ರವಸನ ಆಕ್ಷೇಪ

| | |
|---|---|
| ಅಸ್ಯೈ ಪ್ರತಿಷ್ಠಾಮ್ ವೈ ತತ್ ಉಪಾಹ್ವಥಾಃ ಇತಿ ಹ ಉವಾಚ | ಈ ಇಡೆಯ ಸ್ಥಿರಸ್ಥಾನವನ್ನೇ ಆಗ ನೀನು ಆಹ್ವಾನಿಸಿದ್ದೀಯೆ ಎಂದು [ಸಂಶ್ರವಸನು] ಹೇಳಿದನು. |

### ವೇದಪುರುಷನ ವಿವರಣೆ

| | |
|---|---|
| ಇಯಮ್ ವೈ ಅಸ್ಯೈ ಪ್ರತಿಷ್ಠಾ | ಭೂಮಿಯೇ ಈ ಗೋರೂಪಳಾದ ಇಡೆಗೆ ಸ್ಥಿರವಾಗಿ ನಿಲ್ಲುವ ನೆಲೆ. |
| ಇಯಮ್ ವೈ ಪರಾಭವಂತೀಃ ಅನುಗೃಹ್ಣಾತಿ ಆ ಭವಂತೀಃ ಪ್ರತಿಗೃಹ್ಣಾತಿ | ಈ ಭೂಮಿಯೇ ರೋಗಾದಿಗಳಿಂದ ತೊಂದರೆಗೊಳಗಾದ ಜನಗಳನ್ನು ಔಷಧಾದಿಗಳಿಂದ ಸ್ವಸ್ಥರಾಗಲು ಅನುಗ್ರಹಿಸುತ್ತದೆ. ತನ್ನನ್ನು ಆಶ್ರಯಿಸಿದ ಪ್ರಜೆಗಳನ್ನು ಸರಿಯಾದ ಸ್ಥಾನವನ್ನು ಹೊಂದಿ ಪ್ರತಿಷ್ಠಿತರಾಗುವಂತೆ ಮಾಡುತ್ತದೆ. |
| ಯಃ ಏವಮ್ ವೇದ | ಯಾವ ಯಜಮಾನನು ಹೀಗೆ ತಿಳಿದಿರುತ್ತಾನೆಯೋ, |

ಪ್ರತ್ಯೇವ ತಿಷ್ಠತ್ಯಥ ವೈ ತಾಮುಪಾಹ್ವ ಇತಿ ಹೋವಾಚ

ಯಸ್ಯೈ ನಿಕ್ರಮಣೇ ಘೃತಂ ಪ್ರಜಾಸ್ಸಂಜೀವಂತೀಃ ಪಿಬಂತೀತಿ

ಛಿನತ್ತಿ ಸಾ ನ ಛಿನತ್ತೀ3 ಇತಿ ನ ಛಿನತ್ತೀತಿ ಹೋವಾಚ

---

ಪ್ರತೀತಿ । ಏವ । ತಿಷ್ಠತಿ । ಅಥ । ವೈ । ತಾಮ್ । ಉಪೇತಿ । ಅಹ್ವೇ । ಇತಿ। ಹ । ಉವಾಚ । ಯಸ್ಯೈ । ನಿಕ್ರಮಣ ಇತಿ ನಿ-ಕ್ರಮಣೇ । ಘೃತಮ್ । ಪ್ರಜಾ ಇತಿ ಪ್ರ-ಜಾಃ । ಸಂಜೀವಂತೀರಿತಿ ಸಮ್-ಜೀವಂತೀಃ । ಪಿಬಂತಿ । ಇತಿ । ಛಿನತ್ತಿ। ಸಾ। ನ । ಛಿನತ್ತೀ3 । ಇತಿ । ನ । ಛಿನತ್ತಿ । ಇತಿ । ಹ । ಉವಾಚ ।

---

[ಸಃ] ಪ್ರತಿ ಏವ ತಿಷ್ಠತಿ — [ಅವನು] ಸರಿಯಾದ ಸ್ಥಾನದಲ್ಲಿ ನಿಲ್ಲುತ್ತಾನೆ.

**ತುಮಿಂಜಮುನಿಯಿಂದ ಮುಖ್ಯಳಾದ ಇಡೆಯ ವರ್ಣನೆ**

ಅಥ ವೈ ಯಸ್ಯೈ ನಿಕ್ರಮಣೇ ಘೃತಮ್ ಸಂಜೀವಂತೀಃ ಪ್ರಜಾಃ ಪಿಬಂತಿ ತಾಮ್ ಉಪಾಹ್ವೇ ಇತಿ ಹ ಉವಾಚ — ಅಥವಾ ಯಾವ ವೃಷ್ಟಿರೂಪಳಾದ ಇಡೆಯ (ಭೂಮಿಯಲ್ಲಿ) ಕೆಳಮುಖವಾಗಿ ಸುರಿಯುತ್ತಿರುವ ನೀರನ್ನು ಜೀವನವನ್ನು ಅಪೇಕ್ಷಿಸುವ ಜನಗಳು ಕುಡಿಯುತ್ತಾರೆಯೋ ಅಂತಹ ಇಡಾದೇವತೆಯನ್ನು ಆಹ್ವಾನಿಸಿದೆನೆಂದು [ತುಮಿಂಜನು] ಹೇಳಿದನು.

**ಸಂಶ್ರವಸನ ಪ್ರಶ್ನೆ**

ಸಾ ಛಿನತ್ತಿ ನ ಛಿನತ್ತೀ3 [ಇತಿ ಹ ಉವಾಚ] — [ವೃಷ್ಟಿರೂಪಳಾದ] ಆ ಇಡೆಯು ತನ್ನನ್ನು ಸ್ವೀಕರಿಸಿದವರನ್ನು ಹಿಂಸಿಸುತ್ತಾಳೆಯೋ ಅಥವಾ ಹಿಂಸಿಸುವುದಿಲ್ಲವೋ ಎಂದು [ಸಂಶ್ರವಸನು ಕೇಳಿದನು]

**ತುಮಿಂಜನ ಉತ್ತರ**

ನ ಛಿನತ್ತಿ ಇತಿ ಹ ಉವಾಚ — [ಈ ವೃಷ್ಟಿರೂಪಳಾದ ಇಡೆಯು] ತನ್ನನ್ನು ಸ್ವೀಕರಿಸುವ ಪ್ರಜೆಗಳಿಗೆ ದೋಷವನ್ನುಂಟು ಮಾಡುವುದಿಲ್ಲವೆಂದು [ತುಮಿಂಜನು] ಉತ್ತರಿಸಿದನು

ಪ್ರ ತು ಜನಯತೀತ್ಯೇಷ ವಾ ಇಡಾಮುಪಾಹ್ವಥಾ ಇತಿ

ಹೋವಾಚ ವೃಷ್ಟಿರ್ವಾ ಇಡಾ ವೃಷ್ಟ್ಯೈ ವೈ ನಿಕ್ರಮಣೇ

ಘೃತಂ ಪ್ರಜಾಸ್ಸಂಜೀವಂತೀಃ ಪಿಬಂತಿ ಯ ಏವಂ ವೇದ

---

ಪ್ರೇತಿ। ತು । ಜನಯತಿ । ಇತಿ । ಏಷಃ । ವೈ । ಇಡಾಮ್ । ಉಪೇತಿ । ಅಹ್ವಥಾಃ। ಇತಿ । ಹ । ಉವಾಚ । ವೃಷ್ಟಿಃ । ವೈ । ಇಡಾ । ವೃಷ್ಟ್ಯೈ । ವೈ । ನಿಕ್ರಮಣ ಇತಿ ನಿ-ಕ್ರಮಣೇ । ಘೃತಮ್ । ಪ್ರಜಾ ಇತಿ ಪ್ರ-ಜಾಃ । ಸಂಜೀವಂತೀರಿತಿ ಸಮ್-ಜೀವಂತೀಃ । ಪಿಬಂತಿ । ಯಃ । ಏವಮ್ । ವೇದ ।

---



| | |
|---|---|
| ತು ಪ್ರ ಜನಯತಿ ಇತಿ | ಆದರೆ ಸಸ್ಯಾದಿಗಳನ್ನು ಚೆನ್ನಾಗಿ ಬೆಳೆಯುವಂತೆ ಮಾಡುತ್ತದೆಯೆಂದು ವಿವರಿಸಿದನು. |

**ಸಂಶ್ರವಸನ ಸಮ್ಮತಿ**

| | |
|---|---|
| ಏಷಃ ವೈ [ತ್ವಮ್] ಇಡಾಮ್ ಉಪಾಹ್ವಥಾಃ ಇತಿ ಹ ಉವಾಚ | ಹೀಗೆ ಹೇಳುವ [ನೀನು] ಮುಖ್ಯವಾದ ಇಡೆಯನ್ನು ಆಹ್ವಾನಿಸಿದ್ದೀಯೆ ಎಂದು ಸಂಶ್ರವಸನು ಹೇಳಿದನು. |

**ಶ್ರುತಿಯ ವಿವರಣೆ**

| | |
|---|---|
| ವೃಷ್ಟಿಃ ವೈ ಇಡಾ | ಮಳೆಯೇ ಇಡಾದೇವತೆಯಾಗಿದೆಯಷ್ಟೆ. |
| ವೃಷ್ಟ್ಯೈ ವೈ ನಿಕ್ರಮಣೇ | ಮಳೆಯು ನೆಲದ ಮೇಲೆ ಬೀಳುವುದರಿಂದಲೇ |
| ಘೃತಮ್ ಸಂಜೀವಂತೀಃ ಪ್ರಜಾಃ ಪಿಬಂತಿ | ನೆಲದ ಮೇಲೆ ಹರಡಿಕೊಂಡಿರುವ ನೀರನ್ನು ಜೀವನವನ್ನು ಅಪೇಕ್ಷಿಸುವ ಜನರು ಕುಡಿಯುತ್ತಾರೆ. |
| ಯಃ ಏವಮ್ ವೇದ | ಯಾವ ಯಜಮಾನನು/ಹೋತೃವು ಹೀಗೆ ತಿಳಿದಿರುತ್ತಾನೆಯೋ |

ಪ್ರೈವ ಜಾಯತೇಽನ್ನಾದೋ ಭವತಿ ॥ ೨-10 ॥

[ಗೌರ್ವಾ ಅಸ್ಯೈ ತತ್ಪ್ರತಿಷ್ಠಾ ಹ್ವಥಾ ಇತಿ ವಿಗ್ಂಶತಿಶ್ಚ॥]

ಪ್ರೇತಿ । ಏವ । ಜಾಯತೇ । ಅನ್ನಾದ ಇತ್ಯನ್ನ-ಅದಃ । ಭವತಿ ॥ ೨ ॥

| | |
|---|---|
| [ಸಃ] ಪ್ರ ಏವ ಜಾಯತೇ | [ಅವನು] ಪುತ್ರಾದಿಪ್ರಜಾಸಂಪತ್ತಿಯನ್ನು ಹೊಂದುತ್ತಾನೆ. |
| ಅನ್ನಾದಃ ಭವತಿ | ಮತ್ತು ಅನ್ನಭೋಜನ ಸಾಮರ್ಥ್ಯವನ್ನು/ಅನ್ನಸಮೃದ್ಧಿಯನ್ನು ಹೊಂದುತ್ತಾನೆ. |

**ಹೀಗೆ ಲೋಕಕ್ಕೆ ಉಪಕಾರ ಮಾಡುವ ಗೋವು, ಅನ್ನ, ಭೂಮಿ ಮತ್ತು ವೃಷ್ಟಿಗಳ ರೂಪದಿಂದ ಇಡೆಯನ್ನು ಪ್ರಶಂಸಿಸಲಾಗಿದೆ.**

## ಅನುವಾಕದ ತಾತ್ಪರ್ಯಸಂಗ್ರಹ

ಈ ಅನುವಾಕದಲ್ಲಿ ಇಡೆಯ ಪ್ರಶಂಸೆಯನ್ನು ಮುನಿಗಳ ಸಂವಾದರೂಪದಿಂದ ಮಾಡಲಾಗಿದೆ.

ಯಜ್ಞದಲ್ಲಿ ಧ್ಯಾನಪೂರ್ವಕವಾಗಿ ದೇವತಾಹ್ವಾನ ಮತ್ತು ದೇವತೆಗಳಿಗೆ ಹವಿಸ್ಸನ್ನು ಸಮರ್ಪಿಸುವ ಯಾಜ್ಯಾನುವಾಕ್ಯೆಗಳನ್ನು ಪಠಿಸುವುದು ಹೋತೃವಿನ ಕಾರ್ಯ. ಉಪೋದಿತನ ಮಗನಾದ ತುಮಿಂಜನು ಸತ್ರಯಾಗದಲ್ಲಿ ಹೋತೃವಾಗಿದ್ದವನು. ಅವನನ್ನು ಸೌವರ್ಚನಸನಾದ ಸಂಶ್ರವಸನು ಪ್ರಶ್ನಿಸುತ್ತಾನೆ. 'ತುಮಿಂಜನೇ! ಎಂತಹ ಇಡೆಯನ್ನು ಆಹ್ವಾನಿಸಿದೆ?' ತುಮಿಂಜನು ದೇವತೆಗಳನ್ನೂ ಮನುಷ್ಯರನ್ನೂ, ಪಿತೃಗಳನ್ನೂ ಧರಿಸುವ ಗೋರೂಪಳಾದ ಇಡಾದೇವಿಯನ್ನು ಆಹ್ವಾನಿಸಿದೆನೆಂದು ಉತ್ತರಿಸುತ್ತಾನೆ. 'ಗೋಪ್ರತಿಗ್ರಹದೋಷವು ಪ್ರತಿಗ್ರಹ ಮಾಡಿದವನನ್ನು ಹಿಂಸಿಸುವುದಿಲ್ಲವೇ?' ಎಂಬ ಸಂಶ್ರವಸನ ಪ್ರಶ್ನೆಗೆ ತುಮಿಂಜನು ನಾಶಪಡಿಸುತ್ತದೆಯೆಂದು ಉತ್ತರಿಸುತ್ತಾನೆ. ಧೇನುವು ಯಜ್ಞದಲ್ಲಿ ದಕ್ಷಿಣಾರೂಪವಾಗಿ ಪ್ರಾಣ(ಮುಖ್ಯ) ವೃತ್ತಿಯಿಂದ ದೇವತೆಗಳನ್ನು ಧರಿಸುತ್ತದೆ. ಕ್ಷೀರಾದಿಗಳನ್ನು ಕೊಟ್ಟು ವ್ಯಾನ(ಮಧ್ಯಮ) ವೃತ್ತಿಯಿಂದ ಮನುಷ್ಯರನ್ನೂ, ಅಷ್ಟಕಾಶ್ರಾದ್ಧಾದಿಗಳಲ್ಲಿ ಪಿತೃದೇವತೆಗಳಿಗೆ ಕೊಡಲ್ಪಟ್ಟು ಅಪಾನ(ಅಧಮ)ವೃತ್ತಿಯಿಂದ ಪಿತೃಗಳನ್ನೂ ಧರಿಸುತ್ತದೆ.

ಇಡೆಯ ಶರೀರರೂಪವಾದ ಈ ಧೇನುವು ಮುಖ್ಯವಾದ ಇಡೆಯಲ್ಲವೆಂದು ಸಂಶ್ರವಸನು ಆಕ್ಷೇಪಿಸುತ್ತಾನೆ. ಇಡೆಯನ್ನು ಗೋವೆಂದು ಭಾವಿಸಿ ಆ ಮುನಿಗಳಿಬ್ಬರೂ ಆಕ್ಷೇಪಿಸಿದರು.

ಅನಂತರ ತುಮಿಂಜನು ಪ್ರಜೆಗಳನ್ನು ಪೋಷಿಸಲು ಸಮರ್ಥವಾಗಿರುವ ಅನ್ನರೂಪಳಾದ ಇಡೆಯನ್ನು ಆಹ್ವಾನಿಸಿದೆನೆಂದು ಇಡೆಯ ಮತ್ತೊಂದು ಗುಣವನ್ನು ಹೇಳುತ್ತಾನೆ.

ಸಸ್ಯಾದಿಗಳೇ ಇಡಾದೇವತೆಯ ಅನ್ನವಾಗಿದೆ. ಇದೂ ಮುಖ್ಯವಾದ ಇಡೆಯಲ್ಲ.

ಪುನಃ ತುಮಿಂಜನು ಪ್ರಜೆಗಳು ವ್ಯಾಧಿಪೀಡಿತರಾದಾಗ ಆಶ್ರಯ ಕೊಡುವ ಭೂರೂಪಳಾದ ಇಡೆಯನ್ನು ಆಹ್ವಾನಿಸಿದೆನೆಂದು ಇಡೆಯ ಮತ್ತೊಂದು ಗುಣವನ್ನು ಹೇಳುತ್ತಾನೆ.

ಇದೂ ಮುಖ್ಯವಾದ ಇಡೆಯಲ್ಲವೆಂದು ಸಂಶ್ರವಸನ ಆಕ್ಷೇಪ.

ಬಳಿಕ ತುಮಿಂಜನು ವೃಷ್ಟಿರೂಪಳಾದ ಇಡೆಯನ್ನು ಆಹ್ವಾನಿಸಿದೆನೆಂದು ಇಡೆಯ ಮತ್ತೊಂದು ಗುಣವನ್ನು ಹೇಳುತ್ತಾನೆ. ಇದರಲ್ಲಿ ಪ್ರತಿಗ್ರಹದೋಷವಿಲ್ಲವೆಂದೂ ತಿಳಿಸುತ್ತಾನೆ. ಈ ವೃಷ್ಟಿಯು ಜನಗಳಿಗೆ ಜೀವನಾಧಾರವಾದ ನೀರನ್ನು ನೀಡುತ್ತದೆ ಯೆಂದು ಶ್ರುತಿಯೂ ವಿವರಿಸುತ್ತದೆ. ಇದು ಪ್ರಜಾವೃದ್ಧಿಗೂ ಕಾರಣವಾಗಿದೆ.

ಹೀಗೆ ಇಡೆಯು ಲೋಕಕ್ಕೆ ಉಪಕಾರ ಮಾಡುವ ಧೇನು, ಅನ್ನ, ಭೂಮಿ ಮತ್ತು ವೃಷ್ಟಿಗಳ ರೂಪವಾಗಿದೆಯೆಂದೂ, ಹೀಗೆ ತಿಳಿದು ಯಾಗ ಮಾಡುವವನು ಪಶುಮಂತ ನಾಗಿಯೂ, ಅನ್ನಸಮೃದ್ಧಿಯುಳ್ಳವನಾಗಿಯೂ, ಭೂಮಿಯಲ್ಲಿ ಹಿರಿಮೆಯನ್ನು ಹೊಂದಿ ಉತ್ತಮಸ್ಥಿತಿಯುಳ್ಳವನಾಗಿಯೂ, ಪುತ್ರಾದಿಪ್ರಜಾವಂತನಾಗಿಯೂ, ಅನ್ನಭೋಜನ ಸಮರ್ಥನಾಗಿಯೂ ಆಗುತ್ತಾನೆಂದು ಫಲವನ್ನೂ ಹೇಳಲಾಗಿದೆ. ಇದು ಇಡೆಯ ಪ್ರಶಂಸೆ.

---

## || ತೃತೀಯೋಽನುವಾಕಃ ||

ಪರೋಕ್ಷಂ ವಾ ಅನ್ಯೇ ದೇವಾ ಇಜ್ಯಂತೇ ಪ್ರತ್ಯಕ್ಷಮನ್ಯೇ ಯದ್ಯಜತೇ ಯ ಏವ ದೇವಾಃ ಪರೋಕ್ಷಮಿಜ್ಯಂತೇ ತಾನೇವ ತದ್ಯಜತಿ

---

**ಪರೋಕ್ಷಮಿತಿ ಪರಃ-ಅಕ್ಷಮ್ । ವೈ । ಅನ್ಯೇ । ದೇವಾಃ । ಇಜ್ಯಂತೇ । ಪ್ರತ್ಯಕ್ಷಮಿತಿ ಪ್ರತಿ-ಅಕ್ಷಮ್ । ಅನ್ಯೇ । ಯತ್ । ಯಜತೇ । ಯೇ । ಏವ । ದೇವಾಃ । ಪರೋಕ್ಷಮಿತಿ ಪರಃ-ಅಕ್ಷಮ್ । ಇಜ್ಯಂತೇ । ತಾನ್ । ಏವ । ತತ್ । ಯಜತಿ ।**

---

ಈ ಮೂರನೆಯ ಅನುವಾಕದಲ್ಲಿ ಅನ್ವಾಹಾರ್ಯವಿಧಾನ, ಅದರ ಪ್ರಶಂಸೆಗಳು ಹೇಳಲ್ಪಟ್ಟಿವೆ. ಅನ್ವಾಹಾರ್ಯವೆಂದರೆ ಋತ್ವಿಜರಿಗೆ ಕೊಡುವ ಅನ್ನ. ಇದನ್ನು ಹಾಲಿನಲ್ಲಿ ಬೇಯಿಸಿರಬೇಕೆಂದು ಪಕ್ಷಾಂತರವುಂಟು.

---

### ಅನ್ವಾಹಾರ್ಯದ ಪ್ರಶಂಸೆ/ವಿಧಿ

| | |
|---|---|
| ಅನ್ಯೇ ದೇವಾಃ ಪರೋಕ್ಷಮ್ ಇಜ್ಯಂತೇ ವೈ | ಬೇರೆ ಅಗ್ನಿ, ಇಂದ್ರಾದಿದೇವತೆಗಳು ಕಣ್ಣಿಗೆ ಕಾಣದಿರುವಂತೆ [ಕಾಣದೆಯೇ] ಆಹುತಿಗಳಿಂದ ಆರಾಧಿಸಲ್ಪಡುತ್ತಾರೆ. |
| ಅನ್ಯೇ ಪ್ರತ್ಯಕ್ಷಮ್ | [ಋತ್ವಿಗ್ರೂಪರಾದ ದೇವತೆಗಳು] ಕಣ್ಣಿಗೆ ಕಾಣು ವಂತೆಯೇ ಪೂಜಿಸಲ್ಪಡುತ್ತಾರೆ. |
| ಯತ್ ಯಜತೇ | [ಅಗ್ನ್ಯಾದಿಗಳನ್ನುದ್ದೇಶಿಸಿ]ಯಾಗ ಮಾಡುತ್ತಾನೆ ಎಂಬುದು ಯಾವುದುಂಟೋ |
| ತತ್ ಯೇ ಏವ ದೇವಾಃ ಪರೋಕ್ಷಮ್ ಇಜ್ಯಂತೇ | ಆದರಿಂದ ಯಾವ ದೇವತೆಗಳೇ ಪರೋಕ್ಷವಾಗಿ [ಕಣ್ಣಿಗೆ ಕಾಣದಂತೆ] ಆರಾಧಿಸಲ್ಪಡುತ್ತಾರೆಯೋ, |
| ತಾನ್ ಏವ ಯಜತಿ | ಆ ದೇವತೆಗಳನ್ನು ಉದ್ದೇಶಿಸಿಯೇ ಹವಿಸ್ಸನ್ನು ಸಮರ್ಪಿಸುತ್ತಾನೆ. |

यदन्वाहार्यमाहरत्येते वै देवाः प्रत्यक्षं

ಯದನ್ವಾಹಾರ್ಯಮಾಹರತ್ಯೇತೇ ವೈ ದೇವಾಃ ಪ್ರತ್ಯಕ್ಷಂ
ಯದ್ಬ್ರಾಹ್ಮಣಾಸ್ತಾನೇವ ತೇನ ಪ್ರೀಣಾತ್ಯಥೋ
ದಕ್ಷಿಣೈವಾಸ್ಯೈಷಾಽಥೋ ಯಜ್ಞಸ್ಯೈವ ಛಿದ್ರಮಪಿ
ದಧಾತಿ ಯದ್ವೈ ಯಜ್ಞಸ್ಯ ಕ್ರೂರಂ

---

ಯತ್ । ಅನ್ವಾಹಾರ್ಯಮಿತ್ಯನು-ಆಹಾರ್ಯಮ್ । ಆಹರತೀತ್ಯಾ-ಹರತಿ । ಏತೇ । ವೈ । ದೇವಾಃ । ಪ್ರತ್ಯಕ್ಷಮಿತಿ ಪ್ರತಿ-ಅಕ್ಷಮ್ । ಯತ್ । ಬ್ರಾಹ್ಮಣಾಃ । ತಾನ್। ಏವ । ತೇನ । ಪ್ರೀಣಾತಿ । ಅಥೋ ಇತಿ । ದಕ್ಷಿಣಾ । ಏವ । ಅಸ್ಯ । ಏಷಾ । ಅಥೋ ಇತಿ । ಯಜ್ಞಸ್ಯ । ಏವ । ಛಿದ್ರಮ್ । ಅಪೀತಿ । ದಧಾತಿ । ಯತ್ । ವೈ । ಯಜ್ಞಸ್ಯ । ಕ್ರೂರಮ್ ।

---

| | |
|---|---|
| ಯತ್ ಅನ್ವಾಹಾರ್ಯಮ್ ಆಹರತಿ | ಅನ್ವಾಹಾರ್ಯರೂಪ ಅನ್ನವನ್ನು [ಋತ್ವಿಜರಿಗೆ] ಕೊಡುತ್ತಾನೆಂಬುದು ಯಾವುದುಂಟೋ |
| [ತತ್] ಏತೇ ವೈ ದೇವಾಃ ಪ್ರತ್ಯಕ್ಷಮ್ ಯತ್ ಬ್ರಾಹ್ಮಣಾಃ ತಾನ್ ಏವ ತೇನ ಪ್ರೀಣಾತಿ | [ಅದರಿಂದ] ಕಣ್ಣಿಗೆ ಕಾಣುವ ದೇವರಾದ ಯಾವ ಬ್ರಾಹ್ಮಣರುಂಟೋ ಆ ಪ್ರತ್ಯಕ್ಷದೇವರನ್ನೇ [ಅನ್ವಾಹಾರ್ಯದಿಂದ] ತೃಪ್ತಿಪಡಿಸುತ್ತಾನೆ*. |

### ಮುಂದುವರೆದ ಪ್ರಶಂಸೆ

| | |
|---|---|
| ಅಥೋ ದಕ್ಷಿಣಾ ಏವ ಅಸ್ಯ ಏಷಾ | ಮತ್ತು ಈ ಅನ್ವಾಹಾರ್ಯವು ಯಜಮಾನನ ಯಾಗದಕ್ಷಿಣೆಯೇ ಆಗಿದೆ. |

### ಇನ್ನೊಂದು ವಿಧವಾದ ಪ್ರಶಂಸೆ

| | |
|---|---|
| ಅಥೋ ಯಜ್ಞಸ್ಯ ಏವ ಛಿದ್ರಮ್ ಅಪಿದಧಾತಿ | ಮತ್ತು ಯಜ್ಞದ ಕೊರತೆಯನ್ನು ಹೋಗಲಾಡಿಸಿ ಯಜ್ಞವನ್ನು ಪೂರ್ಣಗೊಳಿಸುತ್ತದೆ. |

### ಅನ್ವಾಹಾರ್ಯಶಬ್ದದ ನಿರ್ವಚನ

| | |
|---|---|
| ಯತ್ ವೈ ಯಜ್ಞಸ್ಯ ಕ್ರೂರಮ್ | ಯಜ್ಞಸಂಬಂಧಿಯಾದ ಯಾವುದು ಮಾಡಬೇಕಾದುದಕ್ಕಿಂತ ಅಧಿಕವಾಗಿದೆಯೋ, |

---

* ಇಲ್ಲಿ 'ಅನ್ವಾಹಾರ್ಯಮಾಹರೇತ್' ಎಂದು ವಿಧಿ.

ಯದ್ವಿಲಿಷ್ಟಂ ತದನ್ವಾಹಾರ್ಯೇಣಾನ್ವಾಹರತಿ [...ಹಾರ್ಯೇಣ (೧) ಅನ್ವಾಹರತಿ] ತದನ್ವಾಹಾರ್ಯಸ್ಯಾನ್ವಾಹಾರ್ಯತ್ವಂ ದೇವದೂತಾ ವಾ ಏತೇ ಯದೃತ್ವಿಜೋ ಯದನ್ವಾಹಾ-ರ್ಯಮಾಹರತಿ ದೇವದೂತಾನೇವ ಪ್ರೀಣಾತಿ

---

ಯತ್ । ವಿಲಿಷ್ಟಮಿತಿ ವಿ-ಲಿಷ್ಟಮ್ । ತತ್ । ಅನ್ವಾಹಾರ್ಯೇಣೇತ್ಯನು-ಆಹಾರ್ಯೇಣ[೧] ಅನ್ವಾಹರತೀತ್ಯನು-ಆಹರತಿ । ತತ್ । ಅನ್ವಾಹಾರ್ಯಸ್ಯೇತ್ಯನು-ಆಹಾರ್ಯಸ್ಯ। ಅನ್ವಾಹಾ-ರ್ಯತ್ವಮಿತ್ಯನ್ವಾಹಾರ್ಯ-ತ್ವಮ್। ದೇವದೂತಾ ಇತಿ ದೇವ-ದೂತಾಃ । ವೈ । ಏತೇ। ಯತ್ । ಋತ್ವಿಜಃ । ಯತ್ । ಅನ್ವಾಹಾರ್ಯಮಿತ್ಯನು-ಆಹಾರ್ಯಮ್ । ಆಹರತೀತ್ಯಾ-ಹರತಿ । ದೇವದೂತಾನಿತಿ ದೇವ-ದೂತಾನ್ । ಏವ । ಪ್ರೀಣಾತಿ ।

---

| | |
|---|---|
| ಯತ್ ವಿಲಿಷ್ಟಮ್ ತತ್ ಅನ್ವಾಹಾರ್ಯೇಣ | ಯಾವುದು ಅಲ್ಪವಾಗಿದೆಯೋ ಅದೆಲ್ಲವನ್ನೂ ಈ ಅನ್ವಾಹಾರ್ಯ(ಓದನವಿಶೇಷ)ದಿಂದ |
| ಅನ್ವಾಹರತಿ | ಅನುಕ್ರಮದಿಂದ ಸರಿಪಡಿಸುತ್ತದೆ. ನ್ಯೂನಾತಿರಿಕ್ತ ದೋಷಗಳನ್ನು. ಸರಿಪಡಿಸುತ್ತದೆ. |
| ತತ್ ಅನ್ವಾಹಾರ್ಯಸ್ಯ ಅನ್ವಾಹಾರ್ಯತ್ವಮ್ | ಅದೇ 'ಅನ್ವಾಹಾರ್ಯ' ಶಬ್ದದ ಸಾರ್ಥಕ ನಿರ್ವಚನವಾಗಿದೆ.* |

**ಮತ್ತೊಂದು ರೀತಿಯಲ್ಲಿ ಅನ್ವಾಹಾರ್ಯದ ಪ್ರಶಂಸೆ**

| | |
|---|---|
| ಯತ್ ಋತ್ವಿಜಃ ಏತೇ ದೇವದೂತಾಃ ವೈ | ಯಜ್ಞದ ಋತ್ವಿಜರೆಂಬುವರು ಯಾರುಂಟೋ ಇವರು [ದೇವತೆಗಳಿಗೆ ಹವಿಸ್ಸನ್ನರ್ಪಿಸುವುದರಿಂದ] ದೇವತೆಗಳ ದೂತರಾಗಿದ್ದಾರೆ. |
| ಯತ್ ಅನ್ವಾಹಾರ್ಯಮ್ ಆಹರತಿ [ತೇನ ಯಜಮಾನಃ] ದೇವದೂತಾನ್ ಏವ ಪ್ರೀಣಾತಿ | ಋತ್ವಿಜರಿಗೆ ಅನ್ವಾಹಾರ್ಯವನ್ನು ಸಮರ್ಪಿಸುವುದು ಯಾವುದುಂಟೋ [ಅದರಿಂದ ಯಜಮಾನನು] ದೇವತೆಗಳ ದೂತರಾದ ಋತ್ವಿಜರನ್ನೇ ಸಂತೋಷಪಡಿಸುತ್ತಾನೆ. |

---

* ಅನ್ವಾಹಾರ್ಯತೇ =ಆನುಕೂಲ್ಯೇನ ಸಮಾಧೀಯತೇ ಅನೇನ ।

ಪ್ರಜಾಪತಿರ್ದೇವೇಭ್ಯೋ ಯಜ್ಞಾನ್ವ್ಯಾದಿಶತ್ಸ ರಿರಿಚಾನೋಽಮನ್ಯತ ಸ ಏತಮನ್ವಾಹಾರ್ಯಮಭಕ್ತಮಪಶ್ಯತ್ತ-ಮಾತ್ಮನ್ನಧತ್ತ ಸ ವಾ ಏಷ ಪ್ರಾಜಾಪತ್ಯೋ ಯದನ್ವಾಹಾರ್ಯೋ ಯಸ್ಯೈವಂ ವಿದುಷೋಽನ್ವಾಹಾರ್ಯ ಆಹ್ರಿಯತೇ

---

ಪ್ರಜಾಪತಿರಿತಿ ಪ್ರಜಾ-ಪತಿಃ । ದೇವೇಭ್ಯಃ। ಯಜ್ಞಾನ್। ವ್ಯಾದಿಶದಿತಿ ವಿ-ಆದಿಶತ್। ಸಃ । ರಿರಿಚಾನಃ । ಅಮನ್ಯತ । ಸಃ । ಏತಮ್ । ಅನ್ವಾಹಾರ್ಯಮಿತ್ಯನು-ಆಹಾರ್ಯಮ್। ಅಭಕ್ತಮ್ । ಅಪಶ್ಯತ್ । ತಮ್ । ಆತ್ಮನ್ನ್ । ಅಧತ್ತ । ಸಃ । ವೈ । ಏಷಃ । ಪ್ರಾಜಾಪತ್ಯ ಇತಿ ಪ್ರಾಜಾ-ಪತ್ಯಃ । ಯತ್ । ಅನ್ವಾಹಾರ್ಯ ಇತ್ಯನು-ಆಹಾರ್ಯಃ । ಯಸ್ಯ । ಏವಮ್ । ವಿದುಷಃ । ಅನ್ವಾಹಾರ್ಯ ಇತ್ಯನು-ಆಹಾರ್ಯಃ । ಆಹ್ರಿಯತ ಇತ್ಯಾ-ಹ್ರಿಯತೇ ।

---

**ಪ್ರಜಾಪತಿತೃಪ್ತಿಕರವೆಂದು ಪ್ರಶಂಸೆ**

| | |
|---|---|
| ಪ್ರಜಾಪತಿಃ ದೇವೇಭ್ಯಃ ಯಜ್ಞಾನ್ ವ್ಯಾದಿಶತ್ | ಪ್ರಜಾಪತಿಯು ದೇವತೆಗಳಿಗೆ [ಆಗ್ನೇಯಾದಿ] ಯಾಗಗಳನ್ನು ವಿಭಾಗಿಸಿ ಕೊಟ್ಟನು. |
| ಸಃ ರಿರಿಚಾನಃ ಅಮನ್ಯತ | [ಅನಂತರ]ತಾನು ಯಾಗಶೂನ್ಯನೆಂದು ತಿಳಿದನು. |
| ಸಃ ಏತಮ್ ಅನ್ವಾಹಾರ್ಯಮ್ ಅಭಕ್ತಮ್ ಅಪಶ್ಯತ್ | [ಅನಂತರ] ಆ ಪ್ರಜಾಪತಿಯು ದೇವತೆಗಳಿಗೆ ವಿಭಾಗಿಸಿ ಕೊಡದ ಈ ಅನ್ವಾಹಾರ್ಯವನ್ನು ನೋಡಿದನು. [ಅನ್ವಾಹಾರ್ಯವನ್ನು ದೇವತೆಗಳಿಗೆ ವಿಭಾಗಿಸಿ ಕೊಡದೇ ಇರುವುದನ್ನಾಗಿ ತಿಳಿದನು] |
| ತಮ್ ಆತ್ಮನ್ನ್ ಅಧತ್ತ ಯತ್ ಅನ್ವಾಹಾರ್ಯಃ ಸಃ ವೈ ಏಷಃ ಪ್ರಾಜಾಪತ್ಯಃ | ಅದನ್ನು ತನ್ನಲ್ಲಿಯೇ ಇಟ್ಟುಕೊಂಡನು. ಅನ್ವಾಹಾರ್ಯವೆಂಬುದು ಯಾವುದಿದೆಯೋ ಆ ಈ ಅನ್ವಾಹಾರ್ಯವು ಪ್ರಜಾಪತಿದೇವತಾಕವಾಗಿದೆ. |
| ಏವಂ ವಿದುಷಃ ಯಸ್ಯ ಅನ್ವಾಹಾರ್ಯಃ ಆಹ್ರಿಯತೇ | ಹೀಗೆ ತಿಳಿದಿರುವ ಯಾವ ಯಜಮಾನನ ಅನ್ವಾಹಾರ್ಯವುಋತ್ವಿಜರಿಗೆ ಕೊಡಲ್ಪಡುತ್ತದೆಯೋ, |

ಸಾಕ್ಷಾದೇವ ಪ್ರಜಾಪತಿಮೃಧ್ನೋತ್ಯಪರಿಮಿತೋ ನಿರುಪ್ಯೋಽಪರಿಮಿತಃ ಪ್ರಜಾಪತಿಃ ಪ್ರಜಾಪತೇ [..ಪತೇಃ (೨) ಆಪ್ತ್ಯೈ] ರಾಪ್ತ್ಯೈ ದೇವಾ ವೈ ಯದ್ಯಜ್ಞೇಽಕುರ್ವತ ತದಸುರಾ ಅಕುರ್ವತ

---

ಸಾಕ್ಷಾದಿತಿ ಸ-ಅಕ್ಷಾತ್ । ಏವ । ಪ್ರಜಾಪತಿಮಿತಿ ಪ್ರಜಾ-ಪತಿಮ್ । ಋಧ್ನೋತಿ । ಅಪರಿಮಿತ ಇತ್ಯಪರಿ-ಮಿತಃ । ನಿರುಪ್ಯ ಇತಿ ನಿಃ-ಉಪ್ಯಃ । ಅಪರಿಮಿತ ಇತ್ಯಪರಿ-ಮಿತಃ। ಪ್ರಜಾಪತಿರಿತಿ ಪ್ರಜಾ-ಪತಿಃ । ಪ್ರಜಾಪತೇರಿತಿ ಪ್ರಜಾ-ಪತೇಃ(೨) । ಆಪ್ತ್ಯೈ । ದೇವಾಃ। ವೈ । ಯತ್ । ಯಜ್ಞೇ । ಅಕುರ್ವತ । ತತ್ । ಅಸುರಾಃ । ಅಕುರ್ವತ ।

---

| | |
|---|---|
| [ಸಃ] ಸಾಕ್ಷಾತ್ ಏವ ಪ್ರಜಾಪತಿಮ್ ಋಧ್ನೋತಿ | [ಅವನು] ಪ್ರತ್ಯಕ್ಷವಾಗಿಯೇ ಪ್ರಜಾಪತಿ ದೇವತೆಯನ್ನು ತೃಪ್ತಿಪಡಿಸುತ್ತಾನೆ. |

**ಅನ್ವಾಹಾರ್ಯವು ಅಪರಿಮಿತವಾಗಿರಬೇಕೆಂಬ ವಿಧಿ/ಸ್ತುತಿ**

| | |
|---|---|
| ಅಪರಿಮಿತಃ ನಿರುಪ್ಯಃ | [ಅನ್ವಾಹಾರ್ಯವು] ಪರಿಮಿತಿಯಿಲ್ಲ ದಷ್ಟು ಹೆಚ್ಚಾಗಿ ಪಾಕ ಮಾಡಲ್ಪಡ ಬೇಕು. [ಪಾಕಕ್ಕಾಗಿ ನಿರ್ವಾಪ ಮಾಡಲ್ಪಡಬೇಕು.] |
| ಅಪರಿಮಿತಃ ಪ್ರಜಾಪತಿಃ | ಪ್ರಜಾಪತಿಯು ಸರ್ವದೇವತಾ ಸ್ವಾಮಿ ಯಾದುದರಿಂದ ಪರಿಮಿತಿಯಿಲ್ಲದವನು. |
| ಪ್ರಜಾಪತೇಃ ಆಪ್ತ್ಯೈ | [ಇದು] ಪ್ರಜಾಪತಿಯ ಅಪರಿಮಿತ ತೃಪ್ತಿಗಾಗಿ ಆಗುತ್ತದೆ. |

**ಅನ್ವಾಹಾರ್ಯದಿಂದ ಸ್ವವಿಜಯ/ಶತ್ರುಪರಾಜಯ-ಉಪಾಖ್ಯಾನ**

| | |
|---|---|
| ದೇವಾಃ ವೈ ಯತ್ ಯಜ್ಞೇ ಅಕುರ್ವತ ತತ್ ಅಸುರಾಃ ಅಕುರ್ವತ | ದೇವತೆಗಳು ಯಜ್ಞದಲ್ಲಿ ಯಾವುದನ್ನು ಮಾಡಿದರೋ ಅದನ್ನು ರಾಕ್ಷಸರೂ ಮಾಡಿದರು. |

ತೇ ದೇವಾ ಏತಂ ಪ್ರಾಜಾಪತ್ಯಮನ್ವಾಹಾರ್ಯಪಶ್ಯನ್ತಮ-
ನ್ವಾಹರಂತ ತತೋ ದೇವಾ ಅಭವನ್ಪರಾಸುರಾ ಯಸ್ಯೈವಂ
ವಿದುಷೋಽನ್ವಾಹಾರ್ಯ ಆಹ್ರಿಯತೇ ಭವತ್ಯಾತ್ಮನಾ
ಪರಾಽಸ್ಯ ಭ್ರಾತೃವ್ಯೋ ಭವತಿ

---

ತೇ । ದೇವಾಃ । ಏತಮ್ । ಪ್ರಾಜಾಪತ್ಯಮಿತಿ ಪ್ರಾಜಾ-ಪತ್ಯಮ್ । ಅನ್ವಾಹಾರ್ಯ ಮಿತ್ಯನು- ಆಹಾರ್ಯಮ್ । ಅಪಶ್ಯನ್ನ್ । ತಮ್ । ಅನ್ವಾಹರಂತೇತ್ಯನು-ಆಹರಂತ । ತತಃ । ದೇವಾಃ । ಅಭವನ್ನ್ । ಪರೇತಿ । ಅಸುರಾಃ । ಯಸ್ಯ । ಏವಮ್। ವಿದುಷಃ। ಅನ್ವಾಹಾರ್ಯ ಇತ್ಯನು-ಆಹಾರ್ಯಃ। ಆಹ್ರಿಯತ ಇತ್ಯಾ-ಹ್ರಿಯತೇ । ಭವತಿ । ಆತ್ಮನಾ। ಪರೇತಿ । ಅಸ್ಯ । ಭ್ರಾತೃವ್ಯಃ । ಭವತಿ ।

---

| | |
|---|---|
| ತೇ ದೇವಾಃ ಏತಮ್ ಪ್ರಾಜಾಪತ್ಯಮ್ ಅನ್ವಾಹಾರ್ಯಮ್ ಅಪಶ್ಯನ್ನ್ ತಮ್ ಅನ್ವಾಹರಂತ | [ಆಗ] ಆ ದೇವತೆಗಳು ಪ್ರಜಾಪತಿ ದೇವತಾಕವಾದ ಈ ಅನ್ವಾಹಾರ್ಯವನ್ನು ಕಂಡರು. |
| ತಮ್ ಅನ್ವಾಹರಂತ | ಆ ಅನ್ವಾಹಾರ್ಯವನ್ನು ಸಿದ್ಧಪಡಿಸಿ ಋತ್ವಿಜರಿಗೆ ಕೊಟ್ಟರು. |
| ತತಃ ದೇವಾಃ ಅಭವನ್ನ್ | ಆದರಿಂದ ದೇವತೆಗಳು ವಿಜಯಿಗಳು [ಅಸುರರನ್ನು ಮೀರಿಸಿದವರು] ಆದರು. |
| ಅಸುರಾಃ ಪರಾ ಅಭವನ್ನ್ | ಅಸುರರು ಸೋತು ಹೋದರು. |
| ಏವಮ್ ವಿದುಷಃ ಯಸ್ಯ ಅನ್ವಾಹಾರ್ಯಃ ಆಹ್ರಿಯತೇ | ಹೀಗೆ ತಿಳಿದಿರುವ ಯಾವ ಯಜಮಾನನ ಅನ್ವಾಹಾರ್ಯವು ಋತ್ವಿಜರಿಗೆ ಕೊಡಲ್ಪಡುತ್ತದೆಯೋ |
| [ಸಃ] ಆತ್ಮನಾ ಭವತಿ ಅಸ್ಯ ಭ್ರಾತೃವ್ಯಃ ಪರಾ ಭವತಿ | ತಾನು ವಿಜಯಿಯಾಗುತ್ತಾನೆ. ಈ ಯಜಮಾನನ ಶತ್ರುವು ಪರಾಜಿತನಾಗುತ್ತಾನೆ. |

# ಯಜ್ಞೇನ ವಾ ಇಷ್ಟೀ ಪಕ್ವೇನ ಪೂರ್ತೀ ಯಸ್ಯೈವಂ ವಿದುಷೋಽನ್ವಾಹಾರ್ಯ ಆಹ್ರಿಯತೇ ಸ ತ್ವೇವೇಷ್ಟಾ-ಪೂರ್ತೀ ಪ್ರಜಾಪತೇರ್ಭಾಗೋಽಸೀತ್ಯಾಹ [...ಭಾಗೋಽಸಿ (೩) ಇತ್ಯಾಹ]

ಯಜ್ಞೇನ । ವೈ । ಇಷ್ಟೀ । ಪಕ್ವೇನ । ಪೂರ್ತೀ । ಯಸ್ಯ । ಏವಮ್। ವಿದುಷಃ । ಅನ್ವಾಹಾರ್ಯ ಇತ್ಯನು–ಆಹಾರ್ಯಃ । ಆಹ್ರಿಯತ ಇತ್ಯಾ-ಹ್ರಿಯತೇ । ಸಃ । ತು। ಏವ । ಇಷ್ಟಾಪೂರ್ತೀತೀಷ್ಟ-ಪೂರ್ತೀ । ಪ್ರಜಾಪತೇರಿತಿ ಪ್ರಜಾ-ಪತೇಃ । ಭಾಗಃ । ಅಸಿ[೩] ಇತಿ । ಆಹ ।

## ಮತ್ತೊಂದು ರೀತಿಯಲ್ಲಿ ಅನ್ವಾಹಾರ್ಯದ ಪ್ರಶಂಸೆ

| | |
|---|---|
| ಯಜ್ಞೇನ ವೈ ಇಷ್ಟೀ | [ಯಜಮಾನನು] ಆಗ್ನೇಯಾದಿಯಾಗಗಳಿಂದ 'ಇಷ್ಟಿ'ಯೆನಿಸಿಕೊಳ್ಳುತ್ತಾನೆ.* |
| ಪಕ್ವೇನ ಪೂರ್ತೀ | ಅನ್ವಾಹಾರ್ಯವೇ ಮೊದಲಾದ ಪಕ್ವದಾನಕರ್ಮದಿಂದ 'ಪೂರ್ತೀ'* ಎನಿಸಿಕೊಳ್ಳುತ್ತಾನೆ. |
| ಏವಮ್ ವಿದುಷಃ ಯಸ್ಯ ಅನ್ವಾಹಾರ್ಯಃ | ಹೀಗೆ ತಿಳಿದಿರುವ ಯಾವ ಯಜಮಾನನ ಅನ್ವಾಹಾರ್ಯವು |
| ಆಹ್ರಿಯತೇ | ಋತ್ವಿಜರಿಗೆ ಕೊಡಲ್ಪಡುತ್ತದೆಯೋ, |
| ಸಃ ತು ಏವ ಇಷ್ಟಾಪೂರ್ತೀ | ಆ ಯಜಮಾನನೇ ಇಷ್ಟಾಪೂರ್ತಗಳುಳ್ಳವನು ಎನಿಸಿಕೊಳ್ಳುತ್ತಾನೆ. |

## ಅನ್ವಾಹಾರ್ಯ ಅಭಿಮರ್ಶನ ಮಂತ್ರವ್ಯಾಖ್ಯಾನ/ಪ್ರಥಮಭಾಗ

| | |
|---|---|
| ಪ್ರಜಾಪತೇಃ ಭಾಗಃ ಅಸಿ ಇತಿ ಆಹ | [ಎಲೈ! ಅನ್ವಾಹಾರ್ಯವೇ!] ನೀನು ಪ್ರಜಾಪತಿ ದೇವತೆಯ ಭಾಗವಾಗಿದ್ದೀಯೆಂದು [ಅನ್ವಾಹಾರ್ಯ ಅಭಿಮರ್ಶನದ ಮಂತ್ರಭಾಗವು] ಹೇಳುತ್ತದೆ. |

* ಇಷ್ಟ = ಶ್ರುತಿವಿಹಿತವಾದ ಯಾಗಾದಿಕರ್ಮಗಳು.
* ಪೂರ್ತ = ಬಾವಿ ತೋಡಿಸುವುದು ಮುಂತಾದ ಸ್ಮೃತಿವಿಹಿತಕರ್ಮ.

ಪ್ರಜಾಪತಿಮೇವ ಭಾಗಧೇಯೇನ ಸಮರ್ಧಯತ್ಯೂರ್ಜಸ್ವಾ
ನ್ಪಯಸ್ವಾನಿತ್ಯಾಹೋರ್ಜಮೇವಾಸ್ಮಿನ್ಪಯೋ ದಧಾತಿ
ಪ್ರಾಣಾಪಾನೌ ಮೇ ಪಾಹಿ ಸಮಾನವ್ಯಾನೌ ಮೇ

---

ಪ್ರಜಾಪತಿಮಿತಿ ಪ್ರಜಾ-ಪತಿಮ್ । ಏವ । ಭಾಗಧೇಯೇನೇತಿ ಭಾಗ-ಧೇಯೇನ । ಸಮಿತಿ-ಅರ್ಧಯತಿ । ಊರ್ಜಸ್ವಾನ್ । ಪಯಸ್ವಾನ್ । ಇತಿ । ಆಹ । ಊರ್ಜಮ್। ಏವ । ಅಸ್ಮಿನ್ನ್। ಪಯಃ । ದಧಾತಿ । ಪ್ರಾಣಾಪಾನಾವಿತಿ ಪ್ರಾಣ-ಅಪಾನೌ। ಮೇ। ಪಾಹಿ । ಸಮಾನವ್ಯಾನಾವಿತಿ ಸಮಾನ-ವ್ಯಾನೌ । ಮೇ ।

---

| | |
|---|---|
| ಪ್ರಜಾಪತಿಮ್ ಏವ ಭಾಗಧೇಯೇನ ಸಮರ್ಧಯತಿ | [ಇದರಿಂದ ಯಜಮಾನನು] ಪ್ರಜಾಪತಿದೇವತೆಯನ್ನೇ ಅವನಿಗೆ ಸೇರಬೇಕಾದ ಅನ್ವಾಹಾರ್ಯ ಭಾಗದಿಂದ ಸಂತೃಪ್ತಿಪಡಿಸುತ್ತಾನೆ. |

**ದ್ವಿತೀಯಭಾಗ**

| | |
|---|---|
| ಊರ್ಜಸ್ವಾನ್ ಪಯಸ್ವಾನ್ ಇತಿ ಆಹ | [ಅನ್ವಾಹಾರ್ಯವು] ಬಲವುಳ್ಳದ್ದೂ, [ಹಾಲಿನಲ್ಲಿ ಪಕ್ವವಾಗಿರುವುದರಿಂದ] ರಸವುಳ್ಳದ್ದೂ ಆಗಿದೆ ಎಂದು [ಎರಡನೆಯ ಭಾಗವು] ಹೇಳುತ್ತದೆ. |
| ಅಸ್ಮಿನ್ ಊರ್ಜಮ್ ಏವ ಪಯಃ ದಧಾತಿ | [ಈ ಮಂತ್ರಪಾಠವು/ಈ ಅನ್ವಾಹಾರ್ಯವು] ಈ ಯಜಮಾನನಲ್ಲಿ ಬಲವನ್ನೂ ರಸ(ಸಾರ)ವನ್ನೂ ಉಂಟುಮಾಡುತ್ತದೆ/ಪೋಷಿಸುತ್ತದೆ. |

**ತೃತೀಯಭಾಗ**

| | |
|---|---|
| ಪ್ರಾಣಾಪಾನೌ ಮೇ ಪಾಹಿ ಸಮಾನವ್ಯಾನೌ ಮೇ | [ಎಲೈ ಅನ್ವಾಹಾರ್ಯವೇ! ನೀನು] ನನ್ನ ಪ್ರಾಣಾಪಾನವಾಯುಗಳನ್ನೂ ರಕ್ಷಿಸು* ಮತ್ತು ನನ್ನ ಸಮಾನವ್ಯಾನವಾಯುಗಳನ್ನೂ |

---

* ಈ ಬ್ರಾಹ್ಮಣಭಾಗದಲ್ಲಿ 'ಉದಾನವ್ಯಾನೌ ಮೇ ಪಾಹಿ' ಎಂಬ ಭಾಗವನ್ನೂ ಸೇರಿಸಿಕೊಳ್ಳಬೇಕು. ಬ್ರಾಹ್ಮಣಗಳಲ್ಲಿ ಮಂತ್ರದ ಪ್ರಾರಂಭಮಾತ್ರವನ್ನು ಹೇಳಿ ಮಂತ್ರವನ್ನು ವಿವರಿಸುವುದು ಸಾಮಾನ್ಯ.

ಪಾಹೀತ್ಯಾಹಾಶಿಷಮೇವೈತಾಮಾಶಾಸ್ತೇಽಕ್ಷಿತೋಽಸ್ಯಕ್ಷಿತ್ಯೈ ತ್ವಾ
ಮಾ ಮೇ ಕ್ಷೇಷ್ಠಾ ಅಮುತ್ರಾಮುಷ್ಮಿನ್ಲೋಕ ಇತ್ಯಾಹ
ಕ್ಷೀಯತೇ ವಾ ಅಮುಷ್ಮಿನ್ಲೋಕೇಽನ್ನಮಿತಃ
ಪ್ರದಾನಗ್ಂ ಹ್ಯಮುಷ್ಮಿನ್ಲೋಕೇ ಪ್ರಜಾ ಉಪಜೀವಂತಿ

---

ಪಾಹಿ । ಇತಿ । ಆಹ । ಆಶಿಷಮಿತ್ಯಾ-ಶಿಷಮ್ । ಏವ । ಏತಾಮ್। ಏತಿ । ಶಾಸ್ತೇ। ಅಕ್ಷಿತಃ । ಅಸಿ । ಅಕ್ಷಿತ್ಯೈ । ತ್ವಾ । ಮಾ । ಮೇ । ಕ್ಷೇಷ್ಠಾಃ । ಅಮುತ್ರ । ಅಮುಷ್ಮಿನ್ । ಲೋಕೇ। ಇತಿ । ಆಹ । ಕ್ಷೀಯತೇ । ವೈ । ಅಮುಷ್ಮಿನ್ । ಲೋಕೇ । ಅನ್ನಮ್ । ಇತಃಪ್ರದಾನಮಿತೀತಃ-ಪ್ರದಾನಮ್। ಹಿ । ಅಮುಷ್ಮಿನ್। ಲೋಕೇ । ಪ್ರಜಾ ಇತಿ ಪ್ರ-ಜಾಃ । ಉಪಜೀವಂತೀತ್ಯುಪ-ಜೀವಂತಿ ।

---

| | |
|---|---|
| ಪಾಹಿ ಇತಿ ಆಹ | ರಕ್ಷಿಸೆಂದು ಈ ಮಂತ್ರಭಾಗವು ಹೇಳುತ್ತದೆ. |
| ಪಾಹಿ ಇತಿ ಆಹ ಆಶಿಷಮ್ ಏವ ಏತಾಮ್ ಆಶಾಸ್ತೇ | [ಯಜಮಾನನು ಅನ್ವಾಹಾರ್ಯದಾನದಿಂದ] ತನ್ನ ಪ್ರಾಣಾದಿರಕ್ಷಣೆಯನ್ನೇ ಪ್ರಾರ್ಥಿಸುತ್ತಾನೆ. |

**ಅಭಿಮರ್ಶನವಿಧಿ/ಚತುರ್ಥಭಾಗದ ವಿವರಣೆ**

| | |
|---|---|
| ಅಕ್ಷಿತಃ ಅಸಿ ಅಕ್ಷಿತ್ಯೈ ತ್ವಾ ಅಮುತ್ರ ಅಮುಷ್ಮಿನ್ ಲೋಕೇ ಮೇ ಮಾ ಕ್ಷೇಷ್ಠಾಃ ಇತಿ ಆಹ | [ಎಲೈ! ಅನ್ವಾಹಾರ್ಯವೇ!] [ನೀನು] ಕ್ಷೀಣಿಸದವನಾಗಿದ್ದೀಯೆ. [ಅನ್ನದ] ಕ್ಷಯವಿಲ್ಲದಿರುವಿಕೆಗಾಗಿ ನಿನ್ನನ್ನು[ಋತ್ವಿಜರಿಗೆ] ಕೊಡುತ್ತೇನೆ. ಈ ಸ್ವರ್ಗ [ಪರ] ಲೋಕದಲ್ಲಿ ನನ್ನ ಅನ್ನವು ಕ್ಷೀಣಿಸದಿರಲಿ. [ನನಗೆ ಅಕ್ಷಯವಾಗಿರು.] |
| ಅಮುಷ್ಮಿನ್ ಲೋಕೇ ಅನ್ನಮ್ ಕ್ಷೀಯತೇ ವೈ | ಈ ಪರಲೋಕದಲ್ಲಿ ಅನ್ನವು ಕ್ಷೀಣಿಸುತ್ತದೆಯಷ್ಟೆ. |
| ಅಮುಷ್ಮಿನ್ ಲೋಕೇ ಪ್ರಜಾಃ ಇತಃಪ್ರದಾನಮ್ ಅನ್ನಮ್ | ಸ್ವರ್ಗಲೋಕದಲ್ಲಿ ಪ್ರಜೆಗಳು ಈ ಲೋಕದಲ್ಲಿ ಕೊಡಲ್ಪಟ್ಟ [ಈ ಲೋಕದಲ್ಲಿ ಮಾಡಿದ ಕರ್ಮಗಳಿಂದ ಸಂಪಾದಿಸಲ್ಪಟ್ಟ] ಅನ್ನವನ್ನು |
| ಉಪಜೀವಂತಿ ಹಿ | ಅನುಭವಿಸುತ್ತಾರೆಯಷ್ಟೆ. |

ಯದೇವಮಭಿಮೃಶತ್ಯಕ್ಷಿತಿಮೇವೈನದ್ಗಮಯತಿ

ನಾಸ್ಯಾಮುಷ್ಮಿನ್ಲೋಕೇऽನ್ನಂ ಕ್ಷೀಯತೇ ॥ ೩-14 ॥

[ಅನ್ವಾಹಾರ್ಯೇಣ ಪ್ರಜಾಪತೇರಸಿ ಹ್ಯಮುಷ್ಮಿನ್ಲೋಕೇ ಪಂಚದಶ ಚ ।]

---

ಯತ್ । ಏವಮ್ । ಅಭಿಮೃಶತೀತ್ಯಭಿ-ಮೃಶತಿ । ಅಕ್ಷಿತಿಮ್ । ಏವ । ಏನತ್ । ಗಮಯತಿ । ನ । ಅಸ್ಯ । ಅಮುಷ್ಮಿನ್ । ಲೋಕೇ । ಅನ್ನಮ್ । ಕ್ಷೀಯತೇ ॥೩॥

---

| | |
|---|---|
| ಯತ್ ಏವಮ್ ಅಭಿಮೃಶತಿ | ಈ ಮಂತ್ರಗಳಿಂದ ಅನ್ವಾಹಾರ್ಯವನ್ನು ಅಭಿಮುಖವಾಗಿ ಸ್ಪರ್ಶಿಸುವುದು ಯಾವುದುಂಟೋ [ಈ ಮಂತ್ರದಿಂದ ಸ್ಪರ್ಶಿಸಬೇಕು ಎಂದು ವಿಧಿ] |
| ಏನತ್ ಅಕ್ಷಿತಿಮ್ ಏವ ಗಮಯತಿ | ಈ ಅಭಿಮರ್ಶನವು ಕ್ಷಯವಿಲ್ಲದಿರುವಿಕೆಯನ್ನೇ ಹೊಂದಿಸುತ್ತದೆ. |
| ಅಸ್ಯ ಅಮುಷ್ಮಿನ್ ಲೋಕೇ ಅನ್ನಮ್ ನ ಕ್ಷೀಯತೇ | ಈ ಯಜಮಾನನಿಗೆ ಈ ಸ್ವರ್ಗಲೋಕದಲ್ಲಿ ಅನ್ನವು ಕ್ಷೀಣವಾಗುವುದಿಲ್ಲ. |

---

## ಅನುವಾಕದ ತಾತ್ಪರ್ಯ

ಈ ಮೂರನೆಯ ಅನುವಾಕದಲ್ಲಿ ಅನ್ವಾಹಾರ್ಯದ ಪ್ರಶಂಸೆ ಇದೆ. ಹಾಲಿನಲ್ಲಿ ಅನ್ನವನ್ನು ಬೇಯಿಸಿ ಋತ್ವಿಜರಿಗೆ ಕೊಡಬೇಕು. ಇದೇ ಅನ್ವಾಹಾರ್ಯದಾನ. ಇದನ್ನು ಹೆಚ್ಚಾಗಿಯೇ ಮಾಡಬೇಕೆಂಬ ವಿಧಿಯಿದೆ.

ಕೆಲವರು ದೇವತೆಗಳು ಪರೋಕ್ಷವಾಗಿ ಪೂಜೆಯನ್ನು ಕೈಗೊಳ್ಳುತ್ತಾರೆ. ಕೆಲವರು ಪ್ರತ್ಯಕ್ಷವಾಗಿ ಕೈಗೊಳ್ಳುತ್ತಾರೆ. ಆಗ್ನೇಯಾದಿಯಾಗಗಳಿಂದ ಆರಾಧಿಸಲ್ಪಡುವ ಅಗ್ನ್ಯಾದಿ ದೇವತೆಗಳು ಪರೋಕ್ಷದೇವತೆಗಳು.* ಅನ್ವಾಹಾರ್ಯದಿಂದ ಆರಾಧಿಸಲ್ಪಡುವ ಬ್ರಾಹ್ಮಣರು ಪ್ರತ್ಯಕ್ಷದೇವತೆಗಳು.

ಅನ್ವಾಹಾರ್ಯವು ಋತ್ವಿಜರನ್ನು ತೃಪ್ತಿಪಡಿಸುವ ದಕ್ಷಿಣಾರೂಪವೂ ಆಗಿದೆ. ಇದು ಯಜ್ಞದಲ್ಲಿರುವ ಕೊರತೆಗಳನ್ನೂ ಮುಚ್ಚಿ, ಯಜ್ಞವನ್ನು ಪೂರ್ಣಗೊಳಿಸುತ್ತದೆ. ಯಜ್ಞದಲ್ಲಿ ನ್ಯೂನಾತಿರೇಕಗಳು ಸಂಭವಿಸಬಹುದು. ಅನ್ವಾಹಾರ್ಯವು ಆ ದೋಷ

---

* ಅಗ್ನಿಯು ಕಣ್ಣಿಗೆ ಕಂಡರೂ ಅವನ ದೇವತಾಸ್ವರೂಪವು ಪರೋಕ್ಷವೇ.

ಗಳನ್ನು ಸರಿಪಡಿಸುತ್ತದೆ. ಇದರಿಂದ 'ಅನ್ವಾಹಾರ್ಯ'ವೆಂಬ ಅನ್ವರ್ಥವಾದ ಹೆಸರು ಇದಕ್ಕಿದೆ.

ದೇವತೆಗಳು ಹವಿಸ್ಸನ್ನು ಸಮರ್ಪಿಸಲು ನೆರವಾಗುವ ಋತ್ವಿಜರು ದೇವದೂತರೇ. ಈ ಅನ್ವಾಹಾರ್ಯವು ದೇವದೂತರಾದ ಋತ್ವಿಜರನ್ನೂ ತೃಪ್ತಿಪಡಿಸುತ್ತದೆ. ಸರ್ವ ದೇವಸ್ವಾಮಿಯಾದ ಪ್ರಜಾಪತಿಯು ದೇವತೆಗಳಿಗೆ ಯಾಗಗಳನ್ನು ವಿಭಾಗಿಸಿ ಕೊಟ್ಟನು. ಬಳಿಕ ತನಗೇನೂ ಉಳಿದಿಲ್ಲವೆಂದು ತಿಳಿದುಕೊಂಡನು. ಆಗ ಅನ್ವಾಹಾರ್ಯ ವನ್ನು ನೋಡಿದನು. ಅದನ್ನು ತನಗಾಗಿಯೇ ಇಟ್ಟುಕೊಂಡನು. ಪ್ರಜಾಪತಿದೇವತಾಕ ವಾದ ಈ ಅನ್ವಾಹಾರ್ಯವನ್ನು ಬ್ರಾಹ್ಮಣರಿಗೆ ಕೊಡುವುದರಿಂದ ಪ್ರಜಾಪತಿಯನ್ನು ಯಜಮಾನನು ತೃಪ್ತಿಪಡಿಸುತ್ತಾನೆ.

ದೇವತೆಗಳು ಯಜ್ಞದಲ್ಲಿ ಮಾಡಿದುದೆಲ್ಲವನ್ನೂ ಅಸುರರೂ ಮಾಡಿದರು. ಆಗ ದೇವತೆಗಳು ಈ ಅನ್ವಾಹಾರ್ಯವನ್ನು ನೋಡಿದರು. ಅದನ್ನು ಋತ್ವಿಜರಿಗೆ ಕೊಟ್ಟರು. ಇದರಿಂದ ದೇವತೆಗಳು ವಿಜಯಿಗಳಾದರು. ಅಸುರರು ಸೋತುಹೋದರು. ಹೀಗೆ ಅನ್ವಾಹಾರ್ಯದಿಂದ ಯಜಮಾನನು ವಿಜಯಿಯಾಗುತ್ತಾನೆ. ಶತ್ರುವು ಪರಾಜಿತನಾಗು ತ್ತಾನೆ.

ಯಜ್ಞಗಳನ್ನು ಮಾಡಿ ಯಜಮಾನನು 'ಇಷ್ಟಿ'ಯೂ, ಅನ್ವಾಹಾರ್ಯದಿಂದ 'ಪೂರ್ತಿ'ಯೂ ಆಗುತ್ತಾನೆ. ಹೀಗೆ ಇಷ್ಟಾಪೂರ್ತಿಸಂಪತ್ತಿಯೂ ಒದಗುತ್ತದೆ.

**'ಪ್ರಜಾಪತೇರ್ಭಾಗೋಽಸಿ...........'** ಎಂದು ಅನ್ವಾಹಾರ್ಯದ ಅಭಿಮರ್ಶನ ಮಾಡಬೇಕು. ಇದರಿಂದ ಪ್ರಜಾಪತಿದೇವತೆಯ ಸಂತೃಪ್ತಿಯೂ, ಬಲ-ರಸಗಳ ಸಂಪ್ರಾಪ್ತಿಯೂ, ಪ್ರಾಣಾಪಾನಾದಿಗಳ ರಕ್ಷಣೆಯೂ ಆಗುತ್ತದೆ. ಪರಲೋಕವು ಭೋಗಭೂಮಿ; ಕರ್ಮಭೂಮಿಯಲ್ಲ. ಈ ಅನ್ವಾಹಾರ್ಯದಾನದಿಂದ ಯಜಮಾನನಿಗೆ ಪರಲೋಕದಲ್ಲಿ ಅನ್ನವು ಕ್ಷೀಣಿಸದೆ ಅವನು ಯಾವಾಗಲೂ ಅನ್ನಸಮೃದ್ಧಿಯನ್ನು ಹೊಂದಿರುವಂತೆಯೇ ಆಗುತ್ತದೆ.

---

## ॥ ಚತುರ್ಥೋಽನುವಾಕಃ ॥

ಬರ್ಹಿಷೋಽಹಂ ದೇವಯಜ್ಯಯಾ ಪ್ರಜಾವಾನ್ಭೂಯಾಸ-
ಮಿತ್ಯಾಹ ಬರ್ಹಿಷಾ ವೈ ಪ್ರಜಾಪತಿಃ ಪ್ರಜಾ ಅಸೃಜತ
ತೇನೈವ ಪ್ರಜಾಸ್ಸೃಜತೇ

---

ಬರ್ಹಿಷಃ । ಅಹಮ್ । ದೇವಯಜ್ಯಯೇತಿ ದೇವ-ಯಜ್ಯಯಾ । ಪ್ರಜಾವಾನಿತಿ ಪ್ರಜಾ-ವಾನ್ । ಭೂಯಾಸಮ್ । ಇತಿ । ಆಹ । ಬರ್ಹಿಷಾ। ವೈ । ಪ್ರಜಾಪತಿರಿತಿ ಪ್ರಜಾ-ಪತಿಃ। ಪ್ರಜಾ ಇತಿ ಪ್ರ–ಜಾಃ । ಅಸೃಜತ । ತೇನ । ಏವ । ಪ್ರಜಾ ಇತಿ ಪ್ರ-ಜಾಃ । ಸೃಜತೇ ।

---

ಹಿಂದಿನ ಅನುವಾಕದಲ್ಲಿ ಅನ್ವಾಹಾರ್ಯಪ್ರಶಂಸೆಯನ್ನು ಹೇಳಲಾಯಿತು. ಈ ನಾಲ್ಕನೆಯ ಅನುವಾಕದಲ್ಲಿ ಶೇಷಾನುಮಂತ್ರಣಮಂತ್ರಗಳನ್ನು ವಿವರಿಸಲಾಗಿದೆ. ಮೊದಲು ಅನೂಯಾಜಾನುಮಂತ್ರಣಮಂತ್ರಗಳನ್ನು ವಿವರಿಸಲಾಗಿದೆ.

---

### ಪ್ರಥಮಾನೂಯಾಜಾನುಮಂತ್ರಣಮಂತ್ರದ ವಿವರಣೆ

| | |
|---|---|
| ಅಹಮ್ ಬರ್ಹಿಷಃ ದೇವಯಜ್ಯಯಾ ಪ್ರಜಾವಾನ್ ಭೂಯಾಸಮ್ ಇತಿ ಆಹ | ನಾನು ಬರ್ಹಿರ್ನಾಮಕನಾದ ಅನೂಯಾಜ ದೇವತೆಗೆ ಸಂಬಂಧಿಸಿದ ಯಾಗದಿಂದ ಪುತ್ರಾದಿ ಸಂತಾನವುಳ್ಳವನಾಗುವೆನೆಂದು (ಶ್ರುತಿಯು) ಹೇಳುತ್ತದೆ. |
| ಬರ್ಹಿಷಾ ವೈ ಪ್ರಜಾಪತಿಃ ಪ್ರಜಾಃ ಅಸೃಜತ | ಬರ್ಹಿರ್ಯಾಗಾನುಮಂತ್ರಣದಿಂದ ಪ್ರಜಾಪತಿ ದೇವನು ಪ್ರಜೆಗಳನ್ನು ಸೃಷ್ಟಿಸಿದನು. |
| ತೇನ ಏವ ಪ್ರಜಾಃ ಸೃಜತೇ | ಆ ಬರ್ಹಿರನುಮಂತ್ರಣದಿಂದಲೇ ಪ್ರಜೆಗಳನ್ನು ಸೃಷ್ಟಿಸುತ್ತಾನೆ. [ಅನುಮಂತ್ರಣದ ಫಲವಾಗಿ ಯಜಮಾನನಿಗೆ ಕೊಡುತ್ತಾನೆ]. |

---

***ತಾತ್ಪರ್ಯ:** '**ಬರ್ಹಿಷೋಽಹಂ**' ಎಂಬ ಅನೂಯಾಜಾನುಮಂತ್ರಣದಿಂದ ಹಿಂದೆ

---

* **ಆಯಾ ಬ್ರಾಹ್ಮಣಭಾಗದಲ್ಲಿಯೇ ತಾತ್ಪರ್ಯವನ್ನೂ ನೀಡಲಾಗಿದೆ.**

ನರಾಶಗ್‍ಂಸಸ್ಯಾಹಂ ದೇವಯಜ್ಯಯಾ ಪಶುಮಾನ್ಭೂಯಾ
ಸಮಿತ್ಯಾಹ ನರಾಶಗ್‍ಂಸೇನ ವೈ ಪ್ರಜಾಪತಿಃ ಪಶೂನಸೃಜತ
ತೇನೈವ ಪಶೂನ್ಥ್ಸೃಜತೇಽಗ್ನೇಃ ಸ್ವಿಷ್ಟಕೃತೋಽಹಂ

---

ನರಾಶಗ್‍ಂಸಸ್ಯ । ಅಹಮ್ । ದೇವಯಜ್ಯಯೇತಿ ದೇವ-ಯಜ್ಯಯಾ । ಪಶುಮಾನಿತಿ ಪಶು-ಮಾನ್ । ಭೂಯಾಸಮ್। ಇತಿ । ಆಹ । ನರಾಶಗ್‍ಂಸೇನ। ವೈ । ಪ್ರಜಾಪತಿರಿತಿ ಪ್ರಜಾ-ಪತಿಃ। ಪಶೂನ್ । ಅಸೃಜತ । ತೇನ । ಏವ । ಪಶೂನ್ । ಸೃಜತೇ । ಅಗ್ನೇಃ। ಸ್ವಿಷ್ಟಕೃತ ಇತಿ ಸ್ವಿಷ್ಟ-ಕೃತಃ । ಅಹಮ್ ।

---

### ದ್ವಿತೀಯಾನೂಯಾಜಾನುಮಂತ್ರಣಮಂತ್ರದ ವಿವರಣೆ

| | |
|---|---|
| ನರಾಶಗ್‍ಂಸಸ್ಯ ದೇವಯಜ್ಯಯಾ ಅಹಮ್ ಪಶುಮಾನ್ ಭೂಯಾಸಮ್ ಇತಿ ಆಹ | ನರಾಶಗ್‍ಂಸಾನುಯಾಜಯಾಗದ ಅನುಮಂತ್ರಣದಿಂದ ನಾನು ಪಶುಮಂತನಾಗುತ್ತೇನೆಂದು ಶ್ರುತಿಯು ಹೇಳುತ್ತದೆ. |
| ನರಾಶಗ್‍ಂಸೇನ ವೈ ಪ್ರಜಾಪತಿಃ ಪಶೂನ್ ಅಸೃಜತ | ನರಾಶಗ್‍ಂಸಾನುಮಂತ್ರಣದಿಂದಲೇ ಪ್ರಜಾಪತಿಯು ಪಶುಗಳನ್ನು ಸೃಷ್ಟಿಸಿದನು. |
| ತೇವ ಏವ ಪಶೂನ್ ಸೃಜತೇ | [ಈಗಲೂ] ಅದರಿಂದಲೇ ಗವಾದಿಪಶುಗಳನ್ನು ಸೃಷ್ಟಿಸುತ್ತಾನೆ. [ಪ್ರಜಾಪತಿಯ ಅನುಗ್ರಹದಿಂದ ಯಜಮಾನನು ಪಶುಗಳನ್ನು ಹೊಂದುತ್ತಾನೆ]. |

### ತೃತೀಯಾನೂಯಾಜಾನುಮಂತ್ರಣಮಂತ್ರದ ವ್ಯಾಖ್ಯಾನ

| | |
|---|---|
| ಅಹಮ್ ಅಗ್ನೇಃ ಸ್ವಿಷ್ಟಕೃತಃ | 'ನಾನು ಸ್ವಿಷ್ಟಕೃದಗ್ನಿಯ |

---

ಪ್ರಜಾಪತಿದೇವನು ಪ್ರಜೆಗಳನ್ನು ಸೃಷ್ಟಿಸಿದನು. ಈಗ ಯಜಮಾನನು ಆ ಅನುಮಂತ್ರಣ ಮಂತ್ರವನ್ನು ಹೇಳುವುದರಿಂದ ಪ್ರಜಾಪತಿಯ ಅನುಗ್ರಹದಿಂದ ಪ್ರಜೆಗಳನ್ನು ಹೊಂದುತ್ತಾನೆ.

ದ್ವಿತೀಯಾನೂಯಾಜಾನುಮಂತ್ರಣದಿಂದ ಪ್ರಜಾಪತಿಯು ಪಶುಗಳನ್ನು ಸೃಷ್ಟಿಸಿದನು. ಯಜಮಾನನು ನರಾಶಗ್‍ಂಸಾನುಮಂತ್ರಣದಿಂದ ಪ್ರಜಾಪತಿಯ ಅನುಗ್ರಹದಿಂದ ಪಶುಮಂತನಾಗುತ್ತಾನೆ.

ದೇವಯಜ್ಯಯಾಯುಷ್ಮಾನ್, ಯಜ್ಞೇನ ಪ್ರತಿಷ್ಠಾಂ
ಗಮೇಯಮಿತ್ಯಾಹಾಯುರೇವಾತ್ಮನ್ಧತ್ತೇ ಪ್ರತಿ ಯಜ್ಞೇನ
ತಿಷ್ಠತಿ ದರ್ಶ ಪೂರ್ಣಮಾಸಯೋರ್ವೈ
[...ಪೂರ್ಣಮಾಸಯೋಃ (೧) ವೈ] ದೇವಾ ಉಜ್ಜಿತಿಮನೂ–

---

ದೇವಯಜ್ಯಯೇತಿ ದೇವ-ಯಜ್ಯಯಾ । ಆಯುಷ್ಮಾನ್ । ಯಜ್ಞೇನ । ಪ್ರತಿಷ್ಠಾಮಿತಿ ಪ್ರತಿ-ಸ್ಥಾಮ್ । ಗಮೇಯಮ್ । ಇತಿ । ಆಹ । ಆಯುಃ । ಏವ । ಆತ್ಮನ್ನ್ । ಧತ್ತೇ । ಪ್ರತೀತಿ । ಯಜ್ಞೇನ । ತಿಷ್ಠತಿ । ದರ್ಶಪೂರ್ಣಮಾಸಯೋರಿತಿ ದರ್ಶ-ಪೂರ್ಣ ಮಾಸಯೋಃ । [೧] ವೈ । ದೇವಾಃ । ಉಜ್ಜಿತಿಮಿತ್ಯುತ್-ಜಿತಿಮ್। ಅನು ।

---

| | |
|---|---|
| ದೇವಯಜ್ಯಯಾ ಆಯುಷ್ಮಾನ್ ಯಜ್ಞೇನ ಪ್ರತಿಷ್ಠಾಮ್ ಗಮೇಯಮ್ | ಅನುಮಂತ್ರಣದಿಂದ ಆಯುಷ್ಮಂತನೂ ಆಗಿ ಸಂಪೂರ್ಣವಾದ ಯಜ್ಞದಿಂದ ಲೋಕದಲ್ಲಿ ಪ್ರತಿಷ್ಠೆಯನ್ನು ಹೊಂದುವೆನು' |
| ಇತಿ ಆಹ | ಹೀಗೆಂದು ಈ ಮಂತ್ರವು ಹೇಳುತ್ತದೆ. |
| ಆಯುಃ ಏವ ಆತ್ಮನ್ನ್ ಧತ್ತೇ | [ಈ ಮಂತ್ರವನ್ನು ಹೇಳುವ ಯಜಮಾನನು] ತನ್ನಲ್ಲಿ ಆಯುಸ್ಸನ್ನು ಧರಿಸುತ್ತಾನೆ. |
| ಪ್ರತಿ ಯಜ್ಞೇನ ತಿಷ್ಠತಿ | [ಸಂಪೂರ್ಣಯಜ್ಞಫಲಪ್ರಾಪ್ತಿಯಿಂದ] ಲೋಕ ದಲ್ಲಿ ಪ್ರಕೃಷ್ಟಸ್ಥಿತಿಯನ್ನು ಹೊಂದುತ್ತಾನೆ. |

**ಉಜ್ಜಿತಿಮಂತ್ರಗಳ ವ್ಯಾಖ್ಯಾನ/ಪ್ರಶಂಸೆ**

| | |
|---|---|
| ದೇವಾಃ ದರ್ಶಪೂರ್ಣಮಾಸಯೋಃ ವೈ ಉಜ್ಜಿತಿಮ್ | ದೇವತೆಗಳು ತಾವು ಮಾಡಿದ ದರ್ಶ-ಪೂರ್ಣ ಮಾಸಯಾಗಗಳಲ್ಲಿ ಹೇಳಿದ [ಅಗ್ನೇರಹಮ್' ಇತ್ಯಾದಿ] ಉಜ್ಜಿತಿಮಂತ್ರಗಳನ್ನು |
| ಅನು ಉದಜಯನ್ನ್ | ಅನುಸರಿಸಿ ಅಸುರರ ಮೇಲೆ ಶ್ರೇಷ್ಠವಾದ ಜಯ ವನ್ನು ಹೊಂದಿದರು. |

---

**'ಅಗ್ನೇಃ ಸ್ವಿಷ್ಟಕೃತೋಽಹಮ್'** ಎನ್ನುವುದು ಮೂರನೆಯ ಅನೂಯಾಜವಾದ ಸ್ವಿಷ್ಟಕೃ ದಗ್ನಿಯ ಅನುಮಂತ್ರಣಮಂತ್ರ. ಇದನ್ನು ಹೇಳುವ ಯಜಮಾನನು ಆಯುಸ್ಸನ್ನು

ದಜಯನ್ದರ್ಶಪೂರ್ಣಮಾಸಾಭ್ಯಾಮಸುರಾನಪಾನುದನ್ತಾಗ್ನೇ
ರಹಮುಜ್ಜಿತಿಮನೂಜ್ಜೇಷಮಿತ್ಯಾಹ ದರ್ಶಪೂರ್ಣಮಾಸಯೋ
ರೇವ ದೇವತಾನಾಂ ಯಜಮಾನ ಉಜ್ಜಿತಿಮನೂಜ್ಜಯತಿ

---

ಉದಿತಿ। ಅಜಯನ್ನ್। ದರ್ಶಪೂರ್ಣಮಾಸಾಭ್ಯಾಮಿತಿ ದರ್ಶ-ಪೂರ್ಣಮಾಸಾಭ್ಯಾಮ್। ಅಸುರಾನ್। ಅಪೇತಿ। ಅನುದಂತ । ಅಗ್ನೇಃ। ಅಹಮ್। ಉಜ್ಜಿತಿಮಿತ್ಯುತ್-ಜಿತಿಮ್। ಅನು । ಉದಿತಿ । ಜೇಷಮ್। ಇತಿ । ಆಹ । ದರ್ಶಪೂರ್ಣಮಾಸಯೋರಿತಿ ದರ್ಶ-ಪೂರ್ಣಮಾಸಯೋಃ । ಏವ । ದೇವತಾನಾಮ್। ಯಜಮಾನಃ । ಉಜ್ಜಿತಿಮಿತ್ಯುತ್-ಜಿತಿಮ್। ಅನು । ಉದಿತಿ । ಜಯತಿ ।

---

| | |
|---|---|
| ದರ್ಶಪೂರ್ಣಮಾಸಾಭ್ಯಾಮ್ ಅಸುರಾನ್ ಅಪಾನುದಂತ | [ಈ ಅನುಮಂತ್ರಣಮಂತ್ರಗಳನ್ನು ಹೇಳಿ] ಪೂರ್ಣವಾದ ದರ್ಶ-ಪೂರ್ಣಮಾಸಯಾಗಗಳಿಂದ ಅಸುರರನ್ನು ದೂರಕ್ಕೆ ಓಡಿಸಿದರು. |
| ಅಗ್ನೇಃ ಅಹಮ್ ಉಜ್ಜಿತಿಮ್ ಅನು ಉಜ್ಜೇಷಮ್ ಇತಿ ಆಹ | ಅಗ್ನಿಯೇ ಮೊದಲಾದ ದೇವತೆಗಳ ಶ್ರೇಷ್ಠವಾದ ಜಯವನ್ನು ಅನುಸರಿಸಿ ನಾನೂ ಶತ್ರುಗಳ ಮೇಲೆ ಉತ್ಕೃಷ್ಟಜಯವನ್ನು ಪಡೆದೆನೆಂದು ಮಂತ್ರವು ಹೇಳುತ್ತದೆ. |
| ಯಜಮಾನಃ | ಯಜಮಾನನು |
| ದರ್ಶಪೂರ್ಣಮಾಸಯೋಃ ದೇವತಾನಾಮ್ ಏವ ಉಜ್ಜಿತಿಮ್ ಅನು ಉಜ್ಜಯತಿ | ದರ್ಶ-ಪೂರ್ಣಮಾಸಕ್ಕೆ ಸಂಬಂಧಿಸಿದ ದೇವತೆಗಳ ಜಯವನ್ನನುಸರಿಸಿ ತಾನೂ ಶ್ರೇಷ್ಠಜಯವನ್ನು ಪಡೆಯುವನು. |

---

ಪಡೆಯುತ್ತಾನೆ. ಸಂಪೂರ್ಣವಾದ ಯಜ್ಞದ ಫಲವನ್ನು ಪಡೆದು ಲೋಕದಲ್ಲಿ ಪ್ರತಿಷ್ಠೆ [ಒಳ್ಳೆಯ ಸ್ಥಿತಿ]ಯನ್ನು ಹೊಂದುತ್ತಾನೆ. 'ಅಗ್ನೇರಹಮ್' ಮೊದಲಾದ ಮಂತ್ರಗಳು ಉಜ್ಜಿತಿಮಂತ್ರಗಳು. ಈ ಮಂತ್ರಗಳಿಂದ ದೇವತೆಗಳು ಅಸುರರ ಮೇಲೆ ಜಯವನ್ನು ಪಡೆದು ಅವರನ್ನು ದೂರಕ್ಕೆ ಓಡಿಸಿದರು. ಈ ಮಂತ್ರಗಳನ್ನು ಹೇಳುವುದರಿಂದ ಯಜಮಾನನೂ ದೇವತೆಗಳ ಜಯಸೂಚಕವಾದ ಉಜ್ಜಿತಿಮಂತ್ರಗಳನ್ನು ಅನುಸರಿಸಿ, ಯಜ್ಞಕ್ಕೆ ವಿಘ್ನಕಾರಿಗಳನ್ನು ಜಯಿಸಿ ಓಡಿಸುತ್ತಾನೆ. ಯಾಗದೇವತೆಗಳ ಅನುಗ್ರಹವನ್ನು ಪಡೆದು

ದರ್ಶಪೂರ್ಣಮಾಸಾಭ್ಯಾಂ ಭ್ರಾತೃವ್ಯಾನಪನುದತೇ
ವಾಜವತೀಭ್ಯಾಂ ವ್ಯೂಹತ್ಯನ್ನಂ ವೈ ವಾಜೋಽನ್ನಮೇವಾ
ವರುಂಧೇ ದ್ವಾಭ್ಯಾಂ ಪ್ರತಿಷ್ಠಿತ್ಯೈ .

---

ದರ್ಶಪೂರ್ಣಮಾಸಾಭ್ಯಾಮಿತಿ ದರ್ಶ-ಪೂರ್ಣಮಾಸಾಭ್ಯಾಮ್ । ಭ್ರಾತೃವ್ಯಾನ್। ಅಪೇತಿ । ನುದತೇ । ವಾಜವತೀಭ್ಯಾಮಿತಿ ವಾಜ-ವತೀಭ್ಯಾಮ್। ವೀತಿ । ಊಹತಿ। ಅನ್ನಮ್। ವೈ । ವಾಜಃ। ಅನ್ನಮ್। ಏವ । ಅವೇತಿ । ರುಂಧೇ । ದ್ವಾಭ್ಯಾಮ್। ಪ್ರತಿಷ್ಠಿತ್ಯಾ ಇತಿ ಪ್ರತಿ–ಸ್ಥಿತ್ಯೈ।

---

| | |
|---|---|
| ದರ್ಶಪೂರ್ಣಮಾಸಾಭ್ಯಾಮ್ ಭ್ರಾತೃವ್ಯಾನ್ ಅಪನುದತೇ | [ಉಜ್ಜಿತಿಮಂತ್ರಗಳಿಂದ ಪೂರ್ಣವಾದ] ದರ್ಶ-ಪೂರ್ಣಮಾಸಯಾಗಗಳಿಂದ ಶತ್ರುಗಳನ್ನು ಸೋಲಿಸುತ್ತಾನೆ. |

**ಜುಹೂಪಭೃದ್ವ್ಯೂಹನಾನುಮಂತ್ರಣಮಂತ್ರವ್ಯಾಖ್ಯಾನ**

| | |
|---|---|
| ವಾಜವತೀಭ್ಯಾಮ್ ವ್ಯೂಹತಿ | '[ವಾಜಸ್ಯ ಮಾ' ಎಂಬ] ವಾಜಪದಘಟಿತವಾದ ಎರಡು ಮಂತ್ರಗಳಿಂದ ಅಧ್ವರ್ಯುವು ಮಾಡುವ ವ್ಯೂಹನವನ್ನು ಯಜಮಾನನು ಅನುಮಂತ್ರಣ ಮಾಡುತ್ತಾನೆ. |
| ಅನ್ನಮ್ ವೈ ವಾಜಃ ಅನ್ನಮ್ ಏವ ಅವರುಂಧೇ | ವಾಜವೆಂದರೆ ಅನ್ನವೇ ಆಗಿದೆ. [ಈ ಅನುಮಂತ್ರಣದಿಂದ ಯಜಮಾನನು] ಅನ್ನವನ್ನೇ ಪಡೆಯುತ್ತಾನೆ. |
| ದ್ವಾಭ್ಯಾಮ್ ಪ್ರತಿಷ್ಠಿತ್ಯೈ | ಎರಡು ಮಂತ್ರಗಳಿಂದ ಅನುಮಂತ್ರಣ ಮಾಡುವುದರಿಂದ ಎರಡು ಕಾಲುಗಳಿಂದ ಸರಿಯಾಗಿ ನಿಲ್ಲುವಂತೆ ಸರಿಯಾದ ಸ್ಥಿತಿಯನ್ನು ಹೊಂದುತ್ತಾನೆ. |

---

ಯಜ್ಞಫಲವನ್ನು ಹೊಂದುತ್ತಾನೆ.

'ವಾಜಸ್ಯ ಮಾ' ಮೊದಲಾದ ಮಂತ್ರಗಳಿಂದ ಅಧ್ವರ್ಯುವು ಜುಹೂ-ಉಪಭೃತ್‌ಗಳನ್ನು ಮೇಲಕ್ಕೆ-ಕೆಳಕ್ಕೆ, ಹಿಂದಕ್ಕೆ-ಮುಂದಕ್ಕೆ ಮಾಡುತ್ತಾನೆ.

ಯೋ ವೈ ಯಜ್ಞಸ್ಯ ದ್ವೌ ದೋಹೌ ವಿದ್ವಾನ್ ಯಜತ

ಉಭಯತ [ಉಭಯತಃ (೨)] ಏವ ಯಜ್ಞಂ ದುಹೇ

ಪುರಸ್ತಾಚ್ಚೋಪರಿಷ್ಟಾಚ್ಚೈಷ ವಾ ಅನ್ಯೋ ಯಜ್ಞಸ್ಯ ದೋಹ

ಇಡಾಯಾಮನ್ಯೋ ಯರ್ಹಿ ಹೋತಾ ಯಜಮಾನಸ್ಯ ನಾಮ

---

ಯಃ । ವೈ । ಯಜ್ಞಸ್ಯ । ದ್ವೌ । ದೋಹೌ । ವಿದ್ವಾನ್ । ಯಜತೇ । ಉಭಯತಃ (೨) । ಏವ । ಯಜ್ಞಮ್ । ದುಹೇ । ಪುರಸ್ತಾತ್ । ಚ । ಉಪರಿಷ್ಟಾತ್ । ಚ । ಏಷಃ । ವೈ । ಅನ್ಯಃ । ಯಜ್ಞಸ್ಯ । ದೋಹಃ । ಇಡಾಯಾಮ್। ಅನ್ಯಃ। ಯರ್ಹಿ। ಹೋತಾ । ಯಜಮಾನಸ್ಯ । ನಾಮ ।

---

**'ಏಮಾ ಅಗ್ಮನ್ನ್....' ಮೊದಲಾದ ಮಂತ್ರದ ವಿನಿಯೋಗ / ಬ್ರಾಹ್ಮಣ**

| | |
|---|---|
| ಯಃ ವೈ ಯಜ್ಞಸ್ಯ ದ್ವೌ ದೋಹೌ ವಿದ್ವಾನ್ ಯಜತೇ | ಯಾವ ಯಜಮಾನನು ಯಜ್ಞಕ್ಕೆ ಸಂಬಂಧಿಸಿದ ಎರಡು ಫಲಾಶಂಸೆಗಳನ್ನು ತಿಳಿದವನಾಗಿ ಯಾಗ ಮಾಡುತ್ತಾನೆಯೋ |
| [ಸಃ] ಪುರಸ್ತಾತ್ ಚ ಉಪರಿಷ್ಟಾತ್ ಚ ಉಭಯತಃ ಏವ ಯಜ್ಞಮ್ ದುಹೇ | [ಅವನು] ಮೊದಲಿನಲ್ಲಿಯೂ ಕೊನೆಯಲ್ಲಿಯೂ ಎರಡು ಕಡೆಗಳಲ್ಲಿಯೂ ಯಜ್ಞದ ಫಲವನ್ನು ಪ್ರಾರ್ಥಿಸಿ ಪಡೆಯುತ್ತಾನೆ. |
| ಏಷಃ ವೈ ಯಜ್ಞಸ್ಯ ಅನ್ಯಃ ದೋಹಃ | [ಏಮಾ ಅಗ್ಮನ್ನ್..ಎಂಬ] ಈ ಮಂತ್ರವು ಒಂದು ಯಜ್ಞಫಲಪ್ರಾರ್ಥನಾಮಂತ್ರ [ದೋಹ]ವಾಗಿದೆ. |
| ಇಡಾಯಾಮ್ ಅನ್ಯಃ | ಇಡಾಭಕ್ಷಣಕಾಲದಲ್ಲಿ ಹೇಳುವ **'ಸಾ ಮೇ ಸತ್ಯಾಶೀಃ'** ಎಂಬ ಮಂತ್ರಪಾಠವು ಮತ್ತೊಂದು ದೋಹವಾಗಿದೆ. |
| ಯರ್ಹಿ ಹೋತಾ ಯಜಮಾನಸ್ಯ ನಾಮ | ಯಾವಾಗ ಹೋತೃವು [**'ಆಶಾಸ್ತೇಽಯಂ ಯಜಮಾನೋಽಸೌ'** ಎಂಬಲ್ಲಿ **'ಅಸೌ'** ಪದದ ಸ್ಥಾನದಲ್ಲಿ] ಯಜಮಾನನ ಹೆಸರನ್ನು |

ಗೃಹ್ಣೀಯಾತ್ತರ್ಹಿ ಬ್ರೂಯಾದೇಮಾ ಅಗ್ಮನ್ನಾಶಿಷೋ
ದೋಹಕಾಮಾ ಇತಿ ಸಗ್ಂಸ್ತುತಾ ಏವ ದೇವತಾ ದುಹೇಽಥೋ
ಉಭಯತ ಏವ ಯಜ್ಞಂ ದುಹೇ ಪುರಸ್ತಾಚ್ಚೋಪರಿಷ್ಟಾಚ್ಚ

---

ಗೃಹ್ಣೀಯಾತ್ । ತರ್ಹಿ । ಬ್ರೂಯಾತ್ । ಏತಿ । ಇಮಾಃ । ಅಗ್ಮನ್ನ್ । ಆಶಿಷ ಇತ್ಯಾ-ಶಿಷಃ । ದೋಹಕಾಮಾ ಇತಿ ದೋಹ-ಕಾಮಾಃ । ಇತಿ । ಸಗ್ಂಸ್ತುತಾ ಇತಿ ಸಮ್-ಸ್ತುತಾಃ। ಏವ । ದೇವತಾಃ । ದುಹೇ । ಅಥೋ ಇತಿ। ಉಭಯತಃ। ಏವ । ಯಜ್ಞಮ್ । ದುಹೇ। ಪುರಸ್ತಾತ್। ಚ । ಉಪರಿಷ್ಟಾತ್। ಚ ।

---

| | |
|---|---|
| ಗೃಹ್ಣೀಯಾತ್ | ಗ್ರಹಣ ಮಾಡುತ್ತಾನೆಯೋ |
| ತರ್ಹಿ ಏಮಾ ಅಗ್ಮನ್ನ್ ಆಶಿಷೋ ದೋಹಕಾಮಾ ಇತಿ ಬ್ರೂಯಾತ್ | ಆ ಸಮಯದಲ್ಲಿ [ಯಜಮಾನನು] 'ಏಮಾ **ಅಗ್ಮನ್ನ್... ದೋಹಕಾಮಾಃ**' ಎಂಬ ಮಂತ್ರವನ್ನು ಹೇಳಬೇಕು. [ವಿಧಿ] |
| ಸಗ್ಂಸ್ತುತಾಃ ಏವ ದೇವತಾಃ ದುಹೇ | [ಹೋತೃವಿನಿಂದ] ಸ್ತುತಿಸಲ್ಪಟ್ಟ ಅಗ್ನ್ಯಾದಿ ದೇವತೆಗಳನ್ನು [ಫಲಪ್ರಾರ್ಥನೆಯಿಂದ ಒಲಿಸಿಕೊಂಡು] ಯಜ್ಞಫಲವನ್ನು ಪಡೆಯುತ್ತಾನೆ. |
| ಅಥೋ ಉಭಯತಃ ಏವ ಪುರಸ್ತಾತ್ ಚ ಉಪರಿಷ್ಟಾತ್ ಚ | ಮತ್ತು ಮೊದಲು ಮತ್ತೂ ಅನಂತರವೂ ಎರಡು ಕಡೆಗಳಲ್ಲಿಯೂ |
| ಯಜ್ಞಮ್ ದುಹೇ | ಯಜ್ಞವೆಂಬ [ಧೇನುವಿನಿಂದ] [ಇಷ್ಟಾರ್ಥಗಳೆಂಬ ಹಾಲನ್ನು] ಕರೆದುಕೊಳ್ಳುತ್ತಾನೆ. |

---

ಆಗ ಯಜಮಾನನು ಅನುಮಂತ್ರಣ ಮಾಡಲು ಈ ಎರಡು ಮಂತ್ರಗಳು ವಿನಿಯುಕ್ತವಾಗಿವೆ.

ಯಜಮಾನನು ಅಧ್ವರ್ಯುವು ಮಾಡುವ ವ್ಯೂಹನವನ್ನು ವಾಜಪದಘಟಿತ ಮಂತ್ರಗಳಿಂದ ಮಾಡುವುದರಿಂದ ಅನ್ನವನ್ನು ಹೊಂದುತ್ತಾನೆ. ಎರಡು ಮಂತ್ರಗಳಿಂದ ಮಾಡುವುದರಿಂದ ಲೋಕದಲ್ಲಿ ಎದ್ದು ನಿಲ್ಲುತ್ತಾನೆ. ★ಯಜ್ಞದಲ್ಲಿ ಎರಡು ದೋಹಗಳಿವೆ. ಮೊದಲು ಒಂದು. ಅನಂತರದಲ್ಲಿ ಮತ್ತೊಂದು. ಇವುಗಳನ್ನು ತಿಳಿದು ಯಾಗ ಮಾಡುವ ಯಜಮಾನನು ಎರಡು ದೋಹಗಳ ಫಲವನ್ನೂ ಪಡೆಯುತ್ತಾನೆ. 'ಏಮಾ **ಅಗ್ಮನ್ನ್**' ಎಂದು ಯಜಮಾನನು ಇಲ್ಲಿ ಹೇಳುವ ಮಂತ್ರಪಾಠವು ಒಂದು ದೋಹ;

ರೋಹಿತೇನ ತ್ವಾಗ್ನಿರ್ದೇವತಾಂ ಗಮಯತ್ವಿತ್ಯಾಹೈತೇ ವೈ ದೇವಾಶ್ವಾ [ದೇವಾಶ್ವಾಃ (ಇ)] ಯಜಮಾನಃ ಪ್ರಸ್ತರೋ ಯದೇತೈಃ ಪ್ರಸ್ತರಂ ಪ್ರಹರತಿ ದೇವಾಶ್ವೈರೇವ

---

**ರೋಹಿತೇನ । ತ್ವಾ । ಅಗ್ನಿಃ । ದೇವತಾಮ್। ಗಮಯತು । ಇತಿ । ಆಹ । ಏತೇ। ವೈ । ದೇವಾಶ್ವಾ ಇತಿ ದೇವ-ಅಶ್ವಾಃ[ಇ]। ಯಜಮಾನಃ । ಪ್ರಸ್ತರ ಇತಿ ಪ್ರ-ಸ್ತರಃ। ಯತ್ । ಏತೈಃ । ಪ್ರಸ್ತರಮಿತಿ ಪ್ರ-ಸ್ತರಮ್। ಪ್ರಹರತೀತಿ ಪ್ರ-ಹರತಿ । ದೇವಾಶ್ವೈರಿತಿ ದೇವ-ಅಶ್ವೈಃ । ಏವ ।**

---

ಪ್ರಸ್ತರಾನುಮಂತ್ರಣಮಂತ್ರದ ವ್ಯಾಖ್ಯಾನ

| | |
|---|---|
| ರೋಹಿತೇನ ತ್ವಾ ಅಗ್ನಿಃ ದೇವತಾಮ್ ಗಮಯತು ಇತಿ ಆಹ | ರೋಹಿತನೆಂಬ ಕುದುರೆಯಿಂದ ನಿನ್ನನ್ನು [ಯಜಮಾನನನ್ನು] ಅಗ್ನಿದೇವನು ಸೂಕ್ತವಾಕದೇವತೆಗಳನ್ನು ಹೊಂದಿಸಲಿ ಎಂದು ಶ್ರುತಿಯು ಹೇಳುತ್ತದೆ. |
| ಏತೇ ವೈ ದೇವಾಶ್ವಾಃ | ಈ [ರೋಹಿತ, ಹರಿ, ಏತಶಗಳು] ಅಗ್ನಿ, ಇಂದ್ರ, ಸೂರ್ಯರ ಕುದುರೆಗಳು. |
| ಯಜಮಾನಃ ಪ್ರಸ್ತರಃ | [ಯಜ್ಞಸಾಧನವಾದುದರಿಂದ] ಪ್ರಸ್ತರವು ಯಜಮಾನನೇ. |
| ಏತೈಃ ಪ್ರಸ್ತರಮ್ ಪ್ರಹರತಿ ಇತಿ ಯತ್ | ಈ ಮಂತ್ರಗಳಿಂದ ಅಗ್ನಿಯಲ್ಲಿ ಪ್ರಸ್ತರವನ್ನು ಹಾಕುತ್ತಾನೆಂಬುದು ಯಾವುದುಂಟೋ [ತೇನ= ಅದರಿಂದ] |
| ದೇವಾಶ್ವೈಃ ಏವ | ಅಗ್ನ್ಯಾದಿದೇವತೆಗಳ ಕುದುರೆಗಳಿಂದಲೇ |

---

ಇಡಾಭಕ್ಷಣಸಮಯದಲ್ಲಿ ಮೊದಲು ಯಜಮಾನನು ಹೇಳುವ **'ಸಾ ಮೇ ಸತ್ಯಾಶೀಃ'** ಎಂಬ ಪ್ರಾರ್ಥನಾಮಂತ್ರಪಾಠವು ಮತ್ತೊಂದು ದೋಹ. ಹೋತೃವು **'ಆಶಾಸ್ತೇಽಯಂ ಯಜಮಾನೋಽಸೌ'** ಎಂದು ಹೇಳುವಾಗ ಯಜಮಾನನ ನಾಮಗ್ರಹಣ ಮಾಡಬೇಕು **[ವಿಧಿ]**. ಆಗ ಯಜಮಾನನು **'ಏಮಾ ಅಗ್ಮನ್ನಾಶಿಷಃ'** ಎಂಬ ಮಂತ್ರವನ್ನು ಹೇಳಬೇಕು **[ವಿಧಿ]**. ಇದೇ ಯಜ್ಞದೋಹ. ಇದರಿಂದ ಯಜಮಾನನು ಹೋತೃವು ಸ್ತುತಿಸಿದ ಅಗ್ನಿಯೇ ಮೊದಲಾದ ದೇವತೆಗಳನ್ನು ಒಲಿಸಿಕೊಂಡು ಅವರ ಅನುಗ್ರಹದಿಂದ ಇಷ್ಟಾರ್ಥಗಳನ್ನು ಪಡೆಯುತ್ತಾನೆ. ಮತ್ತು ಯಜ್ಞದ ಎರಡು ಕಡೆಗಳಲ್ಲಿಯೂ ಕಾಮಧೇನುವಿನಂತಿರುವ ಯಜ್ಞದಿಂದ ಇಷ್ಟಾರ್ಥಗಳೆಂಬ ಹಾಲನ್ನು ಕರೆದುಕೊಳ್ಳುತ್ತಾನೆ.

ಯಜಮಾನಗ್ಂ ಸುವರ್ಗಂ ಲೋಕಂ ಗಮಯತಿ ವಿ ತೇ
ಮುಂಚಾಮಿ ರಶನಾ ವಿರಶ್ಮೀನಿತ್ಯಾಹೈಷ ವಾ
ಅಗ್ನೇರ್ವಿಮೋಕಸ್ತೇನೈವೈನಂ ವಿ ಮುಂಚತಿ

---

ಯಜಮಾನಮ್। ಸುವರ್ಗಮಿತಿ ಸುವಃ-ಗಮ್। ಲೋಕಮ್ । ಗಮಯತಿ । ವೀತಿ । ತೇ । ಮುಂಚಾಮಿ। ರಶನಾಃ । ವೀತಿ । ರಶ್ಮೀನ್। ಇತಿ । ಆಹ । ಏಷಃ। ವೈ । ಅಗ್ನೇಃ । ವಿಮೋಕ ಇತಿ ವಿ-ಮೋಕಃ। ತೇನ । ಏವ । ಏನಮ್ । ವೀತಿ । ಮುಂಚತಿ।

---

| | |
|---|---|
| ಯಜಮಾನಮ್ ಸುವರ್ಗಮ್ ಲೋಕಮ್ ಗಮಯತಿ | ಯಜಮಾನನನ್ನು ಸ್ವರ್ಗಲೋಕಕ್ಕೆ[ಅಗ್ನಿಯು] ಒಯ್ಯುತ್ತಾನೆ. |

**ಪರಿಧಿಪ್ರಹರಣಾನುಮಂತ್ರಣಮಂತ್ರವ್ಯಾಖ್ಯಾನ**

| | |
|---|---|
| ತೇ ರಶನಾಃ ವಿ ಮುಂಚಾಮಿ ವಿ ರಶ್ಮೀನ್ ಇತಿ ಆಹ | 'ನಿನ್ನನ್ನು ಬಂಧಿಸಿರುವ [ಪರಿಧಿಗಳೆಂಬ] ಹಗ್ಗಗಳನ್ನು ಬಿಚ್ಚಿ ಹಾಕುತ್ತೇನೆ' [ಎಂದು ಮೊದಲಾಗಿ ಪರಿಧಿವಿಮೋಕಾನುಮಂತ್ರಣಮಂತ್ರವು] ಹೇಳುತ್ತದೆ. |
| ಏಷಃ ವೈ ಅಗ್ನೇಃ ವಿಮೋಕಃ | ಈ ಮಂತ್ರವೇ ಅಗ್ನಿವಿಮೋಕಮಂತ್ರವಾಗಿದೆ. |
| ತೇನ ಏವ ಏನಮ್ ವಿಮುಂಚತಿ | ಈ ಮಂತ್ರಪಾಠದಿಂದಲೇ ಈ ಅಗ್ನಿಯನ್ನು ವಿಮೋಕಗೊಳಿಸುತ್ತಾನೆ. |

---

ಪ್ರಸ್ತರಪ್ರಹರಣಕಾಲದಲ್ಲಿ ಯಜಮಾನನು ಈ ಪ್ರಸ್ತರಾನುಮಂತ್ರಣಮಂತ್ರವನ್ನು ಹೇಳುತ್ತಾನೆ. **ರೋಹಿತ, ಹರಿ, ಏತಶ** ಇವುಗಳು ಅಗ್ನಿ, ಇಂದ್ರ, ಸೂರ್ಯರ ಕುದುರೆಗಳು. ಈ ಮಂತ್ರವನ್ನು ಯಜಮಾನನು ಪ್ರಸ್ತರಪ್ರಹರಣದಲ್ಲಿ ಹೇಳುವುದರಿಂದ ಪ್ರಸ್ತರರೂಪನಾದ ಯಜಮಾನನನ್ನು ಅಗ್ನಿಯು ದೇವತೆಗಳ ಕುದುರೆಗಳಿಂದಲೇ ಸ್ವರ್ಗಕ್ಕೆ ಒಯ್ಯುತ್ತಾನೆ. ★ ಅಗ್ನಿಯ ಮೂರು ಕಡೆ ಇಟ್ಟಿರುವ ಪರಿಧಿಗಳೇ ಕುದುರೆಯನ್ನು ಕಟ್ಟಲು ಉಪಯೋಗಿಸುವ ಕಡಿವಾಣ, ಹಗ್ಗ ಮೊದಲಾದವುಗಳಂತೆ. ಕುದುರೆಯನ್ನು ಕಾರ್ಯಕ್ಕೆ ಉಪಯೋಗಿಸಿಕೊಂಡ ಮೇಲೆ ಆ ಹಗ್ಗ ಮೊದಲಾದವನ್ನು ಬಿಚ್ಚಿ ಹಾಕುವಂತೆ ಪರಿಧಿಗಳನ್ನು ಅಗ್ನಿಯಲ್ಲಿ ಹಾಕುತ್ತಾರೆ. ಆಗ ಯಜಮಾನನು 'ವಿ ತೇ ಮುಂಚಾಮಿ...' ಎಂಬ ಮಂತ್ರವನ್ನು ಹೇಳುತ್ತಾನೆ. ಈ ಅನುಮಂತ್ರಣಮಂತ್ರವೇ ಅಗ್ನಿವಿಮೋಕಮಂತ್ರ.

ವಿಷ್ಣೋಃಶ್ಶಂಯೋರಹಂ ದೇವಯಜ್ಯಯಾ ಯಜ್ಞೇನ ಪ್ರತಿಷ್ಠಾಂ ಗಮೇಯಮಿತ್ಯಾಹ ಯಜ್ಞೋ ವೈ ವಿಷ್ಣುರ್ಯಜ್ಞ ಏವಾಂತತಃ ಪ್ರತಿತಿಷ್ಠತಿ ಸೋಮಸ್ಯಾಹಂ ದೇವಯಜ್ಯಯಾ

ವಿಷ್ಣೋಃ। ಶಂಯೋರಿತಿ ಶಂ-ಯೋಃ। ಅಹಮ್। ದೇವ ಯಜ್ಯಯೇತಿ ದೇವ-ಯಜ್ಯಯಾ। ಯಜ್ಞೇನ । ಪ್ರತಿಷ್ಠಾಮಿತಿ ಪ್ರತಿ-ಸ್ಥಾಮ್ । ಗಮೇಯಮ್। ಇತಿ । ಆಹ । ಯಜ್ಞಃ ವೈ । ವಿಷ್ಣುಃ । ಯಜ್ಞೇ । ಏವ । ಅಂತತಃ । ಪ್ರತೀತಿ । ತಿಷ್ಠತಿ । ಸೋಮಸ್ಯ । ಅಹಮ್ । ದೇವಯಜ್ಯಯೇತಿ ದೇವ-ಯಜ್ಯಯಾ ।

### ಶಂಯುವಾಕಾನುಮಂತ್ರಣಮಂತ್ರವ್ಯಾಖ್ಯಾನ

| | |
|---|---|
| ಅಹಮ್ ವಿಷ್ಣೋಃ ಶಂಯೋಃ ದೇವಯಜ್ಯಯಾ | 'ನಾನು ವ್ಯಾಪಕನಾದ ಬೃಹಸ್ಪತಿಪುತ್ರನಾದ ಶಂಯುವಿನ ಆಜ್ಯಾಹುತಿಯಿಂದ |
| ಯಜ್ಞೇನ ಪ್ರತಿಷ್ಠಾಮ್ ಗಮೇಯಮ್ ಇತಿ ಆಹ | ಯಜ್ಞವನ್ನು ಮುಗಿಸಿ ಶ್ರೇಷ್ಠಸ್ಥಿತಿಯನ್ನು ಹೊಂದುವೆನು' ಎಂದು ಶಂಯುವಾಕಾನು ಮಂತ್ರಣಮಂತ್ರವು ಹೇಳುತ್ತದೆ. |
| ಯಜ್ಞಃ ವೈ ವಿಷ್ಣುಃ | ಯಜ್ಞವು [ಫಲವ್ಯಾಪ್ತಿಯಿಂದ] ವಿಷ್ಣುವೇ ಆಗಿದೆ. |
| ಯಜ್ಞೇ ಏವ ಅಂತತಃ ಪ್ರತಿ ತಿಷ್ಠತಿ | [ಯಜಮಾನನು] ಕಡೆಯಲ್ಲಿ ಯಜ್ಞದಲ್ಲಿಯೇ ಪ್ರತಿಷ್ಠಿತನಾಗುತ್ತಾನೆ. |

### ಪ್ರಥಮಪತ್ನೀಸಂಯಾಜಾನುಮಂತ್ರಣಮಂತ್ರದ ವ್ಯಾಖ್ಯಾನ

| | |
|---|---|
| ಅಹಮ್ ಸೋಮಸ್ಯ ದೇವಯಜ್ಯಯಾ | 'ನಾನು ಸೋಮದೇವತಾಕವಾದ ಸಮಂತ್ರಕಾಜ್ಯಾಹುತಿಯ ಅನುಮಂತ್ರಣದಿಂದ |

ಇದರಿಂದ ಅಗ್ನಿಯನ್ನು ಯಜಮಾನನು ವಿಮೋಚನೆಗೊಳಿಸುತ್ತಾನೆ.

'ವಿಷ್ಣುವಿಗೆ ಸಂಬಂಧಿಸಿದ ಸಮಂತ್ರಕ ಆಜ್ಯಾಹುತಿಯಿಂದ ಯಜ್ಞವನ್ನು ಮುಗಿಸಿ ಫಲಪ್ರಾಪ್ತಿಯಿಂದ ಶ್ರೇಷ್ಠಸ್ಥಿತಿಯನ್ನು ಹೊಂದುತ್ತೇನೆ' ಎಂದು ಯಜಮಾನನು ಶಂಯುವಾಕಾನುಮಂತ್ರಣಮಂತ್ರವನ್ನು ಹೇಳುತ್ತಾನೆ. ಇದರಿಂದ ಸರ್ವವ್ಯಾಪಕನಾದ ಯಜ್ಞಸ್ವರೂಪನಾದ ವಿಷ್ಣುವಿನಲ್ಲಿಯೇ ಪ್ರತಿಷ್ಠಿತನಾಗುತ್ತಾನೆ.

ಸುರೇತಾ [ಸುರೇತಾಃ (೪)]ರೇತೋ ಧಿಷೀಯೇತ್ಯಾಹ ಸೋಮೋ ವೈ ರೇತೋಧಾಸ್ತೇನೈವ ರೇತ ಆತ್ಮನ್ಧತ್ತೇ ತ್ವಷ್ಟುರಹಂ ದೇವಯಜ್ಯಯಾ ಪಶೂನಾಗ್ಂ ರೂಪಂ ಪುಷೇಯಮಿತ್ಯಾಹ

---

ಸುರೇತಾ ಇತಿ ಸು-ರೇತಾಃ (೪)। ರೇತಃ । ಧಿಷೀಯ । ಇತಿ । ಆಹ । ಸೋಮಃ । ವೈ । ರೇತೋಧಾ ಇತಿ ರೇತಃ-ಧಾಃ। ತೇನ । ಏವ । ರೇತಃ । ಆತ್ಮನ್ನ್। ಧತ್ತೇ । ತ್ವಷ್ಟುಃ । ಅಹಮ್ । ದೇವಯಜ್ಯಯೇತಿ ದೇವ-ಯಜ್ಯಯಾ । ಪಶೂನಾಮ್। ರೂಪಮ್ । ಪುಷೇಯಮ್ । ಇತಿ । ಆಹ ।

---

| | |
|---|---|
| ಸುರೇತಾಃ ರೇತಃ ಧಿಷೀಯ ಇತಿ ಆಹ | ಸಫಲವಾದ ರೇತಸ್ಸುಳ್ಳವನಾಗಿ ಪ್ರಜೋತ್ಪಾದಕ ರೇತಸ್ಸನ್ನು ಧರಿಸುವೆನು' ಎಂದು [ಪ್ರಥಮ ಪತ್ನೀಸಂಯಾಜಾನುಮಂತ್ರಣಮಂತ್ರವು] ಹೇಳುತ್ತದೆ. |
| ಸೋಮಃ ವೈ ರೇತೋಧಾಃ | ರೇತೋಧಾರಣಶಕ್ತಿಯನ್ನು ಕೊಡುವವನು ಸೋಮದೇವತೆಯೇ. |
| ತೇನ ಏವ ರೇತಃ ಆತ್ಮನ್ನ್ ಧತ್ತೇ | ಅವನ ಅನುಗ್ರಹದಿಂದಲೇ ಯಜಮಾನನು ಪ್ರಜೋತ್ಪಾದನಶಕ್ತಿಯನ್ನು ಪಡೆಯುತ್ತಾನೆ. |

**ದ್ವಿತೀಯಪತ್ನೀಸಂಯಾಜಾನುಮಂತ್ರಣಮಂತ್ರದ ವ್ಯಾಖ್ಯಾನ**

| | |
|---|---|
| ಅಹಮ್ ತ್ವಷ್ಟುಃ ದೇವಯಜ್ಯಯಾ | 'ನಾನು [ದ್ವಿತೀಯಸಂಯಾಜದೇವತೆಯಾದ] ತ್ವಷ್ಟೃದೇವನ ಆಜ್ಯಾಹುತಿಯ ಅಭಿಮಂತ್ರಣದಿಂದ |
| ಪಶೂನಾಮ್ ರೂಪಮ್ ಪುಷೇಯಮ್ ಇತಿ ಆಹ | ಗವಾದಿಪಶುಗಳ ರೂಪಗಳನ್ನು ಪುಷ್ಟಿಗೊಳಿಸುತ್ತೇನೆ' ಎಂದು ಶ್ರುತಿಯು ಹೇಳುತ್ತದೆ. |

---

ಪ್ರಥಮಪತ್ನೀಸಂಯಾಜವು ಸೋಮದೇವತಾಕವಾಗಿದೆ. ಈ ಸಂಯಾಜಾನುಮಂತ್ರಣದಿಂದ ಯಜಮಾನನು ರೇತೋಧಾರಕನಾದ ಸೋಮದೇವತೆಯ ಅನುಗ್ರಹವನ್ನು ಪಡೆದು ರೇತಸ್ವಿಯಾಗುತ್ತಾನೆ.

ದ್ವಿತೀಯಪತ್ನೀಸಂಯಾಜದ ದೇವತೆ ತ್ವಷ್ಟನು. ದ್ವಿತೀಯಪತ್ನೀಸಂಯಾಜದ

ತ್ವಷ್ಟಾ ವೈ ಪಶೂನಾಂ ಮಿಥುನಾನಾಗ್ಂ ರೂಪಕೃತ್ತೇನೈವ ಪಶೂನಾಗ್ಂ ರೂಪಮಾತ್ಮನ್ಧತ್ತೇ ದೇವಾನಾಂ ಪತ್ನೀರಗ್ನಿರ್ಗೃಹಪತಿರ್ಯಜ್ಞಸ್ಯ ಮಿಥುನಂ ತಯೋರಹಂ ದೇವಯಜ್ಯಯಾ

---

ತ್ವಷ್ಟಾ । ವೈ । ಪಶೂನಾಮ್ । ಮಿಥುನಾನಾಮ್ । ರೂಪಕೃದಿತಿ ರೂಪ-ಕೃತ್ । ತೇನ । ಏವ । ಪಶೂನಾಮ್ । ರೂಪಮ್। ಆತ್ಮನ್ನ್ । ಧತ್ತೇ । ದೇವಾನಾಮ್। ಪತ್ನೀಃ । ಅಗ್ನಿಃ । ಗೃಹಪತಿರಿತಿ ಗೃಹ-ಪತಿಃ । ಯಜ್ಞಸ್ಯ। ಮಿಥುನಮ್ । ತಯೋಃ। ಅಹಮ್ । ದೇವಯಜ್ಯಯೇತಿ ದೇವ-ಯಜ್ಯಯಾ ।

---

| | |
|---|---|
| ತ್ವಷ್ಟಾ ವೈ ಪಶೂನಾಮ್ ಮಿಥುನಾನಾಮ್ ರೂಪಕೃತ್ | ತ್ವಷ್ಟೃದೇವನೇ ಸ್ತ್ರೀಪುಂರೂಪವಾದ ಪಶುಗಳ ರೂಪಪುಷ್ಟಿಯನ್ನು ಮಾಡತಕ್ಕವನು. |
| ತೇನ ಏವ ಪಶೂನಾಮ್ ರೂಪಮ್ ಆತ್ಮನ್ನ್ ಧತ್ತೇ | ಅವನ ಅನುಗ್ರಹದಿಂದಲೇ ಯಜಮಾನನು ತನ್ನ ಮನೆಯಲ್ಲಿರುವ ಪಶುಗಳ ರೂಪಸಮೃದ್ಧಿಯನ್ನು ಪಡೆಯುತ್ತಾನೆ. |

**ಮೂರನೆಯ ಮತ್ತು ನಾಲ್ಕನೆಯ ಪತ್ನೀಸಂಯಾಜಾನುಮಂತ್ರಣವ್ಯಾಖ್ಯಾನ**

| | |
|---|---|
| ದೇವಾನಾಮ್ ಪತ್ನೀಃ ಅಗ್ನಿಃ ಗೃಹಪತಿಃ | 'ದೇವಪತ್ನಿಯರು[ಮತ್ತು] ಗೃಹಕ್ಕೆ ಸ್ವಾಮಿಯಾದ ಅಗ್ನಿಯು |
| ಯಜ್ಯಸ್ಯ ಮಿಥುನಮ್ | ಯಜ್ಞಕ್ಕೆ ಸಂಬಂಧಿಸಿದ ಸ್ತ್ರೀಪುಂರೂಪರಾಗಿದ್ದಾರೆ. |
| ತಯೋಃ ದೇವಯಜ್ಯಯಾ | ಅವರಿಗೆ ಸಂಬಂಧಿಸಿದ ತೃತೀಯ-ಚತುರ್ಥ ಪತ್ನೀಸಂಯಾಜಾನುಮಂತ್ರಣದಿಂದ |

---

ಅನುಮಂತ್ರಣದಿಂದ ಯಜಮಾನನು ತ್ವಷ್ಟನ ಅನುಗ್ರಹವನ್ನು ಪಡೆದು ಗವಾದಿ ಪಶುಗಳ ರೂಪಸಮೃದ್ಧಿಯನ್ನು ಪಡೆಯುತ್ತಾನೆ.

ದೇವಪತ್ನಿಯರನ್ನು ಉದ್ದೇಶಿಸಿ ಮಾಡುವ ಪತ್ನೀಸಂಯಾಜಹೋಮವು ಮೂರನೆಯದು. ಗೃಹಪತಿಯಾದ ಅಗ್ನಿಯನ್ನು ಉದ್ದೇಶಿಸಿ ಮಾಡುವ ಪತ್ನೀಸಂಯಾಜ ಹೋಮವು ನಾಲ್ಕನೆಯದು.

ಮಿಥುನೇನ ಪ್ರಭೂಯಾಸಮಿತ್ಯಾಹೈತಸ್ಮಾದ್ವೈ ಮಿಥುನಾ
ತ್ಪ್ರಜಾಪತಿರ್ಮಿಥುನೇನ [ಮಿಥುನೇನ(೫)] ಪ್ರಾಜಾಯತ
ತಸ್ಮಾ ದೇವ ಯಜಮಾನೋ ಮಿಥುನೇನ ಪ್ರಜಾಯತೇ
ವೇದೋಽಸಿ ವಿತ್ತಿರಸಿ

---

ಮಿಥುನೇನ । ಪ್ರೇತಿ । ಭೂಯಾಸಮ್ । ಇತಿ । ಆಹ । ಏತಸ್ಮಾತ್ । ವೈ । ಮಿಥುನಾತ್। ಪ್ರಜಾಪತಿರಿತಿ ಪ್ರಜಾ-ಪತಿಃ । ಮಿಥುನೇನ(೫)] ಪ್ರೇತಿ । ಅಜಾಯತ। ತಸ್ಮಾತ್। ಏವ । ಯಜಮಾನಃ । ಮಿಥುನೇನ । ಪ್ರೇತಿ । ಜಾಯತೇ । ವೇದಃ। ಅಸಿ । ವಿತ್ತಿಃ। ಅಸಿ ।

---

| | |
|---|---|
| ಅಹಮ್ ಮಿಥುನೇನ ಪ್ರಭೂಯಾಸಮ್ ಇತಿ ಆಹ | ನಾನು ಪುತ್ರೀಪುತ್ರರೂಪವಾದ ಮಿಥುನದಿಂದ 'ಉತ್ತಮವಾದ ವೃದ್ಧಿಯನ್ನು ಹೊಂದುವೆನು' ಎಂದು ಈ ಅನುಮಂತ್ರಣಮಂತ್ರವು ಹೇಳುತ್ತದೆ. |
| ಪ್ರಜಾಪತಿಃ ಏತಸ್ಮಾತ್ ವೈ ಮಿಥುನಾತ್ ಮಿಥುನೇನ | ಪ್ರಜಾಪತಿದೇವನು [ದೇವಪತ್ನಿಯರು ಮತ್ತು ಗೃಹ ಪತಿಯಾದ ಅಗ್ನಿದೇವ] ಎಂಬ ಯುಗ್ಮದಿಂದಲೇ ಲೋಕದಲ್ಲಿ ಸ್ತ್ರೀಪುಂರೂಪವಾದ ಜೋಡಿಯಿಂದ |
| ಪ್ರಾಜಾಯತ ಯಜಮಾನಃ ತಸ್ಮಾತ್ ಏವ | ಪ್ರಜಾಸೃಷ್ಟಿಯನ್ನು ಮಾಡಿದನು. ಯಜಮಾನನೂ [ಕೂಡ] ದೇವಪತ್ನಿಯರು ಮತ್ತು ಅಗ್ನಿದೇವರ ಜೋಡಿಯಿಂದಲೇ |
| ಮಿಥುನೇನ ಪ್ರಜಾಯತೇ | ಪುತ್ರೀಪುತ್ರರೂಪಪ್ರಜಾಸಂಪತ್ತಿಯಿಂದ ವೃದ್ಧಿ ಯನ್ನು ಹೊಂದುತ್ತಾನೆ. |

**ವೇದಾಭಿಮರ್ಶನಮಂತ್ರದ ವ್ಯಾಖ್ಯಾನ**
**ಯಜಮಾನವಾಚನಮಂತ್ರದ ವ್ಯಾಖ್ಯಾನ/[ಬೌಧಾಯನ]**
**ವೇದನಪ್ರಶಂಸೆ**

| | |
|---|---|
| ವೇದಃ ಅಸಿ ವಿತ್ತಿಃ ಅಸಿ | '[ಎಲೈ! ದರ್ಭಪುಂಜವೆ! ನೀನು] ವೇದವೆಂಬ ಹೆಸರುಳ್ಳವನಾಗಿದ್ದೀಯೆ. ದ್ರವ್ಯಲಾಭಸಾಧನ ವಾಗಿರುವೆ. |

ವಿದೇಯೇತ್ಯಾಹ ವೇದೇನ ವೈ ದೇವಾ ಅಸುರಾಣಾಂ ವಿತ್ತಂ ವೇದ್ಯಮವಿಂದಂತ ತದ್ವೇದಸ್ಯ ವೇದತ್ವಂ ಯದ್ಯದ್ಭ್ರಾತೃವ್ಯಸ್ಯಾಭಿಧ್ಯಾಯೇತ್ತಸ್ಯ ನಾಮ

---

ವಿದೇಯ । ಇತಿ । ಆಹ । ವೇದೇನ। ವೈ । ದೇವಾಃ । ಅಸುರಾಣಾಮ್ । ವಿತ್ತಮ್। ವೇದ್ಯಮ್ । ಅವಿಂದಂತ । ತತ್ । ವೇದಸ್ಯ । ವೇದತ್ವಮಿತಿ ವೇದ-ತ್ವಮ್। ಯದ್ಯದಿತಿ ಯತ್-ಯತ್। ಭ್ರಾತೃವ್ಯಸ್ಯ । ಅಭಿಧ್ಯಾಯೇದಿತ್ಯಭಿ–ಧ್ಯಾಯೇತ್। ತಸ್ಯ। ನಾಮ ।

---

| | |
|---|---|
| ವಿದೇಯ ಇತಿ ಆಹ | [ನಿನ್ನ ಅನುಗ್ರಹದಿಂದ ಶತ್ರುವಿನ ಧನಾದಿಗಳನ್ನು] ಹೊಂದುವೆನು' ಎಂದು ಶ್ರುತಿಯು ಹೇಳುತ್ತದೆ. |
| ವೇದೇನ ವೈ ದೇವಾಃ ಅಸುರಾಣಾಮ್ | ದೇವತೆಗಳು ವೇದದಿಂದಲೇ ರಾಕ್ಷಸರ |
| ವಿತ್ತಮ್ ವೇದ್ಯಮ್ ಅವಿಂದಂತ | ಮೊದಲು ಹೊಂದಿರುವುದನ್ನೂ, ಅನಂತರ ಹೊಂದುವುದನ್ನೂ ಹೊಂದಿದರು. |
| ತತ್ ವೇದಸ್ಯ ವೇದತ್ವಮ್ | ಆದುದರಿಂದಲೇ ವೇದಕ್ಕೆ [ದರ್ಭಪುಂಜಕ್ಕೆ] ವೇದವೆಂಬ[ಪ್ರಾಪ್ತಿಸಾಧನವೆಂಬ] ಅನ್ವರ್ಥಹೆಸರಾಗಿದೆ. |
| ಭ್ರಾತೃವ್ಯಸ್ಯ ಯದ್ಯತ್ ಅಭಿಧ್ಯಾಯೇತ್ | [ಯಜಮಾನನು] ಶತ್ರುವಿನ ಯಾವ ಯಾವ ವಸ್ತುವನ್ನು[ತನ್ನದಾಗಬೇಕೆಂದು] ಭಾವಿಸಿಕೊಳ್ಳುವನೋ |
| ತಸ್ಯ ನಾಮ | ಆ ವಸ್ತುವಿನ ಹೆಸರನ್ನು [ವಿದೇಯ ಎಂಬ ಪದಕ್ಕೆ ಮೊದಲು] |

---

ಇವರು ಯಜ್ಞಕ್ಕೆ ಸಂಬಂಧಿಸಿದ ಯುಗ್ಮದಂತೆ. ಇವರ ಇವರ ಅನುಗ್ರಹದಿಂದಲೇ ಹಿಂದೆ ಪ್ರಜಾಪತಿಯು ಲೋಕದಲ್ಲಿ ಪ್ರಜಾಸೃಷ್ಟಿಯನ್ನು ಮಾಡಿದನು. ಈ ಪತ್ನೀಸಂಯಾಜಗಳ ಅನುಮಂತ್ರಣಮಂತ್ರವನ್ನು ಹೇಳುವುದರಿಂದ ಯಜಮಾನನು ಗಂಡುಮಕ್ಕಳು, ಹೆಣ್ಣುಮಕ್ಕಳು ಮೊದಲಾದ ಪ್ರಜಾಸಮೃದ್ಧಿಯನ್ನು ಪಡೆಯುತ್ತಾನೆ.

ಗೃಹ್ಣೀಯಾತ್ತದೇವಾಸ್ಯ ಸರ್ವಂ ವೃಂಕ್ತೇ ಘೃತವಂತಂ
ಕುಲಾಯಿನಗ್ಂ ರಾಯಸ್ಪೋಷಗ್ಂ ಸಹಸ್ರಿಣಂ ವೇದೋ
ದದಾತು ವಾಜಿನಮಿತ್ಯಾಹ

---

ಗೃಹ್ಣೀಯಾತ್। ತತ್ । ಏವ । ಅಸ್ಯ । ಸರ್ವಮ್ । ವೃಂಕ್ತೇ । ಘೃತವಂತಮಿತಿ ಘೃತ-ವಂತಮ್। ಕುಲಾಯಿನಮ್ । ರಾಯಃ । ಪೋಷಮ್ । ಸಹಸ್ರಿಣಮ್। ವೇದಃ। ದದಾತು । ವಾಜಿನಮ್ । ಇತಿ । ಆಹ ।

---

| | |
|---|---|
| ತತ್ ಏವ ಅಸ್ಯ ಸರ್ವಂ ವೃಂಕ್ತೇ | ತೆಗೆದುಕೊಳ್ಳಬೇಕು. ಆದರಿಂದಲೇ ಈ ಶತ್ರುವಿನ ಎಲ್ಲವನ್ನೂ ಶತ್ರುವಿಗಿಲ್ಲದಂತೆ ಮಾಡುತ್ತಾನೆ [ತಾನು ಹೊಂದುತ್ತಾನೆ]. |

**'ವೇದೋऽಸಿ' ಎಂಬ ಮಂತ್ರದ ಕೊನೆಯ ಭಾಗದ ವ್ಯಾಖ್ಯಾನ**

| | |
|---|---|
| ವೇದಃ ಘೃತವಂತಮ್ ಕುಲಾಯಿನಮ್ ವಾಜಿನಮ್ ಸಹಸ್ರಿಣಮ್ ರಾಯಃ ಪೋಷಮ್ ದದಾತು ಇತಿ ಆಹ | 'ವೇದವು ತುಪ್ಪ ಮೊದಲಾದವುಗಳಿಂದ ಸಮೃದ್ಧವಾದ, ಮನೆಗಳುಳ್ಳ, ಅನ್ನಸಮೃದ್ಧಿಯುಳ್ಳ ಸಹಸ್ರಸಂಖ್ಯಾಕವಾದ ಧನಸಮೃದ್ಧಿಯನ್ನು ಕೊಡಲಿ' ಎಂದು ಈ ಶ್ರುತಿಭಾಗವು ಹೇಳುತ್ತದೆ. |

---

ವೇದಾಭಿಮರ್ಶನ ಮಂತ್ರವು/ಯಜಮಾನವಾಚನಮಂತ್ರವು 'ಎಲೈ! ವೇದವೇ! ನೀನು ವೇದವೆಂಬ ಅನ್ವರ್ಥವಾದ ಹೆಸರುಳ್ಳವನು. ವೇದವೂ [ಪ್ರಾಪ್ತಿಸಾಧನ] ಆಗಿದ್ದೀಯೆ. ನಿನ್ನಿಂದ ಶತ್ರುಗಳ ಗೃಹಾದಿಗಳನ್ನೂ ಹೊಂದುವೆನು' ಎಂದು ಹೇಳುತ್ತದೆ. ಈ ವೇದದಿಂದಲೂ ದೇವತೆಗಳು ಅಸುರರು ಹೊಂದಿರುವ ಮತ್ತು ಮುಂದೆ ಹೊಂದಲಿರುವ ವಸ್ತುಗಳನ್ನು ಪಡೆದರು. ಆದ್ದರಿಂದಲೇ ವೇದಶಬ್ದವು [ಪ್ರಾಪ್ತಿಸಾಧನವಾದುದರಿಂದ] ಅನ್ವರ್ಥವಾಗಿದೆ.

ಶತ್ರುವಿಗೆ ಸಂಬಂಧಿಸಿದ ಯಾವ ವಸ್ತುವನ್ನು ತನಗಾಗಬೇಕೆಂದು ಯಜಮಾನನು ಆಶಿಸುತ್ತಾನೆಯೋ ಆದರ ಹೆಸರನ್ನು **'ವಿದೇಯ'** ಎಂಬ ಪದದ ಹಿಂದೆ ಸೇರಿಸಿ ಹೇಳಬೇಕು. [ದ್ವೇಷಿಯ ಹೆಸರನ್ನೂ, ಅವನಿಗೆ ಸಂಬಂಧಿಸಿದ ವಸ್ತುವಿನ ಹೆಸರನ್ನು **'ವಿದೇಯ'** ಎಂಬ ಪದಕ್ಕೆ ಮೊದಲು ಹೇಳಬೇಕು]. ಇದರಿಂದ ಶತ್ರುವಿನ ಆ ವಸ್ತುವನ್ನು

ಪ್ರ ಸಹಸ್ರಂ ಪಶೂನಾಪ್ನೋತ್ಯಾಸ್ಯ ಪ್ರಜಾಯಾಂ ವಾಜೀ ಜಾಯತೇ ಯ ಏವಂ ವೇದ ॥ ೪-20 ॥

[ದರ್ಶಪೂರ್ಣಮಾಸಯೋರುಭಯತೋ ದೇವಾಶ್ವಾಃ ಸುರೇತಾಃ ಪ್ರಜಾಪತಿರ್ಮಿಥುನೇನಾಪ್ನೋತ್ಯಷ್ಟೌ ಚ ॥]

---

ಪ್ರೇತಿ । ಸಹಸ್ರಮ್ । ಪಶೂನ್ । ಆಪ್ನೋತಿ । ಏತಿ । ಅಸ್ಯ । ಪ್ರಜಾಯಾಮಿತಿ ಪ್ರ-ಜಾಯಾಮ್ । ವಾಜೀ । ಜಾಯತೇ । ಯಃ । ಏವಮ್ । ವೇದ ॥ ೪ ॥

---

| | |
|---|---|
| ಸಹಸ್ರಮ್ ಪಶೂನ್ ಪ್ರ ಆಪ್ನೋತಿ | ಸಾವಿರಾರು ಸಂಖ್ಯೆಯ ಪಶುಗಳನ್ನು [ಈ ಮಂತ್ರವನ್ನು ಹೇಳುವ ಯಜಮಾನನು] ಪಡೆಯುತ್ತಾನೆ. |
| ಅಸ್ಯ ಪ್ರಜಾಯಾಮ್ ವಾಜೀ ಆ ಜಾಯತೇ | ಇವನ ಸಂತತಿಯಲ್ಲಿ ಅನ್ನವಂತನು ಎಲ್ಲೆಲ್ಲಿಯೂ ಹುಟ್ಟುತ್ತಾನೆ. |
| ಯಃ ಏವಮ್ ವೇದ | ಯಾವನು ಹೀಗೆ ತಿಳಿಯುತ್ತಾನೆಯೋ [ಸಃ = ಅವನೂ ಈ ಫಲವನ್ನು ಹೊಂದುತ್ತಾನೆ.] |

---

ಯಜಮಾನನು ಹೊಂದುತ್ತಾನೆ.[೧]

ಈ ಮಂತ್ರದ ಅಂತ್ಯಭಾಗದಲ್ಲಿ 'ಘೃತವಂತಂ ರಾಯಸ್ಪೋಷಂ ದದಾತು' ಎಂದಿದೆ. ಇದನ್ನು ಹೇಳುವುದರಿಂದ ವೇದವು ಸಹಸ್ರಸಂಖ್ಯೆಯಲ್ಲಿ ಪಶುಗಳನ್ನು ಕೊಡುತ್ತದೆ. ಈ ಯಜಮಾನನ ಸಂತತಿಯಲ್ಲಿ ಎಲ್ಲರೂ ಅನ್ನಸಮೃದ್ಧಿಯುಳ್ಳವರಾಗುತ್ತಾರೆ.

ಹೀಗೆ ತಿಳಿದವನೂ ಇಂತಹ ಫಲವನ್ನು ಪಡೆಯುತ್ತಾನೆ.[೨]

---

೧. ಮಂತ್ರದಲ್ಲಿ 'ಏದೇಯ' = [ಹೊಂದುವೆನು] ಎಂದಿದೆ. ಬ್ರಾಹ್ಮಣದಲ್ಲಿ 'ವೃಂಕ್ತೇ' [ಹೋಗಲಾಡಿಸುತ್ತಾನೆ.] ಎಂದಿದೆ. ಆದುದರಿಂದ ಶತ್ರುವಿಗಿಲ್ಲದಂತೆ ಮಾಡಿ ಯಜಮಾನನು ತಾನು ಪಡೆಯುತ್ತಾನೆಂದು ವಿವರಿಸಲಾಗಿದೆ.

೨. ಇದನ್ನು ಅರ್ಥವೇದನಾಪ್ರಶಂಸಾಮಾತ್ರವೆಂದು ಹೇಳುತ್ತಾರೆ.

## ॥ ಪಂಚಮೋಽನುವಾಕಃ ॥

ಧ್ರುವಾಂ ವೈ ರಿಚ್ಯಮಾನಾಂ ಯಜ್ಞೋಽನು ರಿಚ್ಯತೇ ಯಜ್ಞಂ
ಯಜಮಾನೋ ಯಜಮಾನಂ ಪ್ರಜಾ ಧ್ರುವಾಮಾಪ್ಯಾಯ-
ಮಾನಾಂ ಯಜ್ಞೋಽನ್ವಾಪ್ಯಾಯತೇ

---

ಧ್ರುವಾಮ್ । ವೈ । ರಿಚ್ಯಮಾನಾಮ್ । ಯಜ್ಞಃ । ಅನ್ವಿತಿ । ರಿಚ್ಯತೇ । ಯಜ್ಞಮ್। ಯಜಮಾನಃ। ಯಜಮಾನಮ್। ಪ್ರಜಾ ಇತಿ ಪ್ರ-ಜಾಃ। ಧ್ರುವಾಮ್। ಆಪ್ಯಾಯಮಾನಾ-ಮಿತ್ಯಾ-ಪ್ಯಾಯಮಾನಾಮ್ । ಯಜ್ಞಃ । ಅನು । ಏತಿ । ಪ್ಯಾಯತೇ ।

---

ನಾಲ್ಕನೆಯ ಅನುವಾಕದಲ್ಲಿ ಶೇಷಾಹುತ್ಯನುಮಂತ್ರಣಮಂತ್ರಗಳನ್ನು ವ್ಯಾಖ್ಯಾನ ಮಾಡಲಾಯಿತು. ಈ ಐದನೆಯ ಅನುವಾಕದಲ್ಲಿ ಆಪ್ಯಾಯನಾದಿಮಂತ್ರಗಳ ವ್ಯಾಖ್ಯೆಯಿದೆ.

### ಆಪ್ಯಾಯನಮಂತ್ರದ ಪ್ರಸ್ತಾವ

| | |
|---|---|
| ರಿಚ್ಯಮಾನಾಮ್ ಧ್ರುವಾಮ್ [ಅನು] ವೈ ಯಜ್ಞಃ ಅನುರಿಚ್ಯತೇ | ಶೂನ್ಯವಾಗಿರುವ ಧ್ರುವಾಪಾತ್ರವನ್ನು ಅನುಸರಿಸಿ ಯಜ್ಞವು ಪೂರ್ಣವಾಗದೆ ಫಲಶೂನ್ಯವಾಗುತ್ತದೆ. |
| ಯಜ್ಞಮ್ ಯಜಮಾನಃ | [ಆ ಶೂನ್ಯವಾದ] ಯಜ್ಞವನ್ನು [ಅನುಸರಿಸಿ] ಯಜಮಾನನೂ [ಫಲರಹಿತನಾಗುತ್ತಾನೆ] |
| ಯಜಮಾನಮ್ ಪ್ರಜಾಃ | ಯಜಮಾನನನ್ನು [ಅನುಸರಿಸಿ] ಪ್ರಜೆಗಳೂ [ಅನ್ನಾದಿಶೂನ್ಯರಾಗುತ್ತಾರೆ.] |
| ಧ್ರುವಾಮ್ ಆಪ್ಯಾಯಮಾನಾಮ್ [ಅನು] ಯಜ್ಞಃ ಅನು ಆಪ್ಯಾಯತೇ | ಹೋಮದ್ರವ್ಯಪೂರ್ಣವಾದ ಧ್ರುವೆಯನ್ನನುಸರಿಸಿ ಯಜ್ಞವು ಸಂಪೂರ್ಣವಾಗುತ್ತದೆ. |

---

**ತಾತ್ಪರ್ಯ : 'ಸರ್ವಸ್ಮೈ ವಾ ಏತದ್ಯಜ್ಞಾಯ ಗೃಹ್ಯತೇ। ಯದ್ಧ್ರುವಾಯಾಮಾಜ್ಯಮ್।** ಎಂದಿರುವುದರಿಂದ ಸರ್ವಯಜ್ಞಸಾಧನವಾದ ಆಜ್ಯವನ್ನು ಧ್ರುವೆಯಲ್ಲಿ ಗ್ರಹಣ ಮಾಡಬೇಕು. ಧ್ರುವಾಪಾತ್ರವು ಶೂನ್ಯವಾದರೆ ಯಜ್ಞವು ಅಸಂಪೂರ್ಣ;

ಯಜ್ಞಂ ಯಜಮಾನೋ ಯಜಮಾನಂ ಪ್ರಜಾ ಆ ಪ್ಯಾಯತಾಂ

ಧ್ರುವಾ ಘೃತೇನೇತ್ಯಾಹ ಧ್ರುವಾಮೇವಾಽಽಪ್ಯಾಯಯತಿ

ತಾಮಾಪ್ಯಾಯಮಾನಾಂ ಯಜ್ಞೋಽನ್ವಾಪ್ಯಾಯತೇ

---

ಯಜ್ಞಮ್। ಯಜಮಾನಃ । ಯಜಮಾನಮ್। ಪ್ರಜಾ ಇತಿ ಪ್ರ-ಜಾಃ । ಏತಿ । ಪ್ಯಾಯತಾಮ್ । ಧ್ರುವಾ। ಘೃತೇನ। ಇತಿ । ಆಹ । ಧ್ರುವಾಮ್। ಏವ । ಏತಿ । ಪ್ಯಾಯಯತಿ । ತಾಮ್ । ಆಪ್ಯಾಯಮಾನಾಮಿತ್ಯಾ-ಪ್ಯಾಯಮಾನಾಮ್ । ಯಜ್ಞಃ । ಅನು । ಏತಿ । ಪ್ಯಾಯತೇ ।

---

| | |
|---|---|
| ಯಜ್ಞಮ್ ಯಜಮಾನಃ ಯಜಮಾನಮ್ ಪ್ರಜಾಃ | [ಪೂರ್ಣವಾದ] ಯಜ್ಞವನ್ನು [ಅನುಸರಿಸಿ] ಯಜಮಾನನೂ ಫಲವಂತನಾಗುತ್ತಾನೆ. ಯಜಮಾನನನ್ನು ಅನುಸರಿಸಿ ಪ್ರಜೆಗಳೂ ಅನ್ನಾದಿಸಮೃದ್ಧಿಯುಳ್ಳವರಾಗುತ್ತಾರೆ. |

## ಧ್ರುವಾಪ್ಯಾಯನಾನುಮಂತ್ರಣವ್ಯಾಖ್ಯಾನ

| | |
|---|---|
| ಧ್ರುವಾ ಘೃತೇನ ಆಪ್ಯಾಯತಾಮ್ ಇತಿ ಆಹ | 'ಧ್ರುವಾಪಾತ್ರವು ಆಜ್ಯದಿಂದ ತುಂಬಲ್ಪಡಲಿ' ಎಂದು ಆಪ್ಯಾಯನಮಂತ್ರವು ಹೇಳುತ್ತದೆ. |
| ಧ್ರುವಾಮ್ ಏವ ಆಪ್ಯಾಯಯತಿ | ಧ್ರುವಾಪಾತ್ರವನ್ನೇ ತುಂಬುತ್ತಾನೆ. |
| ತಾಮ್ ಆಪ್ಯಾಯಮಾನಾಮ್ ಅನು ಯಜ್ಞಃ ಆಪ್ಯಾಯತೇ | ಪೂರ್ಣವಾದ ಆ ಧ್ರುವಾಪಾತ್ರವನ್ನನುಸರಿಸಿ ಯಜ್ಞವು ಪೂರ್ಣವಾಗುತ್ತದೆ. |

---

ಯಜ್ಞವನ್ನನುಸರಿಸಿ ಯಜಮಾನನೂ ಫಲಹೀನನು; ಯಜಮಾನನನ್ನನುಸರಿಸಿ ಪ್ರಜೆಗಳೂ ಅನ್ನಾದಿಶೂನ್ಯರಾಗುತ್ತಾರೆ. ಧ್ರುವೆಯನ್ನು ತುಂಬುವುದರಿಂದ ಯಜ್ಞವೂ ಸಂಪೂರ್ಣ; ಅದನ್ನನುಸರಿಸಿ ಯಜಮಾನನೂ ಫಲಪೂರ್ಣ; ಅವನನ್ನನುಸರಿಸಿ ಪ್ರಜೆಗಳೂ ಅನ್ನಾದಿಸಮೃದ್ಧಿಯುಳ್ಳವರಾಗುತ್ತಾರೆ.

'ಧ್ರುವಾಪಾತ್ರವು ತುಪ್ಪದಿಂದ ಪೂರ್ಣವಾಗಲಿ' ಎಂದು ಧ್ರುವಾಪ್ಯಾಯನ ಮಂತ್ರವು ಹೇಳುತ್ತದೆ. ಇದರಿಂದ ಧ್ರುವಾಪಾತ್ರವನ್ನು ಪೂರ್ಣಗೊಳಿಸಿದಂತಾಯಿತು. ಸಂಪೂರ್ಣವಾದ ಆ ಪಾತ್ರವನ್ನು ಅನುಸರಿಸಿ, ಯಜ್ಞವೂ ಪೂರ್ಣ; ಯಜ್ಞವನ್ನು

ಯಜ್ಞಂ ಯಜಮಾನೋ ಯಜಮಾನಂ ಪ್ರಜಾಃ ಪ್ರಜಾಪತೇ
ರ್ವಿಭಾನ್ನಾಮ ಲೋಕಸ್ತಸ್ಮಿಗ್‌ಂಸ್ತ್ವಾ ದಧಾಮಿ ಸಹ
[ಯಜಮಾನೇನೇತಿ (೧) ಆಹಾಯಂ] ಯಜಮಾನೇನೇತ್ಯಾ
ಹಾಯಂ ವೈ ಪ್ರಜಾಪತೇರ್ವಿಭಾನ್ನಾಮ ಲೋಕ–

---

ಯಜ್ಞಮ್ । ಯಜಮಾನಃ । ಯಜಮಾನಮ್ । ಪ್ರಜಾ ಇತಿ ಪ್ರ-ಜಾಃ । ಪ್ರಜಾಪತೇರಿತಿ ಪ್ರಜಾ-ಪತೇಃ । ವಿಭಾನಿತಿ ವಿ-ಭಾನ್ । ನಾಮ । ಲೋಕಃ । ತಸ್ಮಿನ್ನ್ । ತ್ವಾ । ದಧಾಮಿ । ಸಹ । ಯಜಮಾನೇನ (೧) । ಇತಿ । ಆಹ । ಅಯಮ್। ವೈ । ಪ್ರಜಾಪತೇರಿತಿ ಪ್ರಜಾ-ಪತೇಃ । ವಿಭಾನಿತಿ ವಿ-ಭಾನ್। ನಾಮ । ಲೋಕಃ ।

---

| | |
|---|---|
| ಯಜ್ಞಮ್ ಯಜಮಾನಃ | ಯಜ್ಞವನ್ನು ಅನುಸರಿಸಿ ಯಜಮಾನನೂ ಫಲ ಪೂರ್ಣನಾಗುತ್ತಾನೆ. |
| ಯಜಮಾನಮ್ ಪ್ರಜಾಃ | ಯಜಮಾನನನ್ನನುಸರಿಸಿ ಪ್ರಜೆಗಳೂ ಅನ್ನಾದಿ ಸಮೃದ್ಧರಾಗುತ್ತಾರೆ. |

**ಯಜಮಾನಭಾಗಪ್ರಾಶನಾನುಮಂತ್ರಣಮಂತ್ರದ ವ್ಯಾಖ್ಯಾನ**

| | |
|---|---|
| ಪ್ರಜಾಪತೇಃ ವಿಭಾನ್ ನಾಮ ಲೋಕಃ | [ವಿಶೇಷವಾಗಿ ಕರ್ಮಭೂಮಿಯಾಗಿ ಪ್ರಕಾಶಿಸುವುದರಿಂದ] [ಸೂರ್ಯಾದಿಗಳಿಂದ ವಿಶೇಷವಾಗಿ ಪ್ರಕಾಶಿಸುವುದರಿಂದ] ಈ ಭೂಲೋಕವು ಪ್ರಜಾಪತಿಗೆ ಸಂಬಂಧಿಸಿದ 'ವಿಭಾನ್' ಎಂದು ಪ್ರಸಿದ್ಧವಾದ ಲೋಕವಾಗಿದೆ. |
| ತಸ್ಮಿನ್ ತ್ವಾ ಯಜಮಾನೇನ ಸಹ ದಧಾಮಿ | ಆ ಲೋಕದಲ್ಲಿ ನಿನ್ನನ್ನು [ಯಜಮಾನಭಾಗವನ್ನು] ಯಜಮಾನನೊಡನೆ ಇಡುತ್ತೇನೆ. |
| ಇತಿ ಆಹ | ಹೀಗೆಂದು ಪ್ರಾಶನಮಂತ್ರವು ಹೇಳುತ್ತದೆ. |
| ಅಯಮ್ ವೈ ಪ್ರಜಾಪತೇಃ ವಿಭಾನ್ ನಾಮ ಲೋಕಃ | ಈ ಭೂಲೋಕವೇ ಪ್ರಜಾಪತಿಯ 'ವಿಭಾನ್' ಎಂದು ಪ್ರಸಿದ್ಧವಾದ ಲೋಕವಾಗಿದೆ. |

ಸ್ತಸ್ಮಿನ್ನೇವೈನಂ ದಧಾತಿ ಸಹ ಯಜಮಾನೇನ ರಿಚ್ಯತ ಇವ ವಾ ಏತದ್ಯದ್ಯಜತೇ ಯದ್ಯಜಮಾನಭಾಗಂ ಪ್ರಾಶ್ನಾತ್ಯಾತ್ಮಾನ ಮೇವ

---

ತಸ್ಮಿನ್ನ್। ಏವ । ಏನಮ್। ದಧಾತಿ । ಸಹ । ಯಜಮಾನೇನ । ರಿಚ್ಯತೇ । ಇವ। ವೈ । ಏತತ್ । ಯತ್ । ಯಜತೇ । ಯತ್ । ಯಜಮಾನಭಾಗಮಿತಿ ಯಜಮಾನ-ಭಾಗಮ್ । ಪ್ರಾಶ್ನಾತೀತಿ ಪ್ರ-ಅಶ್ನಾತಿ । ಆತ್ಮಾನಮ್ । ಏವ ।

---

| | |
|---|---|
| ತಸ್ಮಿನ್ ಏವ ಏನಮ್ ಯಜಮಾನೇನ ಸಹ ದಧಾತಿ | ಆ ಲೋಕದಲ್ಲಿಯೇ ಈ ಯಜಮಾನಭಾಗವನ್ನು ಯಜಮಾನನೊಡನೆ[ಅಧ್ವರ್ಯುವು] ಇಡುತ್ತಾನೆ. |

**ಯಜಮಾನಭಾಗದ ಪ್ರಾಶನದ ಪ್ರಶಂಸೆ**

| | |
|---|---|
| ಯಜತೇ (ಇತಿ)ಯತ್ ರಿಚ್ಯತೇ ಇವ ವೈ ಏತತ್ | [ಯಜಮಾನನು ನಿಯಮಗಳನ್ನು ಕೈಗೊಂಡು ಪುರೋಡಾಶಾದಿದ್ರವ್ಯಗಳಿಂದ] ಯಾಗವನ್ನು ಮಾಡುತ್ತಾನೆಂಬುದು ಯಾವುದುಂಟೋ [ಅದರಿಂದ] ಕೃಶನಂತೆಯೂ, ದ್ರವ್ಯಹೀನನಂತೆಯೂ ಆಗುತ್ತಾನೆ/ಇದು ಕೃಶನಂತೆ ಮಾಡುತ್ತದೆ. |
| ಯಜಮಾನಭಾಗಂ ಪ್ರಾಶ್ನಾತಿ [ಇತಿ]ಯತ್ | ಯಜಮಾನಭಾಗವನ್ನು ಪ್ರಾಶನ ಮಾಡುತ್ತಾನೆಂಬುದು ಯಾವುದುಂಟೋ [ಅದರಿಂದ] |
| ಆತ್ಮಾನಮ್ ಏವ | [ಯಜಮಾನನು] ತನ್ನನ್ನು |

---

ಅನುಸರಿಸಿ ಯಜಮಾನನೂ ಪರಿಪೂರ್ಣ; ಯಜಮಾನನನ್ನು ಅನುಸರಿಸಿ ಅವನಿಗೆ ಸಂಬಂಧಿಸಿದ ಪ್ರಜೆಗಳೂ ಅನ್ನಪಶ್ವಾದಿಗಳಿಂದ ಸಮೃದ್ಧರಾಗುತ್ತಾರೆ.

'ಸೂರ್ಯಾದಿಗಳಿಂದ ಪ್ರಕಾಶಿತವಾಗಿ ಕರ್ಮಭೂಮಿಯಾಗಿರುವ ಈ ಭೂಲೋಕವು ಪ್ರಜಾಪತಿಯ 'ವಿಭಾನ್' ಎಂದು ಪ್ರಸಿದ್ಧವಾದ ಲೋಕವಾಗಿದೆ. ಈ ಲೋಕದಲ್ಲಿ ಯಜಮಾನಭಾಗನಾದ ನಿನ್ನನ್ನು ಯಜಮಾನನೊಡನೆ ಸ್ಥಾಪಿಸುತ್ತೇನೆ' ಎಂದು ಈ ಮಂತ್ರವು ಹೇಳುತ್ತದೆ. ಈ ಲೋಕವೇ ಪ್ರಜಾಪತಿಯ 'ವಿಭಾನ್' ಎಂದು ಪ್ರಸಿದ್ಧವಾದ ಲೋಕವಾಗಿದೆ. ಆ ಲೋಕದಲ್ಲಿಯೇ ಯಜಮಾನಭಾಗವನ್ನೂ, ಯಜಮಾನನನ್ನೂ ಅಧ್ವರ್ಯುವು ಸ್ಥಿರವಾಗಿರುವಂತೆ ಮಾಡುತ್ತಾನೆ.

ಪ್ರೀಣಾತ್ಯೇತಾವಾನ್ ವೈ ಯಜ್ಞೋ ಯಾವಾನ್ ಯಜಮಾನ
ಭಾಗೋ ಯಜ್ಞೋ ಯಜಮಾನೋ ಯದ್ಯಜಮಾನಭಾಗಂ
ಪ್ರಾಶ್ನಾತಿ ಯಜ್ಞ ಏವ ಯಜ್ಞಂ ಪ್ರತಿಷ್ಠಾಪಯತ್ಯೇತದ್ವೈ
ಸೂಯವಸಗ್ಂ ಸೋದಕಂ ಯದ್ಬರ್ಹಿಶ್ಚಾಪಶ್ಚೈತದ್ಯಜ-
ಮಾನಸ್ಯಾಯತನಂ [..ಶ್ಚೈತತ್ (೨) ಯಜಮಾನಸ್ಯಾಯತನಂ]

---

ಪ್ರೀಣಾತಿ । ಏತಾವಾನ್। ವೈ । ಯಜ್ಞಃ । ಯಾವಾನ್ । ಯಜಮಾನಭಾಗ ಇತಿ
ಯಜಮಾನ-ಭಾಗಃ । ಯಜ್ಞಃ। ಯಜಮಾನಃ । ಯತ್ । ಯಜಮಾನಭಾಗಮಿತಿ
ಯಜಮಾನ-ಭಾಗಮ್ । ಪ್ರಾಶ್ನಾತೀತಿ ಪ್ರ-ಅಶ್ನಾತಿ। ಯಜ್ಞೇ । ಏವ । ಯಜ್ಞಮ್।
ಪ್ರತೀತಿ। ಸ್ಥಾಪಯತಿ । ಏತತ್। ವೈ । ಸೂಯವಸಮಿತಿ ಸು-ಯವಸಮ್ । ಸೋದಕಮಿತಿ
ಸ-ಉದಕಮ್। ಯತ್। ಬರ್ಹಿಃ । ಚ । ಆಪಃ । ಚ । ಏತತ್(೨)। ಯಜಮಾನಸ್ಯ।
ಆಯತನಮಿತ್ಯಾ-ಯತನಮ್ ।

---

| | |
|---|---|
| ಪ್ರೀಣಾತಿ ಏತಾವಾನ್ ವೈ ಯಜ್ಞಃ ಯಾವಾನ್ ಯಜಮಾನಭಾಗಃ | ತೃಪ್ತಿಪಡಿಸಿ ಸಂತೋಷಗೊಳಿಸುತ್ತಾನೆ. ಯಜಮಾನಭಾಗವೇ ಯಜಮಾನನು ಉಪಯೋಗಿಸುವ ಯಜಮಾನಭಾಗವಾಗಿದೆ. |
| ಯಜ್ಞಃ ಯಜಮಾನಃ | ಯಜಮಾನನೇ ಯಜ್ಞಸ್ವರೂಪನಾಗಿದ್ದಾನೆ. |
| ಯತ್ ಯಜಮಾನಭಾಗಮ್ ಪ್ರಾಶ್ನಾತಿ | ಯಜಮಾನಭಾಗವನ್ನು ಪ್ರಾಶನ ಮಾಡುವುದರಿಂದ |
| ಯಜ್ಞೇ ಏವ ಯಜ್ಞಮ್ ಪ್ರತಿಷ್ಠಾಪಯತಿ | ಯಜ್ಞದಲ್ಲಿಯೇ ಯಜ್ಞವನ್ನು ನೆಲೆಗೊಳಿಸಿದಂತಾಗುತ್ತದೆ. |

### ಪ್ರಣೀತಾಮೋಕ್ಷಣವಿಧಿ-ಪ್ರಶಂಸೆ

| | |
|---|---|
| ಯತ್ ಬರ್ಹಿಃ ಚ ಆಪಃ ಚ | ವೇದಿಯಲ್ಲಿ ಹರಡಿರುವ ದರ್ಭೆಯೂ, ಪೂರ್ಣಪಾತ್ರದಲ್ಲಿರುವ ಜಲವೂ ಯಾವುದುಂಟೋ, |
| ಏತತ್ ವೈ ಸೂಯವಸಮ್ ಸೋದಕಮ್ | [ಇಡೀ ವೇದಿಯಲ್ಲಿ ಬರ್ಹಿಸ್ಸನ್ನು ಆಸ್ತೀರ್ಣ ಮಾಡಿರುವುದರಿಂದ ಇದು ತೃಣಸಮೃದ್ಧವಾಗಿದೆ. [ಜಲಪೂರ್ಣವಾದ ಪೂರ್ಣಪಾತ್ರೆಯಿರುವುದರಿಂದ] ಒಳ್ಳೆಯ ಜಲಸಮೃದ್ಧವೂ ಆಗಿದೆ. |

ಯದ್ವೇದಿರ್ಯತ್ಪೂರ್ಣಪಾತ್ರಮಂತರ್ವೇದಿ ನಿನಯತಿ ಸ್ವ ಏವಾಯತನೇ ಸೂಯವಸಗ್‍ಂ ಸೋದಕಂ ಕುರುತೇ ಸದಸಿ ಸನ್ಮೇ ಭೂಯಾ

---

ಯತ್। ವೇದಿಃ। ಯತ್। ಪೂರ್ಣಪಾತ್ರಮಿತಿ ಪೂರ್ಣ-ಪಾತ್ರಮ್ । ಅಂತರ್ವೇದೀತ್ಯಂತಃ -ವೇದಿ । ನಿನಯತೀತಿ ನಿ-ನಯತಿ । ಸ್ವೇ । ಏವ । ಆಯತನ ಇತ್ಯಾ-ಯತನೇ । ಸೂಯವಸಮಿತಿ ಸು-ಯವಸಮ್। ಸೋದಕಮಿತಿ ಸ-ಉದಕಮ್ । ಕುರುತೇ । ಸತ್। ಅಸಿ । ಸತ್ । ಮೇ । ಭೂಯಾಃ ।

---

| | |
|---|---|
| ಯತ್ ವೇದಿಃ ಯಜಮಾನಸ್ಯ ಆಯತನಮ್ | [ಹವಿರ್ಧಾರಕವಾದ] ವೇದಿಯು ಯಜಮಾನನ ಸ್ಥಾನವಾಗಿದೆ. |
| ಯತ್ ಪೂರ್ಣಪಾತ್ರಮ್ ಅಂತರ್ವೇದಿ ನಿನಯತಿ | ಪೂರ್ಣಪಾತ್ರದ ನೀರನ್ನು ವೇದಿಯ ಒಳಭಾಗ ದಲ್ಲಿ ಚೆಲ್ಲುವುದರಿಂದ |
| ಸ್ವೇ ಏವ ಆಯತನೇ ಸೋದಕಮ್ ಕುರುತೇ | ತನ್ನ ಸ್ಥಾನದಲ್ಲಿಯೇ ತೃಣಸಮೃದ್ಧಿಯಿರುವಂತೆ ಯೂ, ಜಲಸಮೃದ್ಧಿಯಿರುವಂತೆಯೂ ಮಾಡು ತ್ತಾನೆ. |

**ಪ್ರಣೀತಾಮೋಕ್ಷಣಮಂತ್ರದ ವ್ಯಾಖ್ಯಾನ**

| | |
|---|---|
| ಸತ್ ಅಸಿ ಸತ್ ಮೇ ಭೂಯಾಃ | ['ಓ! ಜಲಪೂರ್ಣಪಾತ್ರವೇ! ನೀನು] ಒಳ್ಳೆಯದಾಗಿ ದ್ದೀಯೆ. ನನಗೂ ಒಳ್ಳೆಯದಾಗು' [ಇದೇ ಮೊದ ಲಾಗಿ] |

---

ನಿಯಮಗಳನ್ನು ಕೈಗೊಂಡು ಯಜ್ಞವನ್ನು ಮಾಡುವ ಯಜಮಾನನು ಕೃಶನಂತೆ, ದ್ರವ್ಯಹೀನನಂತೆಯೂ ಆಗುತ್ತಾನೆ. ಯಜಮಾನಭಾಗಪ್ರಾಶನದಿಂದ ಅವನು ತನ್ನನ್ನೇ ಸಂತೋಷಪಡಿಸುತ್ತಾನೆ. ಯಜ್ಞದಲ್ಲಿ ಪ್ರಾಶನ ಮಾಡುವ ಹವಿಃ ಶೇಷವೇ ಯಜಮಾನ ನಿಗೆ ಸೇರುತ್ತದೆ. ಮಿಕ್ಕ ಭಾಗವು ದೇವತೆಗಳ ಮತ್ತು ಋತ್ವಿಜರ ಭಾಗವಾಗಿದೆ. ಯಜ್ಞ ಸ್ವಾಮಿಯಾದುದರಿಂದ ಯಜಮಾನನು ಯಜ್ಞಸ್ವರೂಪನಾಗಿರುತ್ತಾನೆ. ಯಜಮಾನ ಭಾಗಪ್ರಾಶನದಿಂದ ಯಜ್ಞದಲ್ಲಿಯೇ ಯಜ್ಞವನ್ನು ನೆಲೆಗೊಳಿಸಿದಂತಾಗುತ್ತದೆ.

ಇತ್ಯಾಹಾಪೋ ವೈ ಯಜ್ಞ ಆಪೋಽಮೃತಂ ಯಜ್ಞಮೇವಾಮೃತ-ಮಾತ್ಮನ್ಧತ್ತೇ ಸರ್ವಾಣಿ ವೈ ಭೂತಾನಿ ವ್ರತಮುಪಯಂತಮ-ನೂಪಯಂತಿ

---

ಇತಿ । ಆಹ । ಆಪಃ। ವೈ । ಯಜ್ಞಃ । ಆಪಃ। ಅಮೃತಮ್ । ಯಜ್ಞಮ್ । ಏವ । ಅಮೃತಮ್ । ಆತ್ಮನ್ । ಧತ್ತೇ । ಸರ್ವಾಣಿ । ವೈ । ಭೂತಾನಿ । ವ್ರತಮ್ । ಉಪಯಂತಮಿತ್ಯುಪ-ಯಂತಮ್ । ಅನು । ಉಪೇತಿ । ಯಂತಿ ।

---

| | |
|---|---|
| ಇತಿ ಆಹ ಆಪಃ ವೈ ಯಜ್ಞಃ | ಯಜಮಾನನು ಪ್ರಾರ್ಥಿಸುತ್ತಾನೆ. [ಯಜ್ಞಕ್ಕೆ ಸಾಧನವಾದ] ನೀರು ಯಜ್ಞಸ್ವರೂಪವೇ ಆಗಿದೆ. |
| ಆಪಃ ಅಮೃತಮ್ | [ಜೀವನಕ್ಕೆ ಸಾಧನವಾದ] ನೀರು ಅಮೃತವೇ ಆಗಿದೆ. [ಆದುದರಿಂದ ಹೀಗೆ ಪ್ರಾರ್ಥಿಸುವ ಯಜಮಾನನು] |
| ಯಜ್ಞಮ್ ಏವ ಅಮೃತಮ್ ಆತ್ಮನ್ ಧತ್ತೇ | ಯಜ್ಞರೂಪವಾದ ಅಮೃತವನ್ನೇ ತನ್ನಲ್ಲಿ ಧರಿಸುತ್ತಾನೆ. |

**ಜಲವನ್ನು ದಿಕ್ಕುಗಳಲ್ಲಿ ಚೆಲ್ಲುವುದರ ವ್ಯಾಖ್ಯಾನ**

| | |
|---|---|
| ಸರ್ವಾಣಿ ವೈ ಭೂತಾನಿ | ದೇವಪಿತ್ರಾದಿ ಸಮಸ್ತಭೂತಗಳೂ |
| ವ್ರತಮ್ ಉಪಯಂತಮ್ | ಯಜ್ಞಕ್ಕಾಗಿ ನಿಯಮಗಳನ್ನು ಕೈಗೊಳ್ಳುವ ಯಜಮಾನನನ್ನು |
| ಅನು ಉಪಯಂತಿ | ಅನುಸರಿಸಿ ತಾವೂ ವ್ರತವನ್ನು ಕೈಗೊಳ್ಳುತ್ತವೆ. |

---

ವೇದಿಯನ್ನು ಬರ್ಹಿಸ್ಸನ್ನು ಹರಡಿರುವುದರಿಂದ ಅದು ತೃಣಸಮೃದ್ಧವಾಗಿದೆ. ಜಲಪೂರ್ಣವಾದ ಪ್ರಣೀತಾಪಾತ್ರವಿರುವುದರಿಂದ ಜಲಪೂರ್ಣವೂ ಆಗಿದೆ. ಹವಿರ್ಧಾರಣ ಮಾಡುವುದರಿಂದ ವೇದಿಯು ಯಜಮಾನನ ಸ್ಥಾನವೇ ಆಗಿದೆ. ಪೂರ್ಣಪಾತ್ರದ ಜಲವನ್ನು ಬರ್ಹಿಸ್ಸಿನಿಂದ ಕೂಡಿದ ವೇದಿಯಲ್ಲಿ ಚೆಲ್ಲುವುದರಿಂದ ಅದು ಯಜಮಾನನು ತನ್ನ ಸ್ಥಾನದಲ್ಲಿ ತೃಣಜಲಸಮೃದ್ಧಿಯಿಂದ ಕೂಡಿರುವಂತೆ ಮಾಡುತ್ತದೆ. [ಪ್ರಣೀತಾಮೋಕ್ಷಣವಿಧಿ.]

ಪ್ರಣೀತಾಮೋಕ್ಷಣಕಾಲದಲ್ಲಿ ಯಜಮಾನನು 'ಓ! ಜಲಪೂರ್ಣ ಪಾತ್ರವೇ! ನೀನು ಒಳ್ಳೆಯವನು. ನನಗೂ ಶುಭಕರನಾಗಿ ಆಗು, ಮೊದಲಾಗಿ ಪ್ರಾರ್ಥಿಸುತ್ತಾನೆ.

ಪ್ರಾಚ್ಯಾಂ ದಿಶಿ ದೇವಾ ಋತ್ವಿಜೋಮಾರ್ಜಯಂತಾಮಿತ್ಯಾ-
ಹೈಷ ವೈ ದರ್ಶಪೂರ್ಣಮಾಸಯೋರವಭೃಥೋ [..ಭೃಥಃ (೩)]
ಯಾನ್ಯೇವೈನಂ ಭೂತಾನಿ ವ್ರತಮುಪಯಂತಮನೂಪಯಂತಿ
ತೈರೇವ ಸಹಾವಭೃಥಮವೈತಿ

---

ಪ್ರಾಚ್ಯಾಮ್। ದಿಶಿ । ದೇವಾಃ । ಋತ್ವಿಜಃ । ಮಾರ್ಜಯಂತಾಮ್। ಇತಿ । ಆಹ । ಏಷಃ । ವೈ । ದರ್ಶಪೂರ್ಣಮಾಸಯೋರಿತಿ ದರ್ಶ-ಪೂರ್ಣಮಾಸಯೋಃ । ಅವಭೃಥ ಇತ್ಯವ-ಭೃಥಃ (೩) । ಯಾನಿ । ಏವ । ಏನಮ್। ಭೂತಾನಿ । ವ್ರತಮ್। ಉಪಯಂತಮಿತ್ಯುಪ-ಯಂತಮ್। ಅನೂಪಯಂತೀತ್ಯನು-ಉಪಯಂತಿ। ತೈಃ । ಏವ । ಸಹ । ಅವಭೃಥಮಿತ್ಯವ-ಭೃಥಮ್ । ಅವೇತಿ । ಏತಿ ।

---

| | |
|---|---|
| ಪ್ರಾಚ್ಯಾಮ್ ದಿಶಿ ದೇವಾಃ ಋತ್ವಿಜಃ ಮಾರ್ಜಯಂತಾಮ್ ಇತಿ ಆಹ | 'ಪೂರ್ವದಿಕ್ಕಿನಲ್ಲಿ ದೇವತೆಗಳೂ ಋತ್ವಿಜರೂ ಮಾರ್ಜನದಿಂದ ಶುದ್ಧರಾಗಲಿ' ಹೀಗೆಂದು ಮಂತ್ರವು ಹೇಳುತ್ತದೆ. |
| ಏಷಃ ವೈ ದರ್ಶಪೂರ್ಣ ಮಾಸಯೋಃ ಅವಭೃಥಃ | ಹೀಗೆ [ಮಂತ್ರಪೂರ್ವಕವಾಗಿ ದಿಕ್ಕುಗಳಲ್ಲಿ ಪ್ರೋಕ್ಷಣ ಮಾಡುವುದೇ] ದರ್ಶ-ಪೂರ್ಣ ಮಾಸಯಾಗಗಳಿಗೆ ಸಂಬಂಧಿಸಿದ ಅವಭೃಥಸ್ನಾನ ವಾಗಿದೆ. |
| ಯಾನಿ ಏವ ಭೂತಾನಿ ವ್ರತಮ್ ಉಪಯಂತಮ್ ಏನಮ್ ಅನು ಉಪಯಂತಿ | ಯಾವ ದೇವಪಿತ್ರಾದಿಭೂತಗಳು ವ್ರತಗಳನ್ನು ಕೈಗೊಂಡಿರುವ ಈ ಯಜಮಾನನನ್ನನುಸರಿಸಿ ತಾವೂ ವ್ರತಗಳನ್ನು ಕೈಗೊಂಡಿವೆಯೋ |
| ತೈಃ ಏವ ಸಹ | ಆ ಎಲ್ಲಾ ಭೂತಗಳೊಡನೆಯೇ [ಯಜಮಾನನೂ] |
| ಅವಭೃಥಮ್ ಅವೈತಿ | ಅವಭೃಥಸ್ನಾನವನ್ನು ಮಾಡಿದವನಾಗುತ್ತಾನೆ. |

---

ಯಜ್ಞಸಾಧನವಾದ ನೀರೂ ಯಜ್ಞವೇ. ಜೀವನಹೇತುವಾದುದರಿಂದ ಅದು ಅಮೃತವೂ ಆಗಿದೆ. ಈ ಮಂತ್ರವನ್ನು ಹೇಳುವುದರಿಂದ ಯಜಮಾನನು ಯಜ್ಞಸ್ವರೂಪ ವಾದ ಅಮೃತವನ್ನು ತನ್ನಲ್ಲಿ ಧರಿಸುತ್ತಾನೆ.

ವಿಷ್ಣುಮುಖಾ ವೈ ದೇವಾಶ್ಛಂದೋಭಿರಿಮಾನ್ಲೋಕಾನನಪ ಜಯ್ಯಮಭ್ಯಜಯನ್, ಯದ್ವಿಷ್ಣುಕ್ರಮಾನ್ಕ್ರಮತೇ ವಿಷ್ಣುರೇವ ಭೂತ್ವಾ ಯಜಮಾನಶ್ಛಂದೋಭಿರಿಮಾನ್ಲೋಕಾನ–

---

ವಿಷ್ಣುಮುಖಾ ಇತಿ ವಿಷ್ಣು-ಮುಖಾಃ। ವೈ । ದೇವಾಃ । ಛಂದೋಭಿರಿತಿ ಛಂದಃ-ಭಿಃ। ಇಮಾನ್ । ಲೋಕಾನ್ । ಅನಪಜಯ್ಯಮಿತ್ಯನಪ-ಜಯ್ಯಮ್ । ಅಭೀತಿ। ಅಜಯನ್ನ್। ಯತ್। ವಿಷ್ಣುಕ್ರಮಾನಿತಿ ವಿಷ್ಣು-ಕ್ರಮಾನ್ । ಕ್ರಮತೇ । ವಿಷ್ಣುಃ । ಏವ । ಭೂತ್ವಾ। ಯಜಮಾನಃ। ಛಂದೋಭಿರಿತಿ ಛಂದಃ-ಭಿಃ । ಇಮಾನ್। ಲೋಕಾನ್ ।

---

**ವಿಷ್ಣುಕ್ರಮವಿಧಾನ / ಪ್ರಶಂಸೆ**

| | |
|---|---|
| ವಿಷ್ಣುಮುಖಾಃ ವೈ ದೇವಾಃ ಛಂದೋಭಿಃ ಇಮಾನ್ ಲೋಕಾನ್ | ವಿಷ್ಣುವೇ ಪ್ರಮುಖವಾಗಿರುವ ದೇವತೆಗಳು ಗಾಯತ್ರಿಯೇ ಮೊದಲಾದ ಛಂದಸ್ಸುಗಳಿಂದ ಈ ಮೂರು ಲೋಕಗಳನ್ನು |
| ಅನಪಜಯ್ಯಮ್ ಅಭಿ ಅಜಯನ್ನ್ | ಬೇರೆಯವರಿಂದ ಜಯಿಸಲು ಅಸಾಧ್ಯವಾಗಿರುವಂತೆ ಗೆದ್ದರು. |
| ಯತ್ ವಿಷ್ಣುಕ್ರಮಾನ್ ಕ್ರಮತೇ | [ಯಜಮಾನನು] ವಿಷ್ಣುಕ್ರಮಗಳನ್ನು ನಡೆಯುತ್ತಾನೆಂಬುದು ಯಾವುದುಂಟೋ [ವಿಧಿ] |
| ಯಜಮಾನಃ ವಿಷ್ಣುಃ ಏವ ಭೂತ್ವಾ ಛಂದೋಭಿಃ | [ಅದರಿಂದ] ಯಜಮಾನನು ತಾನೂ ವಿಷ್ಣುವೇ ಆಗಿ ಗಾಯತ್ರ್ಯಾದಿಛಂದಸ್ಸುಗಳಿಂದ |
| ಇಮಾನ್ ಲೋಕಾನ್ | ಈ ಲೋಕಗಳನ್ನು |

---

ಯಜಮಾನನು ಯಾಗಕಾಲದಲ್ಲಿ ಕೆಲವು ನಿಯಮಗಳನ್ನು ಕೈಗೊಳ್ಳುತ್ತಾನೆ. ಅವನನ್ನನುಸರಿಸಿ ದೇವಪಿತ್ರಾದಿ ಸಮಸ್ತಭೂತಗಳೂ ತಾವೂ ವ್ರತಗಳನ್ನು ಕೈಗೊಳ್ಳುತ್ತವೆ. ಯಜಮಾನನು 'ಪೂರ್ವದಿಕ್ಕಿನಲ್ಲಿ ದೇವತೆಗಳೂ, ಋತ್ವಿಜರೂ ಜಲಪ್ರೋಕ್ಷಣದಿಂದ ಶುದ್ಧರಾಗಲಿ' ಎಂದು ಮೊದಲಾಗಿ ಹೇಳುತ್ತಾನೆ. ಇದೇ ದರ್ಶ-ಪೂರ್ಣಮಾಸಯಾಗದ ಅವಭೃಥಸ್ನಾನವಾಗಿದೆ. ದಿಕ್ಕುಗಳಲ್ಲಿ ಹೀಗೆ ಜಲಸೇಚನವನ್ನು ಮಾಡುವುದರಿಂದ ತನ್ನನ್ನು ಅನುಸರಿಸಿ ವ್ರತಗಳನ್ನು ಕೈಗೊಂಡ ಸಮಸ್ತ ಭೂತಗಳೊಡನೆಯೂ ಯಜಮಾನನು ಅವಭೃಥಸ್ನಾನವನ್ನು ಆಚರಿಸಿದವನಾಗುತ್ತಾನೆ.

ನಪಜಯ್ಯಮಭಿಜಯತಿ ವಿಷ್ಣೋಃ ಕ್ರಮೋಽಸ್ಯಭಿಮಾತಿ
ಹೇತ್ಯಾಹ ಗಾಯತ್ರೀ ವೈ ಪೃಥಿವೀ ತ್ರೈಷ್ಟುಭಮಂತರಿಕ್ಷಂ
ಜಾಗತೀ

---

ಅನಪಜಯ್ಯಮ್। ಅಭೀತಿ। ಜಯತಿ। ವಿಷ್ಣೋಃ। ಕ್ರಮಃ । ಅಸಿ । ಅಭಿಮಾತಿಹೇತ್ಯಭಿ-ಮಾತಿ-ಹಾ । ಇತಿ । ಆಹ । ಗಾಯತ್ರೀ । ವೈ । ಪೃಥಿವೀ । ತ್ರೈಷ್ಟುಭಮ್ । ಅಂತರಿಕ್ಷಮ್ । ಜಾಗತೀ ।

---

| | |
|---|---|
| ಅನಪಜಯ್ಯಮ್ ಅಭಿಜಯತಿ | ಬೇರೆಯವರಿಂದ ಜಯಿಸಲಾಗದಿರುವಂತೆ ಜಯಿಸುತ್ತಾನೆ. |

**ವಿಷ್ಣುಕ್ರಮಮಂತ್ರಗಳ ವ್ಯಾಖ್ಯಾನ**

| | |
|---|---|
| ವಿಷ್ಣೋಃ ಕ್ರಮಃ ಅಸಿ | '[ಎಲೈ! ಪ್ರಥಮಪಾದನ್ಯಾಸವೇ! ನೀನು] ವಿಷ್ಣುವಿನ ಹೆಜ್ಜೆಯೇ ಆಗಿರುವೆ. |
| ಅಭಿಮಾತಿಹಾ ಇತಿ ಆಹ | ನರಕಪ್ರದವಾದ ಪಾಪವನ್ನು ಹೋಗಲಾಡಿಸುವವನೂ ಆಗಿದ್ದೀಯೆ' ಎಂದು ಈ ಮಂತ್ರವು ಹೇಳುತ್ತದೆ. |
| ಗಾಯತ್ರೀ ವೈ ಪೃಥಿವೀ | ಗಾಯತ್ರೀಛಂದಸ್ಸು ಪೃಥಿವ್ಯಾತ್ಮಕವಾಗಿದೆ. |
| ತ್ರೈಷ್ಟುಭಮ್ ಅಂತರಿಕ್ಷಮ್ | ತ್ರಿಷ್ಟುಪ್‌ಛಂದೋದೇವತೆಯು ಅಂತರಿಕ್ಷಸ್ವರೂಪವಾಗಿದೆ. |
| ಜಾಗತೀ | ಜಗತೀಛಂದೋದೇವತೆಯು |

---

ವಿಷ್ಣುವನ್ನೇ ಮುಖ್ಯವನ್ನಾಗಿ ಹೊಂದಿರುವ ದೇವತೆಗಳು ಛಂದೋದೇವತೆಗಳ ನೆರವಿನಿಂದ ಈ ಲೋಕಗಳನ್ನು ಬೇರೆಯವರು ಗೆಲ್ಲಲು ಸಾಧ್ಯವಿಲ್ಲದಿರುವಂತೆ ಗೆದ್ದುಕೊಂಡರು. ಯಜಮಾನನು 'ವಿಷ್ಣೋಃ ಕ್ರಮೋಽಸಿ' ಎಂಬ ಮಂತ್ರಗಳನ್ನು ಹೇಳಿ ಹೆಜ್ಜೆಯಿಡುವುದರಿಂದ ವಿಷ್ಣುವೇ ಆಗಿ ಛಂದಸ್ಸುಗಳಿಂದ ಈ ಲೋಕಗಳನ್ನು ಅಸಾಧಾರಣವಾಗಿ ಗೆದ್ದುಕೊಳ್ಳುತ್ತಾನೆ.

ಎಲೈ! ಮೊದಲನೆಯ ಹೆಜ್ಜೆಯೇ! ನೀನು ಪಾಪನಾಶಕವಾದ ಹೆಜ್ಜೆಯಾಗಿದ್ದೀಯೆ. 'ಗಾಯತ್ರೀಛಂದಸ್ಸಿನಿಂದ ಪೃಥಿವಿಯನ್ನು ಮೆಟ್ಟುತ್ತೇನೆ' ಮೊದಲಾಗಿ ಈ ನಾಲ್ಕು

ದ್ಯೌರಾನುಷ್ಟುಭೀರ್ದಿಶಶ್ಛಂದೋಭಿರೇವೇಮಾನ್ಲೋಕಾನ್
ಯಥಾಪೂರ್ವಮಭಿಜಯತಿ ॥ ೫-24 ॥

[ಯಜಮಾನೇನೇತಿ ಚೈತದವಭೃಥೋ ದಿಶಸ್ಸಪ್ತ ಚ ।]

---

ದ್ಯೌಃ। ಆನುಷ್ಟುಭೀರಿತ್ಯಾನು-ಸ್ತುಭೀಃ । ದಿಶಃ । ಛಂದೋಭಿರಿತಿ ಛಂದಃ-ಭಿಃ । ಏವ। ಇಮಾನ್। ಲೋಕಾನ್ । ಯಥಾಪೂರ್ವಮಿತಿ ಯಥಾ-ಪೂರ್ವಮ್ । ಅಭೀತಿ । ಜಯತಿ ॥ ೫ ॥

---

| | |
|---|---|
| ದ್ಯೌಃ | ದ್ಯುಲೋಕ ಸ್ವರೂಪವಾಗಿದೆ. |
| ಆನುಷ್ಟುಭೀಃ ದಿಶಃ | ಅನುಷ್ಟುಪ್‌ಛಂದೋದೇವತೆಯು ದಿಕ್‌ಸ್ವರೂಪ ವಾಗಿದೆ. |
| ಛಂದೋಭಿಃ ಏವ ಇಮಾನ್ ಲೋಕಾನ್ ಯಥಾಪೂರ್ವಮ್ ಅಭಿಜಯತಿ | [ಆದುದರಿಂದ ಈ ಮಂತ್ರಗಳನ್ನು ಹೇಳಿ ಕ್ರಮ ವಾಗಿ ಹೆಜ್ಜೆ ಇಡುವುದರಿಂದ ಯಜಮಾನನು] ಈ ಛಂದಸ್ಸುಗಳಿಂದಲೇ ಈ ಲೋಕಗಳನ್ನು ಅನುಕ್ರಮವಾಗಿ ಗೆಲ್ಲುತ್ತಾನೆ. |

---

ಮಂತ್ರಗಳು ಹೇಳುತ್ತವೆ. ಗಾಯತ್ರೀ, ತ್ರಿಷ್ಟುಪ್, ಜಗತೀ, ಅನುಷ್ಟುಪ್—ಈ ಛಂದಸ್ಸುಗಳು ಪೃಥಿವ್ಯಾದಿಸ್ವರೂಪಗಳು. ಈ ಮಂತ್ರಗಳನ್ನು ಹೇಳಿ ಹೆಜ್ಜೆಯಿಡುವುದರಿಂದ ಯಜಮಾನನು ಈ ಲೋಕಗಳನ್ನು ಅನುಕ್ರಮವಾಗಿ ಗೆಲ್ಲುತ್ತಾನೆ. [ಇದು ವಿಷ್ಣುಕ್ರಮಗಳ ಪ್ರಶಂಸೆ]

---

# ॥ ಷಷ್ಠೋಽನುವಾಕಃ ॥

ಅಗನ್ಮ ಸುವಸ್ಸುವರಗನ್ಮೇತ್ಯಾಹ ಸುವರ್ಗಮೇವ ಲೋಕಮೇತಿ

---

ಅಗನ್ಮ । ಸುವಃ । ಸುವಃ । ಅಗನ್ಮ । ಇತಿ । ಆಹ । ಸುವರ್ಗಮಿತಿ ಸುವಃ-ಗಮ್। ಏವ । ಲೋಕಮ್ । ಏತಿ ।

---

ಐದನೆಯ ಅನುವಾಕದಲ್ಲಿ ಆಪ್ಯಾಯನಾದಿಮಂತ್ರಗಳ ವ್ಯಾಖ್ಯಾನವಿದೆ. ಈ ಆರನೆಯ ಅನುವಾಕದಲ್ಲಿ ಉಪಸ್ಥಾನಾದಿಮಂತ್ರಗಳನ್ನು ವ್ಯಾಖ್ಯಾನಿಸಲಾಗಿದೆ.

---

**ಆಹವನೀಯೋಪಸ್ಥಾನಮಂತ್ರದ ಪೂರ್ವಭಾಗದ ವ್ಯಾಖ್ಯಾನ**

| | |
|---|---|
| ಸುವಃ ಅಗನ್ಮ | [ಪುತ್ರಪೌತ್ರಾದಿಗಳಿಂದ ಕೂಡಿದ ನಾವು] ಪ್ರಥಮಭೋಗಸ್ಥಾನವನ್ನು ಹೊಂದುವೆವು. |
| ಸುವಃ ಅಗನ್ಮ* | ಮೋಕ್ಷದ್ವಾರದಂತಿರುವ ಆದಿತ್ಯಲೋಕವನ್ನೂ ಹೊಂದುವೆವು. |
| ಇತಿ ಆಹ | ಎಂದು ಈ ಉಪಸ್ಥಾನಮಂತ್ರವು ಹೇಳುತ್ತದೆ. |
| ಸುವರ್ಗಮ್ ಏವ ಲೋಕಮ್ ಏತಿ | [ಈ ಉಪಸ್ಥಾನದಿಂದ] ಯಜಮಾನನು ಸ್ವರ್ಗಲೋಕವನ್ನು ಹೊಂದಿಯೇ ಹೊಂದುತ್ತಾನೆ. |

---

**ತಾತ್ಪರ್ಯ:** ಆಹವನೀಯೋಪಸ್ಥಾನಮಂತ್ರವು 'ನಾವು ಸುವರ್ಗವನ್ನು ಹೊಂದುವೆವು; ನಾವು ಸುವರ್ಗವನ್ನು ಹೊಂದುವೆವು' ಎಂದು ಹೇಳುತ್ತದೆ. ಈ ಉಪಸ್ಥಾನಮಂತ್ರಪಾಠದಿಂದ ಯಜಮಾನನು ಸ್ವರ್ಗಲೋಕವನ್ನು ಹೊಂದುತ್ತಾನೆ. [ಸುವಃ ಶಬ್ದಕ್ಕೆ ಸಾಯಣಾಚಾರ್ಯರು ಎರಡು ಬೇರೆ ಬೇರೆಯ ಅರ್ಥಗಳನ್ನು ಹೇಳಿರುತ್ತಾರೆ.]

---

* ದ್ವಿರುಕ್ತಿಯಿಂದ ನಿಶ್ಚಯವಾಗಿಯೂ ಸ್ವರ್ಗಪ್ರಾಪ್ತಿಯಾಗುತ್ತದೆಯೆಂದು ತೋರುತ್ತದೆ.

ಸಂದೃಶಸ್ತೇ ಮಾ ಛಿತ್ಸಿ ಯತ್ತೇ ತಪಸ್ತಸ್ಮೈ ತೇ ಮಾಽಽವೃಕ್ಷೀ-
ತ್ಯಾಹ ಯಥಾಯಜುರೇವೈತತ್ಸುಭೂರಸಿ ಶ್ರೇಷ್ಠೋ ರಶ್ಮೀ
ನಾಮಾಯುರ್ಧಾ ಅಸ್ಯಾಯುರ್ಮೇ ಧೇಹೀ-

---

**ಸಂದೃಶ ಇತಿ ಸಮ್-ದೃಶಃ** । ತೇ । ಮಾ । ಛಿತ್ಸಿ । ಯತ್ । ತೇ । ತಪಃ । ತಸ್ಮೈ । ತೇ । ಮಾ । ಏತಿ । ವೃಕ್ಷಿ । ಇತಿ । ಆಹ । ಯಥಾಯಜುರಿತಿ ಯಥಾ-ಯಜುಃ । ಏವ । ಏತತ್ । ಸುಭೂರಿತಿ ಸು-ಭೂಃ । ಅಸಿ । ಶ್ರೇಷ್ಠಃ । ರಶ್ಮೀನಾಮ್ । ಆಯುರ್ಧಾ ಇತ್ಯಾಯುಃ-ಧಾಃ । ಅಸಿ । ಆಯುಃ । ಮೇ । ಧೇಹಿ ।

---

**ಉಪಸ್ಥಾನಮಂತ್ರದ ಉತ್ತರಭಾಗದ ವ್ಯಾಖ್ಯಾನ**

| | |
|---|---|
| ತೇ ಸಂದೃಶಃ ಮಾ ಛಿತ್ಸಿ | '[ಎಲೈ! ಅಗ್ನಿಯೇ!] ನಿನ್ನ ಕಟಾಕ್ಷದಿಂದ ನಾನು ದೂರನಾಗುವುದು ಬೇಡ. |
| ಯತ್ ತೇ ತಪಃ ತಸ್ಮೈ ತೇ ಮಾ ಆ ವೃಕ್ಷಿ ಇತಿ ಆಹ | [ಎಲೈ! ಆಹವನೀಯಾಗ್ನಿಯೇ!]ನಿನ್ನನ್ನು ಕುರಿತು ಮಾಡುವ ನಮ್ಮ ಯಾವ ತಪಸ್ಸುಂಟೋ, ಆ ತಪಸ್ಸಿಗಾಗಿ ನಿನ್ನ ಅನುಗ್ರಹದಿಂದ ನಾನು ವಿಚ್ಛಿನ್ನನಾಗುವುದು ಬೇಡ'. ಹೀಗೆಂದು ಮಂತ್ರವು ಹೇಳುತ್ತದೆ. |
| ಏತತ್ ಯಥಾಯಜುಃ ಏವ | ಇದು ಯಜುರ್ಮಂತ್ರವಿರುವಂತೆಯೇ ಆಗುತ್ತದೆ. |

**ಆದಿತ್ಯೋಪಸ್ಥಾನಮಂತ್ರದ ವ್ಯಾಖ್ಯಾನ**

| | |
|---|---|
| ಸುಭೂಃ ಅಸಿ | '[ಎಲೈ ಸೂರ್ಯನೇ! ನೀನು] ಒಳ್ಳೆಯ ಉದಯವುಳ್ಳವನಾಗಿದ್ದೀಯೆ. |
| ರಶ್ಮೀನಾಮ್ ಶ್ರೇಷ್ಠಃ | ಕಿರಣಗಳುಳ್ಳ ಚಂದ್ರಾದಿಗಳಲ್ಲಿ ಶ್ರೇಷ್ಠನಾಗಿದ್ದೀಯೆ. |
| ಆಯುರ್ಧಾಃ ಅಸಿ | ಆಯುಸ್ಸನ್ನು ಸ್ಥಾಪಿಸುವವನೂ ಆಗಿದ್ದೀಯೆ. |
| ಆಯುಃ ಮೇ ಧೇಹಿ | ನನ್ನಲ್ಲಿ ಆಯುಸ್ಸನ್ನು ವೃದ್ಧಿಗೊಳಿಸು.' |

---

'ಎಲೈ! ಅಗ್ನಿದೇವನೇ! ನಿನ್ನ ದಯಾಪೂರಿತವಾದ ಕಟಾಕ್ಷದಿಂದ ನಾನು ವಿಚ್ಛಿನ್ನನಾಗುವುದು ಬೇಡ. ನಿನ್ನನ್ನು ಕುರಿತು ನಾನು ಮಾಡುವ ತಪಸ್ಸಿನಿಂದಲೂ ನಾನು

ತ್ಯಾಹಾಽಽಶಿಷಮೇವೈತಾಮಾಶಾಸ್ತೇ ಪ್ರ ವಾ ಏಷೋಽಸ್ಮಾ-
ಲ್ಲೋಕಾಚ್ಚ್ಯವತೇ ಯೋ [ಯಃ (೧) ವಿಷ್ಣುಕ್ರಮಾನ್] ವಿಷ್ಣು
ಕ್ರಮಾನ್ಕ್ರಮತೇ ಸುವರ್ಗಾಯ ಹಿ ಲೋಕಾಯ ವಿಷ್ಣುಕ್ರಮಾಃ
ಕ್ರಮ್ಯಂತೇ

---

ಇತಿ । ಆಹ । ಆಶಿಷಮಿತ್ಯಾ-ಶಿಷಮ್ । ಏವ । ಏತಾಮ್ । ಏತಿ । ಶಾಸ್ತೇ । ಪ್ರೇತಿ । ವೈ । ಏಷಃ । ಅಸ್ಮಾತ್। ಲೋಕಾತ್। ಚ್ಯವತೇ। ಯಃ(೧)। ವಿಷ್ಣುಕ್ರಮಾನಿತಿ ವಿಷ್ಣು-ಕ್ರಮಾನ್। ಕ್ರಮತೇ । ಸುವರ್ಗಾಯೇತಿ ಸುವಃ-ಗಾಯ । ಹಿ । ಲೋಕಾಯ। ವಿಷ್ಣುಕ್ರಮಾ ಇತಿ ವಿಷ್ಣು-ಕ್ರಮಾಃ । ಕ್ರಮ್ಯಂತೇ ।

---

| | |
|---|---|
| ಇತಿ ಆಹ | ಹೀಗೆಂದು ಈ ಮಂತ್ರವು ಹೇಳುತ್ತದೆ. |
| ಆಶಿಷಮ್ ಏವ ಏತಾಮ್ ಆಶಾಸ್ತೇ | [ಈ ಮಂತ್ರಪಾಠದಿಂದ] ಯಜಮಾನನು ಆಯು ರಾದಿಗಳನ್ನೇ ಆಶಿಸುತ್ತಾನೆ. |

**ಭ್ರಾತೃವ್ಯನಿಷ್ಕಾಸನಮಂತ್ರವ್ಯಾಖ್ಯಾನ/ಪ್ರಶಂಸೆ**

| | |
|---|---|
| ಯಃ ವಿಷ್ಣುಕ್ರಮಾನ್ ಕ್ರಮತೇ | ಯಾವ ಯಜಮಾನನು ವಿಷ್ಣುಕ್ರಮಮಂತ್ರ ಪೂರ್ವಕವಾಗಿ ಹೆಜ್ಜೆಯಿಡುತ್ತಾನೆಯೋ, |
| ಏಷಃ ಅಸ್ಮಾತ್ ಲೋಕಾತ್ ಪ್ರ ಚ್ಯವತೇ ವೈ | ಈ ಯಜಮಾನನು ಈ ಭೂಲೋಕದಿಂದ ಪ್ರಚ್ಯುತನಾಗುತ್ತಾನೆ. |
| ಸುವರ್ಗಾಯ ಲೋಕಾಯ ವಿಷ್ಣುಕ್ರಮಾಃ ಕ್ರಮ್ಯಂತೇ ಹಿ | ಸುವರ್ಗಲೋಕದ ಪ್ರಾಪ್ತಿಗಾಗಿ ತಾನೇ ವಿಷ್ಣು ಕ್ರಮಗಳನ್ನು ಇಡುತ್ತಾನೆ! |

---

ಬೇರ್ಪಡುವುದು ಬೇಡ' ಎಂದು ಉಪಸ್ಥಾನಮಂತ್ರಭಾಗವು ಹೇಳುತ್ತದೆ. ಇದು ಯಜುರ್ಮಂತ್ರವು ಹೇಳುವಂತೆಯೇ ಆಗುತ್ತದೆ.

ಎಲೈ! ಸೂರ್ಯನೇ! ನೀನು ಒಳ್ಳೆಯದನ್ನು ಉಂಟುಮಾಡುವ ಉದಯವುಳ್ಳ ವನು. ಚಂದ್ರಾದಿಗಳಲ್ಲಿ ಶ್ರೇಷ್ಠನು. ಆಯುಃಸ್ಥಾಪಕನು— ಮೊದಲಾಗಿ ಈ ಮಂತ್ರವು ಹೇಳುತ್ತದೆ. ಆಯುರಾದಿಪ್ರಾರ್ಥನೆಯನ್ನೇ ಮಾಡಿ ಯಜಮಾನನು ಪಡೆಯುತ್ತಾನೆ.

ಬ್ರಹ್ಮವಾದಿನೋ ವದಂತಿ ಸ ತ್ವೈ ವಿಷ್ಣುಕ್ರಮಾನ್ಕ್ರಮೇತ
ಯ ಇಮಾನ್ಲೋಕಾನ್ಭ್ರಾತೃವ್ಯಸ್ಯ ಸಂವಿದ್ಯ ಪುನರಿಮಂ
ಲೋಕಂ ಪ್ರತ್ಯವರೋಹೇದಿತ್ಯೇಷ ವಾ ಅಸ್ಯ ಲೋಕಸ್ಯ
ಪ್ರತ್ಯವರೋಹೋ

---

ಬ್ರಹ್ಮವಾದಿನ ಇತಿ ಬ್ರಹ್ಮ-ವಾದಿನಃ । ವದಂತಿ । ಸಃ । ತು । ವೈ । ವಿಷ್ಣುಕ್ರಮಾನಿತಿ ವಿಷ್ಣು-ಕ್ರಮಾನ್ । ಕ್ರಮೇತ । ಯಃ । ಇಮಾನ್ । ಲೋಕಾನ್ । ಭ್ರಾತೃವ್ಯಸ್ಯ । ಸಂವಿದ್ಯೇತಿ ಸಮ್-ವಿದ್ಯ । ಪುನಃ । ಇಮಮ್ । ಲೋಕಮ್ । ಪ್ರತ್ಯವರೋಹೇದಿತಿ ಪ್ರತಿ-ಅವರೋಹೇತ್ । ಇತಿ । ಏಷಃ । ವೈ । ಅಸ್ಯ । ಲೋಕಸ್ಯ । ಪ್ರತ್ಯವರೋಹ ಇತಿ ಪ್ರತಿ-ಅವರೋಹಃ ।

---

| | |
|---|---|
| ಬ್ರಹ್ಮವಾದಿನಃ | [ಈ ದೋಷಪರಿಹಾರಕ್ಕಾಗಿ] ವೇದವಿದರು |
| ಯಃ ಇಮಾನ್ ಲೋಕಾನ್ ಭ್ರಾತೃವ್ಯಸ್ಯ ಸಂವಿದ್ಯ | 'ಯಾವನು ತನ್ನ ಶತ್ರುವು ಪುಣ್ಯದಿಂದ ಸಂಪಾದಿಸಿರುವ ಈ ಲೋಕಗಳನ್ನು ತಾನೇ ಪಡೆದು, |
| ಪುನಃ ಇಮಮ್ ಲೋಕಮ್ ಪ್ರತ್ಯವರೋಹೇತ್ | ಮತ್ತೆ ಈ ಭೂಲೋಕವನ್ನು ಕುರಿತು ಇಳಿಯುತ್ತಾನೆಯೋ |
| ಸಃ ತು ವೈ ವಿಷ್ಣುಕ್ರಮಾನ್ ಕ್ರಮೇತ | ಆ ಯಜಮಾನನೇ ವಿಷ್ಣುಕ್ರಮಗಳನ್ನು [ಸರಿಯಾದ ರೀತಿಯಲ್ಲಿ] ಕ್ರಮಿಸುತ್ತಾನೆ. |
| ಇತಿ ವದಂತಿ | ಎಂದು ಹೇಳುತ್ತಾರೆ. |
| ಏಷಃ ವೈ ಅಸ್ಯ ಲೋಕಸ್ಯ ಪ್ರತ್ಯವರೋಹಃ | ಇದೇ ಈ ಲೋಕಕ್ಕೆ ಮತ್ತೆ ಇಳಿದು ಬರುವ ಕ್ರಮವಾಗಿದೆ. [ಯಾವುದೆಂದರೆ] |

---

ವಿಷ್ಣುಕ್ರಮಗಳನ್ನು ಕ್ರಮಿಸುವುದರಿಂದ ಯಜಮಾನನು ಈ ಲೋಕದಿಂದ ಪ್ರಚ್ಯುತನಾಗುತ್ತಾನೆ. ಏಕೆಂದರೆ ಸ್ವರ್ಗಪ್ರಾಪ್ತಿಗಾಗಿಯೇ ವಿಷ್ಣುಕ್ರಮಗಳು ಹೇಳಲ್ಪಟ್ಟಿವೆ. ಈ ದೋಷಪರಿಹಾರಕ್ಕಾಗಿ ವೇದವಿದರು ಹೀಗೆ ಹೇಳುತ್ತಾರೆ; 'ಯಾವ ಯಜಮಾನನು ಶತ್ರುವು ಸಂಪಾದಿಸಿರುವ ಲೋಕಗಳನ್ನು ತಾನು ಪಡೆದು ಮತ್ತೆ ಈ ಲೋಕಕ್ಕೆ ಇಳಿಯುತ್ತಾನೆಯೋ, ಅವನು ಸರಿಯಾದ ರೀತಿಯಲ್ಲಿ ತೊಂದರೆಯಿಲ್ಲದೆ ವಿಷ್ಣುಕ್ರಮ ಮಾಡಿದವನಾಗುತ್ತಾನೆ. ಆ ಪ್ರತ್ಯವರೋಹವು ಇದೇ ಆಗಿದೆ.

ಯದಾಹೇದಮಹಮಮುಂ ಭ್ರಾತೃವ್ಯಮಾಭ್ಯೋ ದಿಗ್ಭ್ಯೋಽಸ್ಯೈ ದಿವ ಇತೀಮಾನೇವ ಲೋಕಾನ್ಭ್ರಾತೃವ್ಯಸ್ಯ ಸಂವಿದ್ಯ ಪುನರಿಮಂ ಲೋಕಂ ಪ್ರತ್ಯವರೋಹತಿ

---

ಯತ್। ಆಹ । ಇದಮ್ । ಅಹಮ್ । ಅಮುಮ್ । ಭ್ರಾತೃವ್ಯಮ್ । ಆಭ್ಯಃ । ದಿಗ್ಭ್ಯ ಇತಿ ದಿಕ್-ಭ್ಯಃ । ಅಸ್ಯೈ । ದಿವಃ । ಇತಿ । ಇಮಾನ್ । ಏವ । ಲೋಕಾನ್। ಭ್ರಾತೃವ್ಯಸ್ಯ । ಸಂವಿದ್ಯೇತಿ ಸಮ್-ವಿದ್ಯ । ಪುನಃ । ಇಮಮ್ । ಲೋಕಮ್। ಪ್ರತ್ಯವರೋಹತೀತಿ ಪ್ರತಿ-ಅವರೋಹತಿ ।

---

| | |
|---|---|
| ಇದಮ್ ಅಹಮ್ ಅಮುಮ್ ಭ್ರಾತೃವ್ಯಮ್ | ಇಗೋ! [ಶೀಘ್ರವಾಗಿ] ನಾನು ಈ ಶತ್ರುವನ್ನು |
| ಆಭ್ಯಃ ದಿಗ್ಭ್ಯಃ ಅಸ್ಯೈ ದಿವಃ | ಈ ದಿಕ್ಕುಗಳಿಂದಲೂ, ಈ ಸ್ವರ್ಗ ಲೋಕದಿಂದಲೂ [ಮತ್ತು ಇತರ ಲೋಕಗಳಿಂದಲೂ, ಅನ್ನಾದ್ಯದಿಂದಲೂ ಬೇರ್ಪಡಿಸುತ್ತೇನೆ] ಮೊದಲಾಗಿ |
| ಯತ್ ಆಹ | ಎಂದು ಹೇಳುತ್ತಾನೆಯೋ [ಅದೇ ಪ್ರತ್ಯವರೋಹ] |
| ಇಮಾನ್ ಏವ ಲೋಕಾನ್ ಭ್ರಾತೃವ್ಯಸ್ಯ ಸಂವಿದ್ಯ ಪುನಃ ಇಮಮ್ ಲೋಕಮ್ ಪ್ರತ್ಯವರೋಹತಿ | [ಶತ್ರುವಿನ] ಈ ಲೋಕಗಳನ್ನು ತಾನು ಪಡೆದು ಮತ್ತೆ ಈ ಲೋಕಕ್ಕೆ ಇಳಿಯುತ್ತಾನೆ. |

---

ಯಾವುದೆಂದರೆ 'ಇದಮಹಮಮುಂ... ನಿರ್ಭಜಾಮಿ ನಿರ್ಭಕ್ತಃ ಸ ಯಂ ದ್ವಿಷ್ಮಃ' ಎಂಬ ಮಂತ್ರ. ಈ ಮಂತ್ರವನ್ನು ಹೇಳುವುದರಿಂದ ಯಜಮಾನನು ಶತ್ರುವು ಪುಣ್ಯದಿಂದ ಸಂಪಾದಿಸಿರುವ ಲೋಕಗಳನ್ನು ಸಂಪಾದಿಸಿ ಮತ್ತೆ ಸ್ವರ್ಗಭೋಗಾನಂತರ ಈ ಲೋಕಕ್ಕೆ ಇಳಿಯುತ್ತಾನೆ.

ಸಂ[ಸಮ್(೨)]ಜ್ಯೋತಿಷಾಽಭೂವಮಿತ್ಯಾಹಾಸ್ಮಿನ್ನೇವ ಲೋಕೇ ಪ್ರತಿತಿಷ್ಠತ್ಯೈಂದ್ರೀಮಾವೃತಮನ್ವಾವರ್ತ ಇತ್ಯಾಹಾಸೌ ವಾ ಆದಿತ್ಯ ಇಂದ್ರಸ್ತಸ್ಯೈವಾಽಽವೃತಮನು ಪರ್ಯಾವರ್ತತೇ

---

ಸಮಿತಿ(೨)। ಜ್ಯೋತಿಷಾ । ಅಭೂವಮ್ । ಇತಿ । ಆಹ । ಅಸ್ಮಿನ್ನ್ । ಏವ । ಲೋಕೇ । ಪ್ರತೀತಿ । ತಿಷ್ಠತಿ । ಐಂದ್ರೀಮ್ । ಆವೃತಮಿತ್ಯಾ-ವೃತಮ್ । ಅನ್ವಾವರ್ತ ಇತ್ಯನು- ಆವರ್ತೇ । ಇತಿ । ಆಹ । ಅಸೌ । ವೈ । ಆದಿತ್ಯಃ । ಇಂದ್ರಃ । ತಸ್ಯ। ಏವ । ಆವೃತಮಿತ್ಯಾ-ವೃತಮ್ । ಅನ್ವಿತಿ । ಪರ್ಯಾವರ್ತತ ಇತಿ ಪರಿ-ಆವರ್ತತೇ ।

---

### ಆತ್ಮಾಭಿಮರ್ಶನಮಂತ್ರದ ವ್ಯಾಖ್ಯಾನ

| | |
|---|---|
| ಜ್ಯೋತಿಷಾ ಸಮ್ ಅಭೂವಮ್ ಇತಿ ಆಹ | '[ನಾನು] ಸೂರ್ಯಜ್ಯೋತಿಸ್ಸಿನೊಡನೆ ಸೇರಿದೆನು' ಎಂದು ಈ ಮಂತ್ರವು ಹೇಳುತ್ತದೆ. |
| ಅಸ್ಮಿನ್ ಏವ ಲೋಕೇ ಪ್ರತಿತಿಷ್ಠತಿ | [ಈ ಮಂತ್ರವನ್ನು ಹೇಳುವುದರಿಂದ] ಯಜಮಾನನು ಈ ಭೂಲೋಕದಲ್ಲಿ ನೆಲೆಸಿರುತ್ತಾನೆ. |

### ಪ್ರದಕ್ಷಿಣೆ ಮಾಡುವ ಮಂತ್ರದ ವ್ಯಾಖ್ಯಾನ

| | |
|---|---|
| ಐಂದ್ರೀಮ್ ಆವೃತಮ್ ಅನ್ವಾವರ್ತೇ ಇತಿ ಆಹ | '[ನಾನು] [ಪರಮೈಶ್ವರ್ಯದಿಂದ ಕೂಡಿ ಇಂದ್ರಶಬ್ದವಾಚ್ಯನಾದ ಸೂರ್ಯನ] ಪ್ರದಕ್ಷಿಣಚಲನೆಯನ್ನು ಅನುಸರಿಸಿ ಪ್ರದಕ್ಷಿಣೆಯನ್ನು ಮಾಡುತ್ತೇನೆ' ಎಂದು ಯಜಮಾನನು ಹೇಳುತ್ತಾನೆ. |
| ಅಸೌ ವೈ ಆದಿತ್ಯಃ ಇಂದ್ರಃ ತಸ್ಯ ಆವೃತಮ್ ಅನು ಏವ ಪರ್ಯಾವರ್ತತೇ | ಈ ಸೂರ್ಯನೇ ಇಂದ್ರಶಬ್ದವಾಚ್ಯನಾಗಿದ್ದಾನೆ. ಆ ಸೂರ್ಯನ ಪ್ರದಕ್ಷಿಣಚಲನೆಯನ್ನು ಯಜಮಾನನು ಅನುಸರಿಸಿ ತಿರುಗುತ್ತಾನೆ. |

---

**'ಸಮ್ ಜ್ಯೋತಿಷಾ ಅಭೂವಮ್'** [ಜ್ಯೋತಿಸ್ಸಿನೊಡನೆ ಸೇರಿದೆನು] ಎಂದು ಆತ್ಮಾಭಿಮರ್ಶನವನ್ನು ಮಾಡುವುದರಿಂದ ಯಜಮಾನನು ಈ ಭೂಲೋಕದಲ್ಲಿ ಪ್ರತಿಷ್ಠಿತನಾಗುತ್ತಾನೆ.

ದಕ್ಷಿಣಾ ಪರ್ಯಾವರ್ತತೇ ಸ್ವಮೇವ ವೀರ್ಯಮನು ಪರ್ಯಾವರ್ತತೇ ತಸ್ಮಾದ್ದಕ್ಷಿಣೋಽರ್ಧ ಆತ್ಮನೋ ವೀರ್ಯಾವತ್ತರೋಽಥೋ ಆದಿತ್ಯಸ್ಯೈವಾಽಽವೃತಮನು ಪರ್ಯಾವರ್ತತೇ ಸಮಹಂ ಪ್ರಜಯಾ

---

ದಕ್ಷಿಣಾ । ಪರ್ಯಾವರ್ತತ ಇತಿ ಪರಿ-ಆವರ್ತತೇ । ಸ್ವಮ್। ಏವ । ವೀರ್ಯಮ್। ಅನ್ವಿತಿ । ಪರ್ಯಾವರ್ತತ ಇತಿ ಪರಿ-ಆವರ್ತತೇ। ತಸ್ಮಾತ್ । ದಕ್ಷಿಣಃ । ಅರ್ಧಃ । ಆತ್ಮನಃ । ವೀರ್ಯಾವತ್ತರ ಇತಿ ವೀರ್ಯಾವತ್-ತರಃ । ಅಥೋ ಇತಿ । ಆದಿತ್ಯಸ್ಯ । ಏವ। ಆವೃತಮಿತ್ಯಾ-ವೃತಮ್ । ಅನ್ವಿತಿ । ಪರ್ಯಾವರ್ತತ ಇತಿ ಪರಿ-ಆವರ್ತತೇ । ಸಮಿತಿ । ಅಹಮ್ । ಪ್ರಜಯೇತಿ ಪ್ರ-ಜಯಾ ।

---

| | |
|---|---|
| ದಕ್ಷಿಣಾ ಪರ್ಯಾವರ್ತತೇ | ಪ್ರದಕ್ಷಿಣಕ್ರಮದಿಂದ ಸುತ್ತುತ್ತಾನೆ. |
| ಸ್ವಮ್ ಏವ ವೀರ್ಯಮ್ ಅನು ಪರ್ಯಾವರ್ತತೇ | ತನ್ನ ಶಕ್ತಿಯನ್ನನುಸರಿಸಿ ಪ್ರದಕ್ಷಿಣೆಯನ್ನು ಮಾಡಿದವನಾಗುತ್ತಾನೆ. |
| ತಸ್ಮಾತ್ ಆತ್ಮನಃ ದಕ್ಷಿಣಃ ಅರ್ಧಃ ವೀರ್ಯಾವತ್ತರಃ | [ಲೋಕದಲ್ಲಿ] ಮನುಷ್ಯರ ಬಲಭಾಗವು ಹೆಚ್ಚು ಶಕ್ತಿಯುಳ್ಳದ್ದಾಗಿದೆ. |
| ಅಥೋ ಆದಿತ್ಯಸ್ಯ ಏವ ಆವೃತಮ್ ಅನು ಪರ್ಯಾವರ್ತತೇ | ಮತ್ತು ಸೂರ್ಯನ ಚಲನೆಯನ್ನೇ ಅನುಸರಿಸಿ ಪ್ರದಕ್ಷಿಣೆ ಮಾಡಿದವನಾಗುತ್ತಾನೆ. |

**ಉಪಸ್ಥಾನಮಂತ್ರದ ವಿವರಣೆ/ಪುನರಾವೃತ್ತಿ**
**(ಪ್ರದಕ್ಷಿಣೆ) ಮಂತ್ರದ ವಿವರಣೆ**

ಅಹಮ್ ಪ್ರಜಯಾ ಸಮ್[ಗಸೀಯ] ನಾನು ಪುತ್ರಾದಿಗಳೊಡನೆ ಕೂಡಿರುವಂತಾಗಲಿ.

---

ಆತ್ಮಪ್ರದಕ್ಷಿಣೆಯ ಮಂತ್ರವನ್ನು ವಿವರಿಸಿರುತ್ತಾರೆ. ಮಂತ್ರದಲ್ಲಿ ಐಂದ್ರೀ ಶಬ್ದವು ಸೂರ್ಯನ ಸಂಬಂಧಿಯೆಂದು ಹೇಳುತ್ತದೆ. ಇಲ್ಲಿ ಇಂದ್ರನೆಂದರೆ 'ಪರಮೈಶ್ವರ್ಯವುಳ್ಳವನು' ಎಂದು ಅರ್ಥ. 'ಸೂರ್ಯನ ಚಲನೆಯನ್ನೇ ಅನುಸರಿಸಿ ನಾನು ಪ್ರದಕ್ಷಿಣಾಕಾರವಾಗಿ ಸುತ್ತುತ್ತೇನೆ' ಎಂದು ಹೇಳಿ ಯಜಮಾನನು ಪ್ರದಕ್ಷಿಣೆಯನ್ನು ಮಾಡುತ್ತಾನೆ. ಸೂರ್ಯನು ಮೇರುವನ್ನು ಪ್ರದಕ್ಷಿಣೆ ಮಾಡುವಂತೆ ಯಜಮಾನನೂ ಪ್ರದಕ್ಷಿಣಾಕಾರವಾಗಿ ಸುತ್ತುತ್ತಾನೆ. ತನ್ನ ದೇಹದ ಬಲಭಾಗವು ಹೆಚ್ಚು ಶಕ್ತಿಯುಳ್ಳದ್ದಾಗಿರುವುದರಿಂದ

ಸಂ ಮಯಾ ಪ್ರಜೇತ್ಯಾಹಾಶಿಷಮೇವೈ[ಆಶಿಷಮ್ (೩)
ಏವೈತಾಮಾಶಾಸ್ತೇ]ತಾಮಾಶಾಸ್ತೇ ಸಮಿದ್ಧೋ ಅಗ್ನೇ ಮೇ
ದೀದಿಹಿ ಸಮೇದ್ಧಾ ತೇ ಅಗ್ನೇ ದೀದ್ಯಾಸಮಿತ್ಯಾಹ

---

ಸಮಿತಿ। ಮಯಾ । ಪ್ರಜೇತಿ ಪ್ರ-ಜಾ । ಇತಿ । ಆಹ । ಆಶಿಷಮಿತ್ಯಾ-ಶಿಷಮ್ (೩)।
ಏವ। ಏತಾಮ್ । ಏತಿ । ಶಾಸ್ತೇ । ಸಮಿದ್ಧ ಇತಿ ಸಮ್-ಇದ್ಧಃ । ಅಗ್ನೇ । ಮೇ।
ದೀದಿಹಿ। ಸಮೇದ್ಧೇತಿ ಸಂ-ಏದ್ಧಾ । ತೇ । ಅಗ್ನೇ । ದೀದ್ಯಾಸಮ್। ಇತಿ । ಆಹ ।

---

| | |
|---|---|
| ಪ್ರಜಾ ಮಯಾ ಸಮ್ [ಗಸೀಷ್ಟ] | ಪ್ರಜಾದಿಗಳೂ ನನ್ನೊಡನೆ ಕೂಡಿಕೊಂಡಿರಲಿ. |
| ಆಶಿಷಮ್ ಏವ ಏತಾಮ್ ಆಶಾಸ್ತೇ | [ಯಜಮಾನನು] ಈ ಶುಭಾಶಂಸನೆಯನ್ನೇ ಮಾಡುತ್ತಾನೆ. |

**ಸಮಿದಾಧಾನಮಂತ್ರದ ವ್ಯಾಖ್ಯೆ**

| | |
|---|---|
| ಅಗ್ನೇ ಮೇ ಸಮಿದ್ಧಃ ದೀದಿಹಿ | 'ಅಗ್ನಿಯೇ! ನನ್ನಿಂದ [ನನಗಾಗಿ] ಸಮಿತ್ತುಗಳಿಂದ ಜ್ವಲಿಸಲ್ಪಟ್ಟ ನೀನು ಚೆನ್ನಾಗಿ ಜ್ವಲಿಸು. |
| ಅಗ್ನೇ ತೇ ಸಮೇದ್ಧಾ ದೀದ್ಯಾಸಮ್ ಇತಿ ಆಹ | ಅಗ್ನಿಯೇ ! ನಿನ್ನನ್ನು ಜ್ವಲಿಸುವಂತೆ ಮಾಡುವ ನಾನೂ ದೀಪ್ತಿಮಂತನಾಗಿ ಪ್ರಕಾಶಿಸುವಂತಾಗಲಿ' ಎಂದು ಸಮಿದಾಧಾನಮಂತ್ರವು ಹೇಳುತ್ತದೆ. |

---

ತನ್ನ ಶಕ್ತಿಯನ್ನೇ ಅನುಸರಿಸಿ ಸುತ್ತಿದಂತಾಗುತ್ತದೆ ಮತ್ತು ಸೂರ್ಯನ ಚಲನೆಯನ್ನು ಅನುಸರಿಸಿದಂತಾಗುತ್ತದೆ.

ನಾನೂ ಪ್ರಜಾದಿಗಳೊಡನೆ ಕೂಡಿಕೊಂಡಿರುವಂತಾಗಲಿ. ಪ್ರಜಾದಿಗಳೂ ನನ್ನೊಡನೆ ಕೂಡಿಕೊಂಡಿರುವಂತಾಗಲಿ ಎಂದು ಈ ಮಂತ್ರವು ಹೇಳುತ್ತದೆ. ಇದು ಯಜ ಮಾನನ ಪ್ರಾರ್ಥನೆಯೇ ಆಗಿದೆ.

ಅಗ್ನಿಯೇ! ನಾನು ನಿನ್ನನ್ನು ಪ್ರಜ್ವಲಿಸುವಂತೆ ಮಾಡುತ್ತೇನೆ. ಹೀಗೆ ನನ್ನಿಂದ ಸಮಿತ್ತುಗಳಿಂದ ಜ್ವಲಿಸುವ ನಿನ್ನ ಅನುಗ್ರಹದಿಂದ ನಾನು ದೀಪ್ತಿಮಂತನಾಗಿ ಪ್ರಕಾಶಿಸುವಂತೆ ಆಗಲಿ ಎಂದು ಈ ಮಂತ್ರವು ಹೇಳುತ್ತದೆ. ಇದು ಸ್ಪಷ್ಟಾರ್ಥವಾಗಿಯೇ ಇದೆ.

ಯಥಾಯಜುರೇವೈತದ್ವಸುಮಾನ್ ಯಜ್ಞೋ ವಸೀಯಾ

ನ್ಭೂಯಾಸಮಿತ್ಯಾಹಾSSಶಿಷಮೇವೈತಾಮಾಶಾಸ್ತೇ ಬಹು ವೈ

ಗಾರ್ಹಪತ್ಯಸ್ಯಾಂತೇ

---

ಯಥಾಯಜುರಿತಿ ಯಥಾ-ಯಜುಃ। ಏವ । ಏತತ್ । ವಸುಮಾನಿತಿ ವಸು-ಮಾನ್। ಯಜ್ಞಃ । ವಸೀಯಾನ್। ಭೂಯಾಸಮ್। ಇತಿ । ಆಹ । ಆಶಿಷಮಿತ್ಯಾ-ಶಿಷಮ್ । ಏವ । ಏತಾಮ್ । ಏತಿ । ಶಾಸ್ತೇ । ಬಹು । ವೈ । ಗಾರ್ಹಪತ್ಯಸ್ಯೇತಿ ಗಾರ್ಹ-ಪತ್ಯಸ್ಯ। ಅಂತೇ ।

---

| | |
|---|---|
| ಏತತ್ ಯಥಾಯಜುಃ ಏವ | ಇದರ ಫಲವು ಯಜುರ್ಮಂತ್ರವು ಹೇಳುವಂತೆಯೇ ಆಗುತ್ತದೆ. ಇದು ಸ್ಪಷ್ಟಾರ್ಥ. |

**ಆಹವನೀಯೋಪಸ್ಥಾನಮಂತ್ರದ ವ್ಯಾಖ್ಯಾನ**

| | |
|---|---|
| ಯಜ್ಞಃ ವಸುಮಾನ್ | '[ಎಲೈ! ಅಗ್ನಿದೇವನೇ! ನಿನ್ನ ಅನುಗ್ರಹದಿಂದ ಈ ನಮ್ಮ] ಯಜ್ಞವು ಧನಸಮೃದ್ಧವಾಗಲಿ. |
| ವಸೀಯಾನ್ ಭೂಯಾಸಮ್ ಇತಿ ಆಹ | [ನಾನೂ] ಅತಿಶಯಧನವಂತನೂ ಆಗುವೆನು' ಎಂದು ಈ ಮಂತ್ರವು ಹೇಳುತ್ತದೆ. |
| ಆಶಿಷಮ್ ಏವ ಏತಾಮ್ ಆಶಾಸ್ತೇ | [ಈ ಮಂತ್ರಪಾಠದಿಂದ ಯಜಮಾನನು] ಈ ಶುಭಾಶಂಸನೆಯನ್ನೇ ಮಾಡುತ್ತಾನೆ. |

**ಗಾರ್ಹಪತ್ಯೋಪಸ್ಥಾನದ ಮಂತ್ರ/ಅದರ ಬ್ರಾಹ್ಮಣ**

| | |
|---|---|
| ಗಾರ್ಹಪತ್ಯಸ್ಯ ಅಂತೇ | [ಯಾವಾಗಲೂ ಧರಿಸಿರುವ] ಗಾರ್ಹಪತ್ಯಾಗ್ನಿಯ ಸಮೀಪದಲ್ಲಿ |

---

ಅಗ್ನಿದೇವನೇ! ನಿನ್ನ ಅನುಗ್ರಹದಿಂದ ಯಜ್ಞವು ಯಾವ ಕೊರತೆಯೂ ಇಲ್ಲದಂತೆ ಧನಸಮೃದ್ಧವಾಗಲಿ. ನಾನೂ ಅತಿಶಯವಾಗಿ ಧನವಂತನಾಗುವೆನೆಂದು ಈ ಮಂತ್ರವು ಹೇಳುತ್ತದೆ. ಇದು ಯಜಮಾನನ ಶುಭಪ್ರಾರ್ಥನೆಯೇ ಆಗಿದೆ.

ಮಿಶ್ರಮಿವ ಚರ್ಯತ ಆಗ್ನಿಪಾವಮಾನೀಭ್ಯಾಂ ಗಾರ್ಹಪತ್ಯ-
ಮುಪತಿಷ್ಠತೇ ಪುನಾತ್ಯೇವಾಗ್ನಿಂ ಪುನೀತ ಆತ್ಮಾನಂ
ದ್ವಾಭ್ಯಾಂ ಪ್ರತಿಷ್ಠಿತ್ಯಾ ಅಗ್ನೇ ಗೃಹಪತ ಇತ್ಯಾಹ [ಇತ್ಯಾಹ
(೪) ಯಥಾಯಜು...]

---

ಮಿಶ್ರಮ್ । ಇವ । ಚರ್ಯತೇ । ಆಗ್ನಿಪಾವಮಾನೀಭ್ಯಾಮಿತ್ಯಾಗ್ನಿ-ಪಾವಮಾನೀಭ್ಯಾಮ್। ಗಾರ್ಹಪತ್ಯಮಿತಿ ಗಾರ್ಹ- ಪತ್ಯಮ್। ಉಪೇತಿ । ತಿಷ್ಠತೇ । ಪುನಾತಿ । ಏವ । ಅಗ್ನಿಮ್। ಪುನೀತೇ। ಆತ್ಮಾನಮ್। ದ್ವಾಭ್ಯಾಮ್। ಪ್ರತಿಷ್ಠಿತ್ಯಾ ಇತಿ ಪ್ರತಿ-ಸ್ಥಿತ್ಯೈ । ಅಗ್ನೇ । ಗೃಹಪತ ಇತಿ ಗೃಹ-ಪತೇ । ಇತಿ । ಆಹ (೪) ।

---

| | |
|---|---|
| ಮಿಶ್ರಮ್ ಇವ ಬಹು ಚರ್ಯತೇ | *ಪುಣ್ಯಪಾಪಮಿಶ್ರವಾದ ಘಟನೆಗಳು ಹೆಚ್ಚು ಸಂಭವಿಸುತ್ತವೆ. |
| ಆಗ್ನಿಪಾವಮಾನೀಭ್ಯಾಮ್ ಗಾರ್ಹಪತ್ಯಮ್ ಉಪತಿಷ್ಠತೇ | ಅಗ್ನಿಪವಮಾನದೇವತಾಕವಾದ ಎರಡು ಮಂತ್ರ ಗಳಿಂದ ಗಾರ್ಹಪತ್ಯಾಗ್ನಿಯನ್ನು [ಯಜಮಾ ನನು] ಉಪಸ್ಥಾನ ಮಾಡುತ್ತಾನೆ. |
| ಪುನಾತಿ ಏವ ಅಗ್ನಿಮ್ | ಇದರಿಂದ ಅಗ್ನಿಯನ್ನೂ ಶುದ್ಧಿಗೊಳಿಸುತ್ತಾನೆ. |
| ಪುನೀತೇ ಆತ್ಮಾನಮ್ ದ್ವಾಭ್ಯಾಂ [ಉಪತಿಷ್ಠತೇ] ಪ್ರತಿಷ್ಠಿತ್ಯೈ | ತನ್ನನ್ನೂ ಶುದ್ಧಿಗೊಳಿಸುತ್ತಾನೆ. ಎರಡು ಮಂತ್ರ ಗಳಿಂದ ಉಪಸ್ಥಾನ ಮಾಡುವುದರಿಂದ ಎರಡು ಕಾಲುಗಳಿಂದ ನಿಲ್ಲುವಂತೆ ಸ್ಥಿರವಾಗಿ ನಿಲ್ಲು ತ್ತಾನೆ. |

**ಗಾರ್ಹಪತ್ಯೋಪಸ್ಥಾನದ ವ್ಯಾಖ್ಯಾನ**

| | |
|---|---|
| ಅಗ್ನೇ ಗೃಹಪತೇ ಇತಿ ಆಹ | [ಎಲೈ! ಗಾರ್ಹಪತ್ಯಾಗ್ನಿಯೇ!] ಎಂದು ಮೊದ ಲಾಗಿ ಉಪಸ್ಥಾನಮಂತ್ರವು ಹೀಗೆ ಹೇಳುತ್ತದೆ. |

---

ಯಜಮಾನನು ಯಾವಾಗಲೂ ಗಾರ್ಹಪತ್ಯಾಗ್ನಿಯನ್ನು ಧಾರಣೆ ಮಾಡಿರುತ್ತಾನೆ. ಕ್ರಿಮಿಕೀಟಾದಿಗಳಿಗೆ ಅಗ್ನಿಯಿಂದ ಹಿಂಸೆಯಾಗಬಹುದು. ಶತ್ರುಗಳಿಗೆ ಹಿಂಸೆಯಾಗಲೆಂದು

---

* ಯಾಗದಾನಾದಿಗಳು ಪುಣ್ಯಗಳು. ಕ್ರಿಮಿಕೀಟಾದಿಗಳಿಗೆ ಹಿಂಸೆ, ಶತ್ರುನಾಶದ ಆಶಂಸೆ ಮೊದಲಾದವುಗಳು ಪಾಪಗಳು.

ಯಥಾಯಜುರೇವೈತಚ್ಛತಗ್ಂ ಹಿಮಾ ಇತ್ಯಾಹ ಶತಂ ತ್ವಾ ಹೇಮಂತಾನಿನ್ಧಿಷೀಯೇತಿ ವಾವೈತದಾಹ ಪುತ್ರಸ್ಯ ನಾಮ ಗೃಹ್ಣಾತ್ಯನ್ನಾದಮೇವೈನಂ ಕರೋತಿ

---

ಯಥಾಯಜುರಿತಿ ಯಥಾ-ಯಜುಃ । ಏವ । ಏತತ್। ಶತಮ್ । ಹಿಮಾಃ । ಇತಿ । ಆಹ । ಶತಮ್। ತ್ವಾ । ಹೇಮಂತಾನ್। ಇಂಧಿಷೀಯ। ಇತಿ । ವಾವ । ಏತತ್ । ಆಹ । ಪುತ್ರಸ್ಯ । ನಾಮ । ಗೃಹ್ಣಾತಿ । ಅನ್ನಾದಮಿತ್ಯನ್ನ-ಅದಮ್। ಏವ । ಏನಮ್। ಕರೋತಿ ।

---

| | |
|---|---|
| ಯಥಾಯಜುಃ ಏವ ಏತತ್ | ಇದು ಯಜುರ್ಮಂತ್ರವು ಹೇಳುವಂತೆ ಸ್ಪಷ್ಟಾರ್ಥವೇ ಆಗಿದೆ. |

**ಉಪಸ್ಥಾನಮಂತ್ರಭಾಗದ ವ್ಯಾಖ್ಯಾನ**

| | |
|---|---|
| ಶತಮ್ ಹಿಮಾಃ ಇತಿ ಆಹ | ನೂರು ಹೇಮಂತಗಳ ಕಾಲ ಎಂದು ಈ ಮಂತ್ರವು ಹೇಳುತ್ತದೆ. |
| ಶತಮ್ ತ್ವಾ ಹೇಮಂತಾನ್ ಇಂಧಿಷೀಯ | ನಿನ್ನನ್ನು ನೂರು ಹೇಮಂತಗಳವರೆಗೆ [ಸಂವತ್ಸರಗಳವರೆಗೆ] ಪರಿಚರಿಸುವೆನು. |
| ಇತಿ ವಾವ ಏತತ್ ಆಹ | ಎಂದು ತಾನೇ ಈ ಮಂತ್ರವು ಹೇಳುತ್ತದೆ! |

**ಮಗನ ಹೆಸರಿನ ಗ್ರಹಣದ ವ್ಯಾಖ್ಯಾನ**

| | |
|---|---|
| ಪುತ್ರಸ್ಯ ನಾಮ ಗೃಹ್ಣಾತಿ | ಮಗನ ಹೆಸರನ್ನು ['ಅಮುಷ್ಮೈ' ಎಂಬ ಪದದ ಸ್ಥಾನದಲ್ಲಿ] ಗ್ರಹಣ ಮಾಡಬೇಕು.[ವಿಧಿ] |
| ಅನ್ನಾದಮ್ ಏವ ಏನಮ್ ಕರೋತಿ | ಈ ಮಗನನ್ನು ಅನ್ನಭಕ್ಷಣಸಮರ್ಥನನ್ನಾಗಿಯೇ ಮಾಡುತ್ತಾನೆ. |

---

ಕೇಳುವ ಮಂತ್ರಗಳೂ ಇವೆ. ಇದರಿಂದ ಯಜ್ಞದಾನಾದಿ ಗಳಿಂದ ಬರುವ ಪುಣ್ಯದ ಜೊತೆಗೆ ಪಾಪಸಂಬಂಧವೂ ಉಂಟಾಗಬಹುದು. ಇದರ ಪರಿಹಾರಕ್ಕಾಗಿ **'ಅಗ್ನ ಆಯೂಗ್ಂಷಿ' 'ಅಗ್ನೇ ಪವಸ್ವ'** ಎಂಬ ಅಗ್ನಿಪವಮಾನದೇವತಾಕ ವಾದ ಎರಡು ಮಂತ್ರಗಳಿಂದ ಗಾರ್ಹಪತ್ಯೋಪಸ್ಥಾನ ಮಾಡಬೇಕು. ಇದರಿಂದ ಯಜಮಾನನು ಅಗ್ನಿಯನ್ನೂ ಶುದ್ಧಿಗೊಳಿಸುತ್ತಾನೆ; ತನ್ನನ್ನೂ ಶುದ್ಧಿಗೊಳಿಸುತ್ತಾನೆ. ಎರಡು ಮಂತ್ರ

ತಾಮಾಶಿಷಮಾ ಶಾಸೇ ತಂತವೇ ಜ್ಯೋತಿಷ್ಮತೀಮಿತಿ ಬ್ರೂಯಾ ದ್ಯಸ್ಯ ಪುತ್ರೋಽಜಾತಸ್ಸ್ಯಾತ್ತೇಜಸ್ವ್ಯೇವಾಸ್ಯ ಬ್ರಹ್ಮವರ್ಚಸೀ

---

ತಾಮ್। ಆಶಿಷಮಿತ್ಯಾ-ಶಿಷಮ್ । ಏತಿ । ಶಾಸೇ । ತಂತವೇ । ಜ್ಯೋತಿಷ್ಮತೀಮ್। ಇತಿ । ಬ್ರೂಯಾತ್। ಯಸ್ಯ। ಪುತ್ರಃ । ಅಜಾತಃ । ಸ್ಯಾತ್ । ತೇಜಸ್ವೀ । ಏವ । ಅಸ್ಯ । ಬ್ರಹ್ಮವರ್ಚಸೀ ।

---

**ಮಗನು ಇನ್ನೂ ಹುಟ್ಟದಿರುವಾಗ ಹೇಳಬೇಕಾದ ರೀತಿ**

| | |
|---|---|
| ತಾಮ್ ಆಶಿಷಮ್ ಆ ಶಾಸೇ | ಆ ಶುಭಾಶಂಸನೆಯನ್ನು ಹೀಗೆ ಮಾಡಬೇಕು. |
| ಯಸ್ಯ ಪುತ್ರಃ ಅಜಾತಃ ಸ್ಯಾತ್ | ಯಾವನಿಗೆ ಇನ್ನೂ ಮಗನು ಹುಟ್ಟಿಲ್ಲವೋ [ಆಗ] |
| ತಂತವೇ ಜ್ಯೋತಿಷ್ಮತೀಮ್ ಇತಿ ಬ್ರೂಯಾತ್ | ಹುಟ್ಟುವ ಮಗನಿಗೆ 'ಜ್ಯೋತಿಷ್ಮತೀಂ ಆಶಿಷಮಾ ಶಾಸೇ' [ಪ್ರಕಾಶಮಾನವಾದ ಶುಭಾಶಂಸನೆಯನ್ನು ಮಾಡುತ್ತೇನೆ] ಎಂದು ಹೇಳಬೇಕು. |
| ಅಸ್ಯ ತೇಜಸ್ವೀ ಏವ ಬ್ರಹ್ಮವರ್ಚಸೀ | ಇವನಿಗೆ ತೇಜಸ್ವಿಯಾಗಿರುವ ಬ್ರಹ್ಮವರ್ಚಸ್ಸುಳ್ಳವನಾಗಿರುವ |

---

ಗಳಿಂದ ಉಪಸ್ಥಾನ ಮಾಡುವುದರಿಂದ ಪ್ರತಿಷ್ಠಿತನಾಗುತ್ತಾನೆ.

ಎಲೈ! ಗಾರ್ಹಪತ್ಯಾಗ್ನಿಯೇ! ನೀನು ಗೃಹಪತಿ; ನಿನ್ನಿಂದ ನಾನು ಸುಗೃಹಪತಿಯಾಗಬೇಕು. ಗೃಹಪತಿಯಾದ ನನ್ನಿಂದ ನೀನು ಸುಗೃಹಪತಿಯಾಗಬೇಕು ಎಂದು ಹೇಳುವ ಈ ಮಂತ್ರವು ಸ್ಪಷ್ಟಾರ್ಥವಾಗಿದೆ.

'ಶತಂ ತ್ವಾ ಹೇಮಂತಾನ್' ಎಂದು ಹೇಳುವ ಮಂತ್ರಭಾಗದ ಅಭಿಪ್ರಾಯವು 'ಅಗ್ನಿಯನ್ನು ನೂರು ವತ್ಸರಗಳ ಪರ್ಯಂತವಾಗಿ ಉಪಚರಿಸುವಂತಾಗಲಿ' ಎಂದು ತಾನೇ ಆಗಿದೆ!

ಈ ಉಪಸ್ಥಾನಮಂತ್ರದಲ್ಲಿ 'ಅಮುಷ್ಮೈ' ಎಂಬ ಪದದ ಸ್ಥಾನದಲ್ಲಿ ಮಗನ ಹೆಸರನ್ನು ಗ್ರಹಣ ಮಾಡಬೇಕು. ಇದರಿಂದ ಆ ಮಗನನ್ನು ಅನ್ನಭಕ್ಷಣಶಕ್ತನನ್ನಾಗಿ ಮಾಡುತ್ತಾನೆ.

ಪುತ್ರೋ ಜಾಯತೇ ತಾಮಾಶಿಷಮಾಶಾಸೇಽಮುಷ್ಮೈ ಜ್ಯೋತಿಷ್ಮತೀಮಿತಿ ಬ್ರೂಯಾದ್ಯಸ್ಯ ಪುತ್ರೋ [ಪುತ್ರಃ (೫)] ಜಾತಸ್ಸ್ಯಾತ್ತೇಜ ಏವಾಸ್ಮಿನ್ಬ್ರಹ್ಮವರ್ಚಸಂ ದಧಾತಿ ಯೋ ವೈ ಯಜ್ಞಂ ಪ್ರಯುಜ್ಯ

---

ಪುತ್ರಃ । ಜಾಯತೇ । ತಾಮ್ । ಆಶಿಷಮಿತ್ಯಾ-ಶಿಷಮ್ । ಏತಿ । ಶಾಸೇ । ಅಮುಷ್ಮೈ । ಜ್ಯೋತಿಷ್ಮತೀಮ್ । ಇತಿ । ಬ್ರೂಯಾತ್ । ಯಸ್ಯ । ಪುತ್ರಃ (೫) । ಜಾತಃ । ಸ್ಯಾತ್ ತೇಜಃ । ಏವ । ಅಸ್ಮಿನ್ನ್ । ಬ್ರಹ್ಮವರ್ಚಸಮಿತಿ ಬ್ರಹ್ಮ-ವರ್ಚಸಮ್ । ದಧಾತಿ । ಯಃ । ವೈ । ಯಜ್ಞಮ್ । ಪ್ರಯುಜ್ಯೇತಿ ಪ್ರ-ಯುಜ್ಯ ।

---

| | |
|---|---|
| ಪುತ್ರಃ ಜಾಯತೇ | ಮಗನು ಹುಟ್ಟುತ್ತಾನೆ. |

**ಮಗನು ಜನಿಸಿದ್ದರೆ ಹೇಳಬೇಕಾದ ರೀತಿ**

| | |
|---|---|
| ಯಸ್ಯ ಪುತ್ರಃ ಜಾತಃ ಸ್ಯಾತ್ | ಯಾವನಿಗೆ ಮಗನು ಜನಿಸಿರುತ್ತಾನೆಯೋ [ಆ ಯಜಮಾನನು] |
| ತಾಮ್ ಆಶಿಷಮ್ ಆಶಾಸೇ ಅಮುಷ್ಮೈ ಜ್ಯೋತಿಷ್ಮತೀಮ್ ಇತಿ ಬ್ರೂಯಾತ್ | 'ಇಂತಹ ಹೆಸರುಳ್ಳ ಮಗನಿಗೆ ಪ್ರಕಾಶಮಾನವಾದ ತೇಜಸ್ಸು ಮೊದಲಾದವುಗಳನ್ನು ಕೋರುತ್ತೇನೆ' ಎಂದು ಹೇಳಬೇಕು. |
| ಅಸ್ಮಿನ್ ತೇಜಃ ಏವ ಬ್ರಹ್ಮವರ್ಚಸಮ್ ದಧಾತಿ | ಈ ಪುತ್ರನಲ್ಲಿ ತೇಜಸ್ಸನ್ನೂ, ಬ್ರಹ್ಮವರ್ಚಸವನ್ನೂ ಇರುವಂತೆ ಮಾಡುತ್ತಾನೆ. |

**ಯಜ್ಞವಿಮೋಕವಿಧಾನ / ಅದರ ಬ್ರಾಹ್ಮಣ**

| | |
|---|---|
| ಯಃ ವೈ ಯಜ್ಞಮ್ ಪ್ರಯುಜ್ಯ | ಯಾವ ಯಜಮಾನನು ಯಜ್ಞಪ್ರಯೋಗವನ್ನು ಅನುಷ್ಠಾನ ಮಾಡಿ* |

---

ಮಗನು ಇನ್ನೂ ಹುಟ್ಟದಿರುವಾಗ ಯಜಮಾನನು **'ತಂತವೇ ಜ್ಯೋತಿಷ್ಮತೀಮ್ ಆಶಿಷಮ್ ಆಶಾಸೇ'** ಎಂದು ಹೇಳಬೇಕು. ಆ ಯಜಮಾನನಿಗೆ ತೇಜಸ್ವಿಯಾಗಿಯೂ

---

* **'ಕಸ್ತ್ವಾ ಯುನಕ್ತಿ ಸ ತ್ವಾ ಯುನಕ್ತು'** ಎಂಬ ಮಂತ್ರಜಪವೇ ಯಜ್ಞಯೋಗ.

ನ ವಿ ಮುಂಚತ್ಯಪ್ರತಿಷ್ಠಾನೋ ವೈ ಸ ಭವತಿ ಕಸ್ತ್ವಾ ಯುನಕ್ತಿ
ಸ ತ್ವಾ ವಿ ಮುಂಚತ್ವಿತ್ಯಾಹ ಪ್ರಜಾಪತಿರ್ವೈ ಕಃ ಪ್ರಜಾಪತಿ-
ನೈವೈನಂ ಯುನಕ್ತಿ ಪ್ರಜಾಪತಿನಾ ವಿ ಮುಂಚತಿ ಪ್ರತಿಷ್ಠಿತ್ಯಾ

---

ನ । ವಿಮುಂಚತೀತಿ ವಿ-ಮುಂಚತಿ । ಅಪ್ರತಿಷ್ಠಾನ ಇತ್ಯಪ್ರತಿ-ಸ್ಥಾನಃ। ವೈ । ಸಃ । ಭವತಿ। ಕಃ। ತ್ವಾ। ಯುನಕ್ತಿ । ಸಃ । ತ್ವಾ । ವೀತಿ । ಮುಂಚತು । ಇತಿ । ಆಹ । ಪ್ರಜಾಪತಿರಿತಿ ಪ್ರಜಾ-ಪತಿಃ । ವೈ । ಕಃ । ಪ್ರಜಾಪತಿನೇತಿ ಪ್ರಜಾ-ಪತಿನಾ। ಏವ। ಏನಮ್ । ಯುನಕ್ತಿ । ಪ್ರಜಾಪತಿನೇತಿ ಪ್ರಜಾ-ಪತಿನಾ । ವೀತಿ । ಮುಂಚತಿ । ಪ್ರತಿಷ್ಠಿತ್ಯಾ ಇತಿ ಪ್ರತಿ-ಸ್ಥಿತ್ಯೈ ।

---

| | |
|---|---|
| ನ ವಿಮುಂಚತಿ ಸಃ ವೈ ಅಪ್ರತಿಷ್ಠಾನಃ ಭವತಿ | ಮತ್ತೆ ಬಿಡುವುದಿಲ್ಲವೋ ಅವನು ಚಂಚಲ ಸ್ಥಿತಿಯುಳ್ಳವನಾಗುತ್ತಾನೆ. |
| ಕಃ ತ್ವಾ ಯುನಕ್ತಿ ಸಃ ತ್ವಾ ವಿಮುಂಚತು ಇತಿ ಆಹ | [ಆದುದರಿಂದ ಈ ಮಂತ್ರವನ್ನು ಹೇಳಬೇಕು] 'ಕ' ಶಬ್ದವಾಚ್ಯನಾದ ಪ್ರಜಾಪತಿಯು ನಿನ್ನನ್ನು [ಯಜ್ಞವನ್ನು] ಕಟ್ಟಿರುತ್ತಾನೆ. ಅವನೇ ನಿನ್ನನ್ನು ಬಿಚ್ಚಿಬಿಡಲಿ' ಎಂದು ಈ ಯಜ್ಞವಿಮೋಕ ಮಂತ್ರವು ಹೇಳುತ್ತದೆ. |
| ಪ್ರಜಾಪತಿಃ ವೈ ಕಃ ಪ್ರಜಾಪತಿನಾ ಏವ ಏನಮ್ ಯುನಕ್ತಿ | ಪ್ರಜಾಪತಿಯು 'ಕ' ಶಬ್ದವಾಚ್ಯನು [ಯಜಮಾನನು ಮೊದಲು] ಪ್ರಜಾಪತಿಯಿಂದಲೇ ಯಜ್ಞವನ್ನು ಕಟ್ಟಿರುತ್ತಾನೆ. |
| ಪ್ರಜಾಪತಿನಾ ವಿಮುಂಚತಿ ಪ್ರತಿಷ್ಠಿತ್ಯೈ | ಪ್ರಜಾಪತಿಯಿಂದಲೇ ಯಜ್ಞವನ್ನು ಬಿಚ್ಚಿಬಿಡುತ್ತಾನೆ. ಇದರಿಂದ ಯಜಮಾನನು ಪ್ರತಿಷ್ಠಿತನಾಗುತ್ತಾನೆ. |

---

ಬ್ರಹ್ಮವರ್ಚಸವುಳ್ಳವನಾಗಿಯೂ ಇರುವ ಮಗನು ಹುಟ್ಟುತ್ತಾನೆ. ಮಗನು ಜನಿಸಿದ್ದರೆ **'ಅಮುಷ್ಮೈ'** ಎಂಬ ಪದದ ಸ್ಥಾನದಲ್ಲಿ **'ಯಜ್ಞಶರ್ಮಣೇ'** ಮೊದಲಾಗಿ ನಾಮ ನಿರ್ದೇಶ ಮಾಡಬೇಕು. ಇದರಿಂದ ಯಜಮಾನನು ಹುಟ್ಟಿರುವ ಮಗನಲ್ಲಿ ತೇಜಸ್ಸನ್ನೂ, ಬ್ರಹ್ಮವರ್ಚಸವನ್ನೂ ಧರಿಸುವಂತೆ ಮಾಡುತ್ತಾನೆ.

ಈಶ್ವರಂ ವೈ ವ್ರತಮವಿಸೃಷ್ಟಂ ಪ್ರದಹೋಽಗ್ನೇ ವ್ರತಪತೇ
ವ್ರತಮಚಾರಿಷಮಿತ್ಯಾಹ

---

**ಈಶ್ವರಮ್।** ವೈ । ವ್ರತಮ್ । ಅವಿಸೃಷ್ಟಮಿತ್ಯವಿ-ಸೃಷ್ಟಮ್। ಪ್ರದಹ ಇತಿ ಪ್ರ-ದಹಃ। ಅಗ್ನೇ । ವ್ರತಪತ ಇತಿ ವ್ರತ-ಪತೇ। ವ್ರತಮ್ । ಅಚಾರಿಷಮ್ । ಇತಿ । ಆಹ ।

---

**ವ್ರತವಿಸರ್ಗವಿಧಿ / ಅದರ ಬ್ರಾಹ್ಮಣ**

| | |
|---|---|
| ಅವಿಸೃಷ್ಟಂ ವ್ರತಮ್<br>ಪ್ರದಹಃ ಈಶ್ವರಂ ವೈ | [ಕೈಗೊಂಡ] ವ್ರತವು ವಿಸರ್ಜಿಸಲ್ಪಡದಿದ್ದರೆ [ಯಜಮಾನನನ್ನು] ಸುಡಲು ಸಮರ್ಥವಾಗುತ್ತದೆ. |
| ಅಗ್ನೇ ವ್ರತಪತೇ ವ್ರತಮ್<br>ಅಚಾರಿಷಮ್ ಇತಿ ಆಹ | 'ವ್ರತರಕ್ಷಕನಾದ ಅಗ್ನಿಯೇ! ವ್ರತವನ್ನಾಚರಿಸಿ ಮುಗಿಸಿದೆನು' ಎಂದು ಈ ವ್ರತವಿಮೋಕ ಮಂತ್ರವು ಹೇಳುತ್ತದೆ. |

---

'ಕಸ್ತ್ವಾ ಯುನಕ್ತಿ' ಎಂಬುದು ಯಜ್ಞಯೋಗ. ಈ ಮಂತ್ರವನ್ನು ಹೇಳಿದರೆ ಯಜ್ಞವನ್ನು ಕಟ್ಟಿದಂತೆ. ಹೀಗೆ ಯಜ್ಞವನ್ನು ಕಟ್ಟಿ ಬಿಚ್ಚದಿದ್ದರೆ ಯಜಮಾನನು ಪ್ರತಿಷ್ಠಾರಹಿತನಾಗುತ್ತಾನೆ. ಆದುದರಿಂದ 'ಕಸ್ತ್ವಾ ಯುನಕ್ತಿ ಸ ತ್ವಾ ವಿಮುಂಚತು' ಎಂಬ ಯಜ್ಞವಿಮೋಕವನ್ನು ಹೇಳಬೇಕು. ಪ್ರಜಾಪತಿಯೇ ಯಜ್ಞವನ್ನು ಕಟ್ಟಲೂ ಸಮರ್ಥನು. ಬಿಚ್ಚಲೂ ಸಮರ್ಥನು. ಯಜಮಾನನು ಮೊದಲು ಪ್ರಜಾಪತಿಯಿಂದಲೇ ಯಜ್ಞವನ್ನು ಕಟ್ಟುತ್ತಾನೆ. ಕಡೆಯಲ್ಲಿ ಪ್ರಜಾಪತಿಯಿಂದಲೇ ಬಿಚ್ಚುತ್ತಾನೆ. ಇದರಿಂದ ಅವನು ಲೋಕದಲ್ಲಿ ಪ್ರತಿಷ್ಠಿತನಾಗುತ್ತಾನೆ.

ಯಜಮಾನನು ಮೊದಲು 'ಅಗ್ನೇ ವ್ರತಪತೇ ವ್ರತಂ ಚರಿಷ್ಯಾಮಿ' ಎಂದು ವ್ರತಗ್ರಹಣವನ್ನು ಮಾಡಿರುತ್ತಾನೆ. ಆ ವ್ರತವನ್ನು ವಿಸರ್ಜಿಸದಿದ್ದರೆ ಅದು ಯಜಮಾನನನ್ನು ಸುಡಲು ಶಕ್ತವಾಗಬಹುದು. ಆದಕ್ಕಾಗಿ 'ಅಗ್ನೇ ವ್ರತಪತೇ ವ್ರತಮಚಾರಿಷಮ್' ಎಂದು ವ್ರತವಿಸರ್ಗವನ್ನು ಹೇಳಬೇಕು. ಇದರಿಂದ ವ್ರತವನ್ನು ವಿಸರ್ಜಿಸಿ

ವ್ರತಮೇವ [೬] ವಿಸೃಜತೇ ಶಾಂತ್ಯಾ ಅಪ್ರದಾಹಾಯ ಪರಾಙ್ ವಾವ ಯಜ್ಞ ಏತಿ ನ ನಿವರ್ತತೇ ಪುನರ್ಯೋ ವೈ ಯಜ್ಞಸ್ಯ ಪುನರಾಲಂಭಂ ವಿದ್ವಾನ್ ಯಜತೇ ತಮಭಿ ನಿವರ್ತತೇ

---

ವ್ರತಮ್। ಏವ (೬)। ವೀತಿ । ಸೃಜತೇ । ಶಾಂತ್ಯೈ । ಅಪ್ರದಾಹಾಯೇತ್ಯಪ್ರ-ದಾಹಾಯ। ಪರಾಙ್ । ವಾವ । ಯಜ್ಞಃ । ಏತಿ । ನ । ನೀತಿ । ವರ್ತತೇ । ಪುನಃ । ಯಃ । ವೈ । ಯಜ್ಞಸ್ಯ । ಪುನರಾಲಂಭಮಿತಿ ಪುನಃ-ಆಲಂಭಮ್ । ವಿದ್ವಾನ್। ಯಜತೇ । ತಮ್ । ಅಭಿ । ನೀತಿ । ವರ್ತತೇ ।

---

| | |
|---|---|
| ವ್ರತಮ್ ಏವ ವಿಸೃಜತೇ ಶಾಂತ್ಯೈ ಅಪ್ರದಾಹಾಯ | ಇದರಿಂದ ವ್ರತವನ್ನು ವಿಸರ್ಜಿಸಿದಂತಾಗುತ್ತದೆ. ವ್ರತವು ಯಜಮಾನನನ್ನು ಸುಡುವುದೂ ಇಲ್ಲ. ಶಾಂತಿಯನ್ನೂ ಕೊಡುತ್ತದೆ. |

**ಪುನರಾಲಂಭಜಪವಿಧಿ / ಅದರ ಬ್ರಾಹ್ಮಣ**

| | |
|---|---|
| ಪರಾಙ್ ವಾವ ಯಜ್ಞಃ ಏತಿ | ಯಜ್ಞವನ್ನು ಮುಗಿಸಿದೊಡನೆಯೇ ಅದು ಹೊರಟುಹೋಗುತ್ತದೆ. |
| ನ ನಿವರ್ತತೇ ಪುನಃ | ಮತ್ತೆ ಹಿಂದಿರುಗಿ ಬರುವುದಿಲ್ಲ. |
| ಯಃ ವೈ ಯಜ್ಞಸ್ಯ ಪುನರಾಲಂಭಂ ವಿದ್ವಾನ್ ಯಜತೇ ತಮ್ ಅಭಿ ನಿವರ್ತತೇ | ಯಾವ ಯಜಮಾನನು ಪುನರಾಲಂಭವನ್ನು ತಿಳಿದವನಾಗಿ ಯಾಗವನ್ನು ಮಾಡುತ್ತಾನೆಯೋ ಅವನಿಗೆ ಎದುರಾಗಿ ಮತ್ತೆ ಹಿಂದಿರುಗಿ ಬರುತ್ತದೆ. |

---

ದಂತೆ ಆಗುತ್ತದೆ. ಶಾಂತಿಯೂ ಉಂಟಾಗುತ್ತದೆ. ಸುಡುವುದೂ ಇಲ್ಲ.

ಯಜ್ಞವು ಮುಗಿದ ಮೇಲೆ ಹೊರಟುಹೋಗುತ್ತದೆ. ಮತ್ತೆ ಹಿಂದಿರುಗಿ ಬರುವುದಿಲ್ಲ. ದರ್ಶ-ಪೂರ್ಣಮಾಸಗಳು ಯಾವಾಗಲೂ ಮಾಡಬೇಕಾದವುಗಳಾಗಿವೆ. ಅದಕ್ಕಾಗಿ ಯಜ್ಞದ ಪುನರಾಲಂಭವನ್ನು ತಿಳಿದು ಯಜ್ಞವನ್ನು ಮಾಡಬೇಕು. ಯಾವ ಯಜಮಾನನು ಯಜ್ಞದ ಪುನರಾಲಂಭವನ್ನು ತಿಳಿದವನಾಗಿ ಯಾಗವನ್ನು ಮಾಡುತ್ತಾನೆಯೋ ಮತ್ತೆ

ಯಜ್ಞೋ ಬಭೂವ ಸ ಆ ಬಭೂವೇತ್ಯಾಹೈಷ ವೈ ಯಜ್ಞಸ್ಯ ಪುನರಾಲಂಭಸ್ತೇನೈವೈನಂ ಪುನರಾಲಭತೇಽನವರುದ್ಧಾ ವಾ ಏತಸ್ಯ ವಿರಾಡ್ಯ ಆಹಿತಾಗ್ನಿಸ್ಸನ್ನಸಭಃ

---

ಯಜ್ಞಃ । ಬಭೂವ । ಸಃ । ಆ । ಬಭೂವ । ಇತಿ । ಆಹ । ಏಷಃ । ವೈ । ಯಜ್ಞಸ್ಯ। ಪುನರಾಲಂಭ ಇತಿ ಪುನಃ-ಆಲಂಭಃ। ತೇನ । ಏವ । ಏನಮ್ । ಪುನಃ । ಆ। ಲಭತೇ । ಅನವರುದ್ಧೇತ್ಯನವ-ರುದ್ಧಾ । ವೈ । ಏತಸ್ಯ। ವಿರಾಡಿತಿ ವಿ-ರಾಟ್। ಯಃ । ಆಹಿತಾಗ್ನಿರಿತ್ಯಾಹಿತ-ಅಗ್ನಿಃ । ಸನ್ । ಅಸಭಃ ।

---

| | |
|---|---|
| ಯಜ್ಞಃ ಬಭೂವ ಸಃ ಆ ಬಭೂವ ಇತಿ ಆಹ | 'ಯಜ್ಞವು ಸಂಪೂರ್ಣವಾಯಿತು. ಮತ್ತೆ ಮತ್ತೆ ಸಂಪೂರ್ಣವಾಗಲಿ' ಎಂದು ಈ ಮಂತ್ರವು ಹೇಳುತ್ತದೆ. |
| ಏಷಃ ವೈ ಯಜ್ಞಸ್ಯ ಪುನರಾಲಂಭಃ | ಇದೇ ಯಜ್ಞದ ಪುನರಾರಂಭವಾಗಿದೆ. |
| ತೇನ ಏವ ಏನಮ್ ಪುನಃ ಆಲಭತೇ | ಇದರಿಂದ ಪುನಃ ಯಜ್ಞವನ್ನು ಆರಂಭಿಸಿದವನಾಗುತ್ತಾನೆ. |

**ಗೋಮತೀಮಂತ್ರ ಜಪವಿಧಿ / ಅದರ ಬ್ರಾಹ್ಮಣ**

| | |
|---|---|
| ಯಃ ಆಹಿತಾಗ್ನಿಃ ಸನ್ ಅಸಭಃ | ಯಾವ ಯಜಮಾನನು ಆಹಿತಾಗ್ನಿಯಾಗಿದ್ದರೂ ಸಭಾರಹಿತನಾಗಿರುತ್ತಾನೆಯೋ |
| ಏತಸ್ಯ ವಿರಾಟ್ ಅನವರುದ್ಧಾ ವೈ | ಇವನಿಗೆ ಪ್ರಕಾಶಮಾನವಾದ ಸಭೆಯು/ಅನ್ನವು ಪ್ರಾಪ್ತವಾಗುವುದಿಲ್ಲ. |

---

ಅವನಿಗೆ ಎದುರಾಗಿ ಯಾಗವು ಹಿಂದಿರುಗಿ ಬರುತ್ತದೆ. 'ಯಜ್ಞೋ ಬಭೂವ....' ಎಂಬ ಮಂತ್ರವೇ ಯಜ್ಞದ ಪುನರಾಲಂಭ. 'ಈ ಯಜ್ಞವು ಸಂಪೂರ್ಣವಾಯಿತು. ಇದು ಮತ್ತೆ ಮತ್ತೆ ಸಂಪೂರ್ಣವಾಗಲಿ ಎಂದು ಮಂತ್ರಾರ್ಥ. ಈ ಮಂತ್ರವನ್ನು ಯಜಮಾನನು ಪಠಿಸುವುದರಿಂದ ಯಜ್ಞವನ್ನು ಮತ್ತೆ ಆರಂಭ ಮಾಡಿದಂತಾಗುತ್ತದೆ.

ಯಾಗ ಮಾಡುವ ಬ್ರಾಹ್ಮಣನಿಗೆ ಗವಾದಿಪಶುಸಂಪತ್ತೂ, ಋತ್ವಿಜಸಂಪತ್ತೂ ಯಜ್ಞವನ್ನು ನೋಡಲು ಬರುವ ವಿದ್ವತ್ಸಮೃದ್ಧಿಯೂ ಸಭೆಯೆನಿಸಿಕೊಳ್ಳುತ್ತದೆ.

ಪಶವಃ ಖಲು ವೈ ಬ್ರಾಹ್ಮಣಸ್ಯ ಸಭೇಷ್ಟ್ವಾ ಪ್ರಾಙುತ್ಕ್ರಮ್ಯ ಬ್ರೂಯಾದ್ಗೋಮಾಗ್ಂ ಅಗ್ನೇಽವಿಮಾಗ್ಂ ಅಶ್ವೀ ಯಜ್ಞ ಇತ್ಯವ ಸಭಾಗ್ಂ ರುಂಧೇ ಪ್ರ ಸಹಸ್ರಂ ಪಶೂನಾಪ್ನೋತ್ಯಾಸ್ಯ

---

ಪಶವಃ । ಖಲು । ವೈ । ಬ್ರಾಹ್ಮಣಸ್ಯ । ಸಭಾ । ಇಷ್ಟ್ವಾ । ಪ್ರಾಙ್ । ಉತ್ಕ್ರಮ್ಯೇತ್ಯುತ್-ಕ್ರಮ್ಯ । ಬ್ರೂಯಾತ್ । ಗೋಮಾನಿತಿ ಗೋ-ಮಾನ್। ಅಗ್ನೇ । ಅವಿಮಾನಿತ್ಯವಿ-ಮಾನ್ । ಅಶ್ವೀ । ಯಜ್ಞಃ । ಇತಿ । ಅವೇತಿ । ಸಭಾಮ್। ರುಂಧೇ। ಪ್ರೇತಿ । ಸಹಸ್ರಮ್। ಪಶೂನ್ । ಆಪ್ನೋತಿ । ಏತಿ । ಅಸ್ಯ ।

---

| | |
|---|---|
| ಪಶವಃ ಖಲು ವೈ ಬ್ರಾಹ್ಮಣಸ್ಯ ಸಭಾ | ಗವಾದಿಪಶುಗಳೇ ಬ್ರಾಹ್ಮಣನ ಸಭೆ. |
| ಇಷ್ಟ್ವಾ ಪ್ರಾಙ್ ಉತ್ಕ್ರಮ್ಯ | [ಯಜಮಾನನು] ಯಾಗಮಾಡಿ ಪೂರ್ವದಿಕ್ಕಿಗೆ ಹೋಗಿ |
| ಗೋಮಾಗ್ಂ ಅಗ್ನೇ ಅವಿಮಾಗ್ಂ ಅಶ್ವೀ ಯಜ್ಞಃ ಇತಿ ಬ್ರೂಯಾತ್ | **'ಗೋಮಾಗ್ಂ ಅಗ್ನೇ ಅವಿಮಾಗ್ಂ ಅಶ್ವೀ ಯಜ್ಞ:... ಸಭಾವಾನ್'** ಎಂಬ ಮಂತ್ರವನ್ನು ಹೇಳಬೇಕು. [ಇದರಿಂದ ಯಜಮಾನನು] |
| ಸಭಾಮ್ ಅವ ರುಂಧೇ | ಗೋಮನುಷ್ಯಾದಿಯುಕ್ತವಾದ ಸಭೆಯನ್ನು ಹೊಂದುತ್ತಾನೆ. |
| ಸಹಸ್ರಮ್ ಪಶೂನ್ ಪ್ರ ಆಪ್ನೋತಿ | ಸಹಸ್ರಸಂಖ್ಯೆಯಲ್ಲಿ ಪಶುಗಳನ್ನು ಹೊಂದುತ್ತಾನೆ. |

---

ಯಜ್ಞಕ್ಕೆ ಸಹಾಯಕವಾದ ಇಂತಹ ಮನುಷ್ಯಪಶ್ವಾದಿಗಳುಳ್ಳ ಸಭೆಯ ಸಮೃದ್ಧಿ ಇಲ್ಲದಿದ್ದರೆ ಆ ಯಜಮಾನನು ಸಭಾರಹಿತನೆನಿಸಿಕೊಳ್ಳುತ್ತಾನೆ. ಅವನ ಯಜ್ಞವು ಅನ್ನ ರಹಿತವಾಗುತ್ತದೆ. ಅದು ಶೋಭಿಸುವುದಿಲ್ಲ. ಆದುದರಿಂದ ಯಾಗವು ಮುಗಿದ ಮೇಲೆ ಯಜಮಾನನು ಪೂರ್ವದಿಕ್ಕಿಗೆ ಹೋಗಿ **'ಗೋಮಾಗ್ಂ ಅಗ್ನೇ...'** ಎಂಬ ಗೋಮತೀ ಮಂತ್ರವನ್ನು ಜಪಿಸಬೇಕು. ಈ ಪ್ರಾರ್ಥನೆಯಿಂದ ಯಜಮಾನನು ಸಹಸ್ರಸಂಖ್ಯೆಯಲ್ಲಿ ಗವಾದಿಪಶುಗಳನ್ನೂ, ಋತ್ವಿಕ್ಸಂಪತ್ತಿಯನ್ನೂ, ಸಹಾಯಕಸಂಪತ್ತಿಯನ್ನೂ ಪಡೆದು ಸಭಾವಂತನಾಗುತ್ತಾನೆ. ಪುನಃ ಪುನಃ ಯಾಗಗಳನ್ನು ಮಾಡಲು ಸಮರ್ಥನಾಗುತ್ತಾನೆ.

## ಪ್ರಜಾಯಾಂ ವಾಜೀ ಜಾಯತೇ ॥ ೬-31 ॥

**[ಯಸ್ಸಮಾಶಿಷಂ ಗೃಹಪತ ಇತ್ಯಾಹಾಮುಷ್ಮೈ ಜ್ಯೋತಿಷ್ಮತೀಮಿತಿ ಬ್ರೂಯಾದ್ಯಸ್ಯ ಪುತ್ರೋ ವ್ರತಮೇವ ಖಲು ವೈ ಚತುರ್ವಿಗ್‌ಂಶತಿಶ್ಚ ॥]**

---

ಪ್ರಜಾಯಾಮಿತಿ ಪ್ರ-ಜಾಯಾಮ್ । ವಾಜೀ । ಜಾಯತೇ ॥ ೬ ॥

---

| | |
|---|---|
| ಅಸ್ಯ ಪ್ರಜಾಯಾಮ್ ವಾಜೀ ಆ ಜಾಯತೇ | ಇವನ ಸಂತತಿಯಲ್ಲಿ ಅನ್ನವಂತನಾದ ಪುತ್ರನು ಹುಟ್ಟುತ್ತಾನೆ. |

---

ಅವನ ಪ್ರಜೆಗಳಲ್ಲಿಯೂ ಅನ್ನಸಮೃದ್ಧಿಯುಳ್ಳ ಪುತ್ರರು ಜನಿಸುತ್ತಾರೆ.



**ದರ್ಶ-ಪೂರ್ಣಮಾಸದ ಯಾಜಮಾನಭಾಗವು ಮುಗಿಯಿತು.**

# ॥ ಸಪ್ತಮೋಽನುವಾಕಃ ॥

ದೇವ ಸವಿತಃ ಪ್ರಸುವ ಯಜ್ಞಂ ಪ್ರಸುವ ಯಜ್ಞಪತಿಂ ಭಗಾಯ ದಿವ್ಯೋ ಗಂಧರ್ವಃ ।

---

॥ ಪ ॥ ದೇವ । ಸವಿತಃ । ಪ್ರೇತಿ । ಸುವ । ಯಜ್ಞಮ್ । ಪ್ರೇತಿ । ಸುವ । ಯಜ್ಞಪತಿಮಿತಿ ಯಜ್ಞ-ಪತಿಮ್ । ಭಗಾಯ । ದಿವ್ಯಃ । ಗಂಧರ್ವಃ ॥

---

ಹೀಗೆ ಯಾಜಮಾನಶೇಷವು ಆರು ಅನುವಾಕಗಳಲ್ಲಿ ಹೇಳಲ್ಪಟ್ಟಿತು. ಮುಂದಿನ ಈ ಆರು ಅನುವಾಕಗಳಲ್ಲಿ ವಾಜಪೇಯದ ಆಧ್ವರ್ಯವಭಾಗವು ಹೇಳಲ್ಪಟ್ಟಿದೆ. ಇವುಗಳು ಸೌಮ್ಯಕಾಂಡಕ್ಕೆ ಸೇರಿದವುಗಳಾಗಿವೆ. ಈ ಏಳನೆಯ ಅನುವಾಕದಲ್ಲಿ ರಥವಿಷಯಕವಾದ ಮಂತ್ರಗಳು ಹೇಳಲ್ಪಟ್ಟಿವೆ.

---



| ಮಂತ್ರ | ವಿನಿಯೋಗ |
| --- | --- |
| ದೇವ ಸವಿತಃ ........ ಸ್ವಾಹಾ ॥ | ಸಾವಿತ್ರಹೋಮದಲ್ಲಿ ವಿನಿಯೋಗ. |

---

**ದೇವ! ಸವಿತಃ**= ಪ್ರೇರಕನಾದ ಅಂತರ್ಯಾಮಿಯಾದ ಸವಿತೃದೇವನೇ! **ಯಜ್ಞಮ್** = ವಾಜಪೇಯಯಜ್ಞವನ್ನು; **ಪ್ರಸುವ**= ಅನುಮತಿ ಕೊಟ್ಟು ಪ್ರವರ್ತಿಸು; **ಯಜ್ಞಪತಿಮ್** = ಯಜಮಾನನನ್ನು; **ಭಗಾಯ** = ಅನುಷ್ಠಾನರೂಪಸಾಮರ್ಥ್ಯಕ್ಕಾಗಿ [ಅನ್ನಕ್ಕಾಗಿ]; **ಪ್ರಸುವ** = ಪ್ರೇರಿಸು; **ದಿವ್ಯಃ** = ದೇವಲೋಕದಲ್ಲಿರುವ; **ಕೇತಪೂಃ** = ಜ್ಞಾನಶೋಧಕನಾದ; **ಗಂಧರ್ವಃ** = ಗಂಧರ್ವದೇವನು [ಸವಿತೃದೇವನಿಂದ ಅನುಜ್ಞಾತನಾಗಿ];

---

ಸವಿತೃದೇವನು ಎಲ್ಲರಿಗೂ ಅನುಜ್ಞೆಯನ್ನು ಕೊಡುವವನು. ಅಂತರ್ಯಾಮಿಯು. ಆ ಸವಿತೃದೇವನು ಉದಯಾದಿಗಳಿಂದ ನಮ್ಮ ಯಜ್ಞವನ್ನು ಪ್ರವರ್ತಿಸಲಿ. ಯಜಮಾನನನ್ನೂ ಅನುಷ್ಠಾನಸಾಮರ್ಥ್ಯಕ್ಕಾಗಿ ಪ್ರವೃತ್ತನಾಗುವಂತೆ ಮಾಡಲಿ. ದೇವಲೋಕದ ಗಂಧರ್ವದೇವನು ಜ್ಞಾನವನ್ನು ಶುದ್ಧಿಗೊಳಿಸತಕ್ಕವನು. ಆತನು ನಮ್ಮ ವಾಜಪೇಯ

**ಕೇತಪೂಃ ಕೇತಂ ನಃ ಪುನಾತು ವಾಚಸ್ಪತಿರ್ವಾಚಮದ್ಯ ಸ್ವದಾತಿ ನಃ ॥ ಇಂದ್ರಸ್ಯ ವಜ್ರೋಽಸಿ ವಾರ್ತ್ರಘ್ನಸ್ತ್ವಯಾಯಂ ವೃತ್ರಂ ವಧ್ಯಾತ್ ॥**

---

ಕೇತಪೂರಿತಿ ಕೇತ-ಪೂಃ । ಕೇತಮ್ । ನಃ । ಪುನಾತು । ವಾಚಃ । ಪತಿಃ । ವಾಚಮ್। ಅದ್ಯ । ಸ್ವದಾತಿ । ನಃ ॥ ಇಂದ್ರಸ್ಯ । ವಜ್ರಃ । ಅಸಿ । ವಾರ್ತ್ರಘ್ನ ಇತಿ ವಾರ್ತ್ರ-ಘ್ನಃ। ತ್ವಯಾ । ಅಯಮ್ । ವೃತ್ರಮ್ । ವಧ್ಯಾತ್ ॥

---

| ಮಂತ್ರ | ವಿನಿಯೋಗ |
|---|---|
| ಇಂದ್ರಸ್ಯ...... ವಧ್ಯಾತ್ ॥ | *ರಥವಾಹನದಿಂದ ರಥವನ್ನು ಬಿಡಿಸಲು |

---

**ನಃ** = ನಮ್ಮ; **ಕೇತಮ್** = ವಿಜ್ಞಾನವನ್ನು; **ಪುನಾತು** = ಶುದ್ಧಿಗೊಳಿಸಲಿ. **ವಾಚಸ್ಪತಿಃ** = ವಾಚಸ್ಪತಿದೇವನು; **ಅದ್ಯ** = ಈಗ; **ನಃ** = ನಮ್ಮ; **ವಾಚಮ್** = ಮಂತ್ರರೂಪವಾದ ವಾಕ್ಕನ್ನು; **ಸ್ವದಾತಿ** = ಸರಿಯಾಗಿ ಪಠಿಸುವಂತೆ ಮಾಡಲಿ; [ದಿವ್ಯಃ = ದ್ಯುಲೋಕದಲ್ಲಿರುವ; ಗಂಧರ್ವಃ = ಉದಕವನ್ನು ಧರಿಸಿರುವ/ವೃಷ್ಟಿರೂಪದಿಂದ ಯಾಗಪ್ರವರ್ತಕನಾದ ನೀನು; ಪ್ರಸುವ= ಯಜ್ಞವನ್ನು ಪ್ರವರ್ತಿಸು; ಕೇತಪೂಃ = ಜ್ಞಾನಶೋಧಕನಾದ/ ಅನ್ನಶೋಧಕನಾದ ವಾಯುವು; ನಃ ಕೇತಂ ಪುನಾತು = ನಮ್ಮ ಜ್ಞಾನ/ಅನ್ನವನ್ನು ಶುದ್ಧಿಗೊಳಿಸಲಿ; ವಾಚಸ್ಪತಿಃ=ವಾಚಸ್ಪತಿದೇವನು/ಪ್ರಜಾಪತಿದೇವನು/ ಮನೋದೇವನು/ ಬೃಹಸ್ಪತಿದೇವನು; ನಃ ವಾಚಂ ಸ್ವದಾತಿ = ನಮ್ಮ ಮಾತನ್ನು/ಮಂತ್ರವನ್ನು ಶ್ರವಣಾರ್ಹವನ್ನಾಗಿ ಮಾಡಲಿ] ÷ [ಎಲೈ ರಥವೇ ! ನೀನು] **ಇಂದ್ರಸ್ಯ** = ಇಂದ್ರನ; **ವಾರ್ತ್ರಘ್ನಃ ವಜ್ರಃ ಅಸಿ** = ವೃತ್ರನಾಶಕವಾದ ವಜ್ರಾಯುಧವೇ / *ರಥವೇ ಆಗಿರುವೆ; **ತ್ವಯಾ** = ನಿನ್ನಿಂದ; **ಅಯಮ್** = ಈ ಯಜಮಾನನು; **ವೃತ್ರಮ್** = ತಡೆಯತಕ್ಕ ಶತ್ರುವನ್ನು; **ವಧ್ಯಾತ್** = ನಾಶಪಡಿಸಲಿ.

---

ವಿಷಯಕವಾದ ಮಾತನ್ನೂ/ಜ್ಞಾನವನ್ನೂ ಶುದ್ಧಿಗೊಳಿಸಲಿ/ ಸರ್ವವನ್ನೂ ಶುದ್ಧಗೊಳಿಸುವ ವಾಯುದೇವನು ನಮ್ಮ ಜ್ಞಾನವನ್ನು ಶುದ್ಧಗೊಳಿಸಲಿ. ವಾಚಸ್ಪತಿದೇವನು / ಪ್ರಜಾಪತಿಯು /

---

* ರಥವನ್ನು ಕಟ್ಟಿಹಾಕಲು ಉಪಯೋಗಿಸುವ ಮರದ ಸಾಧನ.

* ವಜ ಗತೌ—ವಜ್ರಃ = ರಥ. ಭ.ಭಾ.

ವಾಜಸ್ಯ ನು ಪ್ರಸವೇ ಮಾತರಂ ಮಹೀಮದಿತಿಂ ನಾಮ ವಚಸಾ ಕರಾಮಹೇ । ಯಸ್ಯಾಮಿದಂ ವಿಶ್ವಂ ಭುವನಮಾ ವಿವೇಶ ತಸ್ಯಾಂ ನೋ ದೇವಸ್ಸವಿತಾ ಧರ್ಮ ಸಾವಿಷತ್ ॥

---

ವಾಜಸ್ಯ । ನು । ಪ್ರಸವ ಇತಿ ಪ್ರ-ಸವೇ । ಮಾತರಮ್ । ಮಹೀಮ್ । ಅದಿತಿಮ್। ನಾಮ । ವಚಸಾ । ಕರಾಮಹೇ ॥ ಯಸ್ಯಾಮ್ । ಇದಮ್ । ವಿಶ್ವಮ್ । ಭುವನಮ್। ಆವಿವೇಶೇತ್ಯಾ-ವಿವೇಶ। ತಸ್ಯಾಮ್। ನಃ । ದೇವಃ । ಸವಿತಾ । ಧರ್ಮ। ಸಾವಿಷತ್।

---

| ಮಂತ್ರ | ವಿನಿಯೋಗ |
|---|---|
| ವಾಜಸ್ಯ.....ಸಾವಿಷತ್ ॥ | ಸೋಮಯಾಗದ ವೇದಿಯಲ್ಲಿ ರಥವನ್ನು ಪ್ರದಕ್ಷಿಣವಾಗಿ ಸುತ್ತಿಸಲು |

---

✣ ವಾಜಸ್ಯ ನು ಪ್ರಸವೇ = ಅನ್ನದ ಉತ್ಪತ್ತಿಗಾಗಿ; ಮಾತರಮ್ = ಅನ್ನವನ್ನು ನಿರ್ಮಾಣ ಮಾಡುವ; ಅದಿತಿಮ್ ನಾಮ = ಅಖಂಡವಾಗಿರುವ; ಮಹೀಮ್ = ವೇದಿರೂಪವಾದ ಭೂಮಿಯನ್ನು; ವಚಸಾ ಕರಾಮಹೇ = ಮಾತಿನಿಂದ ಸ್ತುತಿಸುತ್ತೇವೆ. ಯಸ್ಯಾಮ್ = ಯಾವ ಭೂಮಿಯಲ್ಲಿ; ಇದಮ್ ವಿಶ್ವಮ್ ಭುವನಮ್ = ಈ ಸಮಸ್ತ ಚರಾಚರಾತ್ಮಕವಾದ ಜಗತ್ತು; ಆವಿವೇಶ = ವ್ಯಾಪಿಸಿ ನಿಂತಿದೆಯೋ; ತಸ್ಯಾಮ್ = ಆ ಭೂಮಿಯಲ್ಲಿ; ದೇವಃ ಸವಿತಾ = ಸರ್ವಪ್ರೇರಕವಾದ ಆ ಸವಿತೃದೇವನು; ನಃ ಧರ್ಮ = ನಮ್ಮ ರಥದ ಧಾರಣೆಯನ್ನು; ಸಾವಿಷತ್ = ಅನುಮತಿಸಲಿ.

---

ಬೃಹಸ್ಪತಿಯು / ಮನೋದೇವನು ನಮ್ಮ ಮಂತ್ರರೂಪವಾದ ಮಾತನ್ನು ಸರಿಯಾಗಿರುವಂತೆ ಮಾಡಲಿ.

ಎಲೈ! ರಥವೇ! ಶತ್ರುನಾಶಕನಾದುದರಿಂದ ನೀನು ವೃತ್ರಾಸುರನಾಶಕನಾದ ಇಂದ್ರನ ವಜ್ರಾಯುಧವೇ ಆಗಿರುವೆ. ನಿನ್ನ ಸಹಾಯದಿಂದ ಈ ಯಜಮಾನನೂ ಶತ್ರುಗಳನ್ನು ನಾಶಪಡಿಸಲಿ.

ಈ ಭೂದೇವಿಯು ಅನ್ನವನ್ನು ಉತ್ಪತ್ತಿ ಮಾಡತಕ್ಕವಳು. ಅಖಂಡಸ್ವರೂಪಳು. ಯಜ್ಞವೇದಿರೂಪಳಾದ ಈ ಭೂದೇವಿಯನ್ನು ಅನ್ನದ ಉತ್ಪತ್ತಿಗಾಗಿ ಮಂತ್ರರೂಪವಾದ ಮಾತಿನಿಂದ ಸ್ತುತಿಸುತ್ತೇವೆ. ಚರಾಚರಾತ್ಮಕವಾದ ವಿಶ್ವಕ್ಕೆ ಆಶ್ರಯವಾಗಿರುವ ಈ ಯಜ್ಞ

ಅಪ್ಸ್ವಂತರಮೃತಮಪ್ಸು [ಅಪ್ಸು(೧) ಅಂತರಮೃತಮಪ್ಸು]
ಭೇಷಜಮಪಾಮುತ ಪ್ರಶಸ್ತಿಷ್ವಶ್ವಾ ಭವಥ ವಾಜಿನಃ ।
ವಾಯುರ್ವಾ ತ್ವಾ ಮನುರ್ವಾ ತ್ವಾ ಗಂಧರ್ವಾಸ್ಸಪ್ತವಿಗ್ಂಶತಿಃ।

---

ಅಪ್ಸ್ವಿತ್ಯಪ್-ಸು । ಅಂತಃ । ಅಮೃತಮ್ । ಅಪ್ಸ್ವಿತ್ಯಪ್-ಸು [೧]। ಭೇಷಜಮ್। ಅಪಾಮ್। ಉತ । ಪ್ರಶಸ್ತಿಷ್ವಿತಿ ಪ್ರ-ಶಸ್ತಿಷು । ಅಶ್ವಾಃ । ಭವಥ । ವಾಜಿನಃ ॥ ವಾಯುಃ। ವಾ । ತ್ವಾ । ಮನುಃ । ವಾ । ತ್ವಾ । ಗಂಧರ್ವಾಃ। ಸಪ್ತವಿಗ್ಂಶತಿರಿತಿ ಸಪ್ತ-ವಿಗ್ಂಶತಿಃ॥

---

| ಮಂತ್ರ | ವಿನಿಯೋಗ |
|---|---|
| ಅಪ್ಸ್ವಂತಃ...... ವಾಜಿನಃ । | ಕುದುರೆಗಳನ್ನು ತೊಳೆಯಲು |
| ವಾಯುರ್ವಾ ತ್ವಾ... ಜವಮಾದಧುಃ ॥ | ಕುದುರೆಗಳನ್ನು ರಥಕ್ಕೆ ಕಟ್ಟಲು |

---

✣ ಅಪ್ಸು = ನೀರಿನಲ್ಲಿ; ಅಂತಃ = ಒಳಗೆ; ಅಮೃತಮ್ = ಅಪಮೃತ್ಯುವನ್ನು ಹೋಗಲಾಡಿಸುವ ಗುಣವು [ಅಸ್ತಿ = ಇದೆ]. ಅಪ್ಸು = ನೀರಿನಲ್ಲಿ; ಭೇಷಜಮ್ = ರೋಗವನ್ನು ಪರಿಹರಿಸುವ ಗುಣವೂ; [ಅಸ್ತಿ = ಇದೆ]; ವಾಜಿನಃ ಅಶ್ವಾಃ = ಅನ್ನವನ್ನು ಕೊಡಬಲ್ಲ ಎಲೈ! ಕುದುರೆಗಳೇ! ಅಪಾಮ್ ಉತ ಪ್ರಶಸ್ತಿಷು = ನೀರಿಗೆ ಸಂಬಂಧಿಸಿದ ಬೇರೆಯ ಪ್ರಶಂಸಾರ್ಹಗುಣಗಳಲ್ಲಿಯೂ; ಭವಥ = ನೀವು ಸಂಬಂಧವುಳ್ಳವರಾಗಿರಿ; [ನೀರಿನಲ್ಲಿರುವ ಎಲ್ಲಾ ಉತ್ತಮಗುಣಗಳನ್ನೂ ಹೊಂದಿರಿ.] ✣ [ಎಲೈ! ಅಶ್ವವೇ!] ತ್ವಾ = ನಿನ್ನನ್ನು; ವಾಯುಃ ವಾ = ವಾಯುದೇವನೂ [ರಥಕ್ಕೆ ಕಟ್ಟಿದನು]; ತ್ವಾ = ನಿನ್ನನ್ನು; ಮನುಃ ವಾ=ಮನುವೂ [ರಥಕ್ಕೆ ಕಟ್ಟಿದನು] ಗಂಧರ್ವಾಃ = [ಇಪ್ಪತ್ತೈದು] ಗಂಧರ್ವರೂ [ರಥಕ್ಕೆ ಕಟ್ಟಿದರು] [ಹೀಗೆ] ಸಪ್ತವಿಗ್ಂಶತಿಃ= ಇಪ್ಪತ್ತೇಳು ಮಂದಿಯೂ;

---

ವೇದಿರೂಪಳಾದ ಈ ಭೂಮಿಯಲ್ಲಿ ನಮ್ಮ ರಥದ ಧಾರಣೆಯನ್ನು ಸವಿತೃದೇವನು ಅನುಮತಿಸಲಿ.

ನೀರು ಅಪಮೃತ್ಯುನಿವಾರಕವಾಗಿದೆ. ರೋಗಪರಿಹಾರಕವೂ ಆಗಿದೆ. ನೀರಿನಲ್ಲಿ ಪ್ರಶಂಸಾರ್ಹವಾದ ಇನ್ನೂ ಹಲವು ಗುಣಗಳೂ ಇವೆ. ಅನ್ನವನ್ನು ಕೊಡುವ ಸಾಮರ್ಥ್ಯವುಳ್ಳ ಎಲೈ ಕುದುರೆಗಳೇ! ಈಗ ನೀರಿನಲ್ಲಿ ಸ್ನಾನ ಮಾಡಿಸುವುದರಿಂದ ನೀರಿನ

## ತೇ ಅಗ್ರೇ ಅಶ್ವಮಾಯುಂಜನ್ತೇ ಅಸ್ಮಿಞ್ಜವಮಾದಧುಃ ॥ ಅಪಾಂ ನಪಾದಾಶುಹೇಮನ್

---

ತೇ। ಅಗ್ರೇ । ಅಶ್ವಮ್ । ಆಯುಂಜನ್ನ್। ತೇ । ಅಸ್ಮಿನ್ನ್। ಜವಮ್ । ಏತಿ । ಆದಧುಃ॥ ಅಪಾಮ್ । ನಪಾತ್ । ಆಶುಹೇಮನ್ನಿತ್ಯಾಶು-ಹೇಮನ್ನ್ ।

---

ಅಗ್ರೇ = [ನಮಗಿಂತಲೂ ಮೊದಲು] ಅಶ್ವಮ್ = ಕುದುರೆಯನ್ನು; ಆಯುಂಜನ್ನ್ = [ರಥಕ್ಕೆ] ಕಟ್ಟಿದರು. ತೇ = ಅವರು; ಅಸ್ಮಿನ್ = ಈ ಕುದುರೆಯಲ್ಲಿ; ಜವಮ್ ಆದಧುಃ = ವೇಗವನ್ನು ಉಂಟು ಮಾಡಿದರು/ಉಂಟು ಮಾಡಲಿ. [ಈಗ ನಾನು ನಿನ್ನನ್ನು ರಥಕ್ಕೆ ಕಟ್ಟುತ್ತೇನೆ] [ಇಲ್ಲಿ ವಾಯುಃ ವಾ ತ್ವಾ ಆಯುಂಜತ್, ಮನುಃ ವಾ ತ್ವಾ ಆಯುಂಜತ್, ಗಂಧರ್ವಾಃ ತ್ವಾ ಆಯುಂಜನ್, ಏವಂ ಸಪ್ತವಿಂಶತಿಃ ಅಗ್ರೇ ಅಶ್ವಮ್ ಆಯುಂಜನ್ ಎಂದು ಅನ್ವಯ.] ಹೇ ಅಪಾಂ ನಪಾತ್ = ನೀರನ್ನು ಹಾಳು ಮಾಡದ [ನೀರಿನಿಂದ *ನಾಲ್ಕನೆಯವನಾಗಿರುವ] ಆಶುಹೇಮನ್ = ಶೀಘ್ರಗತಿಯುಳ್ಳ ಎಲೈ! ಅಶ್ವವೇ!



---

ಗುಣಗಳೆಲ್ಲವನ್ನೂ ನೀವು ಪಡೆಯಿರಿ.

ಎಲೈ! ಕುದುರೆಯೇ ! ನಿನ್ನನ್ನು ವಾಯುದೇವನು ರಥಕ್ಕೆ ಕಟ್ಟಿದನು. ಮನುವೂ/ ಪ್ರಾಣದೇವನೂ ರಥಕ್ಕೆ ಕಟ್ಟಿದನು. ಇಪ್ಪತ್ತೈದು ಗಂಧರ್ವರೂ ರಥಕ್ಕೆ ಕಟ್ಟಿದರು. ಹೀಗೆ ಈ ಇಪ್ಪತ್ತೇಳು ಮಂದಿ ನಮಗಿಂತಲೂ ಮೊದಲೇ ಕುದುರೆಯನ್ನು ರಥಕ್ಕೆ ಕಟ್ಟಿದರು. ಕುದುರೆಯನ್ನು ಉಪಚರಿಸಿ, ಅದರಲ್ಲಿ ವೇಗವನ್ನೂ ಉಂಟು ಮಾಡಿದರು. ಅವರು ಈ ಕುದುರೆಯಲ್ಲಿ ವೇಗವನ್ನು ಉಂಟುಮಾಡಲಿ. ಈಗ ನಾನು ನಿನ್ನನ್ನು ರಥಕ್ಕೆ ಕಟ್ಟುತ್ತೇನೆ.

[ಕುದುರೆಯನ್ನು ತೊಳೆಯುವಾಗ ಮೇಲೆ ಎದ್ದಿರುವ ಅಲೆಯನ್ನು ಪ್ರಾರ್ಥಿಸಲಾಗಿದೆ] ನೀರಿನಲ್ಲಿ ಮುಳುಗುವಾಗ ನೀರನ್ನು ಕಲ್ಮಷಗೊಳಿಸಿ ಹಾಳು ಮಾಡದ, ಶೀಘ್ರ

---

* ಅದ್ಭ್ಯಃ ಪೃಥಿವೀ, ಪೃಥಿವ್ಯಾ ಓಷಧಯಃ, ಓಷಧೀಭ್ಯೋಽನ್ನಮ್, ಅನ್ನಾದಶ್ವಃ - ಹೀಗೆ ಹೇಳಿರುವಂತೆ.

ಯ ಊರ್ಮಿಃ ಕಕುದ್ಮಾನ್ಪ್ರತೂರ್ತಿರ್ವಾಜಸಾತಮಸ್ತೇನಾಯಂ ವಾಜಗ್‌ಂ ಸೇತ್ ॥ ವಿಷ್ಣೋಃ ಕ್ರಮೋಽಸಿ ವಿಷ್ಣೋಃ ಕ್ರಾಂತಮಸಿ ವಿಷ್ಣೋರ್ವಿಕ್ರಾಂತಮಸ್ಯಂಕೌ

---

ಯಃ । ಊರ್ಮಿಃ । ಕಕುದ್ಮಾನಿತಿ ಕಕುತ್-ಮಾನ್ । ಪ್ರತೂರ್ತಿರಿತಿ ಪ್ರ-ತೂರ್ತಿಃ । ವಾಜಸಾತಮ ಇತಿ ವಾಜ-ಸಾತಮಃ । ತೇನ । ಅಯಮ್ । ವಾಜಮ್। ಸೇತ್॥ ವಿಷ್ಣೋಃ। ಕ್ರಮಃ । ಅಸಿ। ವಿಷ್ಣೋಃ । ಕ್ರಾಂತಮ್। ಅಸಿ । ವಿಷ್ಣೋಃ। ವಿಕ್ರಾಂತಮಿತಿ ವಿ–ಕ್ರಾಂತಮ್। ಅಸಿ । ಅಂಕೌ ।

---

| ಮಂತ್ರ | ವಿನಿಯೋಗ |
|---|---|
| ಅಪಾಮ್...... ಸೇತ್ ॥ | ಕುದುರೆಯ ಬೆನ್ನನ್ನು ತೊಳೆಯಲು |
| ವಿಷ್ಣೋಃ..... ವಿಕ್ರಾಂತಮಸಿ । | ಯಜಮಾನನು ರಥದ ಕಡೆಗೆ ಹೆಜ್ಜೆಯಿಡಲು |
| ಅಂಕೌ ನ್ಯಂಕಾವಭಿತೋ... ಪಾರಯಂತು । | ಅಧ್ವರ್ಯುವು ಮಾಡುವ ರಥಚಕ್ರ ಸ್ಪರ್ಶ ಅಥವಾ ಪಕ್ಷಸ್ಪರ್ಶ. |

---

**ಕಕುದ್ಮಾನ್** = ಎತ್ತಿನ ಹಿಣಿಲಿನಂತೆ ಎತ್ತರವಾಗಿ ಮೇಲಕ್ಕೆ ಬಂದಿರುವ; **ಪ್ರತೂರ್ತಿಃ**= ಶ್ರಮವನ್ನು ಪರಿಹರಿಸುವ; **ವಾಜಸಾತಮಃ** = ಅನ್ನಪ್ರದನಾದ ; **ಯಃ ಊರ್ಮಿಃ** = ಯಾವ ಅಲೆಯುಂಟೋ; **ತೇನ** = ಆ ಅಲೆಯಿಂದ; **ಅಯಮ್** = ಈ ಯಜಮಾನನು; **ವಾಜಂ ಸೇತ್** = ಅನ್ನವನ್ನು ಸಾಧಿಸು/ಸಾಧಿಸಲಿ. ✣ **ವಿಷ್ಣೋಃ ಕ್ರಮಃ ಅಸಿ** = [ಎಲೈ! ನನ್ನ ಪ್ರಥಮಪದನ್ಯಾಸವೇ! ನೀನು] [ವಿಕ್ರಮಾವತಾರಿಯಾದ] ಮಹಾವಿಷ್ಣುವಿನ [ಭೂಲೋಕವನ್ನು ಜಯಿಸಿದ] ಪ್ರಥಮಪಾದಕ್ರಮವಾಗಿರುವೆ. ✣ **ವಿಷ್ಣೋಃ ಕ್ರಾಂತಮ್ ಅಸಿ** = [ಎಲೈ! ದ್ವಿತೀಯಪದನ್ಯಾಸವೇ! ನೀನು] ಮಹಾವಿಷ್ಣುವಿನ [ಅಂತರಿಕ್ಷವನ್ನು ಜಯಿಸಿದ] ದ್ವಿತೀಯಪಾದಪ್ರಕ್ಷೇಪವಾಗಿರುತ್ತೀಯೆ. ✣ **ವಿಷ್ಣೋಃ ವಿಕ್ರಾಂತಮ್ ಅಸಿ** = [ಎಲೈ! ತೃತೀಯಪಾದಪ್ರಕ್ಷೇಪವೇ! ನೀನು] ಮಹಾವಿಷ್ಣುವಿನ [ಪರಾಕ್ರಮದಿಂದ ದ್ಯುಲೋಕವನ್ನು ಗೆದ್ದ] ತೃತೀಯಪಾದಪ್ರಕ್ಷೇಪವಾಗಿರುತ್ತೀಯೆ.

ನ್ಯಂಕಾವಭಿತೋ ರಥಂ ಯೌ ಧ್ವಾಂತಂ ವಾತಾಗ್ರಮನು ಸಂಚರಂತೌ ದೂರೇಹೇತಿರಿಂದ್ರಿಯಾವಾನ್ಪತತ್ರೀ ತೇ ನೋಽಗ್ನಯಃ ಪಪ್ರಯಃ ಪಾರಯಂತು ॥ ೭-33 ॥

[ಅಪ್ಸು ನ್ಯಂಕೌ ಪಂಚದಶ ಚ ।]

---

ನ್ಯಂಕಾವಿತಿ ನಿ-ಅಂಕೌ । ಅಭಿತಃ । ರಥಮ್ । ಯೌ । ಧ್ವಾಂತಮ್ । ವಾತಾಗ್ರಮಿತಿ ವಾತ-ಅಗ್ರಮ್। ಅನ್ವಿತಿ । ಸಂಚರಂತಾವಿತಿ ಸಂ-ಚರಂತೌ । ದೂರೇಹೇತಿರಿತಿ ದೂರೇ-ಹೇತಿಃ । ಇಂದ್ರಿಯಾವಾನಿತೀಂದ್ರಿಯ-ವಾನ್ । ಪತತ್ರೀ । ತೇ । ನಃ । ಅಗ್ನಯಃ। ಪಪ್ರಯಃ । ಪಾರಯಂತು ॥ ೭ ॥

---

ರಥಮ್ ಅಭಿತಃ = ರಥದ ಸುತ್ತಲೂ; ಧ್ವಾಂತಮ್ = ಧ್ವನಿಯುಕ್ತವಾದ; ವಾತಾಗ್ರಮ್ ಅನು ಸಂಚರಂತೌ = ವಾಯುವಿನ ಮುಂಭಾಗವನ್ನೂ ಅತಿಕ್ರಮಿಸಿ/ ಗಾಳಿಗಿಂತಲೂ ವೇಗವಾಗಿ ಮುಂದೆ ಹೋಗುವ; ಯೌ = ಯಾವ; ಅಂಕೌ = ಲಕ್ಷಣವಿಶೇಷಗಳೂ; ನ್ಯಂಕೌ= ಚಕ್ರವಿಶೇಷಗಳೂ [ಇವೆಯೋ ಅವುಗಳೆರಡರಿಂದ] ದೂರೇಹೇತಿಃ ಇಂದ್ರಿಯಾವಾನ್ ಪತತ್ರೀ = ಈ ಮೂರು ಹೆಸರುಗಳ; ಪಪ್ರಯಃ = ಇಷ್ಟಾರ್ಥವನ್ನು ಪೂರೈಸುವ; ಅಗ್ನಯಃ = ಅಗ್ನಿಗಳು [ರಥಸ್ಥ ದೇವತೆಗಳು]; ನಃ = ನಮ್ಮನ್ನು; ಪಾರಯಂತು = [ಗುರಿಯನ್ನು] ಮುಟ್ಟಿಸಲಿ.

---

ಗಾಮಿಯಾದ ಓ ಅಶ್ವವೇ! ನೀರಿನಲ್ಲಿ ಮುಳುಗುವಾಗ ಹಿಣಿಲಿನಂತೆ ಮೇಲೆದ್ದಿರುವ, ಶ್ರಮವನ್ನು ಹೋಗಲಾಡಿಸುವ, ಅನ್ನಪ್ರದವಾದ ನೀರಿನ ಅಲೆಯು ಯಾವುದುಂಟೋ ಅದರಿಂದ ಈ ಯಜಮಾನನು ಅನ್ನವನ್ನು ಪಡೆಯಲಿ/ ಆ ಅಲೆಯಿಂದ ನೀನು ನಮಗೆ ಅನ್ನವನ್ನು ಸಾಧಿಸಿ ಕೊಡು.

ಈ ಮೂರು ಮಂತ್ರಗಳಿಂದ ರಥದ ಕಡೆಗೆ ಯಜಮಾನನು ಮೂರು ಹೆಜ್ಜೆಗಳನ್ನಿಡುತ್ತಾನೆ. ಆ ಮೂರು ಹೆಜ್ಜೆಗಳನ್ನು ಹೀಗೆ ಸ್ತುತಿಸುತ್ತಾನೆ. 'ಎಲೈ! ನನ್ನ ಮೊದಲನೆಯ ಹೆಜ್ಜೆಯೇ! ನೀನು ಭೂಲೋಕವನ್ನು ಜಯಿಸಿದ, ತ್ರಿವಿಕ್ರಮಾವತಾರಿಯಾದ ವ್ಯಾಪಕನಾದ ಮಹಾವಿಷ್ಣುವಿನ ಮೊದಲನೆಯ ಹೆಜ್ಜೆಯಾಗಿರುತ್ತೀಯೆ'.

'ಎಲೈ! ನನ್ನ ದ್ವಿತೀಯಪದಪ್ರಕ್ಷೇಪವೇ! ನೀನು ಅಂತರಿಕ್ಷವನ್ನು ಆಕ್ರಮಿಸಿದ ಮಹಾವಿಷ್ಣುವಿನ ಪಾದನ್ಯಾಸವಾಗಿರುತ್ತೀಯೆ'.

'ಎಲೈ! ನನ್ನ ಮೂರನೆಯ ಹೆಜ್ಜೆಯೇ! ನೀನು ಪರಾಕ್ರಮದಿಂದ ದ್ಯುಲೋಕವನ್ನು ಜಯಿಸಿದ ವಿಷ್ಣುವಿನ ತೃತೀಯಪದಪ್ರಕ್ಷೇಪವಾಗಿರುತ್ತೀಯೆ' [ಪಾದಪ್ರಕ್ಷೇಪವೇ! ನೀನು ಮೊದಲನೆಯ ಪಾದದಿಂದ ಜಯಿಸಿರುವ ಭೂಲೋಕವಾಗಿರುತ್ತೀಯೆ. ದ್ವಿತೀಯ ಪಾದಪ್ರಕ್ಷೇಪವೇ! ನೀನು ವಿಷ್ಣುವು ದ್ವಿತೀಯಪಾದಪ್ರಕ್ಷೇಪದಿಂದ ಜಯಿಸಿದ ಅಂತರಿಕ್ಷ ಲೋಕವಾಗಿರುತ್ತೀಯೆ. ಓ! ತೃತೀಯಪಾದನ್ಯಾಸವೇ! ನೀನು ವಿಷ್ಣುವು ಪರಾಕ್ರಮದಿಂದ ಜಯಿಸಿದ ದ್ಯುಲೋಕವಾಗಿರುತ್ತೀಯೆ.] ಇವೇ ವಿಷ್ಣುಕ್ರಮಗಳು.

ಆಜಿಧಾವನ ಅಥವಾ ಓಟದ ಸ್ಪರ್ಧೆಯು ವಿಹಿತವಾಗಿದೆ. ಅದರಲ್ಲಿ ಸ್ಪರ್ಧಿಸಲಿರುವ ರಥದ ಚಕ್ರಗಳನ್ನು ಅಥವಾ ವಿಶೇಷಲಕ್ಷಣಗಳನ್ನು ಅಧ್ವರ್ಯುವು ಸ್ಪರ್ಶಿಸಿ, ಪ್ರಾರ್ಥಿಸುತ್ತಾನೆ; 'ರಥದ ಸುತ್ತಲೂ ಶಬ್ದ ಮಾಡುತ್ತಾ ಬೀಸುವ ವಾಯುವಿನ ಮುಂಭಾಗವನ್ನೂ ಮೀರಿ ವಾಯುವಿಗಿಂತಲೂ ವೇಗವಾಗಿ ಸಂಚರಿಸುವ ಯಾವ ರಥಚಕ್ರಗಳೂ, ರಥದ ವಿಶೇಷಲಕ್ಷಣಗಳೂ ಇವೆಯೋ ಅವುಗಳಿಂದ ನಮ್ಮ ಇಷ್ಟಾರ್ಥ ಪೂರಕಗಳಾದ ದೂರೇಹೇತಿ, ಇಂದ್ರಿಯಾವಂತ, ಪತತ್ರೀ ಎಂಬ ಹೆಸರುಗಳುಳ್ಳ ಅಗ್ನಿಗಳು ಅಥವಾ ರಥದೇವತೆಗಳು ಮೊದಲು ಗುರಿ ಮುಟ್ಟಬೇಕೆಂದಿರುವ ನಮ್ಮ ಇಷ್ಟಾರ್ಥವನ್ನು ಪೂರೈಸಿಕೊಡಲಿ. ಈ ದೇವತೆಗಳು ರಥಚಕ್ರಗಳನ್ನು ಗುರಿ ಮುಟ್ಟುವಂತೆ ಮಾಡಲಿ.'



## ವಿನಿಯೋಗ ಸಂಗ್ರಹ

ದೇವ[1] ಹೋಮೋऽತ್ರ ಕರ್ಮಾದಾವಿಂದ್ರಸ್ಯ[2] ರಥಮಾಹರೇತ್ ।
ವಾಜಸ್ಯ[3] ವೇದಿಮಧ್ಯೇ ತಮಭ್ಯಾವರ್ತಯತೇ ರಥಮ್ ॥
[4]ಅಪ್ಸ್ವಶ್ವಾನ್ಪ್ಲಾವಯೇದ್ವಾಯು[5]ರ್ಯುನಕ್ತಿ ತುರಗಂ ರಥೇ ।
[6]ಅಪಾಂ ತದಶ್ವಪೃಷ್ಠಾನಿ ಮಾರ್ಷ್ಟಿ ವಿಷ್ಣೋ[7] ರಥಂ ವ್ರಜೇತ್ ॥
ಅಂಕೌ[8] ರಥೇ ಮೃಶೇತ್ಪಕ್ಷಾವಷ್ಟೌ ಮಂತ್ರಾ ಇಹೋದಿತಾಃ ।

**ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ—8**

## ಅನುವಾಕದ ವಿಶೇಷ ವಿಷಯಗಳು

### ಅ) ಮೀಮಾಂಸಾ

೧) 'ವಾಜಪೇಯೇನ ಯಜೇತ' ಎಂಬಲ್ಲಿ ಗುಣವಿಧಿಯೇ? ನಾಮಧೇಯವೇ ?

[ಜೈ.ಸೂ. 1.4.]

'ವಾಜಪೇಯೇನ ಸ್ವಾರಾಜ್ಯಕಾಮೋ ಯಜೇತ' ಎಂಬ ವಿಧಿವಾಕ್ಯವಿದೆ. ಇದು ಗುಣವಿಧಿಯೇ? ನಾಮಧೇಯವೇ? ಎಂದು ಸಂಶಯ.

ವಾಜಪೇಯದಲ್ಲಿ ಸುರಾರೂಪದ್ರವ್ಯವಿರುವುದರಿಂದ 'ವಾಜೇನ ಯಾಗಂ ಭಾವಯೇತ್' 'ಯಾಗೇನ ಸಾಮ್ರಾಜ್ಯರೂಪಂ ಫಲಂ ಭಾವಯೇತ್' ಎಂದು ಫಲ-ಗುಣ ಸಂಬಂಧಗಳೆರಡನ್ನೂ "ಯಜೇತ" ಎಂಬುದರಿಂದ ಹೇಳಬಹುದು. ಕರ್ಮ- ಕರಣವಾಚಕ ವಿಭಕ್ತಿಯಿಲ್ಲದೇ ಇರುವುದರಿಂದ ಎರಡನ್ನೂ ಹೇಳಲು ಅವಕಾಶವಿದೆ. ಅಥವಾ 'ವಾಜಪೇಯೇನ ಯಾಗಂ ಸಾಧಯೇತ್' 'ಯಾಗೇನ ಸಾಮ್ರಾಜ್ಯಫಲಂ ಸಾಧಯೇತ್' ಎಂದು ಆವೃತ್ತಿ ಹೇಳಬೇಕು. ಆದುದರಿಂದ ಇದು ಗುಣವಿಧಿಯಾಗುತ್ತದೆ. ಇದು ಇಲ್ಲಿನ ಪೂರ್ವಪಕ್ಷ.

ಇಲ್ಲಿಯ ಸಿದ್ಧಾಂತವು ಹೀಗಿದೆ; ಆವೃತ್ತಿ ಮಾಡುವುದರಿಂದ ವಾಕ್ಯಭೇದ ದೋಷವು ಸಂಭವಿಸುತ್ತದೆ. ಗುಣವಿಧಿಯೆಂದರೆ ವಿಧೇಯತ್ವ, ಉಪಾದೇಯತ್ವ, ಗುಣತ್ವ— ಈ ಮೂರು ಧರ್ಮಗಳಿರುತ್ತವೆ. ಫಲವಿಧಿಯೆಂದರೆ ಉದ್ದೇಶ್ಯತ್ವ, ಅನುವಾದ್ಯತ್ವ, ಮುಖ್ಯತ್ವ—ಈ ಮೂರು ಧರ್ಮಗಳಿರುತ್ತವೆ. ಇವುಗಳು ಪರಸ್ಪರ ವಿರುದ್ಧವಾದವುಗಳು. ಆದುದರಿಂದ ಅಗ್ನಿಹೋತ್ರಾದಿಗಳಂತೆ ವಾಜಸಂಬಂಧವಿರುವುದ ರಿಂದ ವಾಜಪೇಯಶಬ್ದವು ಕರ್ಮನಾಮಧೇಯವಾಗಿರುತ್ತದೆ.

೨) 'ತಿಸ್ರ ಆಹುತೀರ್ಜುಹೋತಿ' ಎಂಬಲ್ಲಿ ಕರ್ಮೈಕ್ಯವೇ? ಕರ್ಮಭೇದವೇ?

[ಜೈ.ಸೂ. 2.2.]

'ತಿಸ್ರ ಆಹುತೀರ್ಜುಹೋತಿ' ಎಂಬ ವಾಕ್ಯವಿದೆ. ಇಲ್ಲಿ ಕರ್ಮೈಕ್ಯವೇ? ಕರ್ಮಭೇದವೇ? ಎಂಬುದು ಸಂಶಯ.

'ಜುಹೋತಿ' ಎಂಬುದಾಗಿ ಒಂದೇ ಆಖ್ಯಾತವಿರುವುದರಿಂದ ಕರ್ಮೈಕ್ಯ. 'ತಿಸ್ರಃ' ಎನ್ನುವುದರಿಂದ ಅದರ ಆವೃತ್ತಿಯು ಸಿದ್ಧವಾಗುತ್ತದೆ. ಇದು ಇಲ್ಲಿನ ಪೂರ್ವಪಕ್ಷ.

'ಸಮಿಧೋ ಯಜತಿ' 'ತನೂನಪಾತಂ ಯಜತಿ' ಎಂದು 'ಯಜತಿ' ಎಂಬುದರ ಅಭ್ಯಾಸ[ಪುನಃ ಪಾಠ]ವಿಲ್ಲದಿರುವುದರಿಂದ 'ತಿಸ್ರ ಆಹುತೀರ್ಜುಹೋತಿ' ಎಂಬಲ್ಲಿ ಕರ್ಮಬಹುತ್ವವೇ ಯುಕ್ತ.

[ಕರ್ಮೈಕ್ಯ, ಕರ್ಮಬಹುತ್ವದ ಮೀಮಾಂಸೆಗೆ ವೃತ್ತಿಕಾರರು 'ತಿಸ್ರ ಆಹುತೀರ್ಜುಹೋತಿ' ಎಂಬುದನ್ನು ವಿಷಯವಾಕ್ಯವನ್ನಾಗಿ ನೀಡಿದ್ದಾರೆ. ಆದರೆ 'ಆಹುತೀ': ಎಂಬುದಕ್ಕೆ ವಿಶೇಷಣವಾದ 'ತಿಸ್ರಃ' ಎಂಬುದರಿಂದಲೇ ಕರ್ಮಬಹುತ್ವವು ವ್ಯಕ್ತವಾಗುವುದರಿಂದ ಈ ವಿಷಯವಾಕ್ಯದಲ್ಲಿ ಪೂರ್ವಪಕ್ಷವು ಯುಕ್ತವಾಗುವುದಿಲ್ಲ. ಆದುದರಿಂದ ಭಾಷ್ಯಕಾರರು ಮುಂದಿನ ವಿಷಯವಾಕ್ಯವನ್ನು ನೀಡಿದ್ದಾರೆ.]

**೨) ಅ) 'ಸಪ್ತದಶ ಪ್ರಾಜಾಪತ್ಯಾನ್ ಪಶೂನ್ ಆ ಲಭತೇ' ಎಂಬಲ್ಲಿ ಕರ್ಮೈಕ್ಯವೇ? ಕರ್ಮಬಹುತ್ವವೇ? [ಜೈ.ಸೂ. 2.2.]**

**'ಸಪ್ತದಶ ಪ್ರಾಜಾಪತ್ಯಾನ್ ಪಶೂನ್ ಆಲಭತೇ'** ಎಂಬಲ್ಲಿ ಕರ್ಮೈಕ್ಯವೇ? ಕರ್ಮಬಹುತ್ವವೇ? ಇದು **ಸಂಶಯ.**

ಇಲ್ಲಿಯ **ಪೂರ್ವಪಕ್ಷ** ಹೀಗಿದೆ; **'ಪ್ರಜಾಪತಿಃ ದೇವತಾ ಅಸ್ಯ'** ಎಂಬುದು ಪ್ರಾಜಾಪತ್ಯ ಎಂಬ ತದ್ಧಿತಾಂತದ ವಿಗ್ರಹವಾಕ್ಯ. ಈ ವಿಗ್ರಹವಾಕ್ಯದಿಂದ ದ್ರವ್ಯ-ದೇವತೈಕ್ಯವು ತಿಳಿಯುವುದರಿಂದ ಇದು ಏಕಕರ್ಮ.

ಇಲ್ಲಿಯ **ಸಿದ್ಧಾಂತವು** ಹೀಗಿದೆ; ದ್ರವ್ಯ-ದೇವತೆಗಳು ಯಾಗಸ್ವರೂಪ. **'ಪ್ರಾಜಾಪತ್ಯಾನ್ ಪಶೂನ್ ಆಲಭತೇ'**—ಇಲ್ಲಿ ಪ್ರಜಾಪತಿಯು ದೇವತೆಯಾಗಿರುವ ಪಶುವು ದ್ರವ್ಯವಾಗಿರುವ ಯಾಗಗಳು ಬಹುತ್ವಸಂಖ್ಯೆಯಿಂದ ವಿಹಿತವಾಗಿವೆ. ಬಹುತ್ವಸಂಖ್ಯಾವಿಶೇಷವು 'ಸಪ್ತದಶ' ಎಂಬ ಪದವಿಶೇಷದಿಂದ ವಿಹಿತವಾಗಿದೆ. ಆದುದರಿಂದ ಇಲ್ಲಿ ಸಂಖ್ಯೆಯಿಂದ ಕರ್ಮಭೇದ. ಇದರ ಪ್ರಯೋಜನವು 'ಸಪ್ತದಶ ಪಶುಯಾಗಗಳು ಐಕಾದಶಿನಪಶುಗಳ ವಿಕೃತಿಗಳು' ಎಂಬುದೇ ಆಗಿದೆ.

**೩) ಪಶೂಪಾಕರಣ–ನಿಯೋಜನೆಗಳಲ್ಲಿ ಕ್ರಮವಿದೆಯೇ? [ಜೈ.ಸೂ. 5.1.]**

ಉಪಾಕರಣಾನಂತರ ಯೂಪದಲ್ಲಿ ಪಶುಬಂಧನವು ವಿಹಿತವಾಗಿದೆ. ವಾಜಪೇಯದಲ್ಲಿ ಸಪ್ತದಶ ಪಶುಗಳಿವೆ. ಇಲ್ಲಿ ಉಪಾಕರಣದಲ್ಲಿ ಕ್ರಮವಿಲ್ಲದಿರುವುದರಿಂದ ನಿಯೋಜನಾದಿಗಳಲ್ಲಿಯೂ ಕ್ರಮವಿಲ್ಲ. ಇದು ಇಲ್ಲಿನ **ಪೂರ್ವಪಕ್ಷ.**

ಉಪಾಕರಣದಲ್ಲಿ ಕ್ರಮವಿಲ್ಲದಿರುವುದರಿಂದ ಒಂದು ಪಶುವಿನ ಉಪಾಕರಣವಾದ ಮೇಲೆ ಮತ್ತೊಂದು ಪಶುವಿನ ಉಪಾಕರಣದಲ್ಲಿ ಅನಿಯತವಾಗಿ ಮಾಡಬಹುದು. ಆದರೆ ಅನಂತರ ನಿಯೋಜನಾದಿಗಳನ್ನು ಪ್ರವೃತ್ತಿಕ್ರಮವನ್ನು ಅನುಸರಿಸಿ ಮಾಡಬೇಕು. ಹದಿನೇಳು ಪಶುಗಳು ಇರುವುದರಿಂದ ಪ್ರಥಮಪಶುವಿನ ಉಪಾಕರಣವಾದ ಕೂಡಲೇ ಅದರ ನಿಯೋಜನ ಮಾಡುವುದು ಸಾಧ್ಯವಿಲ್ಲ. ಅಷ್ಟು ವ್ಯವಧಾನವನ್ನು ಒಪ್ಪಬೇಕು. ಆದರೆ ನಿಯೋಜನಾದಿಗಳಲ್ಲಿ ಪ್ರಥಮಪಶುವಿನ ಉಪಾಕರಣಾನಂತರ ಪ್ರವೃತ್ತಿಕ್ರಮ

ವನ್ನು ಅನುಸರಿಸದಿದ್ದರೆ ನಿಯೋಜನಾದಿಗಳಲ್ಲಿ ವ್ಯವಧಾನವು ಹೆಚ್ಚು-ಕಡಿಮೆಯಾಗ ಬಹುದು. ಆದುದರಿಂದ ಪ್ರಥಮಪಶುವಿನ ಉಪಾಕರಣದಲ್ಲಿ ನಿಯಮವಿಲ್ಲದಿದ್ದರೂ ಯೂಪನಿಯೋಜನಾದಿಗಳಲ್ಲಿ ಪ್ರವೃತ್ತಿಕ್ರಮವನ್ನೇ ಅನುಸರಿಸಬೇಕು. ಇದು ಇಲ್ಲಿನ **ಸಿದ್ಧಾಂತ.**

**೪) ಪಶುವಿನಲ್ಲಿ ಉಪಾಕರಣ-ನಿಯೋಜನೆಗಳು ಹೇಗೆ? [ಜೈ.ಸೂ. 5.2.]**

ಪ್ರಕೃತಿಯಾಗದಲ್ಲಿ ಪಶುವಿನ ಉಪಾಕರಣ-ನಿಯೋಜನೆಗಳನ್ನು ವ್ಯವಧಾನ ವಿಲ್ಲದೆ ಮಾಡಬೇಕು. ವಾಜಪೇಯದಲ್ಲಿ ಸಪ್ತದಶ ಪಶುಗಳು ಇವೆ. ಇಲ್ಲಿ ಒಂದು ಪಶುವಿನಲ್ಲಿ ಮಾಡಬೇಕಾದ ಸಂಸ್ಕಾರಗಳನ್ನು ಮುಗಿಸಿ, ಮತ್ತೊಂದರ ಸಂಸ್ಕಾರವನ್ನು ಮಾಡಬೇಕು. ಇದು ಇಲ್ಲಿನ **ಪೂರ್ವಪಕ್ಷ.**

**'ಸಪ್ತದಶ ಪ್ರಾಜಾಪತ್ಯಾನ್ ಪಶೂನಾಲಭತೇ'** ಎಂದು ವಿಹಿತವಾಗಿರುವ ಪಶುಸಾಹಿತ್ಯವು ಪ್ರಬಲ. ಅತಿದೇಶದಿಂದ ಬಂದಿರುವ ಧರ್ಮಸಾಹಿತ್ಯವು ದುರ್ಬಲ. ಆದುದರಿಂದ ಕಾಂಡಾನುಸಮಯವನ್ನು ಅನುಸರಿಸದೆ, ಪದಾರ್ಥಾನುಸಮಯವನ್ನು ಅನುಸರಿಸಿ ಒಂದು ಸಂಸ್ಕಾರವನ್ನು ಎಲ್ಲ ಪಶುಗಳಲ್ಲಿಯೂ ಮಾಡಿ, ಅನಂತರ ಮತ್ತೊಂದು ಸಂಸ್ಕಾರವನ್ನು ಅದೇ ಕ್ರಮದಲ್ಲಿಯೇ ಮಾಡುತ್ತಾ ಹೋಗಬೇಕು. ಇದು ಇಲ್ಲಿನ **ಸಿದ್ಧಾಂತ.**

**೫) ಪಶುಗಳ ಸಮುಚ್ಚಯವೇ? ಬಾಧವೇ? [ಜೈ.ಸೂ. 10.4.]**

ವಾಜಪೇಯದಲ್ಲಿ ಅತಿದೇಶದಿಂದ ಪ್ರಕೃತಿಯಾಗದಿಂದ ಆಗ್ನೇಯಾದಿ ಪಶುಯಾಗಗಳು ಪ್ರಾಪ್ತವಾಗುತ್ತವೆ. **'ಸಪ್ತದಶ ಪ್ರಾಜಾಪತ್ಯಾನ್ ಪಶೂನಾಲಭತೇ'** ಎಂದು ಈ ಪ್ರಕರಣದಲ್ಲಿಯೇ ಔಪದೇಶಿಕವಾಗಿ ಹೇಳಿದ್ದಾರೆ. ಇಲ್ಲಿ ಅತಿದೇಶದಿಂದ ಪ್ರಾಪ್ತವಾದ ಪಶುಗಳಿಗೆ ಬಾಧವೇ? ಅಥವಾ ಎರಡು ವಿಧದ ಪಶುಗಳಿಗೂ ಸಮುಚ್ಚಯವೇ? ಎಂದು ಇಲ್ಲಿನ **ಸಂಶಯ.**

**'ಸಪ್ತದಶ'** ಎಂದು ಸಂಖ್ಯೆಯನ್ನು ಸ್ಪಷ್ಟವಾಗಿ ಹೇಳಿದೆ. ಆಗ್ನೇಯಾದಿ ಪಶುಯಾಗಗಳನ್ನೂ ಮಾಡುವುದಾದರೆ ಆ ವಚನಕ್ಕೆ ವಿರೋಧವು ಬರುತ್ತದೆ. ಆದುದರಿಂದ ಪ್ರಕೃತಿಯಾಗದಿಂದ ಪ್ರಾಪ್ತವಾಗುವ ಪಶುಯಾಗಗಳಿಗೆ ಬಾಧವೇ ಸರಿ. ಇದು **ಪೂರ್ವಪಕ್ಷ.**

**'ಗ್ರಹಂ ಸಂಮಾರ್ಷ್ಟಿ'** ಎಂಬಲ್ಲಿ 'ಗ್ರಹಮ್' ಎಂಬ ಏಕವಚನವು ವಿವಕ್ಷಿತವಲ್ಲ. ಆದುದರಿಂದ ಎಲ್ಲ ಪಾತ್ರಗಳನ್ನೂ ಸಮ್ಮಾರ್ಜನ ಮಾಡಬೇಕು. ಹಾಗೆಯೇ ಇಲ್ಲಿ ಸಮುಚ್ಚಯವನ್ನು ಹೇಳಬೇಕು. ಅಲ್ಲದೆ ವಾಜಪೇಯವನ್ನು ಹೊಗಳುವಾಗ 'ಆಗ್ನೇಯಾದಿ ಪಶುಗಳಿಂದ ಅಗ್ನಿಷ್ಟೋಮಾದಿಸರ್ವಕ್ರತುಗಳ ಫಲಗಳೂ ಸಿಕ್ಕುತ್ತವೆ' ಎಂದು ಹೇಳಿರುತ್ತಾರೆ. [ತೈ.ಬ್ರಾ.1.3.4.]. ಆದುದರಿಂದ ಇಲ್ಲಿ ಪಶುಗಳಿಗೆ ಸಮುಚ್ಚಯ. ಬಾಧವಿಲ್ಲ. ಇದು ಇಲ್ಲಿನ **ಸಿದ್ಧಾಂತ.**

**೬) ವಸಾಹೋಮಾದಿಗಳು ಹೇಗೆ? [ಜೈ.ಸೂ. 11.2.]**

ವಾಜಪೇಯದಲ್ಲಿ ಸಪ್ತದಶಪಶುಗಳ ವಸಾಹೋಮಾದಿಗಳನ್ನು ಬೇರೆ ಬೇರೆಯಾಗಿ ಮಾಡಬೇಕೆ? ಅಥವಾ ಒಟ್ಟಾಗಿ ಮಾಡಬೇಕೇ? ಇದು ಇಲ್ಲಿನ **ಸಂಶಯ.**

ಪಶುಗಳು ಬೇರೆ ಬೇರೆಯಾದುದರಿಂದ ವಸಾಹೋಮಾದಿಗಳೂ ಬೇರೆ ಬೇರೆ. ಇದು ಇಲ್ಲಿನ **ಪೂರ್ವಪಕ್ಷ.**

ಪ್ರಜಾಪತಿದೇವತೆಯು ಒಬ್ಬನೇ. ಆದುದರಿಂದ ಒಟ್ಟಿಗೇ ಪಾಕವನ್ನೂ, ಪ್ರದಾನವನ್ನೂ ಮಾಡಲು ಸಾಧ್ಯ. ಹೀಗಾಗಿ **'ಅನೇಕೋದ್ದೇಶೇನ ಸಕೃದನುಷ್ಠಾನಂ ತಂತ್ರಮ್'** ಎಂಬ ಪಕ್ಷವನ್ನು ಆಶ್ರಯಿಸಿ ಒಟ್ಟಿಗೇ ಹೋಮವನ್ನು ಮಾಡಬೇಕು. ಇದು **ಸಿದ್ಧಾಂತ.**

**೭) ಪ್ರಾಜಾಪತ್ಯಪಶುಯಾಗದಲ್ಲಿ ಕುಂಭ್ಯಾದಿಗಳು ಹೇಗೆ? [ಜೈ.ಸೂ. 11.4.]**

ಪ್ರಾಜಾಪತ್ಯಪಶುಯಾಗದಲ್ಲಿ ಕುಂಭೀ-ವಪಾಶ್ರಪಣೀ ಮೊದಲಾದವುಗಳು ಬೇರೆ ಬೇರೆಯೇ? ಒಂದೇ? ಇದು **ಸಂಶಯ.**

ಆಯಾ ಪಶುವಿನ ಅಂಗಗಳು ಬೇರೆ ಬೇರೆಯಾದುದರಿಂದ ಕುಂಭೀ ಮುಂತಾದವುಗಳೂ ಬೇರೆ ಬೇರೆಯೇ. ಇದು ಇಲ್ಲಿನ **ಪೂರ್ವಪಕ್ಷ.**

ಇಲ್ಲಿಯ **ಸಿದ್ಧಾಂತವು** ಹೀಗಿದೆ. ಆಯಾ ಪಶುವಿನ ಅಂಗಗಳು ಬೇರೆ ಬೇರೆಯಾಗಿದ್ದರೂ ಒಟ್ಟಿಗೇ ಕುಂಭ್ಯಾದಿಗಳಲ್ಲಿ ಶ್ರಪಣಾದಿಗಳನ್ನು ಮಾಡಲು ಸಾಧ್ಯವಿರುವುದರಿಂದ ಪಾತ್ರಾದಿಭೇದವಿಲ್ಲ.

**೮) ವಾಜಪೇಯದಲ್ಲಿ ಪ್ರಾಜಾಪತ್ಯಪಶುಪ್ರಚಾರಕಾಲ ಯಾವುದು?**

**[ಜೈ.ಸೂ. 11.3.]**

ವಾಜಪೇಯದಲ್ಲಿ ಪ್ರಾಜಾಪತ್ಯಪಶುಪ್ರಚಾರದ ಕಾಲದಲ್ಲಿ ಸಂಶಯವಿದೆ. ಅಲ್ಲಿಯ ಪ್ರಯೋಗಕ್ರಮವು ಹೀಗಿದೆ; ತೃತೀಯಸವನದಲ್ಲಿ ಮೊದಲು ಆರ್ಭವ ಪವಮಾನ, ಅನಂತರ ವೈಶ್ವದೇವಗ್ರಹಪರ್ಯಂತವಾದ ಶಸ್ತ್ರ[ಋಗ್ವೇದದ ದೇವತಾ ಸ್ತೋತ್ರ]ಸಹಿತವಾದ ಸೋಮಪ್ರಚಾರ, ಅನಂತರ ಶಸ್ತ್ರರಹಿತವಾದ ಸೋಮಗ್ರಹ ಪ್ರಚಾರ, ಅನಂತರ ಅಗ್ನಿಷ್ಟೋಮಸಾಮ, ಉಕ್ಥ್ಯಾದಿಗಳು. ಹೀಗಿರುವಾಗ ಪ್ರಕೃತಿಯಲ್ಲಿ ಹೇಳಿರುವ ಕಾಲದಂತೆಯೇ ಪ್ರಾಜಾಪತ್ಯಪಶುಪ್ರಚಾರವು ಆರ್ಭವಕಾಲದಲ್ಲಿ ಎಂದು **ಪ್ರಥಮ ಪೂರ್ವಪಕ್ಷ.**

'ಉಪರಿಷ್ಟಾತ್ಸೋಮಾನಾಂ ಪ್ರಾಜಾಪತ್ಯೈಶ್ಚರಂತಿ' ಎಂಬ ವಚನವಿರುವುದರಿಂದ ಅತಿದೇಶಕಾಲಪ್ರಾಪ್ತಿಯ ಸಾಮೀಪ್ಯಕ್ಕಾಗಿ ವೈಶ್ವದೇವಗ್ರಹಾಂತ ಸೋಮಪ್ರಚಾರದ ಅನಂತರ ಪ್ರಾಜಾಪತ್ಯಪಶುಪ್ರಚಾರ ಎಂದು **ದ್ವಿತೀಯ ಪೂರ್ವಪಕ್ಷ.**

'ಉಪರಿಷ್ಟಾತ್ ಸೋಮಾನಾಮ್' ಎಂಬ ಸಾಮಾನ್ಯವಚನವಿರುವುದರಿಂದ ಸರ್ವಸೋಮಪ್ರಚಾರಾನಂತರ ಯಜ್ಞಾಯಜ್ಞೀಯಸಾಮದಿಂದ ಅಗ್ನಿಷ್ಟೋಮವು ಮುಗಿದ ಮೇಲೆ ಪ್ರಾಜಾಪತ್ಯಪಶುಪ್ರಚಾರ ಎಂದು ತೃತೀಯ ಪೂರ್ವಪಕ್ಷ.

ಪಶುಗಳು ಸೋಮವಿಕಾರವಲ್ಲದುದರಿಂದ ಸರ್ವಸೋಮಪ್ರಚಾರಾನಂತರ ಪ್ರಾಜಾಪತ್ಯಪಶುಪ್ರಚಾರವೆಂಬುದು ಸಿದ್ಧಾಂತ.

**೯) 'ಬ್ರಹ್ಮಸಾಮ್ನ್ಯಾಲಭತೇ' ಎಂಬುದರ ತಾತ್ಪರ್ಯ ಏನು? [ಜೈ.ಸೂ. 11.2.]**

'ತಾನ್ ಪರ್ಯಗ್ನಿಕೃತಾನ್ ಉತ್ಸೃಜತಿ । ಬ್ರಹ್ಮಸಾಮ್ನ್ಯಾಲಭತೇ' ಎಂಬ ವಾಕ್ಯವಿದೆ. ಬ್ರಹ್ಮಸಾಮ್ನ್ಯಾಲಭತೇ ಎಂಬುದರ ತಾತ್ಪರ್ಯ ಏನು? ಇದು ಸಂಶಯ.

ಇಲ್ಲಿಯ ಪೂರ್ವಪಕ್ಷ ಹೀಗಿದೆ; 'ತಾನ್..... ಉತ್ಸೃಜತಿ' ಎಂಬಲ್ಲಿ 'ಉತ್ಸೃಜತಿ' ಎಂಬುದರಿಂದ ಪರ್ಯಗ್ನಿಕರಣದ ಅನಂತರದ ಕರ್ಮಗಳ ನಿಷೇಧವನ್ನು ಹೇಳುತ್ತದೆ. 'ಬ್ರಹ್ಮಸಾಮ್ನ್ಯಾಲಭತೇ' ಎಂಬುದರಿಂದ ಬ್ರಹ್ಮಸಾಮಕಾಲದಲ್ಲಿ ಪಶುಯಾಗಾಂತರ ವಿಧಾನವಿದೆ. ಪಶುಯಾಗಾಂತರದ ವಿಧಾನವೇ ತಾತ್ಪರ್ಯ.

ಇಲ್ಲಿ 'ಉತ್ಸೃಜತಿ' ಎಂಬ ಹೇಳಿರುವುದು ಪರ್ಯಗ್ನಿಕರಣದ ಅನಂತರ ಸರ್ವ ಕರ್ಮಗಳ ಉತ್ಕರ್ಷವೇ. 'ಬ್ರಹ್ಮಸಾಮ್ನ್ಯಾಲಭತೇ' ಎಂಬಲ್ಲಿ ದ್ರವ್ಯ-ದೇವತೆಗಳ ಕೀರ್ತನವಿಲ್ಲದಿರುವುದರಿಂದ ಪಶುಯಾಗಾಂತರವಿಧಾನವಲ್ಲ. ಆದಕ್ಕಾಗಿ ಅದೃಷ್ಟಾಂತ ರದ ಕಲ್ಪನೆಯನ್ನು ಅಂಗೀಕರಿಸುವುದು ನ್ಯಾಯ್ಯವಲ್ಲದುದರಿಂದ ಉತ್ತರ ಕರ್ಮಗಳ ಉತ್ಕರ್ಷ ಮಾತ್ರ. ಇದು ಇಲ್ಲಿನ ಸಿದ್ಧಾಂತ.

## ಆ) ಛಂದಸ್ಸು

| | | |
|---|---|---|
| ೧) | ದೇವ ಸವಿತಃ..... ನಃ ॥ | ಜಗತೀ |
| ೨) | ವಾಜಸ್ಯ..... ಸಾವಿಷತ್ ॥ | ಜಗತೀ |
| ೩) | ಆಪ್ಸ್ವಂತಃ ..... ವಾಜಿನಃ ॥ | ಪುರ ಉಷ್ಣಿಕ್ |
| ೪) | ವಾಯುರ್ವಾ ತ್ವಾ..... ದಧುಃ ॥ | ಅನುಷ್ಟುಪ್ |
| ೫) | ಅಪಾಂ.... ಸೇತ್ ॥ | ಕಕುದುಷ್ಣಿಕ್ |
| ೬) | ಅಂಕೌ..... ಪಾರಯಂತು ॥ | ತ್ರಿಷ್ಟುಪ್ |

★ ★ ★

## ॥ ಅಷ್ಟಮೋಽನುವಾಕಃ ॥

**ದೇವಸ್ಯಾಹಗ್ಂ ಸವಿತುಃ ಪ್ರಸವೇ ಬೃಹಸ್ಪತಿನಾ ವಾಜಜಿತಾ ವಾಜಂ ಜೇಷಂ ದೇವಸ್ಯಾಹಗ್ಂ ಸವಿತುಃ ಪ್ರಸವೇ ಬೃಹಸ್ಪತಿನಾ ವಾಜಜಿತಾ**

---

ದೇವಸ್ಯ । ಅಹಮ್ । ಸವಿತುಃ । ಪ್ರಸವ ಇತಿ ಪ್ರ-ಸವೇ । ಬೃಹಸ್ಪತಿನಾ । ವಾಜಜಿತೇತಿ ವಾಜ-ಜಿತಾ । ವಾಜಮ್ । ಜೇಷಮ್ । ದೇವಸ್ಯ । ಅಹಮ್ । ಸವಿತುಃ । ಪ್ರಸವ ಇತಿ ಪ್ರ-ಸವೇ । ಬೃಹಸ್ಪತಿನಾ । ವಾಜಜಿತೇತಿ ವಾಜ-ಜಿತಾ ।

---

ಏಳನೆಯ ಅನುವಾಕದಲ್ಲಿ ರಥಮಂತ್ರಗಳು ಹೇಳಲ್ಪಟ್ಟವು. ಈ ಎಂಟನೆಯ ಅನುವಾಕದಲ್ಲಿ ರಥಧಾವನಮಂತ್ರಗಳು ಉಕ್ತವಾಗಿವೆ.

---

| ಮಂತ್ರ | ವಿನಿಯೋಗ |
|---|---|
| ದೇವಸ್ಯಾಹಂ.... ಜೇಷಮ್ ॥ | ಅಧ್ವರ್ಯುವಿನ ರಥಾರೋಹಣದಲ್ಲಿ |
| ದೇವಸ್ಯ.... ರುಹೇಯಮ್ ॥ | ಬ್ರಹ್ಮನು ರಥಚಕ್ರವನ್ನು ಏರಲು |

---

**ಅಹಮ್** = ನಾನು; **ಸವಿತುಃ ದೇವಸ್ಯ** = ಪ್ರೇರಕನಾದ ಸವಿತೃದೇವನ; **ಪ್ರಸವೇ** [ಸತಿ] = ಅನುಮತಿಯುಂಟಾಗಿರಲು; **ವಾಜಜಿತಾ** = ಅನ್ನವನ್ನು ಜಯಿಸುವ; **ಬೃಹಸ್ಪತಿನಾ** = ಬೃಹಸ್ಪತಿಯಿಂದ / ಬ್ರಹ್ಮನಿಂದ; **ವಾಜಮ್** = ಅನ್ನವನ್ನು; **ಜೇಷಮ್** = ಜಯಿಸುವೆನು; ✢ **ಅಹಮ್** = ನಾನು; **ಸವಿತುಃ ದೇವಸ್ಯ ಪ್ರಸವೇ** [ಸತಿ] = ಸವಿತೃದೇವನ ಅನುಜ್ಞೆಯಾಗಲಾಗಿ; **ವಾಜಜಿತಾ ಬೃಹಸ್ಪತಿನಾ**= ಅನ್ನಜಯಶಾಲಿಯಾದ ಬೃಹಸ್ಪತಿಯ [ಪ್ರಸಾದದಿಂದ];

---

ಸರ್ವಪ್ರೇರಕನಾದ ಸವಿತೃದೇವನ ಅನುಜ್ಞೆಯನ್ನು ಪಡೆದು, ನಾನು ಅನ್ನವನ್ನು ಜಯಿಸುವ ಬೃಹಸ್ಪತಿಯ / ಬ್ರಹ್ಮನ ಅನುಗ್ರಹದಿಂದ ಅನ್ನವನ್ನು ಜಯಿಸುವೆನು.

# ವರ್ಷಿಷ್ಠಂ ನಾಕಗ್ಂ ರುಹೇಯಮಿಂದ್ರಾಯ ವಾಚಂ ವದತೇಂದ್ರಂ ವಾಜಂ ಜಾಪಯತೇಂದ್ರೋ ವಾಜಮಜಯಿತ್ ॥

---

ವರ್ಷಿಷ್ಠಮ್ । ನಾಕಮ್ । ರುಹೇಯಮ್ । ಇಂದ್ರಾಯ । ವಾಚಮ್ । ವದತ । ಇಂದ್ರಮ್ । ವಾಜಮ್ । ಜಾಪಯತ । ಇಂದ್ರಃ । ವಾಜಮ್ । ಅಜಯಿತ್ ॥

---

| ಮಂತ್ರ | ವಿನಿಯೋಗ |
|---|---|
| ಇಂದ್ರಾಯ.... ಅಜಯಿತ್ ॥ | ದುಂದುಭಿತಾಡನವನ್ನು ಮಾಡಲು |

---

**ವರ್ಷಿಷ್ಠಂ ನಾಕಮ್ ರುಹೇಯಮ್** = ವೃದ್ಧಿ ಹೊಂದಿರುವ ಸ್ವರ್ಗಲೋಕವನ್ನು ಏರುವೆನು; ✢ [ಹೇ! ಸಭ್ಯರಾದ ಬ್ರಾಹ್ಮಣರೇ] **ಇಂದ್ರಾಯ** = ಇಂದ್ರನಿಗಾಗಿ / ಯಜಮಾನನಿಗಾಗಿ; **ವಾಚಮ್ ವದತ** = ಸ್ತುತಿರೂಪವಾದ/ಆಶೀರ್ವಾದರೂಪವಾದ ಮಾತನ್ನು ಹೇಳಿರಿ; **ಇಂದ್ರಮ್ ವಾಜಮ್ ಜಾಪಯತ** = ಇಂದ್ರನು [ಆಜಿಧಾವನದಲ್ಲಿ ಜಯಶಾಲಿಯಾಗಿ] ಅನ್ನವನ್ನು ಜಯಿಸುವಂತೆ ಮಾಡಿರಿ; **ಇಂದ್ರಃ ವಾಜಮ್ ಅಜಯಿತ್** = ಇಂದ್ರನು/ಯಜಮಾನನು ಅನ್ನವನ್ನು ಜಯಿಸಲಿ.

---

[ಈ ಮಂತ್ರವನ್ನು ಹೇಳಿ ಅಧ್ವರ್ಯುವು ರಥವನ್ನೇರುತ್ತಾನೆ] ವೇದಿಚಾತ್ವಾಲಪ್ರದೇಶದಲ್ಲಿ ಸ್ಥಾಪಿತವಾದ ರಥಚಕ್ರವನ್ನು ನಾನು [ಬ್ರಹ್ಮನು] ಸವಿತೃದೇವನ ಅನುಜ್ಞೆಯನ್ನು ಹೊಂದಿ, ಬ್ರಹ್ಮನ ಅನುಗ್ರಹದಿಂದ ಏರುತ್ತೇನೆ. ಇದರಿಂದ ಯಜಮಾನನು ಸರ್ವಸಮೃದ್ಧವಾದ ದೇವಲೋಕವನ್ನು ಏರುವಂತಾಗಲಿ.

ಯಾಗರೂಪವಾದ ಐಶ್ವರ್ಯದಿಂದ ಯುಕ್ತನಾದುದರಿಂದ ಯಜಮಾನನೇ ಇಂದ್ರನು. ಸಭ್ಯರೇ! ನೀವು ಯಜಮಾನನ ವಿಜಯಕ್ಕಾಗಿ ಆಶೀರ್ವದಿಸಿರಿ. ಆಜಿಧಾವನದಲ್ಲಿ ಜಯಿಸುವಂತೆ ಪ್ರೋತ್ಸಾಹಿಸಿರಿ. ಇಂದ್ರನು ಅನ್ನವನ್ನು ಜಯಿಸಲಿ. [ಇಲ್ಲಿ ದುಂದುಭಿಗಳನ್ನೇ ಸ್ತುತಿಸಿದ್ದಾರೆಂದೂ ಹೇಳಬಹುದು.]

**ಅಶ್ವಾಜನಿ ವಾಜಿನಿ ವಾಜೇಷು ವಾಜಿನೀವತ್ಯಶ್ವಾನ್ತ್ಸಮತ್ಸು**
**ವಾಜಯ ॥ ಅರ್ವಾಽಸಿ ಸಪ್ತಿರಸಿ ವಾಜ್ಯಸಿ**

---

ಅಶ್ವಾಜನೀತ್ಯಶ್ವ-ಅಜನಿ । ವಾಜಿನಿ । ವಾಜೇಷು । ವಾಜಿನೀವತೀತಿ ವಾಜಿನೀ-ವತಿ । ಅಶ್ವಾನ್ । ಸಮಥ್ಸ್ವಿತಿ ಸಮತ್-ಸು । ವಾಜಯ ॥ ಅರ್ವಾ । ಅಸಿ । ಸಪ್ತಿಃ । ಅಸಿ । ವಾಜೀ । ಅಸಿ ।

---

| ಮಂತ್ರ | ವಿನಿಯೋಗ |
|---|---|
| ಅಶ್ವಾಜನಿ..... ವಾಜಯ ॥ | ಚಾಟಿಯನ್ನು ಕೊಡಲು |
| ಅರ್ವಾಸಿ.... ವಾಜ್ಯಸಿ ॥ | ಕುದುರೆಗಳನ್ನು ಓಡಿಸಲು |

---

✣ವಾಜಿನಿ=ಅನ್ನವನ್ನು ಕೊಡಬಲ್ಲ; ವಾಜಿನೀವತಿ = ವೇಗವಾಗಿ ಕುದುರೆಗಳನ್ನು ನಡೆಸಬಲ್ಲ; **ಅಶ್ವಾಜನಿ** = ಕುದುರೆಗಳನ್ನು ಶೀಘ್ರವಾಗಿ ಚಲಿಸುವಂತೆ ಮಾಡುವ ಚಾಟಿಯೇ! **ವಾಜೇಷು** = ಅನ್ನನಿಮಿತ್ತವಾಗಿ; **ಅಶ್ವಾನ್** = ಕುದುರೆಗಳನ್ನು; **ಸಮತ್ಸು** = ಯುದ್ಧಗಳಲ್ಲಿ; **ವಾಜಯ** = ಓಡಿಸು. ✣ [ರಥಕ್ಕೆ ಕಟ್ಟಿರುವ ಕುದುರೆಗಳಲ್ಲಿ ಬಲಭಾಗ ದಲ್ಲಿರುವ ಕುದುರೆಯೇ! ನೀನು] **ಅರ್ವಾ ಅಸಿ**= ಅರ್ವಜಾತಿಯ ಕುದುರೆಯಾಗಿದ್ದೀಯೆ; **ಸಪ್ತಿಃ ಅಸಿ** = [ಮಧ್ಯಮಭಾಗದ ಕುದುರೆಯೇ! ನೀನು] ಸಪ್ತಿಜಾತಿಯ ಕುದುರೆಯಾಗಿ ದ್ದೀಯೆ;**ವಾಜ್ಯಸಿ**= [ಉತ್ತರಭಾಗದ ಅಶ್ವವೇ! ನೀನು] ವಾಜಿಜಾತಿಗೆ ಸೇರಿರುತ್ತೀಯೆ.

---

ಚಾಟಿಯು ಕುದುರೆಗಳನ್ನು ಶೀಘ್ರವಾಗಿ ಓಡುವಂತೆ ಮಾಡಿ ಜಯಸಾಧನವಾದುದರಿಂದ ವಾಜಿನಿಯಾಗಿದೆ. ಕುದುರೆಗಳ ಶೀಘ್ರಗತಿಗೆ ಕಾರಣವಾದುದರಿಂದ ಅದು ವಾಜಿನೀವತಿಯೂ ಆಗಿದೆ. ಇಂತಹ ಅಶ್ವಾಜನಿಯೇ! [ಚಾಟಿಯೇ!] ನೀನು ಅನ್ನನಿಮಿತ್ತವಾಗಿ ಕುದುರೆಗಳನ್ನು ಯುದ್ಧದಲ್ಲಿ [ಸ್ಪರ್ಧೆಯಲ್ಲಿ] ಶೀಘ್ರವಾಗಿ ಓಡಿಸು.[ಯುದ್ಧದಲ್ಲಿ ಗೆದ್ದು ಗಳಿಸುವ ಶತ್ರುಗಳ ಧನಾದಿಗಳನ್ನೇ ಅನ್ನವೆಂದು ಹೇಳಿರುತ್ತಾರೆ.]

ಹಲವು ಜಾತಿಯ ಕುದುರೆಗಳು ಇವೆ. ಅವುಗಳಲ್ಲಿ ಅರ್ವಾ, ಸಪ್ತಿ, ವಾಜಿ- ಈ ಮೂರು ಜಾತಿಯ ಕುದುರೆಗಳನ್ನು ರಥಕ್ಕೆ ಕಟ್ಟಲಾಗಿದೆ. ಈ ಮಂತ್ರದಿಂದ ಅಧ್ವರ್ಯುವು ಆ ಕುದುರೆಗಳನ್ನು ಓಡಿಸುತ್ತಾನೆ.

ವಾಜಿನೋ ವಾಜಂ ಧಾವತ ಮರುತಾಂ ಪ್ರಸವೇ ಜಯತ ವಿ ಯೋಜನಾ ಮಿಮೀಧ್ವಮಧ್ವನಃ ಸ್ಕಭ್ನೀತ [ಸ್ಕಭ್ನೀತ (೧)] ಕಾಷ್ಠಾಂ ಗಚ್ಛತ

---

ವಾಜಿನಃ । ವಾಜಮ್ । ಧಾವತ । ಮರುತಾಮ್। ಪ್ರಸವ ಇತಿ ಪ್ರ-ಸವೇ । ಜಯತ। ವೀತಿ । ಯೋಜನಾ । ಮಿಮೀಧ್ವಮ್ । ಅಧ್ವನಃ । ಸ್ಕಭ್ನೀತ (೧)। ಕಾಷ್ಠಾಮ್। ಗಚ್ಛತ।

---

| ಮಂತ್ರ | ವಿನಿಯೋಗ |
|---|---|
| ವಾಜಿನೋ.... ಗಚ್ಛತ ॥* | ಕುದುರೆಗಳನ್ನು ಪ್ರೋತ್ಸಾಹಿಸಲು |

---

✢ **ವಾಜಿನಃ** = ಕುದುರೆಗಳೇ! **ವಾಜಮ್** = ಅನ್ನವನ್ನು ಸಂಪಾದಿಸುವುದಕ್ಕಾಗಿ; **ಧಾವತ** = ಓಡಿರಿ; **ಮರುತಾಮ್** = ಮರುದ್ದೇವತೆಗಳ; **ಪ್ರಸವೇ** = ಅನುಮತಿಯಿರಲು; **ಜಯತ** = ಗೆಲುವನ್ನು ಪಡೆಯಿರಿ; **ಯೋಜನಾ** = ಅನೇಕ ಯೋಜನೆಗಳ ದೂರವನ್ನೂ; **ವಿ ಮಿಮೀಧ್ವಮ್** = ಅಲ್ಪಯೋಜನಪರಿಮಾಣಗಳನ್ನಾಗಿ ಮಾಡಿರಿ; **ಅಧ್ವನಃ** = ಮಾರ್ಗಗಳನ್ನು; **ಸ್ಕಭ್ನೀತ** = ವೇಗದಿಂದ ಹಿತವಾದವುಗಳನ್ನಾಗಿ ಮಾಡಿರಿ; **ಕಾಷ್ಠಾಮ್** = ಹದಿನೇಳು ಪ್ರವ್ಯಾಧಗಳ ಅಂತರವನ್ನು; **ಗಚ್ಛತ** = ಹೊಂದಿರಿ.

---

ಬಲಭಾಗದ ಕುದುರೆಯೇ! ನೀನು ಅರ್ವಜಾತಿಯವನು. ಮಧ್ಯದ ಕುದುರೆಯೇ! ನೀನು ಸಪ್ತಿಜಾತಿಗೆ ಸೇರಿದವನು. ಎಲೈ! ಉತ್ತರಭಾಗದ ಕುದುರೆಯೇ! ನೀನು ವಾಜಿಜಾತಿಗೆ ಸೇರಿದವನು. ಹೀಗೆ ನೀವು ಶ್ರೇಷ್ಠಜಾತಿಯವರಾಗಿರುತ್ತೀರಿ. ಅಗ್ನಿ, ವಾಯು, ಸೂರ್ಯಸ್ವರೂಪರೂ ಆಗಿರುತ್ತೀರಿ.

ವಾಜಪೇಯದ ಈ ಆಜಿಧಾವನದಲ್ಲಿ 'ಸಪ್ತದಶ ಪ್ರವ್ಯಾಧಾನಾಜಿಂ ಧಾವಂತಿ' ಎಂಬ ವಚನದಂತೆ ಹದಿನೇಳು ಪ್ರವ್ಯಾಧಗಳ ದೂರವನ್ನು ಈ ರಥಗಳ ಕುದುರೆಗಳು ಕ್ರಮಿಸಬೇಕು. ಬಿಲ್ಲಿನಿಂದ ಬಾಣವನ್ನು ಬಿಟ್ಟಾಗ ಆ ಬಾಣವು ಎಷ್ಟು ದೂರವನ್ನು ಕ್ರಮಿಸುವುದೋ ಅದು ಒಂದು ಪ್ರವ್ಯಾಧ[ಬಿಲ್ಲಳತೆ]ವಾಗುತ್ತದೆ.

---

* ವಾಜಿನೋ.... ಜಯತ । ವಿ ಯೋಜನಾ..... ಗಚ್ಛತ — 2 ಮಂತ್ರಗಳು—ಭ.ಭಾ.ಭಾ.

**ವಾಜೇವಾಜೇಽವತ ವಾಜಿನೋ ನೋ ಧನೇಷು ವಿಪ್ರಾ ಅಮೃತಾ ಋತಜ್ಞಾಃ । ಅಸ್ಯ ಮಧ್ವಃ ಪಿಬತ ಮಾದಯಧ್ವಂ ತೃಪ್ತಾ ಯಾತ ಪಥಿಭಿರ್ದೇವಯಾನೈಃ ॥**

---

ವಾಜೇವಾಜ ಇತಿ ವಾಜೇ-ವಾಜೇ । ಅವತ । ವಾಜಿನಃ । ನಃ । ಧನೇಷು । ವಿಪ್ರಾಃ । ಅಮೃತಾಃ । ಋತಜ್ಞಾ ಇತ್ಯೃತ-ಜ್ಞಾಃ ॥ ಅಸ್ಯ । ಮಧ್ವಃ । ಪಿಬತ । ಮಾಧಯಧ್ವಮ್। ತೃಪ್ತಾಃ । ಯಾತ । ಪಥಿಭಿರಿತಿ ಪಥಿ-ಭಿಃ । ದೇವಯಾನೈರಿತಿ ದೇವ-ಯಾನೈಃ ॥

---

| ಮಂತ್ರ | ವಿನಿಯೋಗ |
|---|---|
| ವಾಜೇವಾಜೇ.... ದೇವಯಾನೈಃ ॥ | ರಥಹಯಾಭಿಮಂತ್ರಣ ಮಾಡಲು. ನಾಲ್ಕು ಮಂತ್ರಗಳು. [ಪ್ರಥಮಮಂತ್ರ] |

---

✢ **ವಾಜಿನಃ** = ಕುದುರೆಗಳೇ ! **ವಾಜೇವಾಜೇ** = ಅನ್ನನಿಮಿತ್ತವಾಗಿಯೂ; **ಧನೇಷು** = ಧನನಿಮಿತ್ತವಾಗಿಯೂ; **ನಃ ಅವತ**= ನಮ್ಮನ್ನು ರಕ್ಷಿಸಿರಿ; **ವಿಪ್ರಾಃ** = [ಸ್ನಾನಾದಿಗಳಿಂದ ಶುದ್ಧರಾದ] ಬ್ರಾಹ್ಮಣರಂತಿರುವ; **ಅಮೃತಾಃ** = ಮರಣರಹಿತರಾದ / ಶ್ರಮವಿಲ್ಲದ; **ಋತಜ್ಞಾಃ** = ಮಾರ್ಗವನ್ನು ತಿಳಿದಿರುವ ಅಶ್ವಗಳೇ! / ಅಶ್ವಾಭಿಮಾನಿದೇವತೆಗಳೇ! **ಅಸ್ಯ** = ಈ ಯಜಮಾನನು ಕೊಡುವ; **ಮಧ್ವಃ** = ಜೇನಿನಂತೆ ಸಿಹಿಯಾದ ಆಜ್ಯವನ್ನೂ, ಚರುರಸವನ್ನೂ; **ಪಿಬತ** = ಕುಡಿಯಿರಿ; **ಮಾದಯಧ್ವಮ್** = ತೃಪ್ತಿ ಹೊಂದಿರಿ; **ತೃಪ್ತಾಃ** = ತೃಪ್ತರಾಗಿ; **ದೇವಯಾನೈಃ ಪಥಿಭಿಃ** = ದೇವತೆಗಳು ಸಂಚರಿಸುವ ಅಂತರಿಕ್ಷಮಾರ್ಗದಿಂದ; **ಯಾತ** = ಆಜಿಯ ಕಡೆಗೆ ಹೋಗಿರಿ.

---

ಓಡುವ ಕುದುರೆಗಳನ್ನು ಹೀಗೆ ಪ್ರೋತ್ಸಾಹಿಸಲಾಗಿದೆ; ಎಲೈ! ಕುದುರೆಗಳೇ! ಅನ್ನವನ್ನು/ ಧನವನ್ನು ಸಂಪಾದಿಸಲು ವೇಗವಾಗಿ ಓಡಿರಿ. ಮರುದ್ದೇವತೆಗಳ ಅನುಮತಿ/ ಅನುಗ್ರಹದಿಂದ ಗೆಲುವನ್ನು ಪಡೆಯಿರಿ. ಅನೇಕ ಯೋಜನೆಗಳ ದೂರವನ್ನೂ ನಿಮ್ಮ ವೇಗದಿಂದ ಅಲ್ಪಯೋಜನದೂರದಂತೆ ಮಾಡಿರಿ. ಮಾರ್ಗವನ್ನು ಸುಖಕರವನ್ನಾಗಿ ಮಾಡಿರಿ.

ತೇ ನೋ ಅರ್ವಂತೋ ಹವನಶ್ರುತೋ ಹವಂ ವಿಶ್ವೇ ಶೃಣ್ವಂತು ವಾಜಿನಃ ॥ ಮಿತದ್ರವಃ ಸಹಸ್ರಸಾ ಮೇಧಸಾತಾ ಸನಿಷ್ಯವಃ । ಮಹೋ ಯೇ ರತ್ನಗ್‌ಂ ಸಮಿಧೇಷು ಜಭ್ರಿರೇ

---

ತೇ । ನಃ । ಅರ್ವಂತಃ । ಹವನಶ್ರುತ ಇತಿ ಹವನ-ಶ್ರುತಃ । ಹವಮ್ । ವಿಶ್ವೇ । ಶೃಣ್ವಂತು । ವಾಜಿನಃ ॥ ಮಿತದ್ರವ ಇತಿ ಮಿತ-ದ್ರವಃ । ಸಹಸ್ರಸಾ ಇತಿ ಸಹಸ್ರ-ಸಾಃ। ಮೇಧಸಾತೇತಿ ಮೇಧ-ಸಾತಾ । ಸನಿಷ್ಯವಃ । ಮಹಃ । ಯೇ । ರತ್ನಮ್ । ಸಮಿಧೇಷ್ವಿತಿ ಸಮ್-ಇಧೇಷು । ಜಭ್ರಿರೇ ।

---

| ಮಂತ್ರ | ವಿನಿಯೋಗ |
|---|---|
| ತೇ ನೋ.... ವಾಜಿನಃ ॥ | ಅಶ್ವಾಭಿಮಂತ್ರಣದ ಎರಡನೆಯ ಋಕ್ಕು. |
| ಮಿತದ್ರವಃ.....ಹವೇಷು ॥ | ಅಶ್ವಾಭಿಮಂತ್ರಣದ ಮೂರನೆಯ ಮಂತ್ರ. |

---

✢ **ಅರ್ವಂತಃ** = ಗತಿಕುಶಲರಾದ; **ನಃ ಹವನಶ್ರುತಃ** = ನಮ್ಮ ಆಹ್ವಾನವನ್ನು ಕೇಳುವ; **ವಾಜಿನಃ**= ಅನ್ನವುಳ್ಳ; **ತೇ ವಿಶ್ವೇ** = ಆ ಎಲ್ಲಾ ಕುದುರೆಗಳೂ; **ಹವಮ್** = [ನಮ್ಮ] ಆಹ್ವಾನವನ್ನು; **ಶೃಣ್ವಂತು** = ಕೇಳಲಿ. ✢ **ಮಿತದ್ರವಃ** = ಅತಿದೂರವನ್ನೂ ಅಲ್ಪದೂರದಂತೆ ಸುಲಭವಾಗಿ ಓಡಬಲ್ಲ; **ಸಹಸ್ರಸಾಃ** = ಮಹತ್ತಾದ ಅನ್ನರಾಶಿಯನ್ನು ಕೊಡಬಲ್ಲ; **ಮೇಧಸಾತಾ** = ಯಜ್ಞವನ್ನು ಪೂರ್ಣಗೊಳಿಸಿಕೊಡುವ; **ಸನಿಷ್ಯವಃ** = ನಮ್ಮಲ್ಲಿ ದಾನೇಚ್ಛೆಯನ್ನು ಉಂಟುಮಾಡುವ; **ಯೇ** = ಯಾವ ಕುದುರೆಗಳು; **ಸಮಿಧೇಷು** = ಯುದ್ಧಗಳಲ್ಲಿ; **ಮಹಃ ರತ್ನಮ್** = ಅತ್ಯಧಿಕವಾದ ಶತ್ರುಧನವನ್ನು; **ಜಭ್ರಿರೇ** = ಸಂಪಾದಿಸಿಕೊಡಬಲ್ಲವೋ;

---

ಎಲೈ! ಕುದುರೆಗಳೇ! ಅನ್ನನಿಮಿತ್ತವಾಗಿಯೂ, ಧನನಿಮಿತ್ತವಾಗಿಯೂ ನೀವು ಧಾವಿಸಿ. ಶೀಘ್ರಗಾಮಿಯಾದ ವಾಯುದೇವನ ಅನುಗ್ರಹದಿಂದ ಜಯವನ್ನು ಹೊಂದಿ ನಮ್ಮನ್ನು ರಕ್ಷಿಸಿರಿ. ಬ್ರಾಹ್ಮಣರಂತೆ ಶುದ್ಧರಾದ, ಮೇಧಾವಿಗಳಾದ, ಹೋಗಬೇಕಾದ ಮಾರ್ಗವನ್ನು ತಿಳಿದಿರುವ, ಮರಣವಿಲ್ಲದ, ಶ್ರಮರಹಿತವಾದ ಓ! ಅಶ್ವಗಳೇ! ಅಶ್ವಾಭಿಮಾನಿದೇವತೆಗಳೇ! ಈ ಯಜಮಾನನು ಸಮರ್ಪಿಸುವ, ಮಧುಸದೃಶವಾದ ಘೃತವನ್ನೂ,

## ಶಂ ನೋ ಭವಂತು ವಾಜಿನೋ ಹವೇಷು ॥ ದೇವತಾತಾ ಮಿತದ್ರವಃ ಸ್ವರ್ಕಾಃ । ಜಂಭಯಂತೋಽಹಿಂ ವೃಕಗ್‌ಂ ರಕ್ಷಾಗ್‌ಂಸಿ

---

ಶಮ್। ನಃ । ಭವಂತು । ವಾಜಿನಃ । ಹವೇಷು ॥ ದೇವತಾತೇತಿ ದೇವ-ತಾತಾ । ಮಿತದ್ರವ ಇತಿ ಮಿತ-ದ್ರವಃ । ಸ್ವರ್ಕಾ ಇತಿ ಸು-ಅರ್ಕಾಃ ॥ ಜಂಭಯಂತಃ । ಅಹಿಮ್। ವೃಕಮ್। ರಕ್ಷಾಗ್‌ಂಸಿ ।

---

| ಮಂತ್ರ | ವಿನಿಯೋಗ |
|---|---|
| ದೇವತಾತಾ..... ಅಮೀವಾಃ ॥ | ಅಶ್ವಾಭಿಮಂತ್ರಣದ ನಾಲ್ಕನೆಯ ಮಂತ್ರ.* |

---

ತೇ ವಾಜಿನಃ = ಆ ಕುದುರೆಗಳು; ನಃ = ನಮಗೆ; ಹವೇಷು = ಆಹ್ವಾನಗಳಲ್ಲಿ; ಶಮ್ ಭವಂತು = ಸುಖಕರಗಳಾಗಲಿ. ✣ ದೇವತಾತಾ = ದೇವತಾರ್ಹವಾದ; ಮಿತದ್ರವಃ = ಅಮಿತದೂರವನ್ನೂ ಮಿತವಾಗುವಂತೆ ಕ್ರಮಿಸಬಲ್ಲ; ಸ್ವರ್ಕಾಃ = ಚೆನ್ನಾಗಿ ಗೌರವಕ್ಕೆ ಪಾತ್ರವಾಗಿರುವ; [ಈ ಅಶ್ವಗಳು] ಅಹಿಮ್ ವೃಕಮ್ ರಕ್ಷಾಗ್‌ಂಸಿ = ಹಾವಿನಂತೆ, ತೋಳನಂತೆ ಹಿಂಸಿಸುವ ರಾಕ್ಷಸರನ್ನು; * ಜಂಭಯಂತಃ = ನಾಶಪಡಿಸುವುವುಗಳಾಗಿ;

---

ನೈವಾರಚರುರಸವನ್ನೂ ಕುಡಿದು ತೃಪ್ತರಾಗಿ ದೇವಮಾರ್ಗದಂತೆ ಮನೋಹರವಾಗಿರುವ ಮಾರ್ಗದಿಂದ ಗುರಿಯನ್ನು ಮುಟ್ಟಿರಿ. ಯಜಮಾನನು ಸ್ವರ್ಗಸುಖವನ್ನು ಪಡೆಯುವಂತೆ ಮಾಡಿರಿ.

---

* ಈ ರೀತಿಯ ಮಂತ್ರವಿಭಾಗವು ಅಧ್ಯಾಪಕಸಂಪ್ರದಾಯವನ್ನು ಅನುಸರಿಸಿದೆ.

ಬೌಧಾಯನರು
1) ವಾಜೇವಾಜೇಽವತ.... ದೇವಯಾನೈಃ 2) ತೇ ನೋ..... ಹವೇಷು ॥
3) ದೇವತಾತಾ.... ಅಮೀವಾಃ 4) ಏಷ ಸ್ಯ... ಅನ್ವಾಪನೀಫಣತ್ ॥
ಹೀಗೆ ಮಂತ್ರಚತುಷ್ಟಯವನ್ನು ಹೇಳಿರುತ್ತಾರೆ.

ಆಪಸ್ತಂಬರು
1) ವಾಜಿನೋ ವಾಜಂ.... ಜಯತ 2) ವಿ ಯೋಜನಾ.. ಗಚ್ಛತ ।
3) ವಾಜೇವಾಜೇ.... ದೇವಯಾನೈಃ 4) ತೇ ನೋ...... ವಾಜಿನಃ । ಎಂದು ಮಂತ್ರ ಚತುಷ್ಟಯವನ್ನುಹೇಳಿ, ಮಿತದ್ರವಃ..... । ಮುಂತಾದ ನಾಲ್ಕು ಮಂತ್ರಗಳಿಗೆ ವಿನಿಯೋಗಭೇದವನ್ನೂ ಹೇಳಿರುತ್ತಾರೆ.

* ಜಂಭಯಂತಃ = ಭಂಜಯಂತಃ । ಶ್ರುತಿಯಲ್ಲಿ ವರ್ಣವ್ಯತ್ಯಾಸವಾಗಿದೆ.

ಸನೇಮ್ಯಸ್ಮದ್ಯುಯವನ್ನಮೀವಾಃ ॥ [.....ಯುಯವನ್ನ್(೨) ಅಮೀವಾಃ ॥] ಏಷ ಸ್ಯ ವಾಜೀ ಕ್ಷಿಪಣಿಂ ತುರಣ್ಯತಿ ಗ್ರೀವಾಯಾಂ ಬದ್ಧೋ ಅಪಿಕಕ್ಷ ಆಸನಿ । ಕ್ರತುಂ ದಧಿಕ್ರಾ ಅನು ಸಂತವೀತ್ವತ್ಪಥಾಮಂಕಾಗ್‌ಂಸ್ಯನ್ವಾಪನೀಫಣತ್ ॥

---

ಸನೇಮಿ । ಅಸ್ಮತ್ । ಯುಯವನ್ನ್ (೨) ಅಮೀವಾಃ ॥ ಏಷಃ । ಸ್ಯಃ । ವಾಜೀ । ಕ್ಷಿಪಣಿಮ್ । ತುರಣ್ಯತಿ । ಗ್ರೀವಾಯಾಮ್ । ಬದ್ಧಃ । ಅಪಿಕಕ್ಷ ಇತ್ಯಪಿ-ಕಕ್ಷೇ । ಆಸನಿ॥ ಕ್ರತುಮ್ । ದಧಿಕ್ರಾ ಇತಿ ದಧಿ-ಕ್ರಾಃ । ಅನ್ವಿತಿ । ಸಂತವೀತ್ವದಿತಿ ಸಂ-ತವೀತ್ವತ್ । ಪಥಾಮ್ । ಅಂಕಾಗ್‌ಂಸಿ । ಅನ್ವಿತಿ । ಆಪನೀಫಣದಿತ್ಯಾ-ಪನೀಫಣತ್ ॥

---

| ಮಂತ್ರ | ವಿನಿಯೋಗ |
|---|---|
| ಏಷ ಸ್ಯ.... ಅನ್ವಾಪನೀಫಣತ್ ॥ | ಕುದುರೆಗಳ ಅಭಿಮಂತ್ರಣ ಮಾಡಲು |

---

**ಸನೇಮಿ** = ಒಡನೆಯೇ; **ಅಮೀವಾಃ**= ರೋಗಾದಿಗಳನ್ನು; **ಅಸ್ಮತ್**= ನಮ್ಮಿಂದ ದೂರವಾಗಿ; **ಯುಯವನ್ನ್** = ಹೋಗಲಾಡಿಸಲಿ. ✣ **ಏಷಃ ಸ್ಯಃ ವಾಜೀ** = ಆ ಈ ಕುದುರೆಯು*; **ಗ್ರೀವಾಯಾಮ್** = ಕಂಠದಲ್ಲಿಯೂ; **ಅಪಿಕಕ್ಷೇ** = ಕಂಕುಳುಗಳ ಸಮೀಪಪ್ರದೇಶದಲ್ಲಿಯೂ; **ಆಸನಿ** = ಮುಖದಲ್ಲಿಯೂ; **ಬದ್ಧಃ** = ಕಟ್ಟಲ್ಪಟ್ಟು; **ಕ್ಷಿಪಣಿಮ್** = ಚಾಟಿಯನ್ನು; **ತುರಣ್ಯತಿ** = ತ್ವರೆಪಡಿಸುತ್ತದೆ ; [ವೇಗವಾಗಿ ಹೋಗಲು ಚಾಟಿಯನ್ನು ಬೀಸುವಂತೆ ಮಾಡುತ್ತದೆ.] **ಕ್ರತುಮ್ ಅನು** = ಯಜ್ಞಕರ್ತನ/ಸವಾರನ ಅಭಿಪ್ರಾಯವನ್ನು ಅನುಸರಿಸಿ; **ದಧಿಕ್ರಾಃ** = ಮಾರ್ಗದಲ್ಲಿ ತಡೆಯಾಗಿರುವ ಶಿಲೆ ಮೊದಲಾದವನ್ನು ಅತಿಕ್ರಮಿಸುತ್ತಾ; **ಸಂ ತವೀತ್ವತ್** = ಚೆನ್ನಾಗಿ ಓಡುತ್ತದೆ; **ಪಥಾಮ್** = ಮಾರ್ಗಗಳ; **ಅಂಕಾಗ್‌ಂಸಿ** = ಚಿಹ್ನೆಗಳನ್ನೂ/ಹಳ್ಳದಿಣ್ಣೆಗಳನ್ನೂ; **ಅನು ಆಪನೀಫಣತ್** = ನೇರಗೊಳಿಸುತ್ತದೆ.

---

ಎಲ್ಲ ಕುದುರೆಗಳೂ ಹೇಗೆ ಹೋಗಬೇಕೆಂಬುದನ್ನು ತಿಳಿದಿವೆ. ನಮ್ಮ ಆಹ್ವಾನವನ್ನು ಕೇಳುತ್ತವೆ. ಅನ್ನವನ್ನು ಕೊಡಬಲ್ಲವು. ಆ ಎಲ್ಲಾ ಕುದುರೆಗಳೂ ನಮ್ಮ ಆಹ್ವಾನವನ್ನು ಕೇಳಲಿ.

---

* ಜಾತ್ಯೇಕವಚನ.

ಉತ ಸ್ಮಾಸ್ಯ ದ್ರವತಸ್ತುರಣ್ಯತಃ ಪರ್ಣಂ ನ ವೇರನು ವಾತಿ ಪ್ರಗರ್ಧಿನಃ । ಶ್ಯೇನಸ್ಯೇವ ಧ್ರಜತೋ ಅಂಕಸಂ

---

ಉತ । ಸ್ಮ । ಅಸ್ಯ । ದ್ರವತಃ । ತುರಣ್ಯತಃ । ಪರ್ಣಮ್ । ನ । ವೇಃ । ಅನ್ವಿತಿ । ವಾತಿ । ಪ್ರಗರ್ಧಿನ ಇತಿ ಪ್ರ-ಗರ್ಧಿನಃ ॥ ಶ್ಯೇನಸ್ಯ । ಇವ । ಧ್ರಜತಃ । ಅಂಕಸಮ್ ।

---

| ಮಂತ್ರ | ವಿನಿಯೋಗ |
|---|---|
| ಉತ.... ತರಿತ್ರತಃ ॥ | ಆಗ್ನೀಧ್ರನು ಮಾಡುವ ರಥಭ್ರೇಷಹೋಮ ಮಂತ್ರ |

---

✣ ಉತ ಸ್ಮ = ಮತ್ತೆ; ದ್ರವತಃ = ಓಡುತ್ತಿರುವ; ತುರಣ್ಯತಃ = ತ್ವರೆಪಡುತ್ತಿರುವ; ಧ್ರಜತಃಶ್ಯೇನಸ್ಯ ಇವ = ಹಾರಾಡುತ್ತಿರುವ ಡೇಗೆಯಂತೆ; ದಧಿಕ್ರಾವ್ಣ್ಣಃ = ದಾರಿಯಲ್ಲಿ ತಡೆಯಾಗಿರುವ ಶಿಲಾವೃಕ್ಷಾದಿಗಳನ್ನು ಅತಿಕ್ರಮಿಸುತ್ತಿರುವ; ಊರ್ಜಾ ಸಹ = ಬಲದೊಡನೆ; ತರಿತ್ರತಃ = ಹಾರುವಂತೆ ಹೋಗುತ್ತಿರುವ; ಪ್ರಗರ್ಧಿನಃ = ಗುರಿಯನ್ನು ಮುಟ್ಟಲು ತವಕಿಸುತ್ತಿರುವ; ಅಸ್ಯ = ಈ ಕುದುರೆಯ; ಪರಿ = ದೇಹದ ಸುತ್ತಲೂ ಇರುವ; ಅಂಕಸಮ್ = ವಸ್ತ್ರಾಲಂಕಾರಾದಿಗಳು;

---

ಈ ಕುದುರೆಗಳು ಅತಿದೂರವನ್ನೂ ಅಲ್ಪಕಾಲದಲ್ಲಿಯೇ ಕ್ರಮಿಸಬಲ್ಲವು. ಅನ್ನರಾಶಿಯನ್ನು ಸಂಪಾದಿಸಿಕೊಡಬಲ್ಲವು. ಯಜ್ಞವನ್ನು ಪೂರ್ಣಗೊಳಿಸಿಕೊಡಬಲ್ಲವು. ನಮ್ಮಲ್ಲಿ ದಾನ ಮಾಡುವ ಇಚ್ಛೆಯನ್ನು ಉಂಟುಮಾಡಬಲ್ಲವು. ಶತ್ರುಯುದ್ಧಗಳಲ್ಲಿ ಜಯವನ್ನು ಸಾಧಿಸಿ ಶತ್ರುಗಳ ಮಹತ್ತಾದ ಧನರಾಶಿಯನ್ನೂ ಸ್ವಾಧೀನಪಡಿಸಿಕೊಡಬಲ್ಲವು. ಇಂತಹ ಕುದುರೆಗಳು ನಮ್ಮ ಆಹ್ವಾನವನ್ನು ಮನ್ನಿಸಿ ನಮಗೆ ಸುಖಕರಗಳಾಗಲಿ.

ಈ ಕುದುರೆಗಳು ದೇವತಾರ್ಹವಾದವು. ತುಂಬಾ ದೂರವನ್ನೂ ಬೇಗನೇ ಕ್ರಮಿಸಬಲ್ಲವು. ಪೂಜಾರ್ಹವಾದವು. ಈ ಅಶ್ವಗಳು ಸರ್ಪಗಳಂತೆ, ತೋಳಗಳಂತೆ ಹಿಂಸಿಸುವ ರಾಕ್ಷಸರನ್ನು /ಸರ್ಪಗಳನ್ನೂ, ತೋಳಗಳನ್ನೂ ಒಡನೆಯೇ ನಾಶಪಡಿಸುತ್ತಾ ಓಡಲಿ. ರೋಗಗಳನ್ನು ನಮ್ಮಿಂದ ದೂರ ಮಾಡಲಿ.

ಆ ಈ ಕುದುರೆಯು [ಕುದುರೆಗಳು ಎಂಬ ಅರ್ಥದಲ್ಲಿ ಜಾತ್ಯೇಕವಚನ] ಕುತ್ತಿಗೆ, ಹೆಗಲು, ಮುಖ ಮೊದಲಾದ ಕಡೆಗಳಲ್ಲಿ ಬಂಧನವನ್ನು ಹೊಂದಿದೆ. ಇದು ದಾರಿಯಲ್ಲಿ

ಪರಿ ದಧಿಕ್ರಾವ್ಣ್ಣಃ ಸಹೋರ್ಜಾ ತರಿತ್ರತಃ ॥ ಆ ಮಾ ವಾಜಸ್ಯ ಪ್ರಸವೋ ಜಗಮ್ಯಾದಾ ದ್ಯಾವಾಪೃಥಿವೀ ವಿಶ್ವಶಂಭೂ ।

---

ಪರೀತಿ । ದಧಿಕ್ರಾವ್ಣ್ಣ ಇತಿ ದಧಿ-ಕ್ರಾವ್ಣ್ಣಃ। ಸಹ । ಊರ್ಜಾ । ತರಿತ್ರತಃ ॥ ಏತಿ। ಮಾ । ವಾಜಸ್ಯ । ಪ್ರಸವ ಇತಿ ಪ್ರ-ಸವಃ । ಜಗಮ್ಯಾತ್ । ಏತಿ । ದ್ಯಾವಾಪೃಥಿವೀ ಇತಿ ದ್ಯಾವಾ-ಪೃಥಿವೀ । ವಿಶ್ವಶಂಭೂ ಇತಿ ವಿಶ್ವ-ಶಂಭೂ ॥

---

| ಮಂತ್ರ | ವಿನಿಯೋಗ |
|---|---|
| ಆ ಮಾ.... ಗಮ್ಯಾತ್ । | ರಥವಿಮೋಚನೀಯಹೋಮಮಂತ್ರ |

---

ವೇಃ ಪರ್ಣಮ್ ನ = ಹಕ್ಕಿಯ ರೆಕ್ಕೆಯಂತೆ; ಅನುವಾತಿ = ಅನುಸರಿಸಿ ಹಾರಿಹೋಗುತ್ತಿದೆ. ✢ ವಾಜಸ್ಯ ಪ್ರಸವಃ = ಅನ್ನದ ಸಮೃದ್ಧವಾದ ಉತ್ಪತ್ತಿಯು; ಮಾ = ನನ್ನನ್ನು; ಆ ಜಗಮ್ಯಾತ್ = ಉದ್ದೇಶಿಸಿ ಬರಲಿ; ದ್ಯಾವಾಪೃಥಿವೀ = ದ್ಯುಲೋಕ-ಪೃಥಿವೀಲೋಕ ದೇವತೆಗಳು; ವಿಶ್ವಶಂಭೂ = ಜಗತ್ತಿಗೆ ಸುಖವನ್ನುಂಟುಮಾಡುವುವುಗಳಾಗಿ;

---

ತಡೆಯಾಗಿರುವ ಕಲ್ಲು ಮೊದಲಾದವುಗಳನ್ನೂ ಮೀರಿ ಹೋಗಬಲ್ಲುದು. ಸವಾರನ ಅಭಿಪ್ರಾಯದಂತೆ ದಾರಿಯ ಹಳ್ಳಕೊಳ್ಳಗಳನ್ನೂ, ತಿರುವುಗಳನ್ನೂ ಗಮನಿಸಿ ಸರಿಯಾದ ಮಾರ್ಗದಲ್ಲಿ ಓಡುತ್ತದೆ. ವೇಗಗಮನಕ್ಕಾಗಿ ಚಾಟಿಯನ್ನು ಬೀಸುವಂತೆ ಮಾಡುತ್ತದೆ.

ಓಡುತ್ತಿರುವ ಕುದುರೆಯನ್ನು ಹೀಗೆ ವರ್ಣಿಸಲಾಗಿದೆ; ಈ ಕುದುರೆಯು ಹಾರುತ್ತಿರುವ ಗಿಡಗದಂತೆ ದಾರಿಯಲ್ಲಿ ತಡೆಯಾಗಿರುವ ವೃಕ್ಷಶೈಲಾದಿಗಳನ್ನೂ ಅತಿಕ್ರಮಿಸಿ ಹೋಗುತ್ತದೆ. ಗುರಿಯನ್ನು ಮುಟ್ಟಲು ಬಲದಿಂದ ಓಡುತ್ತಿರುವ ಕುದುರೆಯ ಮೈಮೇಲಿರುವ ವಸ್ತ್ರಾದ್ಯಲಂಕಾರವು—ಹಾರುತ್ತಿರುವ ಹಕ್ಕಿಯ ರೆಕ್ಕೆಯಂತೆ—ಹಾರುವಂತೆ ಹೋಗುತ್ತಿರುವ ಕುದುರೆಯನ್ನು ಅನುಸರಿಸಿ ಹೋಗುತ್ತದೆ.

ಸಮೃದ್ಧವಾದ ಅನ್ನದ ಉತ್ಪತ್ತಿಯು ನನಗಾಗಲಿ. ದ್ಯುಲೋಕ ಭೂಲೋಕಗಳೂ ನಮಗೆ ಸುಖಕರಗಳಾಗಿ ಬರಲಿ. ತಾಯಿತಂದೆಗಳೂ ಚಿರಜೀವನಕ್ಕಾಗಿ ನನ್ನ ಬಳಿಗೆ ಬರಲಿ. ಸೋಮದೇವನೂ ಅಮರತ್ವ ವನ್ನು ಕೊಡಲು ನನ್ನನ್ನು ಉದ್ದೇಶಿಸಿ ಬರಲಿ.

ಆ ಮಾ ಗಂತಾಂ ಪಿತರಾ [ಪಿತರಾ (೩)] ಮಾತರಾ ಚಾಽಽಮಾ ಸೋಮೋ ಅಮೃತತ್ವಾಯ ಗಮ್ಯಾತ್ ॥ ವಾಜಿನೋ ವಾಜಜಿತೋ ವಾಜಗ್‍ಂ ಸರಿಷ್ಯಂತೋ ವಾಜಂ ಜೇಷ್ಯಂತೋ ಬೃಹಸ್ಪತೇರ್ಭಾಗಮವಜಿಘ್ರತ

---

ಏತಿ । ಮಾ । ಗಂತಾಮ್ । ಪಿತರಾ (೩) । ಮಾತರಾ । ಚ । ಏತಿ । ಮಾ । ಸೋಮಃ । ಅಮೃತತ್ವಾಯೇತ್ಯಮೃತ-ತ್ವಾಯ । ಗಮ್ಯಾತ್ । ವಾಜಿನಃ । ವಾಜಜಿತ ಇತಿ ವಾಜ-ಜಿತಃ । ವಾಜಮ್ । ಸರಿಷ್ಯಂತಃ । ವಾಜಮ್ । ಜೇಷ್ಯಂತಃ । ಬೃಹಸ್ಪತೇ । ಭಾಗಮ್ । ಅವೇತಿ । ಜಿಘ್ರತ ।

---

| ಮಂತ್ರ | ವಿನಿಯೋಗ |
| --- | --- |
| ವಾಜಿನೋ ವಾಜಜಿತೋ... ಜಿಘ್ರತ ॥ | ಯಜುರ್ಮಂತ್ರದಿಂದ ಕಟ್ಟುವ ಕುದುರೆಗಳು ಬಾರ್ಹಸ್ಪತ್ಯಚರುವನ್ನು ಮೂಸಲು. ಆಜಿಧಾವನಕ್ಕೆ ಮೊದಲಿನ ಅವಘ್ರಾಣ ಮಂತ್ರ. |

---

**ಮಾ ಆ ಆಗಚ್ಛತಾಮ್** = ನನ್ನನ್ನು ಕುರಿತು ಬರಲಿ; **ಪಿತರಾ ಮಾತರಾ ಚ** = ತಾಯಿತಂದೆಗಳೂ [ಚಿರಕಾಲಜೀವನಕ್ಕಾಗಿ] **ಮಾ ಆ ಗಂತಾಮ್** = ನನ್ನ ಬಳಿಗೆ ಬರಲಿ; **ಸೋಮಃ** = ಸೋಮದೇವನು; **ಅಮೃತತ್ವಾಯ** = ನಾನು ದೇವತ್ವವನ್ನು ಪಡೆಯಲು; **ಮಾ ಆಗಮ್ಯಾತ್** = ನನ್ನ ಬಳಿಗೆ ಬರಲಿ. ✣ **ವಾಜಮ್** = ಅನ್ನವನ್ನು ಉದ್ದೇಶಿಸಿ; **ಸರಿಷ್ಯಂತಃ** = ಓಡಲಿರುವ; **ವಾಜಮ್** = ಅನ್ನವನ್ನು; **ಜೇಷ್ಯಂತಃ** = ಜಯಿಸಲಿರುವ; **ವಾಜಜಿತಃ ವಾಜಿನಃ** = ಅನ್ನವನ್ನು ಜಯಿಸುವ ಕುದುರೆಗಳೇ! [ನೀವು]; **ಬೃಹಸ್ಪತೇಃ ಭಾಗಮ್** = ಬೃಹಸ್ಪತಿದೇವತೆಯ ಭಾಗವಾದ [ನೈವಾರಚರುವನ್ನು]; **ಅವಜಿಘ್ರತ** = ಮೂಸಿ ನೋಡಿರಿ.

---

ವಾಜವನ್ನು ಗೆಲ್ಲುವ ಕುದುರೆಗಳೇ! ನೀವು ಅನ್ನಕ್ಕಾಗಿ ಆಜಿಯನ್ನು ಗೆಲ್ಲಲು ಹೋಗುವವರಾಗಿದ್ದೀರಿ. ಅನ್ನವನ್ನು ಗೆಲ್ಲುವವರಾಗಿದ್ದೀರಿ. ನೀವು ಬೃಹಸ್ಪತಿದೇವತೆಯ

**ವಾಜಿನೋ ವಾಜಜಿತೋ ವಾಜಗ್ಂ ಸಸ್ರುವಾಗ್ಂಸೋ ವಾಜಂ ಜಿಗಿವಾಗ್ಂಸೋ ಬೃಹಸ್ಪತೇರ್ಭಾಗೇ ನಿಮೃಢ್ವಮಿಯಂ**

---

ವಾಜಿನಃ । ವಾಜಜಿತ ಇತಿ ವಾಜ-ಜಿತಃ । ವಾಜಮ್ । ಸಸ್ರುವಾಗ್ಂಸಃ । ವಾಜಮ್ । ಜಿಗಿವಾಗ್ಂಸಃ । ಬೃಹಸ್ಪತೇಃ । ಭಾಗೇ । ನೀತಿ । ಮೃಢ್ವಮ್ । ಇಯಮ್ ।

---

| ಮಂತ್ರ | ವಿನಿಯೋಗ |
|---|---|
| ವಾಜಿನೋ.... ನಿಮೃಢ್ವಮ್ । | ಹಿಂದಿರುಗಿ ಬಂದ ಕುದುರೆಗಳನ್ನು ಚರುವನ್ನು ಮೂಸುವಂತೆ ಮಾಡಲು– ಬೌಧಾಯನ. |
| 1) ವಾಜಿನೋ.... ಜಿಗಿವಾಗ್ಂಸಃ ।* | ಚರುವನ್ನು ಮೂಸುವಂತೆ ಮಾಡಲು |
| 2) ಬೃಹಸ್ಪತೇಃ ..... ನಿಮೃಢ್ವಮ್ । | ಚರುಶೇಷವನ್ನು ಕುದುರೆಗಳ ತುಟಿಗಳ ಕೊನೆಯಲ್ಲಿ ಹಾಕಲು-ಆಪಸ್ತಂಬ |

---

✣ **ವಾಜಜಿತಃ** = ಅನ್ನವನ್ನು ಗೆಲ್ಲುವ ಸ್ವಭಾವವುಳ್ಳ; **ವಾಜಿನಃ** = ಕುದುರೆಗಳೇ! [ನೀವು] **ವಾಜಮ್ ಸಸ್ರುವಾಗ್ಂಸಃ** = ಅನ್ನಕ್ಕಾಗಿ ಆಜಿಗೆ ಹೋಗಿ ಬಂದವರಾಗಿದ್ದೀರಿ; **ವಾಜಂ ಜಿಗಿವಾಗ್ಂಸಃ** = ಅನ್ನಾರ್ಥವಾದ ಆಜಿಯನ್ನು ಜಯಿಸಿದವರಾಗಿದ್ದೀರಿ; [ನೀವು] **ಬೃಹಸ್ಪತೇಃ ಭಾಗೇ** = ಬಾರ್ಹಸ್ಪತ್ಯಚರುವಿನ ಭಾಗದಲ್ಲಿ [ಅವಘ್ರಾಣಿಸಿ]; **ನಿಮೃಢ್ವಮ್** = ಶುದ್ಧರಾಗಿರಿ;

---

ಭಾಗವಾದ ನೈವಾರಚರುವನ್ನು ಮೂಸಿ ನೋಡಿರಿ.

ವಾಜಜಯಶೀಲರಾದ ಅಶ್ವಗಳೇ! ನೀವು ವಾಜವನ್ನು ಗೆಲ್ಲಲು ಹೋಗಿಬಂದವರು. ಆಜಿಯನ್ನು ಜಯಿಸಿ ಬಂದವರು. ಬಾರ್ಹಸ್ಪತ್ಯಚರುವನ್ನು ಮೂಸಿ ನೋಡಲು ಶುದ್ಧರಾಗಿರಿ.

---

* ಹಿಂದಿನ ಬೃಹಸ್ಪತೇಃ.... ಜಿಘ್ರತ । ಎಂಬುದರ ಅನುಷಂಗವಿದೆ.

ವಸ್ಸಾ ಸತ್ಯಾ ಸಂಧಾಽಭೂದ್ಯಾಮಿಂದ್ರೇಣ ಸಮಧದ್ಧ್ವ
ಮಜೀಜಿಪತ ವನಸ್ಪತಯ ಇಂದ್ರಂ
ವಾಜಂ ವಿಮುಚ್ಯಧ್ವಮ್ ॥ ೮-37 ॥
[ಸ್ಕಭ್ನೀತ ಯುಯವನ್ನಿತರಾ ದ್ವಿಚತ್ವಾರಿಗ್‌ಂಶಚ್ಚ ।]

---

ಇಯಮ್ । ವಃ । ಸಾ । ಸತ್ಯಾ । ಸಂಧೇತಿ ಸಂ-ಧಾ । ಅಭೂತ್। ಯಾಮ್ । ಇಂದ್ರೇಣ। ಸಮಧದ್ಧ್ವಮಿತಿ ಸಂ-ಅಧದ್ಧ್ವಮ್ । ಅಜೀಜಿಪತ । ವನಸ್ಪತಯಃ। ಇಂದ್ರಮ್ । ವಾಜಮ್। ವೀತಿ । ಮುಚ್ಯಧ್ವಮ್ ॥ ೮ ॥

---

| ಮಂತ್ರ | ವಿನಿಯೋಗ |
|---|---|
| * ಇಯಂ..... ಸಮಧದ್ಧ್ವಮ್ । | ಕುದುರೆಗಳನ್ನು ಬಿಚ್ಚಿದ ಮೇಲೆ ರಥವನ್ನು ಅಭಿಮಂತ್ರಿಸಲು. |
| ಅಜೀಜಿಪತ.... ಮುಚ್ಯಧ್ವಮ್ ॥* | ದುಂದುಭಿವಿಮೋಚನದಲ್ಲಿ |

---

✢ [ಎಲೈ ರಥಗಳೇ!] ಯಾಮ್ ಇಂದ್ರೇಣ ಸಮಧದ್ಧ್ವಮ್ = ಯಾವ [ಪ್ರತಿಜ್ಞೆಯನ್ನು] ಇಂದ್ರನ ಅನುಗ್ರಹದಿಂದ ಕೈಗೊಂಡಿರೋ; ವಃ = ನಿಮ್ಮ; ಸಾ ಇಯಂ ಸಂಧಾ = ಆ ಈ ಪ್ರತಿಜ್ಞೆಯು; ಸತ್ಯಾ ಅಭೂತ್ = ಸತ್ಯವಾಗಿ ಪರಿಣಮಿಸಿತು; ✢ ವನಸ್ಪತಯಃ = ವನಸ್ಪತಿವಿಕಾರಗಳಾದ ದುಂದುಭಿಗಳೇ! ಇಂದ್ರಮ್ ವಾಜಮ್ ಅಜೀಜಿಪತ = ಇಂದ್ರನು /ಯಜಮಾನನು ಅನ್ನವನ್ನು ಗೆಲ್ಲುವಂತೆ ಮಾಡಿರಿ; ವಿ ಮುಚ್ಯಧ್ವಮ್ =[ಈಗ ಬಂಧನ ದಿಂದ] ಬಿಡುಗಡೆ ಹೊಂದಿರಿ.

---

ಎಲೈ ರಥಗಳೇ ! 'ಇಂದ್ರಸ್ಯ ವಜ್ರೋಽಸಿ' ಮೊದಲಾಗಿ ಇಂದ್ರಪ್ರಾರ್ಥನಾ ಪೂರ್ವಕವಾಗಿ ನೀವು ಕೈಗೊಂಡ ಪ್ರತಿಜ್ಞೆಯು ಈಗ ಆಜಿಧಾವನವನ್ನು ಪೂರ್ಣಗೊಳಿಸಿದು ದರಿಂದ ಸತ್ಯವಾಯಿತು.

---

* ಭಟ್ಟಭಾಸ್ಕರರು 'ಇಯಂ ವಃ ...... ವಿ ಮುಚ್ಯಧ್ವಮ್।' ಎಂಬಲ್ಲಿಯವರೆಗೆ ಒಂದೇ ಮಂತ್ರವೆಂದು ದುಂದುಭಿವಿಮೋಚನದಲ್ಲಿ ವಿನಿಯೋಗಿಸಿ ವ್ಯಾಖ್ಯಾನಿಸಿರುತ್ತಾರೆ. ಆಗ ಮಂತ್ರದಲ್ಲಿ 'ವಃ =[ದುಂದುಭಿಗಳಾದ] ನಿಮ್ಮ' ಎಂದು ಅರ್ಥ ಮಾಡಬೇಕು.

ವನಸ್ಪತಿವಿಕಾರಗಳಾದ ಎಲೈ ನಗಾರಿಗಳೇ! ನಿಮ್ಮ ಶಬ್ದದ ಪ್ರೋತ್ಸಾಹದಿಂದ ಯಜಮಾನನು/ ಇಂದ್ರನು ಅನ್ನವನ್ನು ಗೆಲ್ಲುವಂತೆ ಮಾಡಿದಿರಿ. ಈಗ ವಿಶ್ರಾಂತಿ ಪಡೆಯಿರಿ.

## ವಿನಿಯೋಗ ಸಂಗ್ರಹ

[1]ದೇವಾಽಽರೋಹೇದ್ರಥಂ ಸ್ವಾಮೀ ಬ್ರಹ್ಮಾರೋಹಣಮಂತ್ರಣಮ್ ।
[2]ದೇವೇತೀಂದ್ರಾ[3] ದುಂದುಭೀನಾಂ ಘೋಷೋಽಶ್ವಾಜ[4] ಕಶಾಗ್ರಹಃ ॥
ಅರ್ವಾಸೀತಿ[5-7]ತ್ರಿಭಿರ್ಮಂತ್ರೈರ್ಯುನಕ್ತ್ಯಶ್ವತ್ರಯಂ ರಥೇ ।
[8-11]ವಾಜೀತ್ಯೇತೈರ್ಮಂತ್ರಯೇತ ಚತುರ್ಭಿರ್ಧಾವತೋ ರಥಾನ್ ॥
[12-15]ಮಿತೇತ್ಯಾಭಿಶ್ಚತಸೃಭಿಸ್ತಾನ್ಪ್ರತ್ಯಾಧಾವತೋ ರಥಾನ್ ।
[16] ಆ ಮಾ ರಥವಿಮುಕ್ತ್ಯಾಖ್ಯಂ ಜುಹುಯಾದ್ವಾಜಿನದ್ವಯಾತ್ [17-18] ॥
ಗತೇಃ ಪುರೋಪರಿಷ್ಟಾಚ್ಚ 'ಘ್ರಾಪಯೇಚ್ಚರುಮಶ್ವಕಾನ್ ।
ಬೃಹಾದಿಜಿಘ್ರುತೇತ್ಯಂತೋ ದ್ವಿತೀಯೇಽಪ್ಯನುಷಜ್ಯತೇ ॥
[19]ಬೃಹೇತಿ ಮಾರ್ಷ್ಟಿ ಘೋಣಾಯಾಮಿಯಂ[20]ತು ರಥಮಂತ್ರಣಮ್ ।
[21]ಅಜೀ ದುಂದುಭಿಮಂತ್ರಃ ಸ್ಯಾದೇಕವಿಂಶತಿರೀರಿತಾಃ ॥

ಅನುವಾಕದಲ್ಲಿರುವ ಮಂತ್ರಸಂಖ್ಯೆ — ಆಪಸ್ತಂಬ - 21
ಬೌಧಾಯನ - 20

## ಅನುವಾಕದ ವಿಶೇಷ ವಿಷಯಗಳು

### ಅ) ಮೀಮಾಂಸಾ

೧) 'ಯಜುರ್ಯುಕ್ತಂ......' ಎಂಬಲ್ಲಿ ದಕ್ಷಿಣಾಬಾಧವೇ? ನಿಯಮವೇ?

[ಜೈ.ಸೂ. 10-3]

ವಾಜಪೇಯದಲ್ಲಿ 'ಯಜುರ್ಯುಕ್ತಂ ರಥಮಧ್ವರ್ಯವೇ ದದಾತಿ' ಎಂದು ಹೇಳಿದೆ. 'ಸಪ್ತದಶ ಸಪ್ತದಶ ದೀಯಂತೇ' ಎಂದು ಅತಿದೇಶಪ್ರಾಪ್ತವಾದ ದಕ್ಷಿಣಾದ್ರವ್ಯಗಳನ್ನು ಹದಿನೇಳು ಸಂಖ್ಯೆಯಲ್ಲಿ ಕೊಡಬೇಕೆಂದು ವಿಶೇಷವಾಗಿ ಹೇಳಿದೆ. 'ಇಂದ್ರಸ್ಯ ವಜ್ರೋಽಸಿ' ಮೊದಲಾದ ಮಂತ್ರಗಳಿಂದ ಯಜಮಾನಾರೋಹಣಕ್ಕಾಗಿ ಸಜ್ಜುಗೊಳಿಸಿದ

ರಥವೇ ಯಜುರ್ಯುಕ್ತರಥ. ಈ ಯಜುರ್ಯುಕ್ತರಥವನ್ನು ನೀಡುವಾಗ ಇತರ ದಕ್ಷಿಣಾಬಾಧವೇ? ದಕ್ಷಿಣಾನಿಯಮವೇ? ಎಂದು **ಸಂಶಯ.**

'ಪ್ರಾಕಾಶಾವಧ್ವರ್ಯವೇ ದದಾತಿ' ಎಂಬಲ್ಲಿ ಹೇಳಿರುವಂತೆ 'ಯಜುರ್ಯುಕ್ತಂ ರಥಮಧ್ವರ್ಯವೇ ದದಾತಿ' ಎಂದು ಹೇಳಿರುವುದರಿಂದ ಅಧ್ವರ್ಯುವಿಗೆ ಬೇರೆ ದಕ್ಷಿಣೆಯಿಲ್ಲ. ದಕ್ಷಿಣಾಬಾಧ ಎಂದು **ಪೂರ್ವಪಕ್ಷ.**

'ಪ್ರಾಕಾಪಶಾವಧ್ವರ್ಯವೇ ದದಾತಿ' ಎಂಬಲ್ಲಿ ಅತ್ಯಂತಾಪ್ರಾಪ್ತವಾದ ಪ್ರಾಕಾಶ ದಾನವಿಧಿ. ಆದುದರಿಂದ ಉಳಿದ ದಕ್ಷಿಣಾಬಾಧ. ಇಲ್ಲಿ ಹದಿನೇಳು ರಥಗಳಲ್ಲಿ ಐಚ್ಛಿಕ ವಾಗಿಯೂ ಯಜುರ್ಯುಕ್ತರಥದಾನವೂ ಪ್ರಾಪ್ತವಾಗುತ್ತದೆ. ಆದುದರಿಂದ ಅದು ನಿಯಮವಿಧಿ. ಹೀಗಾಗಿ ಉಳಿದ ದಕ್ಷಿಣೆಗಳಲ್ಲಿ ಅಧ್ವರ್ಯುವಿಗೆ ಭಾಗವುಂಟು. ಇದು ಇಲ್ಲಿನ **ಸಿದ್ಧಾಂತ.**

೨) 'ಚತುರೋ ಮುಷ್ಟೀನ್...' ಎಂಬಲ್ಲಿ ಯಾವುದಕ್ಕೆ ಬಾಧ?

[ಜೈ.ಸೂ. 10-2.]

'ಚತುರೋ ಮುಷ್ಟೀನ್ ನಿರ್ವಪತಿ' ಎಂದು ಪ್ರಕೃತಿಯಲ್ಲಿ ನಾಲ್ಕು ಮುಷ್ಟಿಯಷ್ಟು ನಿರ್ವಾಪ ಮಾಡಬೇಕೆಂದು ಅರ್ಥ. ವಾಜಪೇಯದಲ್ಲಿ 'ಸಪ್ತದಶಶರಾವೋ ಭವತಿ' ಎಂದಿದೆ. ಹದಿನೇಳು ಶರಾವ [ಪಾತ್ರೆ]ಗಳಷ್ಟು ನಿರ್ವಾಪ ಮಾಡಬೇಕು ಎಂದರ್ಥ. ಇಲ್ಲಿ ನಾಲ್ಕು ಮುಷ್ಟಿಗಳಿಂದ ಸಪ್ತದಶಶರಾವಪರಿಮಿತಚರುವನ್ನು ಮಾಡಲು ಸಾಧ್ಯವಿಲ್ಲ. ಆದುದರಿಂದ 'ಚತುರಃ' ಎಂಬ ಸಂಖ್ಯೆಗೆ ಬಾಧವೇ? 'ಮುಷ್ಟೀನ್' ಎಂಬುದಕ್ಕೆ ಬಾಧವೇ ಎಂದು **ಸಂಶಯ.**

ಪ್ರಕೃತಿಯಿಂದ ಪ್ರಾಪ್ತವಾದ ಎರಡೂ ಇರಲಿ ಎಂಬುದು **ಪ್ರಥಮಪಕ್ಷ.** ಸಪ್ತದಶಶರಾವದಷ್ಟು ಚರುವಾಗಲಾರದ್ದರಿಂದ ಈ ಪಕ್ಷ ಸರಿಯಲ್ಲ. ಎರಡಕ್ಕೂ ಬಾಧ ಇರಲಿ ಎಂಬುದು ಎರಡನೆಯ **ಪಕ್ಷ.** ಎರಡರಲ್ಲಿ ಒಂದಕ್ಕೆ ಬಾಧ ಬಂದರೂ ಸಪ್ತದಶಶರಾವದಷ್ಟು ಚರುವನ್ನು ಮಾಡಬಹುದಾದುದರಿಂದ ಎರಡಕ್ಕೂ ಬಾಧ ಗೌರವ. ಎರಡರಲ್ಲಿ ಒಂದಕ್ಕೆ ಬಾಧ ಇರಲಿ ಎಂಬುದು ಮೂರನೆಯ **ಪಕ್ಷ.** ಇವು ಇಲ್ಲಿನ **ಪೂರ್ವಪಕ್ಷಗಳು.**

ಹೀಗಿರುವಾಗ ಆ ಒಂದು ಯಾವುದು ಎಂದು ವಿಚಾರ ಮಾಡಿ ಪ್ರಥಮಶ್ರುತವಾದ 'ಚತುರಃ' ಎಂಬುದಿರಲಿ. ಅನಂತರ ಶ್ರುತವಾದ 'ಮುಷ್ಟೀನ್' ಎಂಬುದಕ್ಕೆ ಬಾಧವೇ ಉಚಿತ. ಹೀಗಾಗಿ ನಾಲ್ಕು ಪಾತ್ರೆಗಳಿಂದ ಸಪ್ತದಶಶರಾವಚರುವಿಗೆ ಬೇಕಾದಷ್ಟು ಧಾನ್ಯವನ್ನು ನಿರ್ವಾಪ ಮಾಡಬೇಕು. ಇದು ಇಲ್ಲಿನ **ಸಿದ್ಧಾಂತ.**

## ಆ) ಛಂದಸ್ಸು

| | | |
|---|---|---|
| ೧) | ಅಶ್ವಾಜನಿ.... ವಾಜಯ । | ಗಾಯತ್ರೀ |
| ೨) | ವಾಜಿನೋ..... ಜಯತ । | ದ್ವಿಪದಾ ಗಾಯತ್ರೀ |
| ೩) | ವಿ ಯೋಜನಾ.... ಗಚ್ಛತ । | ತ್ರಿಪದಾಪ್ರತಿಷ್ಠಾ/ಕಕುದ್ಮತೀ/ ಶಂಕುಮತೀ |
| ೪) | ವಾಜೇವಾಜೇಽವತ..... ದೇವಯಾನೈ: । | ತ್ರಿಷ್ಟುಪ್ |
| ೫) | ತೇ ನೋ...... ವಾಜಿನ: ॥ | ದ್ವಿಪದಾ ವಿರಾಟ್ |
| ೬) | ಮಿತದ್ರವ: ..... ಹವೇಷು । | ಆಸ್ತಾರಪಂಕ್ತಿ: / ಪರೋಷ್ಣಿಕ್ |
| ೭) | ದೇವತಾತಾ..... ಅಮೀವಾ: ॥ | ತ್ರಿಪದಾ ತ್ರಿಷ್ಟುಪ್ |
| ೮) | ಏಷ ಸ್ಯ.... ಆಪನೀಫಣತ್ । | ಜಗತೀ |
| ೯) | ಉತ...... ತರಿತ್ರತ: । | ತ್ರಿಷ್ಟುಪ್ |
| ೧೦) | ಆ ಮಾ..... ಗಮ್ಯಾತ್ । | ತ್ರಿಷ್ಟುಪ್ |

★ ★ ★

# ॥ ನವಮೋಽನುವಾಕಃ ॥

## ಕ್ಷತ್ರಸ್ಯೋಲ್ಬಮಸಿ ಕ್ಷತ್ರಸ್ಯ ಯೋನಿರಸಿ

---

ಕ್ಷತ್ರಸ್ಯ । ಉಲ್ಬಮ್ । ಅಸಿ । ಕ್ಷತ್ರಸ್ಯ । ಯೋನಿಃ । ಅಸಿ ।

---

ಅಷ್ಟಮಾನುವಾಕದಲ್ಲಿ ರಥಧಾವನಮಂತ್ರಗಳು ಹೇಳಲ್ಪಟ್ಟವು. ಈ ನವಮಾನುವಾಕದಲ್ಲಿ ಯೂಪಾರೋಹಣವು ಹೇಳಲ್ಪಟ್ಟಿದೆ.

---

| ಮಂತ್ರ | ವಿನಿಯೋಗ |
|---|---|
| ಕ್ಷತ್ರಸ್ಯ..... ಯೋನಿರಸಿ । | ವಸ್ತ್ರಪರಿಧಾಪನಕ್ಕಾಗಿ |



---

ಕ್ಷತ್ರಸ್ಯ = ರಾಜಸ್ಥಾನೀಯನಾದ ಯಜಮಾನನ; ಉಲ್ಬಮ್ = ಗರ್ಭಕ್ಕೆ ಉಲ್ಬವು ಆವರಣವಾಗಿರುವಂತೆ ಆವರಣವಾಗಿ; ಅಸಿ = [ತಾರ್ಪ್ಯವಸ್ತ್ರವಾದ ನೀನು] ಆಗಿದ್ದೀಯೆ; ಕ್ಷತ್ರಸ್ಯ =- ರಾಜಮಹಿಷೀಸ್ಥಾನೀಯಳಾದ ಪತ್ನಿಯ; ಯೋನಿಃ = ದೇಹದ ಶೀತಾತಪ ಪರಿಹಾರಕಾರಣನಾದ ದರ್ಭಮಯ ವಸ್ತ್ರವು; ಅಸಿ = ಆಗಿರುವೆ.

---

[ಗರ್ಭವು ದೀಕ್ಷಿತನೆಂದೂ ಯಜ್ಞದಲ್ಲಿ ಧರಿಸುವ ವಸ್ತ್ರವು ಗರ್ಭಾವರಣವೆಂದೂ ಬೇರೊಂದೆಡೆಯಲ್ಲಿದೆ.] ಓ ಘೃತಾಕ್ತವಸ್ತ್ರವೇ! ನೀನು ರಾಜಸ್ಥಾನೀಯನಾದ ಯಜಮಾನನ ಆವರಣವಾಗಿದ್ದೀಯೆ. ಓ! ದರ್ಭಮಯವಾದ ವಸ್ತ್ರವೇ! ನೀನು ರಾಜಮಹಷೀಸ್ಥಾನೀಯಳಾದ ಯಜಮಾನಪತ್ನಿಯ ಶೀತಾತಪಗಳನ್ನು ಪರಿಹರಿಸುವ ಕಾರಣಭೂತವಾಗಿದ್ದೀಯೆ.

ತಾರ್ಪ್ಯವೆಂದರೆ ನಾರುಮಡಿಯೆಂದೂ ಹೇಳಬಹುದು. ಕ್ಷತ್ರಶಬ್ದಕ್ಕೆ ಶರೀರರೂಪವಾದ ಧನವೆಂದೂ, ದರ್ಭವು ಯಾಗಸಾಧನವಾಗಿ, ಧನಸಾಧನವಾಗುವುದೆಂದೂ ಭಟ್ಟಭಾಸ್ಕರಮತ.

**ಜಾಯ ಏಹಿ ಸುವೋ ರೋಹಾವ ರೋಹಾವ ಹಿ ಸುವರಹಂ ನಾವುಭಯೋಃ ಸುವೋ ರೋಕ್ಷ್ಯಾಮಿ ವಾಜಶ್ಚ ಪ್ರಸವಶ್ಚಾ-ಪಿಜಶ್ಚ ಕ್ರತುಶ್ಚ ಸುವಶ್ಚ ಮೂರ್ಧಾ ಚ**

---

ಜಾಯೇ । ಏತಿ । ಇಹಿ । ಸುವಃ । ರೋಹಾವ । ರೋಹಾವ । ಹಿ । ಸುವಃ । ಅಹಮ್। ನೌ । ಉಭಯೋಃ । ಸುವಃ । ರೋಕ್ಷ್ಯಾಮಿ । ವಾಜಃ । ಚ । ಪ್ರಸವ ಇತಿ ಪ್ರ-ಸವಃ । ಚ । ಅಪಿಜ ಇತ್ಯಪಿ-ಜಃ । ಚ । ಕ್ರತುಃ । ಚ । ಸುವಃ । ಚ । ಮೂರ್ಧಾ । ಚ ।

---

| ಮಂತ್ರ | ವಿನಿಯೋಗ |
|---|---|
| ಜಾಯ ಏಹಿ...... ರೋಕ್ಷ್ಯಾಮಿ | ಯಜಮಾನದಂಪತಿಗಳ ಸಂವಾದ |

---

✣ **ಜಾಯೇ!** = ಪತ್ನಿಯೇ! **ಏಹಿ** = ಬಾ; **ಸುವಃ** = ಸ್ವರ್ಗವನ್ನು; **ರೋಹಾವ** = ಏರೋಣ; [ಎಂದು ಯಜಮಾನನು ಪತ್ನಿಗೆ ಹೇಳುತ್ತಾನೆ.] **ರೋಹಾವ ಹಿ ಸುವಃ** = ಸ್ವರ್ಗವನ್ನು ಏರೋಣವಷ್ಟೆ [ಎಂದು ಪತ್ನಿಯು ಹೇಳುತ್ತಾಳೆ.] **ಅಹಮ್** = ನಾನು; **ನೌ ಉಭಯೋಃ** = ನಮ್ಮಿಬ್ಬರ ನಿಮಿತ್ತವಾಗಿ; **ಸುವಃ** = ಸ್ವರ್ಗವನ್ನು; **ರೋಕ್ಷ್ಯಾಮಿ** = ಏರುವೆನು; [ಎಂದು ಯಜಮಾನನು ಹೇಳುತ್ತಾನೆ.] ✣ **ವಾಜಃ ಚ** = ಅನ್ನವೂ; **ಪ್ರಸವಃ ಚ** = ಅನ್ನೋತ್ಪತ್ತಿಯೂ; **ಅಪಿಜಃ ಚ** = ಅನ್ನದ ಪುನಃ ಪುನರುತ್ಪತ್ತಿಯೂ; **ಕ್ರತುಃ ಚ** = ಭೋಗಾದಿಸಂಕಲ್ಪವೂ / ಯಾಗವೂ; **ಸುವಃ ಚ** = ಸ್ವರ್ಗವೂ; **ಮೂರ್ಧಾ ಚ** = ಹಗಲೂ;

---

'ಪತ್ನಿಯೇ! ಬಾ, ಸ್ವರ್ಗವನ್ನು ಏರೋಣ' ಎಂದು ಯಜಮಾನನು ಹೇಳುತ್ತಾನೆ. 'ಸ್ವರ್ಗಕ್ಕೆ ಏರೋಣವಷ್ಟೆ' ಎಂದು ಪತ್ನಿಯು ಉತ್ತರಿಸುತ್ತಾಳೆ. 'ನಮ್ಮಿಬ್ಬರ ನಿಮಿತ್ತವಾಗಿ ನಾನು ಸ್ವರ್ಗವನ್ನು ಏರುತ್ತೇನೆ' ಎಂದು ಯಜಮಾನನು ಹೇಳುತ್ತಾನೆ. ಯೂಪಾರೋಹಣವೇ ಸ್ವರ್ಗಾರೋಹಣ. ಯಾಗದಿಂದ ಸ್ವರ್ಗವು ದೊರಕುವುದಷ್ಟೆ.

ವ್ಯಶ್ನಿಯಶ್ಚಾಂತ್ಯಾಯನಶ್ಚಾಂತ್ಯಶ್ಚ ಭೌವನಶ್ಚ ಭುವನಶ್ಚಾಧಿ-ಪತಿಶ್ಚ । ಆಯುರ್ಯಜ್ಞೇನ ಕಲ್ಪತಾಂ ಪ್ರಾಣೋ ಯಜ್ಞೇನ ಕಲ್ಪತಾಮಪಾನೋ [....ಕಲ್ಪತಾಮಪಾನಃ(೧)]

---

ವ್ಯಶ್ನಿಯ ಇತಿ ವಿ-ಅಶ್ನಿಯಃ । ಚ । ಆಂತ್ಯಾಯನಃ । ಚ । ಅಂತ್ಯಃ । ಚ । ಭೌವನಃ । ಚ । ಭುವನಃ । ಚ । ಅಧಿಪತಿರಿತ್ಯಧಿ-ಪತಿಃ । ಚ । ಆಯುಃ । ಯಜ್ಞೇನ । ಕಲ್ಪತಾಮ್। ಪ್ರಾಣ ಇತಿ ಪ್ರ-ಅನಃ । ಯಜ್ಞೇನ । ಕಲ್ಪತಾಮ್ । ಅಪಾನ ಇತ್ಯಪ-ಅನಃ ।

---

| ಮಂತ್ರ | ವಿನಿಯೋಗ |
|---|---|
| ವಾಜಶ್ಚ..... ಅಧಿಪತಿಶ್ಚ । | ಈ ಹನ್ನೆರಡು ಮಂತ್ರಗಳು ವಾಜಪ್ರಸವೀಯಹೋಮಕ್ಕಾಗಿ |
| ಆಯುಃ..... ಕಲ್ಪತಾಮ್ । | ಹತ್ತು ಮಂತ್ರಗಳು ಯೂಪಾರೋಹಣಕ್ಕಾಗಿ |

---

ವ್ಯಶ್ನಿಯಃ ಚ = ರಾತ್ರಿಯೂ; ಆಂತ್ಯಾಯನಃ ಚ = ಮಾಸವೂ; ಭೌವನಃ ಚ = ಪ್ರಜಾಪತಿಯೂ; ಭುವನಃ ಚ = ವಿಶ್ವಕರ್ತನಾದ ಬ್ರಹ್ಮನೂ; ಅಧಿಪತಿಶ್ಚ= ಸರ್ವಾಧಿಪತಿಯಾದ ಪರಮಾತ್ಮನೂ; [ನನಗೆ ಹಿತಕರರಾಗಿರಲಿ.] [ಚೈತ್ರಾದಿ ಹನ್ನೆರಡು ಮಾಸಾಧಿಪತಿಗಳು ನನಗೆ ಸುಪ್ರೀತರಾಗಲಿ.] ✢ ಆಯುಃ = ಜೀವನವು/ಜೀವನಸಾಧನವಾದ ಅನ್ನವು; ಯಜ್ಞೇನ = ಯಜ್ಞಸಂಬಂಧಿಯಾದ ಯೂಪಾರೋಹಣದಿಂದ; ಕಲ್ಪತಾಮ್ = [ತನ್ನ ಕಾರ್ಯದಲ್ಲಿ] ಸಮರ್ಥವಾಗಲಿ; ಪ್ರಾಣಃ = ಪ್ರಾಣವೂ; ಯಜ್ಞೇನ ಕಲ್ಪತಾಮ್ = ಯಜ್ಞದಿಂದ ಕಾರ್ಯಸಮರ್ಥವಾಗಲಿ; ಅಪಾನಃ = ಅಪಾನವಾಯುವು;

---

ಅನ್ನ, ಅನ್ನೋತ್ಪತ್ತಿ, ಅನ್ನದ ಪುನಃ ಪುನಃ ಉತ್ಪತ್ತಿ, ಭೋಗಾದಿಸಂಕಲ್ಪ ಅಥವಾ ಯಜ್ಞ, ಸ್ವರ್ಗ, ಹಗಲು, ರಾತ್ರಿ, ಮಾಸ, ಅಯನ ಅಥವಾ ಸಂವತ್ಸರ, ಪ್ರಜಾಪತಿ, ಬ್ರಹ್ಮ, ಸರ್ವಾಧಿಪನಾದ ಪರಮಾತ್ಮ ಇವರೆಲ್ಲರೂ ಸುಖಕರರಾಗಿರಲಿ. ಚೈತ್ರಾದಿ ದ್ವಾದಶಮಾಸ ದೇವತೆಗಳೂ ನನ್ನ ವಿಷಯದಲ್ಲಿ ಸುಪ್ರೀತರಾಗಲಿ.

**ಯಜ್ಞೇನ ಕಲ್ಪತಾಂ ವ್ಯಾನೋ ಯಜ್ಞೇನ ಕಲ್ಪತಾಂ ಚಕ್ಷುರ್ಯಜ್ಞೇನ ಕಲ್ಪತಾಗ್ಂ ಶ್ರೋತ್ರಂ ಯಜ್ಞೇನ ಕಲ್ಪತಾಂ ಮನೋ ಯಜ್ಞೇನ ಕಲ್ಪತಾಂ ವಾಗ್ಯಜ್ಞೇನ ಕಲ್ಪತಾಮಾತ್ಮಾ ಯಜ್ಞೇನ ಕಲ್ಪತಾಂ ಯಜ್ಞೋ ಯಜ್ಞೇನ ಕಲ್ಪತಾಗ್ಂ**

---

ಯಜ್ಞೇನ । ಕಲ್ಪತಾಮ್ । ವ್ಯಾನ ಇತಿ ವಿ-ಅನಃ । ಯಜ್ಞೇನ । ಕಲ್ಪತಾಮ್ । ಚಕ್ಷುಃ । ಯಜ್ಞೇನ । ಕಲ್ಪತಾಮ್ । ಶ್ರೋತ್ರಮ್ । ಯಜ್ಞೇನ । ಕಲ್ಪತಾಮ್ । ಮನಃ । ಯಜ್ಞೇನ ಕಲ್ಪತಾಮ್ । ವಾಕ್ । ಯಜ್ಞೇನ । ಕಲ್ಪತಾಮ್ । ಆತ್ಮಾ । ಯಜ್ಞೇನ । ಕಲ್ಪತಾಮ್। ಯಜ್ಞಃ । ಯಜ್ಞೇನ । ಕಲ್ಪತಾಮ್ ।

---

ಯಜ್ಞೇನ ಕಲ್ಪತಾಮ್ = ಯಜ್ಞಪ್ರಭಾವದಿಂದ ಕಾರ್ಯದಕ್ಷವಾಗಲಿ; ವ್ಯಾನಃ = ವ್ಯಾನವಾಯುವು; ಯಜ್ಞೇನ ಕಲ್ಪತಾಮ್ = ಯಜ್ಞಫಲವಾಗಿ ಕಾರ್ಯಸಮರ್ಥವಾಗಲಿ; ಚಕ್ಷುಃ ಯಜ್ಞೇನ ಕಲ್ಪತಾಮ್ = ಕಣ್ಣು ಯಜ್ಞದೇವತೆಯ ಅನುಗ್ರಹದಿಂದ ತನ್ನ ಕೆಲಸದಲ್ಲಿ ಸಮರ್ಥವಾಗಲಿ; ಶ್ರೋತ್ರಂ ಯಜ್ಞೇನ ಕಲ್ಪತಾಮ್ = ಕಿವಿಯೂ ಯಜ್ಞಸಂಬಂಧಿಯಾದ ಯೂಪಾರೋಹಣದಿಂದ ಕಾರ್ಯಸಮರ್ಥವಾಗಲಿ; ಮನಃ ಯಜ್ಞೇನ ಕಲ್ಪತಾಮ್ = ಮನಸ್ಸೂ ಯಜ್ಞದ ಅನುಗ್ರಹದಿಂದ ಸ್ವಕಾರ್ಯಶಕ್ತವಾಗಲಿ; ವಾಕ್ ಯಜ್ಞೇನ ಕಲ್ಪತಾಮ್ = ಮಾತೂ ಯಜ್ಞದ ಫಲವಾಗಿ ಸ್ವಕಾರ್ಯದಲ್ಲಿ ಸಮರ್ಥವಾಗಲಿ; ಆತ್ಮಾ ಯಜ್ಞೇನ ಕಲ್ಪತಾಮ್ = ಜೀವನೂ ಯಜ್ಞದೇವತಾನುಗ್ರಹದಿಂದ ತನ್ನ ಕಾರ್ಯದಲ್ಲಿ ಶಕ್ತನಾಗಲಿ; ಯಜ್ಞಃ ಯಜ್ಞೇನ ಕಲ್ಪತಾಮ್ = ಯಜ್ಞವೂ ಯಾಗದೇವತಾಪ್ರಸಾದದಿಂದ ಅವಿಚ್ಛಿನ್ನವಾಗಿ ನಡೆಯುವಂತಾಗಲಿ.

---

ಯಜಮಾನನು ಈ ಹತ್ತು ಮಂತ್ರಗಳಿಂದ ಯೂಪಾರೋಹಣ ಮಾಡುತ್ತಾನೆ. ಅದರ ಫಲವಾಗಿ ಆಯುಸ್ಸು, ಪ್ರಾಣ, ಅಪಾನ, ವ್ಯಾನ, ಕಣ್ಣು, ಕಿವಿ, ಮನಸ್ಸು, ಮಾತು ಮತ್ತು ಜೀವ ಇವೆಲ್ಲವೂ ತಮ್ಮ ತಮ್ಮ ಕಾರ್ಯಗಳಲ್ಲಿ ಸಮರ್ಥವಾಗಲಿ. ಯಜ್ಞಗಳು

**ಸುವರ್ದೇವಾಗ್ಂ ಅಗನ್ಮಾಮೃತಾ ಅಭೂಮ ಪ್ರಜಾಪತೇಃ ಪ್ರಜಾ ಅಭೂಮ ಸಮಹಂ ಪ್ರಜಯಾ ಸಂ ಮಯಾ ಪ್ರಜಾ ಸಮಹಗ್ಂ ರಾಯಸ್ಪೋಷೇಣ ಸಂ ಮಯಾ**

---

**ಸುವಃ** । ದೇವಾನ್ । ಅಗನ್ಮ । ಅಮೃತಾಃ । ಅಭೂಮ । ಪ್ರಜಾಪತೇರಿತಿ ಪ್ರಜಾ-ಪತೇಃ। ಪ್ರಜಾ ಇತಿ ಪ್ರ-ಜಾಃ। ಅಭೂಮ । **ಸಮಿತಿ** । ಅಹಮ್ । ಪ್ರಜಯೇತಿ ಪ್ರ-ಜಯಾ । ಸಮಿತಿ । ಮಯಾ । ಪ್ರಜೇತಿ ಪ್ರ-ಜಾ । ಸಮಿತಿ । ಅಹಮ್ । ರಾಯಃ । ಪೋಷೇಣ। ಸಮಿತಿ । ಮಯಾ।

---

| ಮಂತ್ರ | ವಿನಿಯೋಗ |
|---|---|
| ಸುವಃ... ಪ್ರಜಾ ಅಭೂಮ । | ತೋಳುಗಳನ್ನು ಮೇಲಕ್ಕೆತ್ತಿ ಯಜಮಾನನು ಹೇಳಲು |
| ಸಮಹಂ... ರಾಯಸ್ಪೋಷಃ । | ಯೂಪದ ಮೇಲಿರುವ ಯಜಮಾನನು ಕೆಳಗೆ ಇರುವ ಈ ಲೋಕವನ್ನು ನೋಡುತ್ತಾ ಹೇಳಲು |

---

✣ [ವಯಮ್ =ನಾವು] **ಸುವಃ** = ಸ್ವರ್ಗವನ್ನೂ; **ದೇವಾನ್** = [ಸ್ವರ್ಗದಲ್ಲಿರುವ] ದೇವತೆಗಳನ್ನೂ; **ಅಗನ್ಮ** = ಹೊಂದಿದೆವು*; **ಅಮೃತಾಃ ಅಭೂಮ** = ಅಮರರಾದ ದೇವತೆಗಳೇ ಆದೆವು; **ಪ್ರಜಾಪತೇಃ** = ಪ್ರಜಾಪತಿದೇವನಿಗೆ; **ಪ್ರಜಾಃ** = ಪ್ರೀತಿಪಾತ್ರರಾದ ಪ್ರಜೆಗಳಾಗಿ/ಯಜ್ಞಾನುಷ್ಠಾನತತ್ಪರರಾದ ಪ್ರಜೆಗಳಾಗಿ; **ಅಭೂಮ** = ಆದೆವು; ✣ **ಅಹಮ್** = ನಾನು; **ಪ್ರಜಯಾ** = ಪ್ರಜೆಯಿಂದ; **ಸಮ್** [ಗತೋಽಸ್ಮಿ] = ಕೂಡಿಕೊಂಡವ ನಾಗಿದ್ದೇನೆ; **ಪ್ರಜಾ** = ಪ್ರಜೆಯು; **ಮಯಾ** = ನನ್ನೊಡನೆ; **ಸಮ್** [ಗಚ್ಛತಾಮ್] = ಸೇರಿಕೊಂಡಿರಲಿ; **ಅಹಮ್** = ನಾನು; **ರಾಯಃ ಪೋಷೇಣ** = ಧನಸಮೃದ್ಧಿಯಿಂದ **ಸಮ್** [ಗತೋಽಸ್ಮಿ] = ಯುಕ್ತನಾಗಿರುವೆನು;

---

ಅವಿಚ್ಛಿನ್ನವಾಗಿ ನಡೆಯುವಂತಾಗಲಿ. ಇದರ ಫಲವಾಗಿ ಸ್ವರ್ಗವನ್ನು ಪಡೆಯು ವಂತಾಗಲಿ.

ಎರಡು ತೋಳುಗಳನ್ನೂ ಮೇಲೆತ್ತಿ ಯಜಮಾನನು ಹೇಳುತ್ತಾನೆ. 'ನಾನು ಈಗ ದೇವಲೋಕವನ್ನೂ, ಅಲ್ಲಿರುವ ದೇವತೆಗಳನ್ನೂ ಹೊಂದಿದವನಾಗಿದ್ದೇನೆ. ಅಮರನಾದ

---

* ಏಕವಚನದ ಅರ್ಥದಲ್ಲಿ ಬಹುವಚನವಿದೆ.

# ರಾಯಸ್ಪೋಽಷೋಽಸ್ನಾಯ ತ್ವಾನ್ನಾದ್ಯಾಯ ತ್ವಾ ವಾಜಾಯ ತ್ವಾ ವಾಜಜಿತ್ಯಾಯೈ

---

ರಾಯಃ । ಪೋಷಃ । ಅನ್ನಾಯ । ತ್ವಾ । ಅನ್ನಾದ್ಯಾಯೇತ್ಯನ್ನ-ಅದ್ಯಾಯ । ತ್ವಾ । ವಾಜಾಯ । ತ್ವಾ । ವಾಜಜಿತ್ಯಾಯಾ ಇತಿ ವಾಜ-ಜಿತ್ಯಾಯೈ ।

---

| ಮಂತ್ರ | ವಿನಿಯೋಗ |
|---|---|
| ಅನ್ನಾಯ... ಜಿತ್ಯಾಯೈ ತ್ವಾ । | ಯೂಪದಿಂದ ಇಳಿಯುತ್ತಿರುವ ಯಜಮಾನನನ್ನು ಋತ್ವಿಜರು ಆಸಪುಟಗಳಿಂದ ಹೊಡೆಯಲು |

---

ರಾಯಃ ಪೋಷಃ = ಧನಸಂಪತ್ತಿಯು; ಮಯಾ = ನನ್ನೊಡನೆ; ಸಮ್ [ಗಚ್ಛತಾಮ್] = ಸೇರಿಕೊಂಡಿರಲಿ; ÷ [ಓ ಯಜಮಾನನೇ!] ತ್ವಾ = ನಿನ್ನನ್ನು; ಅನ್ನಾಯ = ಪ್ರಾಣಿ ಸಾಮಾನ್ಯಾನ್ನಸಮೃದ್ಧಿಗಾಗಿ [ಹೊಡೆಯುತ್ತೇನೆ]; [ಎಲೈ! ಯಜಮಾನನೇ!] ತ್ವಾ = ನಿನ್ನನ್ನು; ಅನ್ನಾದ್ಯಾಯ = [ಮಂತ್ರಗಳೇ ಮೊದಲಾದವರು ಭುಜಿಸುವ] ಉತ್ತಮಾನ್ನಕ್ಕಾಗಿ [ಹೊಡೆಯುತ್ತೇನೆ.]; [ಎಲೈ! ಯಜಮಾನನೇ!] ತ್ವಾ = ನಿನ್ನನ್ನು; ವಾಜಾಯ = [ಅಪೂಪಾದಿವಿಶೇಷಯುಕ್ತವಾದ] ಅನ್ನಸಮೃದ್ಧಿಗಾಗಿ[ಹೊಡೆಯುತ್ತೇನೆ.]; [ಓ! ಯಜಮಾನನೇ!] ತ್ವಾ = ನಿನ್ನನ್ನು; ವಾಜಜಿತ್ಯಾಯೈ = ಸರ್ವವಿಧ ಅನ್ನಪ್ರಾಪ್ತಿಗಾಗಿ [ಹೊಡೆಯುತ್ತೇನೆ].

---

ದೇವನಾಗಿದ್ದೇನೆ. ಪ್ರಜಾಪತಿದೇವನಿಗೆ ಪ್ರೀತಿಪಾತ್ರನಾದ ಕರ್ಮಾನುಷ್ಠಾನ ತತ್ಪರನಾದ ಪ್ರಜೆಯೂ ಆಗಿರುತ್ತೇನೆ.

ನಾನು ಅಪತ್ಯಾದಿಗಳಿಂದ ಯುಕ್ತನಾಗಿದ್ದೇನೆ. ಪ್ರಜೆಗಳು ನನ್ನೊಡನೆ ಸೇರಲಿ. ನಾನು ಧನಸಮೃದ್ಧಿಯನ್ನು ಹೊಂದಿರುತ್ತೇನೆ. ಧನಸಮೃದ್ಧಿಯೂ ನನ್ನೊಡನೆ ಯುಕ್ತವಾಗಿರಲಿ.

ಯೂಪದಿಂದ ಇಳಿಯುತ್ತಿರುವ ಯಜಮಾನನನ್ನು ಪೂರ್ವಾದಿಕ್ರಮವಾಗಿ ಅಧ್ವರ್ಯು, ಬ್ರಹ್ಮ, ಹೋತೃ ಮತ್ತು ಉದ್ಗಾತೃ—ಇವರುಗಳು *ಆಸಪುಟದಿಂದ ಹೊಡೆಯುತ್ತಾರೆ. ಇದರಿಂದ ಯಜಮಾನನಿಗೆ ಅನ್ನಾದಿಸಮೃದ್ಧಿಯಾಗುತ್ತದೆ.

---

* ಸುಟ್ಟಭೂಮಿಯ ಮಣ್ಣಿನ ಧೂಳನ್ನು ಅಶ್ವತ್ಥದ ಎಲೆಗಳಲ್ಲಿ ತುಂಬಿ ಮಡಿಚಿ ಮಾಡಿದ ಯಜ್ಞಾರ್ಹವಸ್ತು.

## ತ್ವಾಽಮೃತಮಸಿ ಪುಷ್ಟಿರಸಿ ಪ್ರಜನನಮಸಿ ॥ ೯-39 ॥

[ಅಪಾನೋ ವಾಜಾಯ ನವ ಚ]

---

ತ್ವಾ। ಅಮೃತಮ್ । ಅಸಿ । ಪುಷ್ಟಿಃ । ಅಸಿ । ಪ್ರಜನನಮಿತಿ ಪ್ರ-ಜನನಮ್ । ಅಸಿ ॥೯॥

---

| ಮಂತ್ರ | ವಿನಿಯೋಗ |
|---|---|
| ಅಮೃತಮಸಿ । | ಯಜಮಾನನು ಬಲಗಾಲನ್ನು ಹಿರಣ್ಯದಲ್ಲಿ ಇಡಲು |
| ಪುಷ್ಟಿರಸಿ.... ಅಸಿ । | ಎಡಗಾಲನ್ನು ಆಡಿನ ಚರ್ಮದಲ್ಲಿಡಲು |

---

✣ [ಎಲೈ! ಹಿರಣ್ಯವೇ!ನೀನು] ಅಮೃತಮ್ ಅಸಿ = ನಾಶರಹಿತನಾಗಿದ್ದೀಯೆ; ✣ [ಎಲೈ! ಆಡಿನ ಚರ್ಮವೇ! ನೀನು] ಪುಷ್ಟಿಃ ಅಸಿ = ಪುಷ್ಟಿಸಾಧನವಾಗಿದ್ದೀಯೆ; ಪ್ರಜನನಮ್ ಅಸಿ = ಪ್ರಜೋತ್ಪಾದನಾಸಮರ್ಥನಾಗಿದ್ದೀಯೆ.

---

ಅಧ್ವರ್ಯುವು ಪೂರ್ವದಿಕ್ಕಿನಲ್ಲಿ ಸಾಮಾನ್ಯಾನ್ನಪ್ರಾಪ್ತಿಗಾಗಿ ಹೊಡೆಯುತ್ತೇನೆಂದು ಹೊಡೆಯುತ್ತಾನೆ. ದಕ್ಷಿಣದಿಕ್ಕಿನಲ್ಲಿ ಬ್ರಹ್ಮನು ಅಮಾತ್ಯಾದಿ ಶ್ರೀಮಂತರು ಉಪಯೋಗಿಸುವ ಅನ್ನಪ್ರಾಪ್ತಿಗಾಗಿ ಹೊಡೆಯುತ್ತೇನೆಂದೂ, ಪಶ್ಚಿಮದಲ್ಲಿ ಹೋತೃವು ಅಪೂಪಾದಿ ಭಕ್ಷ್ಯಯುಕ್ತವಾದ ಆಹಾರದ ಪ್ರಾಪ್ತಿಗಾಗಿ ಎಂದೂ, ಉತ್ತರದಲ್ಲಿ ಉದ್ಗಾತೃವು ಸರ್ವವಿಧಾನ್ನಪ್ರಾಪ್ತಿಗಾಗಿ ಹೊಡೆಯುತ್ತೇನೆಂದೂ ಯಜಮಾನನನ್ನು ಹೊಡೆಯುತ್ತಾರೆ. ಇಲ್ಲಿ ಅನ್ನಾದಿಶಬ್ದಗಳು ಸಾಮಾನ್ಯಾರ್ಥವಾಚಿಗಳಾಗಿದ್ದರೂ ಪೌನರುಕ್ತ್ಯವಾಗದಂತೆ ವಿಶೇಷಾರ್ಥವನ್ನು ಹೇಳಿರುತ್ತಾರೆ.

ಅನ್ನ, ಅನ್ನವನ್ನು ತಿನ್ನುವ ಸಾಮರ್ಥ್ಯ, ಸಂಗ್ರಾಮಸಾಮರ್ಥ್ಯ ಮತ್ತು ಸಂಗ್ರಾಮ ಜಯ ಎಂಬ ಅರ್ಥವನ್ನು ಭಟ್ಟಭಾಸ್ಕರರು ವಿವರಿಸಿರುತ್ತಾರೆ.

ಎಲೈ! ಹಿರಣ್ಯವೇ ! ನೀನು ನಾಶರಹಿತನಾಗಿರುವೆ.

ಎಲೈ! ಆಡಿನ ಚರ್ಮವೇ! ನೀನು ಬಲಸಾಧನನಾಗಿ, ಪ್ರಜೋತ್ಪಾದನ ಸಮರ್ಥನಾಗಿರುವೆ.

## ವಿನಿಯೋಗಸಂಗ್ರಹ

[1]ಕ್ಷತ್ರ ತಾರ್ಪ್ಯಂ [2]ಕ್ಷತ್ರ ದಾರ್ಭ್ಯಂ ಪರಿಧತ್ತೋಽತ್ರ ದಂಪತೀ ।
[3]ಜಾಯೇ ಸ್ವಾಮ್ಯಾಹ್ವಯೇದ್ಭಾರ್ಯಾಂ [4]ರೋಹಾ ತಂ ಪ್ರತಿವಕ್ತಿ ಸಾ ॥
[5]ಅಹಂ ಸ್ವಾಮ್ಯಾಹ ವಾಜಶ್ಚ [6-17]ಜುಹುಯಾದ್ದ್ವಾದಶಾಹುತೀಃ ।
[18-27]ಆಯುರ್ದಶಭಿರಾರೋಹೇತ್ ಸ್ವಯಂ ಬಾಹೂದ್ಗ್ರಹಃ [28]ಸುವಃ ॥
[29]ಸಮಹಂ ಪ್ರೇಕ್ಷತೇಽನ್ನಾಯ [30-33]ಚತುರ್ಭಿಸ್ತು ಮಹರ್ತ್ವಿಜಃ ।
ದಿಗ್ಭ್ಯೋ ಘ್ನಂತ್ಯಾಸಪುಟಕೈರಮ್ಯ ಪುಷ್ಟಿ [34-35]ದ್ವಯಾತ್ಪದೇ ।
ಸ್ವರ್ಣಬಸ್ತತ್ವಚೋರ್ದದ್ಯಾತ್ ಪಂಚತ್ರಿಂಶತ್ತ್ವಿಹೋದಿತಾಃ ॥

**ಅನುವಾಕದಲ್ಲಿರುವ ಮಂತ್ರಸಂಖ್ಯೆ — 35**

**ಈ ಅನುವಾಕದಲ್ಲಿ ಋಕ್‌ಗಳು ಇಲ್ಲ. ಛಂದೋವಿಚಾರವೂ ಇಲ್ಲ.**



## ॥ ದಶಮೋಽನುವಾಕಃ ॥

**ವಾಜಸ್ಯೇಮಂ ಪ್ರಸವಸ್ಸುಷುವೇ ಅಗ್ರೇ ಸೋಮಗ್‌ಂ ರಾಜಾನಮೋಷಧೀಷ್ವಪ್ಸು । ತಾ ಅಸ್ಮಭ್ಯಂ ಮಧುಮತೀರ್ಭವಂತು**

---

ವಾಜಸ್ಯ । ಇಮಮ್ । ಪ್ರಸವ ಇತಿ ಪ್ರ-ಸವಃ । ಸುಷುವೇ । ಅಗ್ರೇ । ಸೋಮಮ್। ರಾಜಾನಮ್ । ಓಷಧೀಷು । ಅಪ್ಸ್ವಿತ್ಯಪ್-ಸು ॥ ತಾಃ । ಅಸ್ಮಭ್ಯಮಿತ್ಯಸ್ಮ-ಭ್ಯಮ್ । ಮಧುಮತೀರಿತಿ ಮಧು-ಮತೀಃ । ಭವಂತು ।

---

ಈ ಹತ್ತನೆಯ ಅನುವಾಕದಲ್ಲಿ ಅನ್ನಹೋಮಮಂತ್ರಗಳು ಹೇಳಲ್ಪಟ್ಟಿವೆ.

---

| ಮಂತ್ರ | ವಿನಿಯೋಗ |
|---|---|
| ವಾಜಸ್ಯೇಮಮ್... ಪುರೋಹಿತಾಃ ॥ | ವಾಜಪ್ರಸವೀಯಹೋಮವನ್ನು ಮಾಡಲು ಹೋಮದ ಪ್ರಥಮಮಂತ್ರ. |

---

**ವಾಜಸ್ಯ ಪ್ರಸವಃ** = ಅನ್ನದ ಉತ್ಪಾದಕನಾದ ದೇವನು; **ಓಷಧೀಷು ಅಪ್ಸು** = *ಓಷಧಿಗಳಲ್ಲಿಯೂ ನೀರಿನಲ್ಲಿಯೂ[ಸಾರಭೂತವಾದ] **ರಾಜಾನಮ್** = ಪ್ರಕಾಶಮಾನ ನಾದ; **ಇಮಮ್ ಸೋಮಮ್** = [ಈ ಲತಾರೂಪನಾದ] ಸೋಮನನ್ನು; **ಅಗ್ರೇ** = ಮೊದಲು; **ಸುಷುವೇ** = ಉತ್ಪತ್ತಿ ಮಾಡಿದನು; **ತಾಃ** = ಆ ಓಷಧಿಗಳೂ, ನೀರುಗಳೂ; **ಅಸ್ಮಭ್ಯಮ್** = ನಮಗೆ; **ಮಧುಮತೀಃ ಭವಂತು** = ಮಾಧುರ್ಯಯುಕ್ತವಾದವುಗಳಾಗಲಿ.

---

ವಾಜಪ್ರಸವೀಯಹೋಮವು ಇದಾಗಿದೆ. ವ್ರೀಹ್ಯಾದಿಸರ್ವೌಷಧಿಗಳ ಅನ್ನವನ್ನು ಅತ್ತಿಮರದ ಪಾತ್ರೆಯಲ್ಲಿ ಒಟ್ಟುಗೂಡಿಸಿ ಸ್ರುವದಿಂದ ಏಳು ಹೋಮಗಳನ್ನು ಮಾಡಬೇಕು. ಪ್ರಥಮಮಂತ್ರದ ತಾತ್ಪರ್ಯ ಹೀಗಿದೆ;

---

* **ಓಷಧ್ಯಃ ಫಲಪಾಕಾಂತಾಃ** = ಫಲವು ಪಕ್ವವಾಗುವುದೇ ಕೊನೆಯಾಗಿರುವ ಭತ್ತವೇ ಮೊದಲಾದವುಗಳು.

**ವಯಗ್ಂ ರಾಷ್ಟ್ರೇ ಜಾಗ್ರಿಯಾಮ ಪುರೋಹಿತಾಃ ॥ ವಾಜ-ಸ್ಯೇದಂ ಪ್ರಸವ ಆ ಬಭೂವೇಮಾ ಚ ವಿಶ್ವಾ ಭುವನಾನಿ ಸರ್ವತಃ। ಸ ವಿರಾಜಂ ಪರ್ಯೇತಿ ಪ್ರಜಾನನ್ಪ್ರಜಾಂ ಪುಷ್ಟಿಂ ವರ್ಧಯ-ಮಾನೋ ಅಸ್ಮೇ ॥**

---

ವಯಮ್ । ರಾಷ್ಟ್ರೇ । ಜಾಗ್ರಿಯಾಮ । ಪುರೋಹಿತಾ ಇತಿ ಪುರಃ-ಹಿತಾಃ ॥ ವಾಜಸ್ಯ। ಇದಮ್ । ಪ್ರಸವ ಇತಿ ಪ್ರ-ಸವಃ । ಏತಿ । ಬಭೂವ । ಇಮಾ । ಚ । ವಿಶ್ವಾ । ಭುವನಾನಿ । ಸರ್ವತಃ ॥ ಸಃ । ವಿರಾಜಮಿತಿ ವಿ-ರಾಜಮ್ । ಪರೀತಿ । ಏತಿ । ಪ್ರಜಾನನ್ನಿತಿ ಪ್ರ-ಜಾನನ್। ಪ್ರಜಾಮಿತಿ ಪ್ರ-ಜಾಮ್ । ಪುಷ್ಟಿಮ್ । ವರ್ಧಯಮಾನಃ। ಅಸ್ಮೇ ಇತಿ॥

| ಮಂತ್ರ | ವಿನಿಯೋಗ |
|---|---|
| ವಾಜಸ್ಯೇದಂ.... ಅಸ್ಮೇ । | ಅನ್ನಹೋಮದ ಎರಡನೆಯ ಮಂತ್ರ |

---

**ವಯಮ್** = ನಾವು; **ರಾಷ್ಟ್ರೇ** = [ಈ] ರಾಷ್ಟ್ರದಲ್ಲಿ; **ಪುರೋಹಿತಾಃ** = [ಕರ್ಮಾನುಷ್ಠಾನಾದಿ ಗಳಲ್ಲಿ] ಪುರೋಗಾಮಿಗಳಾಗಿ; **ಜಾಗ್ರಿಯಾಮ** = ಜಾಗರೂಕರಾಗಿ ಇರೋಣ; ∴ **ವಾಜಸ್ಯ ಪ್ರಸವಃ** = ಅನ್ನವನ್ನು ಸೃಷ್ಟಿಸಿದ್ದ ಪರಮೇಶ್ವರನು; **ಇದಮ್** = ಈ ಯಾಗಾದಿಕರ್ಮ ಗಳನ್ನು; **ಆ ಬಭೂವ**= ಉತ್ಪತ್ತಿ ಮಾಡಿದನು; **ಚ** = ಮತ್ತು; **ಸರ್ವತಃ**=ಎಲ್ಲಾ ಕಡೆಗಳಲ್ಲಿ ಯೂ; **ಇಮಾ ವಿಶ್ವಾ ಭುವನಾನಿ** = ಈ ಎಲ್ಲಾ ಲೋಕಗಳನ್ನೂ; **ಆ ಬಭೂವ** = ಉತ್ಪತ್ತಿಮಾಡಿದನು; **ಸಃ** = ಆ ಪರಮೇಶ್ವರನು; **ಅಸ್ಮೇ** = ನಮಗಾಗಿ; **ಪ್ರಜಾಮ್ ಪುಷ್ಟಿಮ್** = ಪ್ರಜೆಗಳನ್ನೂ, ಸರ್ವವಿಧವಾದ ಪುಷ್ಟಿಯನ್ನೂ; **ವರ್ಧಯಮಾನಃ** = ಅಭಿವೃದ್ಧಿಗೊಳಿಸುವವನಾಗಿ; **ಪ್ರಜಾನನ್**=[ನಮ್ಮ ಅಭಿಪ್ರಾಯವನ್ನು] ಚೆನ್ನಾಗಿ ತಿಳಿದವ ನಾಗಿ; **ವಿರಾಜಂ ಪರ್ಯೇತಿ** [ಪರ್ಯೇತು ] = [ನಾವು ಕೊಡುವ] ಹವೀರೂಪವಾದ ಅನ್ನವನ್ನು ಸ್ವೀಕರಿಸಲಿ.

---

ಅನ್ನವನ್ನು ಸೃಷ್ಟಿಸಿದ ವಿಶ್ವಕರ್ಮನು ಸರ್ವೌಷಧಗಳಲ್ಲಿಯೂ, ನೀರಿನಲ್ಲಿಯೂ ಸಾರಭೂತವಾಗಿ ಪ್ರಕಾಶಿಸುವ ಸೋಮ(ಲತೆ)ನನ್ನು ಮೊದಲು ಸೃಷ್ಟಿಸಿದನು. ಆ ನೀರೂ, ಓಷಧಿಗಳೂ ನಮಗೆ ಮಾಧುರ್ಯಯುಕ್ತವಾಗಿರಲಿ. ನಾವು ಯಾಗಾನುಷ್ಠಾನಾದಿಗಳಲ್ಲಿ ಈ ರಾಷ್ಟ್ರದಲ್ಲಿಯೇ ಮುಂದೆ ಇರುವವರಾಗಿ ಜಾಗರೂಕರಾಗಿ ಆಗೋಣ. ಅನ್ನಸೃಷ್ಟಿಕರ್ತ ನಾದ ಪರಮೇಶ್ವರನು ಯಜ್ಞಾದಿಕರ್ಮಗಳನ್ನೂ ಸೃಷ್ಟಿಸಿರುತ್ತಾನೆ.

ವಾಜಸ್ಯೇಮಾಂ ಪ್ರಸವಶ್ಶಿಶ್ರಿಯೇ ದಿವಮಿಮಾ ಚ ವಿಶ್ವಾ ಭುವನಾನಿ ಸಮ್ರಾಟ್ । ಅದಿತ್ಸಂತಂ ದಾಪಯತು ಪ್ರಜಾನನ್ರಯಿಂ [ರಯಿಮ್ (೧) ಚ ನಃ] ಚ ನಸ್ಸರ್ವವೀರಾಂ ನಿಯಚ್ಛತು ॥

---

ವಾಜಸ್ಯ । ಇಮಾಮ್ । ಪ್ರಸವ ಇತಿ ಪ್ರ-ಸವಃ । ಶಿಶ್ರಿಯೇ । ದಿವಮ್ । ಇಮಾ । ಚ । ವಿಶ್ವಾ । ಭುವನಾನಿ । ಸಮ್ರಾಡಿತಿ ಸಮ್-ರಾಟ್ ॥ ಅದಿತ್ಸಂತಮ್ । ದಾಪಯತು। ಪ್ರಜಾನನ್ನಿತಿ ಪ್ರ-ಜಾನನ್ । ರಯಿಮ್ । ಚ । ನಃ । ಸರ್ವವೀರಾಮಿತಿ ಸರ್ವ-ವೀರಾಮ್। ನೀತಿ । ಯಚ್ಛತು ॥

---

| ಮಂತ್ರ | ವಿನಿಯೋಗ |
|---|---|
| ವಾಜಸ್ಯೇಮಾಂ.... ನಿಯಚ್ಛತು ॥ | ಅನ್ನಹೋಮದ ಮೂರನೆಯ ಮಂತ್ರ |

---

✣ ವಾಜಸ್ಯ ಪ್ರಸವಃ = ಅನ್ನೋತ್ಪಾದಕನಾದ [ಪರಮೇಶ್ವರನು]; ಇಮಾಮ್ ದಿವಮ್ = ಈ ಸ್ವರ್ಗಲೋಕವನ್ನೂ; ಇಮಾ ಚ ವಿಶ್ವಾ ಭುವನಾನಿ = ಈ ಸಮಸ್ತಲೋಕಗಳನ್ನೂ; ಶಿಶ್ರಿಯೇ = [ಈ ಲೋಕಧಾರಣೆಗಾಗಿ] ಆಶ್ರಯಿಸಿದನು/ವ್ಯಾಪಿಸಿದನು. ಸಮ್ರಾಟ್ = ವಿಶ್ವಪ್ರಭುವಾದ ಆ ಪರಮೇಶ್ವರನು; ಪ್ರಜಾನನ್ = ಅಭಿಪ್ರಾಯವನ್ನು ತಿಳಿದವನಾಗಿ; ಅದಿತ್ಸಂತಮ್ = ಕೊಡಲು ಇಚ್ಛೆಯಿಲ್ಲದಿರುವವನ್ನೂ; ದಾಪಯತು = ಹವಿಸ್ಸನ್ನು ಕೊಡುವಂತೆ ಮಾಡಲಿ; ನಃ = ನಮಗೆ; ಸರ್ವವೀರಾಮ್ = ಪುತ್ರಪೌತ್ರಾದಿಸಂಪತ್ತಿಯಿಂದ ಕೂಡಿದ; ರಯಿಮ್ ಚ = ಧನವನ್ನೂ; ನಿಯಚ್ಛತು= ಹೆಚ್ಚಾಗಿ ಕೊಡಲಿ/ನಿಯತವಾಗಿ ಇರುವಂತೆ ಮಾಡಲಿ.

---

ಎಲ್ಲಾ ಲೋಕಗಳನ್ನೂ ಸೃಷ್ಟಿಸಿರುತ್ತಾನೆ. ಆತನು ನಮ್ಮ ಅಭಿಪ್ರಾಯವನ್ನು ತಿಳಿದು ನಾವು ಕೊಡುವ ಈ ಹವಿಸ್ಸನ್ನು ಸ್ವೀಕರಿಸಲಿ.

ಅನ್ನಸೃಷ್ಟಿಕರ್ತನಾದ ಪರಮೇಶ್ವರನು ಈ ಸ್ವರ್ಗಲೋಕವನ್ನೂ, ಈ ಎಲ್ಲ ಲೋಕಗಳನ್ನೂ ಧಾರಣೆಗಾಗಿ ಆಶ್ರಯಿಸಿರುತ್ತಾನೆ. ವಿಶ್ವಪ್ರಭುವಾದ ಆತನು ನಮ್ಮ ಅಭಿಪ್ರಾಯವನ್ನು ತಿಳಿಯಲಿ. ಕೊಡುವ ಇಚ್ಛೆಯಿಲ್ಲದಿದ್ದರೂ

ಅಗ್ನೇ ಅಚ್ಛಾ ವದೇಹ ನಃ ಪ್ರತಿ ನ ಸ್ಸುಮನಾ ಭವ । ಪ್ರ ಣೋ ಯಚ್ಛ ಭುವಸ್ಪತೇ ಧನದಾ ಅಸಿ ನಸ್ತ್ವಮ್ ॥ ಪ್ರ ಣೋ ಯಚ್ಛತ್ವರ್ಯಮಾ ಪ್ರ ಭಗಃ ಪ್ರ ಬೃಹಸ್ಪತಿಃ ।

---

ಅಗ್ನೇ । ಅಚ್ಛ । ವದ । ಇಹ । ನಃ । ಪ್ರತೀತಿ । ನಃ । ಸುಮನಾ ಇತಿ ಸು-ಮನಾಃ । ಭವ ॥ ಪ್ರೇತಿ । ನಃ । ಯಚ್ಛ । ಭುವಃ । ಪತೇ । ಧನದಾ ಇತಿ ಧನ-ದಾಃ। ಅಸಿ । ನಃ। ತ್ವಮ್॥ ಪ್ರೇತಿ । ನಃ । ಯಚ್ಛತು। ಅರ್ಯಮಾ । ಪ್ರೇತಿ । ಭಗಃ । ಪ್ರೇತಿ । ಬೃಹಸ್ಪತಿಃ॥

---

| ಮಂತ್ರ | ವಿನಿಯೋಗ |
|---|---|
| ಅಗ್ನೇ....ತ್ವಮ್ ॥ | ಅನ್ನಹೋಮದ ನಾಲ್ಕನೆಯ ಮಂತ್ರ |
| ಪ್ರ ಣೋ....ದದಾತು ನಃ । | ಅನ್ನಹೋಮದ ಐದನೆಯ ಮಂತ್ರ |

---

✢ಅಗ್ನೇ = ಅಗ್ನಿದೇವನೇ!; ಅಚ್ಛ = ನಮಗೆ ಅಭಿಮುಖವಾಗಿ; ಇಹ = ಈ ಕರ್ಮದಲ್ಲಿ; ನಃ = ನಮಗೆ; ವದ = ಹಿತವನ್ನು ಹೇಳು; ನಃ ಪ್ರತಿ = ನಮ್ಮ ವಿಷಯದಲ್ಲಿ; ಸುಮನಾಃ ಭವ = ಒಳ್ಳೆಯ ಮನಸ್ಸುಳ್ಳವನಾಗು. ಭುವಃ ಪತೇ = ಭೂಪತಿಯಾದ ಎಲೈ! ಅಗ್ನಿಯೇ! ತ್ವಮ್ = ನೀನು; ನಃ ಪ್ರಯಚ್ಛ = ನಮಗೆ ಧನವನ್ನು ಕೊಡು. ತ್ವಮ್ = ನೀನು; ನಃ = ನಮಗೆ; ಧನದಾಃ ಅಸಿ = ಧನವನ್ನು ಕೊಡಬಲ್ಲವನಾಗಿದ್ದೀಯೆ; ✢ ಅರ್ಯಮಾ = ದಾತೃವಾದ ಆರ್ಯಮದೇವನು; ನಃ = ನಮಗೆ; ಪ್ರಯಚ್ಛತು = ಅಧಿಕವಾಗಿ ಧನ ವನ್ನು ಕೊಡಲಿ; ಭಗಃ ಪ್ರ ಯಚ್ಛತು = ಭಗದೇವನೂ ಕೊಡಲಿ; ಬೃಹಸ್ಪತಿಃ ಪ್ರಯಚ್ಛತು = ಬೃಹಸ್ಪತಿಯೂ ಕೊಡಲಿ;

---

ಹವಿಸ್ಸನ್ನು ಕೊಡುವಂತೆ ಮಾಡಲಿ. ನಮಗೆ ಪುತ್ರ ಪೌತ್ರಾದಿಪ್ರಜಾಯುಕ್ತವಾದ ಧನವನ್ನು ಹೆಚ್ಚಾಗಿ ಕೊಡಲಿ. ನಮ್ಮಲ್ಲಿ ನೆಲಸಿರುವಂತೆ ಮಾಡಲಿ.

ಅಗ್ನಿದೇವನೇ! ನಮಗೆ ಅಭಿಮುಖವಾಗು. ನಮಗೆ ಈ ಯಾಗಕಾರ್ಯದಲ್ಲಿ ಹಿತವನ್ನು ಹೇಳು. ನೀನು ಭೂಮಿಗೆ ಪ್ರಭುವಾಗಿದ್ದೀಯೆ. ಧನಸ್ವಾಮಿಯೂ ಆಗಿದ್ದೀಯೆ. ನಮಗೆ ಧನವನ್ನು ಹೆಚ್ಚಾಗಿ ಕೊಡು.

ಪ್ರ ದೇವಾಃ ಪ್ರೋತ ಸೂನೃತಾ ಪ್ರ ವಾಗ್ದೇವೀ ದದಾತು ನಃ॥
ಅರ್ಯಮಣಂ ಬೃಹಸ್ಪತಿಮಿಂದ್ರಂ ದಾನಾಯ ಚೋದಯ ।
ವಾಚಂ ವಿಷ್ಣುಗ್ಂ ಸರಸ್ವತೀಗ್ಂ ಸವಿತಾರಂ [ಸವಿತಾರಮ್(೨)
ಚ ವಾಜಿನಮ್] ಚ ವಾಜಿನಮ್ ॥

---

ಪ್ರೇತಿ । ದೇವಾಃ । ಪ್ರೇತಿ । ಉತ । ಸೂನೃತಾ । ಪ್ರೇತಿ । ವಾಕ್ । ದೇವೀ । ದದಾತು। ನಃ ॥ ಅರ್ಯಮಣಮ್ । ಬೃಹಸ್ಪತಿಮ್ । ಇಂದ್ರಮ್ । ದಾನಾಯ । ಚೋದಯ ॥ ವಾಚಮ್ । ವಿಷ್ಣುಮ್ । ಸರಸ್ವತೀಮ್ । ಸವಿತಾರಮ್(೨)। ಚ । ವಾಜಿನಮ್ ॥

---

| ಮಂತ್ರ | ವಿನಿಯೋಗ |
|---|---|
| ಅರ್ಯಮಣಂ... ವಾಜಿನಮ್ ॥ | ಅನ್ನಹೋಮದ ಆರನೆಯ ಮಂತ್ರ |

---

ದೇವಾಃ ಪ್ರ ಯಚ್ಛಂತು = ಬೇರೆಯ ದೇವತೆಗಳೂ ಕೊಡಲಿ. ಉತ = ಮತ್ತೆ; ಸೂನೃತಾ = ಒಳ್ಳೆಯ ಮಾತಿಗೆ ಒಡೆಯಳಾದ ಸರಸ್ವತಿಯು; ಪ್ರಯಚ್ಛತು= ಕೊಡಲಿ; ವಾಕ್ ದೇವೀ = ಸರ್ವ ವಾಕ್ಕುಗಳಿಗೂ ಒಡತಿಯಾದ ವಾಗ್ದೇವಿಯು; ನಃ = ನಮಗೆ; ದದಾತು = ಇಷ್ಟಾರ್ಥವನ್ನು ಕೊಡಲಿ. ಹೇ [ಎಲೈ ಪರಮೇಶ್ವರ!] ಅರ್ಯಮಣಮ್ = ಅರ್ಯಮದೇವನನ್ನೂ; ಬೃಹಸ್ಪತಿಮ್ = ಬೃಹಸ್ಪತಿಯನ್ನೂ; ಇಂದ್ರಮ್= ಇಂದ್ರದೇವನನ್ನೂ; ವಾಚಮ್ = ಮಧುರವಾಗಭಿಮಾನಿದೇವತೆಯನ್ನೂ; ವಿಷ್ಣುಮ್ = ಸರ್ವವ್ಯಾಪಕನಾದ ವಿಷ್ಣುವನ್ನೂ; ಸರಸ್ವತೀಮ್ = ಸರ್ವವಾಗಭಿಮಾನಿದೇವತೆಯಾದ ಸರಸ್ವತೀದೇವಿಯನ್ನೂ; ವಾಜಿನಮ್ = ಅನ್ನದೇವತೆಯಾದ; ಸವಿತಾರಮ್ ಚ = ಸವಿತೃದೇವನನ್ನೂ; ದಾನಾಯ = [ನಮಗೆ] ಬೇಕಾದುದನ್ನು ಕೊಡುವುದಕ್ಕಾಗಿ; ಚೋದಯ = ಪ್ರೇರಿಸು.

---

ಅರ್ಯಮದೇವನೂ, ಭಗನೂ, ಬೃಹಸ್ಪತಿಯೂ, ಬೇರೆಯ ದೇವತೆಗಳೂ, ಒಳ್ಳೆಯ ಮಾತಿನ ದೇವತೆಯೂ, ಯಜ್ಞವೂ, ವಾಗ್ದೇವಿಯೂ ನಮಗೆ ಬೇಕಾದುದೆಲ್ಲವನ್ನೂ ನೀಡಲಿ.

ಎಲೈ! ಸರ್ವೇಶ್ವರನೇ ! ನೀನು ಅರ್ಯಮ, ಬೃಹಸ್ಪತಿ, ಇಂದ್ರ, ವಾಕ್, ವಿಷ್ಣು, ಸರಸ್ವತಿ, ಅನ್ನಾಧಿಪತಿಯಾದ ಸವಿತೃದೇವ— ಇವರೆಲ್ಲರನ್ನೂ ನಮಗೆ ಬೇಕಾದುದನ್ನು ಕೊಡುವಂತೆ ಪ್ರೇರಿಸು.

**ಸೋಮಗ್ಂ ರಾಜಾನಂ ವರುಣಮಗ್ನಿಮನ್ವಾರಭಾಮಹೇ । ಆದಿತ್ಯಾನ್ ವಿಷ್ಣುಗ್ಂ ಸೂರ್ಯಂ ಬ್ರಹ್ಮಾಣಂ ಚ ಬೃಹಸ್ಪತಿಮ್ । ದೇವಸ್ಯ ತ್ವಾ ಸವಿತುಃ**

---

ಸೋಮಮ್ । ರಾಜಾನಮ್ । ವರುಣಮ್ । ಅಗ್ನಿಮ್ । ಅನ್ವಾರಭಾಮಹ ಇತ್ಯನು-ಆರಭಾಮಹೇ ॥ ಆದಿತ್ಯಾನ್ । ವಿಷ್ಣುಮ್ । ಸೂರ್ಯಮ್ । ಬ್ರಹ್ಮಾಣಮ್ । ಚ । ಬೃಹಸ್ಪತಿಮ್ ॥ ದೇವಸ್ಯ । ತ್ವಾ । ಸವಿತುಃ ।

---

| ಮಂತ್ರ | ವಿನಿಯೋಗ |
|---|---|
| ಸೋಮಮ್.... ಬೃಹಸ್ಪತಿಮ್ ॥ | ಅನ್ನಹೋಮದ ಏಳನೆಯಮಂತ್ರ |
| ದೇವಸ್ಯ.... ಅಭಿಷಿಂಚಾಮಿ । | ಯಜಮಾನನಿಗೆ ಅಭಿಷೇಕ ಮಾಡಲು |

---

✣ [ನಾವು] ರಾಜಾನಮ್ ಸೋಮಮ್ = ಸೋಮರಾಜನನ್ನೂ; ವರುಣಮ್ = ವರುಣನನ್ನೂ; ಅಗ್ನಿಮ್ = ಅಗ್ನಿಯನ್ನೂ; ಆದಿತ್ಯಾನ್ = ದ್ವಾದಶಾದಿತ್ಯರನ್ನೂ, ವಿಷ್ಣುಮ್ = ವಿಷ್ಣುವನ್ನೂ; ಸೂರ್ಯಮ್ = ಸೂರ್ಯನನ್ನೂ; ಬ್ರಹ್ಮಾಣಮ್ = ಬ್ರಹ್ಮದೇವನನ್ನೂ; ಚ = ಮತ್ತು; ಬೃಹಸ್ಪತಿಮ್ = ಬೃಹಸ್ಪತಿಯನ್ನೂ; ಅನು ಆರಭಾಮಹೇ = ಅನುಸರಿಸಿ [ಅವಲಂಬಿಸಿ] ಈ ಕಾರ್ಯವನ್ನು ಮೊದಲು ಮಾಡುತ್ತೇವೆ.
✣ [ಎಲೈ! ಯಜಮಾನನೇ] ತ್ವಾ = ನಿನ್ನನ್ನು; ಸವಿತುಃ ದೇವಸ್ಯ = ಪ್ರೇರಕನಾದ ಸವಿತೃದೇವನ;

---

ನಾವು ಸೋಮರಾಜನನ್ನೂ, ವರುಣನನ್ನೂ, ಅಗ್ನಿಯನ್ನೂ, ಆದಿತ್ಯರನ್ನೂ, ವಿಷ್ಣುವನ್ನೂ, ಸೂರ್ಯನನ್ನೂ, ಬ್ರಹ್ಮದೇವನನ್ನೂ ಮತ್ತು ಬೃಹಸ್ಪತಿಯನ್ನೂ ಅನುಸರಿಸಿ, ಅವರನ್ನು ಪ್ರಾರ್ಥಿಸಿ, ಈ ಯಾಗಕರ್ಮವನ್ನು ಆರಂಭಿಸುತ್ತೇವೆ. ಅವರು ನಮ್ಮನ್ನು ಅನುಗ್ರಹಿಸಲಿ.

ಕೃಷ್ಣಾಜಿನದಲ್ಲಿ ಯಜಮಾನನನ್ನು ಕುಳ್ಳಿರಿಸಿ ಅಭಿಷೇಕ ಮಾಡುವ ಮೂರು ಮಂತ್ರಗಳು ಇವು;

**ಪ್ರಸವೇಽಶ್ವಿನೋರ್ಬಾಹುಭ್ಯಾಂ ಪೂಷ್ಣೋ ಹಸ್ತಾಭ್ಯಾಗ್ಂ ಸರಸ್ವತ್ಯೈ ವಾಚೋ ಯಂತುರ್ಯಂತ್ರೇಣಾಗ್ನೇಸ್ತ್ವಾ ಸಾಮ್ರಾಜ್ಯೇನಾಭಿಷಿಂಚಾಮೀಂದ್ರಸ್ಯ***

---

ಪ್ರಸವ ಇತಿ ಪ್ರ-ಸವೇ। ಅಶ್ವಿನೋಃ । ಬಾಹುಭ್ಯಾಮಿತಿ ಬಾಹು-ಭ್ಯಾಮ್ । ಪೂಷ್ಣಃ । ಹಸ್ತಾಭ್ಯಾಮ್ । ಸರಸ್ವತ್ಯೈ । ವಾಚಃ । ಯಂತುಃ । ಯಂತ್ರೇಣ । ಅಗ್ನೇಃ । ತ್ವಾ । ಸಾಮ್ರಾಜ್ಯೇನೇತಿ ಸಾಮ್-ರಾಜ್ಯೇನ । ಅಭೀತಿ । ಸಿಂಚಾಮಿ । ಇಂದ್ರಸ್ಯ ।

---

| ಮಂತ್ರ | ವಿನಿಯೋಗ |
|---|---|
| [ದೇವಸ್ಯ... ಯಂತ್ರೇಣ]<br>ಇಂದ್ರಸ್ಯ...... [ಅಭಿಷಿಂಚಾಮಿ] | ಯಜಮಾನನಿಗೆ ಅಭಿಷೇಕ ಮಾಡಲು |

---

**ಪ್ರಸವೇ** = ಅನುಮತಿಯಾಗಲಾಗಿ; **ಅಶ್ವಿನೋಃ** = ಅಶ್ವಿನೀದೇವತೆಗಳ; **ಬಾಹುಭ್ಯಾಮ್** = ತೋಳುಗಳಿಂದಲೂ; **ಪೂಷ್ಣಃ** = ಪೂಷದೇವನ; **ಹಸ್ತಾಭ್ಯಾಮ್** = ಕೈಗಳಿಂದಲೂ; **ಸರಸ್ವತ್ಯೈ** = ಸೂನೃತವಾಗ್ದೇವತೆಯ; **ವಾಚಃ** = ಸರ್ವವಾಗ್ದೇವತೆಯ; **ಯಂತುಃ** = ಅಂತರ್ಯಾಮಿಯಾದ ಪರಮಾತ್ಮನ; **ಅಗ್ನೇಃ** = [ತೇಜಃಪ್ರದನಾದ] ಅಗ್ನಿಯ; **ಯಂತ್ರೇಣ** = ಅನುಜ್ಞೆಯಿಂದ; **ತ್ವಾ** = ನಿನ್ನನ್ನು; **ಸಾಮ್ರಾಜ್ಯೇನ** = ಸಾಮ್ರಾಜ್ಯಪದವೀಪ್ರಾಪ್ತಿಗಾಗಿ; **ಅಭಿಷಿಂಚಾಮಿ** = ಅಭಿಷೇಕಿಸುತ್ತೇನೆ.

---

ಎಲೈ! ಯಜಮಾನನೇ ! ಸವಿತೃದೇವನ ಅನುಮತಿಯನ್ನು ಪಡೆದು, ಅಶ್ವಿನೀದೇವತೆಗಳ ತೋಳುಗಳಿಂದಲೂ, ಪೂಷದೇವನ ಕೈಗಳಿಂದಲೂ, ಶೋಭನವಾಗ್ದೇವಿಯ, ಸರ್ವ ವಾಗ್ದೇವಿಯ, ಅಂತರ್ಯಾಮಿಯಾದ ಪರಮಾತ್ಮನ ಮತ್ತು ತೇಜಃಪ್ರದನಾದ ಅಗ್ನಿಯ ಅನುಜ್ಞೆಯಿಂದ ಸಾಮ್ರಾಜ್ಯಪದವಿಗಾಗಿ ನಿನಗೆ ಅಭಿಷೇಕ ಮಾಡುತ್ತೇನೆ.

---

* ಅನುಷಂಗ.

## ಬೃಹಸ್ಪತೇಸ್ತ್ವಾ ಸಾಮ್ರಾಜ್ಯೇನಾಭಿಷಿಂಚಾಮಿ ॥೧೦-42॥

[ರಯಿಗ್ಂ ಸವಿತಾರಗ್ಂ ಷಟ್ತ್ರಿಗ್ಂಶಚ್ಚ]

---

ಬೃಹಸ್ಪತೇಃ । ತ್ವಾ । ಸಾಮ್ರಾಜ್ಯೇನೇತಿ ಸಾಮ್-ರಾಜ್ಯೇನ। ಅಭೀತಿ । ಸಿಂಚಾಮಿ ॥೧೦॥

---

| ಮಂತ್ರ | ವಿನಿಯೋಗ |
|---|---|
| [ದೇವಸ್ಯ... ಯಂತ್ರೇಣ] ಬೃಹಸ್ಪತೇಸ್ತ್ವಾ... ಅಭಿಷಿಂಚಾಮಿ । | ಯಜಮಾನನಿಗೆ ಅಭಿಷೇಕ ಮಾಡಲು |

---

✣ [ದೇವಸ್ಯ.... ಯಂತ್ರೇಣ] ಇಂದ್ರಸ್ಯ = ಇಂದ್ರನ [ಅನುಮತಿಯಿಂದ]; ತ್ವಾ = ನಿನ್ನನ್ನು; ಸಾಮ್ರಾಜ್ಯೇನ ಅಭಿಷಿಂಚಾಮಿ= ಸಾಮ್ರಾಜ್ಯನಿಮಿತ್ತವಾಗಿ ಅಭಿಷೇಕಿಸುತ್ತೇನೆ; ✣ [ದೇವಸ್ಯ..... ಯಂತ್ರೇಣ] ಬೃಹಸ್ಪತೇಃ = ಬೃಹಸ್ಪತಿಯ[ಅನುಮತಿಯಿಂದ] ತ್ವಾ = ನಿನ್ನನ್ನು; **ಸಾಮ್ರಾಜ್ಯೇನ ಅಭಿಷಿಂಚಾಮಿ** = ಸಾಮ್ರಾಜ್ಯನಿಮಿತ್ತವಾಗಿ ಅಭಿಷೇಕಿಸುತ್ತೇನೆ.

---

ಇಂದ್ರನ ಅನುಜ್ಞೆಯಿಂದ ಸಾಮ್ರಾಜ್ಯಕ್ಕಾಗಿ ನಿನಗೆ ಅಭಿಷೇಕ ಮಾಡುತ್ತೇನೆ.

ಬೃಹಸ್ಪತಿಯ ಅನುಮತಿಯಿಂದ ಸಾಮ್ರಾಜ್ಯಪದವಿಗಾಗಿ ನಿನಗೆ ಅಭಿಷೇಕ ಮಾಡುತ್ತೇನೆ.

## ವಿನಿಯೋಗ ಸಂಗ್ರಹ

[1-7]ವಾಜ ಸಪ್ತಭಿರನ್ನಸ್ಯ ಹೋಮೋ ದೇವ [8-10]ಯಜುಸ್ತ್ರಯಾತ್ ।
ಅಭಿಷಿಂಚೇತ್ಸ್ವಾಮಿನಂ ತಂ ದಶ ಮಂತ್ರಾ ಇಹೋದಿತಾಃ ॥

**ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ —10**

★ ★ ★

## ॥ ಏಕಾದಶೋಽನುವಾಕಃ ॥

## ಅಗ್ನಿರೇಕಾಕ್ಷರೇಣ

---

**ಅಗ್ನಿಃ । ಏಕಾಕ್ಷರೇಣೇತ್ಯೇಕ-ಅಕ್ಷರೇಣ ।**

---

ಹತ್ತನೆಯ ಅನುವಾಕದಲ್ಲಿ ಅನ್ನಹೋಮ, ಅಭಿಷೇಕಗಳನ್ನು ಹೇಳಲಾಯಿತು. ಈ ಹನ್ನೊಂದನೆಯ ಅನುವಾಕದಲ್ಲಿ ಯಜಮಾನನಿಂದ ವಾಚನ ಮಾಡಿಸುವ ಉಜ್ಜಿತಿ ಮಂತ್ರಗಳು ಉಕ್ತವಾಗಿವೆ. **'ತಾ ವಾ ಏತಾ ಉಜ್ಜಿತಯೋ ವಾಖ್ಯಾಯಂತೇ'। [ತೈ.ಬ್ರಾ. 1.3.2.]** ಇದು ಉಜ್ಜಿತಿವಿಧಿಯಾಗಿದೆ.

ಇಲ್ಲಿ **'ಏಕಾಕ್ಷರೇಣ'** ಮೊದಲಾದ ಅಕ್ಷರಗಳ ವಿಷಯದಲ್ಲಿ ವಿವಾದವಿದೆ. **'ಏಷ ವೈ ಸಪ್ತದಶಃ ಪ್ರಜಾಪತಿರ್ಯಜ್ಞಮನ್ವಾಯತ್ತಃ' [ತೈ.ಸಂ. 1.6.11.]** ಎಂಬ ಮಂತ್ರದಲ್ಲಿರುವ ಹದಿನೇಳು ಅಕ್ಷರಗಳನ್ನೇ ಹೇಳಿರುತ್ತಾರೆಂಬುದು ಒಂದು ಮತ.

ಮಂತ್ರಶಾಸ್ತ್ರದ ಒಂದು ಅಕ್ಷರದಿಂದ ಹದಿನೇಳು ಅಕ್ಷರದವರೆಗಿನ ಮಂತ್ರಗಳನ್ನು ಹೇಳಿರುತ್ತಾರೆಂಬುದು ಇನ್ನೊಂದು ಮತ.

ಛಂದಃ ಶಾಸ್ತ್ರದಲ್ಲಿ ಹೇಳಿರುವಂತೆ ಋಕ್ಕಿನ ಒಂದು ಪಾದವು ಒಂದು ಅಕ್ಷರದಿಂದ ಇಪ್ಪತ್ತಾರು ಅಕ್ಷರಗಳನ್ನು ಒಳಗೊಂಡಿರುತ್ತದೆ. ಆ ಇಪ್ಪತ್ತಾರು ಛಂದಸ್ಸುಗಳು ಕ್ರಮವಾಗಿ 1) ಉಕ್ತಾ, 2) ಅತ್ಯುಕ್ತಾ 3) ಮಧ್ಯಾ 4) ಪ್ರತಿಷ್ಠಾ 5) ಸುಪ್ರತಿಷ್ಠಾ 6) ಗಾಯತ್ರೀ 7) ಉಷ್ಣಿಕ್ 8) ಅನುಷ್ಟುಪ್ 9) ಬೃಹತೀ 10) ಪಂಕ್ತಿ 11) ತ್ರಿಷ್ಟುಪ್ 12) ಜಗತೀ 13) ಅತಿಜಗತೀ 14) ಶಕ್ವರೀ 15) ಅತಿಶಕ್ವರೀ 16) ಅಷ್ಟಿ 17) ಅತ್ಯಷ್ಟಿ 18) ಧೃತಿ19) ಅತಿಧೃತಿ 20) ಕೃತಿ 21) ಪ್ರಕೃತಿ 22) ಆಕೃತಿ 23) ವಿಕೃತಿ 24) ಸಂಕೃತಿ 25) ಅಭಿಕೃತಿ 26) ಉತ್ಕೃತಿ— ಇವುಗಳಾಗಿವೆ. ಅವುಗಳಲ್ಲಿ ಹದಿನೇಳು ಅಕ್ಷರಗಳವರೆಗಿನ ಪಾದಗಳಿಂದ ಕೂಡಿದ ಛಂದಸ್ಸುಗಳು ಕ್ರಮವಾಗಿ ಇಲ್ಲಿ ಉಕ್ತವಾಗಿವೆಯೆಂದು ಇನ್ನೊಂದು ಮತ.

---

| ಮಂತ್ರ | ವಿನಿಯೋಗ |
|---|---|
| **ಅಗ್ನಿಃ.... ಉದಜಯತ್ ।** | ರಥಧಾವನಸಮಯದಲ್ಲಿ ಅಧ್ವರ್ಯುವು ಯಜಮಾನನಿಂದ ಹೇಳಿಸಲು |

---

**ಅಗ್ನಿಃ** = ಅಗ್ನಿದೇವನು; **ಏಕಾಕ್ಷರೇಣ** = ಒಂದು ಅಕ್ಷರವಿರುವ ಮಂತ್ರದಿಂದ;

**ವಾಚಮುದಜಯದಶ್ವಿನೌ ದ್ವ್ಯಕ್ಷರೇಣ ಪ್ರಾಣಾಪಾನಾವುದ ಜಯತಾಂ ವಿಷ್ಣುಸ್ತ್ರ್ಯಕ್ಷರೇಣ ತ್ರೀನ್ಲೋಕಾನುದ ಜಯತ್ಸೋಮಶ್ಚತುರಕ್ಷರೇಣ**

---

ವಾಚಮ್ । ಉದಿತಿ । ಅಜಯತ್ । ಅಶ್ವಿನೌ । ದ್ವ್ಯಕ್ಷರೇಣೇತಿ ದ್ವಿ-ಅಕ್ಷರೇಣ । ಪ್ರಾಣಾಪಾನಾವಿತಿ ಪ್ರಾಣ-ಅಪಾನೌ। ಉದಿತಿ । ಅಜಯತಾಮ್ । ವಿಷ್ಣುः । ತ್ರ್ಯಕ್ಷರೇಣೇತಿ ತ್ರಿ-ಅಕ್ಷರೇಣ । ತ್ರೀನ್ । ಲೋಕಾನ್ । ಉದಿತಿ । ಅಜಯತ್ । ಸೋಮः । ಚತುರಕ್ಷ-ರೇಣೇತಿ ಚತುः-ಅಕ್ಷರೇಣ ।

---

| ಮಂತ್ರ | ವಿನಿಯೋಗ |
|---|---|
| ಅಶ್ವಿನೌ... ಉದಜಯತಾಮ್ । | ರಥಧಾವನದ ಸಮಯದ ಎರಡನೆಯ ಮಂತ್ರ |

---

ವಾಚಮ್ = ವಾಕ್ಕನ್ನು/ವಾಗ್ಬೀಜವನ್ನು; ಉದಜಯತ್ = ಜಯಿಸಿದನು; ✢ ಅಶ್ವಿನೌ = ಅಶ್ವಿನೀದೇವತೆಗಳು; ದ್ವ್ಯಕ್ಷರೇಣ = ಎರಡು ಅಕ್ಷರಗಳುಳ್ಳ ಮಂತ್ರದಿಂದ; ಪ್ರಾಣಾಪಾನೌ = ಪ್ರಾಣಾಪಾನವಾಯುಗಳನ್ನು; ಉದಜಯತಾಮ್ = ಜಯಿಸಿದರು. ✢ ವಿಷ್ಣುः = ವಿಷ್ಣುವು; ತ್ರ್ಯಕ್ಷರೇಣ = ಮೂರು ಅಕ್ಷರಗಳ ಮಂತ್ರದಿಂದ; ತ್ರೀನ್ ಲೋಕಾನ್ = ಮೂರು ಲೋಕಗಳನ್ನೂ; ಉದಜಯತ್ = ಗೆದ್ದನು; ✢ ಸೋಮः = ಸೋಮದೇವನು; ಚತುರಕ್ಷರೇಣ = ನಾಲ್ಕು ಅಕ್ಷರಗಳ ಮಂತ್ರದಿಂದ;

---

ಅಗ್ನಿದೇವನು ಒಂದು ಅಕ್ಷರವಿರುವ ಮಂತ್ರದಿಂದ ವಾಕ್ಕನ್ನೂ/ವಾಗ್ಬೀಜವನ್ನೂ, ಅಶ್ವಿನೀದೇವತೆಗಳು ಎರಡು ಅಕ್ಷರಗಳುಳ್ಳ ಮಂತ್ರದಿಂದ ಪ್ರಾಣ-ಅಪಾನವಾಯುಗಳನ್ನೂ, ವಿಷ್ಣುವು ಮೂರಕ್ಷರಗಳುಳ್ಳ ಮಂತ್ರದಿಂದ ಮೂರು ಲೋಕಗಳನ್ನೂ, ಸೋಮದೇವನು

# ಚತುಷ್ಪದಃ ಪಶೂನುದಜಯತ್ಪೂಷಾ ಪಂಚಾಕ್ಷರೇಣ ಪಂಕ್ತಿಮುದಜಯದ್ಧಾತಾ ಷಡಕ್ಷರೇಣ ಷಡೃತೂನುದಜಯ-ನ್ಮರುತಃ ಸಪ್ತಾಕ್ಷರೇಣ ಸಪ್ತಪದಾಗ್ಂ ಶಕ್ವರೀಮುದಜಯ-

---

ಚತುಷ್ಪದ ಇತಿ ಚತುಃ-ಪದಃ । ಪಶೂನ್ । ಉದಿತಿ । ಅಜಯತ್ । ಪೂಷಾ । ಪಂಚಾಕ್ಷರೇಣೇತಿ ಪಂಚ-ಅಕ್ಷರೇಣ । ಪಂಕ್ತಿಮ್ । ಉದಿತಿ । ಅಜಯತ್ । ಧಾತಾ । ಷಡಕ್ಷರೇಣೇತಿ ಷಟ್-ಅಕ್ಷರೇಣ । ಷಟ್ । ಋತೂನ್ । ಉದಿತಿ । ಅಜಯತ್ । ಮರುತಃ । ಸಪ್ತಾಕ್ಷರೇಣೇತಿ ಸಪ್ತ-ಅಕ್ಷರೇಣ । ಸಪ್ತಪದಾಮಿತಿ ಸಪ್ತ-ಪದಾಮ್। ಶಕ್ವರೀಮ್ । ಉದಿತಿ । ಅಜಯನ್ ।

---

| ಮಂತ್ರ | ವಿನಿಯೋಗ |
|---|---|
| ವಿಷ್ಣುಃ.... ಉದಜಯತ್ । | ರಥಧಾವನದ ಸಮಯದ ಮೂರನೆಯ ಮಂತ್ರ. |
| ಸೋಮಃ..... ಉದಜಯತ್ । | ರಥಧಾವನಸಮಯದ ನಾಲ್ಕನೆಯ ಮಂತ್ರ. |
| ಪೂಷಾ..... ಉದಜಯತ್ । | ರಥಧಾವನದ ಸಮಯದ ಐದನೆಯ ಮಂತ್ರ. |
| ಧಾತಾ.... ಉದಜಯತ್ । | ರಥಧಾವನದಲ್ಲಿನ ಆರನೆಯ ಮಂತ್ರ. |

---

**ಚತುಷ್ಪದಃ ಪಶೂನ್** = ನಾಲ್ಕು ಪಾದಗಳುಳ್ಳ ಪಶುಗಳನ್ನು; **ಉದಜಯತ್** = ಜಯಿಸಿದನು. ✣ **ಪೂಷಾ** = ಪೂಷದೇವನು; **ಪಂಚಾಕ್ಷರೇಣ** = ಐದು ಅಕ್ಷರಗಳುಳ್ಳ ಮಂತ್ರದಿಂದ; **ಪಂಕ್ತಿಮ್** = ಪಂಕ್ತಿಯನ್ನು [ಛಂದಸ್ಸು]; **ಉದಜಯತ್** = ಗೆದ್ದನು. ✣ **ಧಾತಾ** = ಧಾತೃವು; **ಷಡಕ್ಷರೇಣ** = ಆರು ಅಕ್ಷರಗಳ ಮಂತ್ರದಿಂದ; **ಷಟ್ ಋತೂನ್** = ವಸಂತಾದಿ ಆರು ಋತುಗಳನ್ನು; **ಉದಜಯತ್** = ಗೆದ್ದನು. ✣ **ಮರುತಃ** = ಮರುದ್ದೇವತೆಗಳು; **ಸಪ್ತಾಕ್ಷರೇಣ** = ಏಳು ಅಕ್ಷರಗಳುಳ್ಳ ಮಂತ್ರದಿಂದ; **ಸಪ್ತಪದಾಮ್ ಶಕ್ವರೀಮ್** = [ಏಳು ಪಾದಗಳುಳ್ಳ] ಶಕ್ವರೀಛಂದಸ್ಸನ್ನು; **ಉದಜಯನ್** = ಜಯಿಸಿದರು.

---

ನಾಲ್ಕು ಅಕ್ಷರಗಳುಳ್ಳ ಮಂತ್ರದಿಂದ ನಾಲ್ಕು ಪಾದಗಳುಳ್ಳ ಪಶುಗಳನ್ನೂ, ಪೂಷದೇವನು ಐದು ಅಕ್ಷರಗಳುಳ್ಳ ಮಂತ್ರದಿಂದ ಪಂಕ್ತಿಛಂದಸ್ಸನ್ನೂ, ಧಾತೃವು ಆರು ಅಕ್ಷರಗಳ ಮಂತ್ರದಿಂದ ವಸಂತಾದಿ ಆರು ಋತುಗಳನ್ನೂ, ಮರುದ್ದೇವತೆಗಳು ಏಳು ಅಕ್ಷರಗಳುಳ್ಳ ಮಂತ್ರದಿಂದ ಏಳು ಪಾದಗಳುಳ್ಳ ಶಕ್ವರೀಛಂದಸ್ಸನ್ನೂ,

ಬೃಹಸ್ಪತಿರಷ್ಟಾಕ್ಷರೇಣ ಗಾಯತ್ರೀಮುದಜಯನ್ಮಿತ್ರೋ ನವಾಕ್ಷರೇಣ ತ್ರಿವೃತಗ್ಂ ಸ್ತೋಮಮುದಜಯ-ದ್ವರುಣೋ ದಶಾಕ್ಷರೇಣ ವಿರಾಜಮುದಜಯ-

---

ಬೃಹಸ್ಪತಿಃ । ಅಷ್ಟಾಕ್ಷರೇಣೇತ್ಯಷ್ಟಾ-ಅಕ್ಷರೇಣ । ಗಾಯತ್ರೀಮ್ । ಉದಿತಿ । ಅಜಯತ್। ಮಿತ್ರಃ । ನವಾಕ್ಷರೇಣೇತಿ ನವ-ಅಕ್ಷರೇಣ । ತ್ರಿವೃತಮಿತಿ ತ್ರಿ-ವೃತಮ್ । ಸ್ತೋಮಮ್। ಉದಿತಿ । ಅಜಯತ್ । ವರುಣಃ । ದಶಾಕ್ಷರೇಣೇತಿ ದಶ-ಅಕ್ಷರೇಣ । ವಿರಾಜಮಿತಿ ವಿ-ರಾಜಮ್ । ಉದಿತಿ । ಅಜಯತ್ ।

---

| ಮಂತ್ರ | ವಿನಿಯೋಗ |
|---|---|
| ಮರುತಃ....ಉದಜಯನ್ । | ರಥಧಾವನಸಮಯದ ಏಳನೆಯ ಮಂತ್ರ. |
| ಬೃಹಸ್ಪತಿಃ...ಉದಜಯತ್ । | ರಥಧಾವನದಲ್ಲಿನ ಎಂಟನೆಯ ಮಂತ್ರ. |
| ಮಿತ್ರಃ....ಉದಜಯತ್ । | ರಥಧಾವನದಲ್ಲಿನ ಒಂಭತ್ತನೆಯ ಮಂತ್ರ. |

---

✢ **ಬೃಹಸ್ಪತಿಃ** = ಬೃಹಸ್ಪತಿಯು; **ಅಷ್ಟಾಕ್ಷರೇಣ** = ಎಂಟು ಅಕ್ಷರಗಳುಳ್ಳ ಮಂತ್ರದಿಂದ; **ಗಾಯತ್ರೀಮ್ ಉದಜಯತ್** = [ಎಂಟು ಅಕ್ಷರಗಳುಳ್ಳ ಪಾದಗಳಿಂದ ಕೂಡಿರುವ] ಗಾಯತ್ರಿಯನ್ನು ಗೆದ್ದನು; ✢ **ಮಿತ್ರಃ** = ಮಿತ್ರನು; **ನವಾಕ್ಷರೇಣ** = ಒಂಬತ್ತಕ್ಷರಗಳ ಮಂತ್ರದಿಂದ; **ತ್ರಿವೃತಮ್ ಸ್ತೋಮಮ್** = [ತೃಚದ ಗಾನದಲ್ಲಿ ಒಂಬತ್ತು ಸಂಖ್ಯೆಯುಳ್ಳ] ತ್ರಿವೃತ್ ಸ್ತೋಮವನ್ನು; **ಉದಜಯತ್** = ಜಯಸಿದನು; ✢ **ವರುಣಃ** = ವರುಣದೇವನು; **ದಶಾಕ್ಷರೇಣ** = ಹತ್ತು ಅಕ್ಷರಗಳ ಮಂತ್ರದಿಂದ; **ವಿರಾಜಮ್** = ವಿರಾಟ್ ಛಂದಸ್ಸನ್ನೂ/ಅನ್ನವನ್ನೂ; **ಉದಜಯತ್** = ಜಯಿಸಿದನು.

---

ಬೃಹಸ್ಪತಿಯು ಎಂಟು ಅಕ್ಷರಗಳ ಮಂತ್ರದಿಂದ ಗಾಯತ್ರಿ ಯನ್ನೂ, ಮಿತ್ರನು ಒಂಬತ್ತಕ್ಷರಗಳ ಮಂತ್ರದಿಂದ ತ್ರಿವೃತ್ ಸ್ತೋಮವನ್ನೂ, ವರುಣನು ಹತ್ತು ಅಕ್ಷರಗಳುಳ್ಳ ಮಂತ್ರದಿಂದ ವಿರಾಟ್ ಛಂದಸ್ಸನ್ನೂ/ಅನ್ನವನ್ನೂ,

ದಿಂದ್ರ ಏಕಾದಶಾಕ್ಷರೇಣ ತ್ರಿಷ್ಟುಭಮುದಜಯದ್ವಿಶ್ವೇ ದೇವಾ ದ್ವಾದಶಾಕ್ಷರೇಣ ಜಗತೀಮುದಜಯನ್ವಸವಸ್ತ್ರಯೋದಶಾ-ಕ್ಷರೇಣ ತ್ರಯೋದಶಗ್ಂ ಸ್ತೋಮಮುದಜಯ-

---

ಇಂದ್ರಃ । ಏಕಾದಶಾಕ್ಷರೇಣೇತ್ಯೇಕಾದಶ-ಅಕ್ಷರೇಣ । ತ್ರಿಷ್ಟುಭಮ್ । ಉದಿತಿ । ಅಜಯತ್ । ವಿಶ್ವೇ । ದೇವಾಃ । ದ್ವಾದಶಾಕ್ಷರೇಣೇತಿ ದ್ವಾದಶ-ಅಕ್ಷರೇಣ । ಜಗತೀಮ್। ಉದಿತಿ । ಅಜಯನ್ । ವಸವಃ । ತ್ರಯೋದಶಾಕ್ಷರೇಣೇತಿ ತ್ರಯೋದಶ -ಅಕ್ಷರೇಣ। ತ್ರಯೋದಶಮಿತಿ ತ್ರಯಃ-ದಶಮ್ । ಸ್ತೋಮಮ್ । ಉದಿತಿ । ಅಜಯನ್ ।

---

| ಮಂತ್ರ | ವಿನಿಯೋಗ |
|---|---|
| ವರುಣಃ....ಉದಜಯತ್ । | ರಥಧಾವನದಲ್ಲಿನ ಹತ್ತನೆಯ ಮಂತ್ರ. |
| ಇಂದ್ರಃ.... ಉದಜಯತ್ । | ರಥಧಾವನದ ಸಮಯದ ಹನ್ನೊಂದನೆಯ ಮಂತ್ರ. |
| ವಿಶ್ವೇ ದೇವಾಃ.... ಉದಜಯನ್ । | ರಥಧಾವನದಲ್ಲಿನ ಹನ್ನೆರಡನೆಯ ಮಂತ್ರ. |
| ವಸವಃ....ಉದಜಯನ್ । | ರಥಧಾವನದಲ್ಲಿನ ಹದಿಮೂರನೆಯ ಮಂತ್ರ. |

---

✣ **ಇಂದ್ರಃ** = ಇಂದ್ರನು; **ಏಕಾದಶಾಕ್ಷರೇಣ** = ಹನ್ನೊಂದು ಅಕ್ಷರಗಳ ಮಂತ್ರದಿಂದ; **ತ್ರಿಷ್ಟುಭಮ್** = ತ್ರಿಷ್ಟುಪ್ ಛಂದಸ್ಸನ್ನು; **ಉದಜಯತ್**= ಜಯಿಸಿದನು; ✣**ವಿಶ್ವೇ ದೇವಾಃ** = ವಿಶ್ವೇ ದೇವತೆಗಳು; **ದ್ವಾದಶಾಕ್ಷರೇಣ** = ಹನ್ನೆರಡು ಅಕ್ಷರಗಳ ಮಂತ್ರದಿಂದ; **ಜಗತೀಮ್** = [ಹನ್ನೆರಡು ಅಕ್ಷರಗಳ ಪಾದವುಳ್ಳ] ಜಗತೀಛಂದಸ್ಸನ್ನು; **ಉದಜಯನ್** = ಗೆದ್ದರು; ✣ **ವಸವಃ** = ಅಷ್ಟ ವಸುಗಳು; **ತ್ರಯೋದಶಾಕ್ಷರೇಣ** = ಹದಿಮೂರು ಅಕ್ಷರಗಳ ಮಂತ್ರದಿಂದ; **ತ್ರಯೋದಶಮ್ ಸ್ತೋಮಮ್** = [ಗಾನ ಮಾಡುವ ಋಕ್ ಗಳಲ್ಲಿ] ಹದಿಮೂರು ಸಂಖ್ಯೆಯುಳ್ಳ ಸ್ತೋಮವನ್ನು; **ಉದಜಯನ್** = ಜಯಿಸಿದರು;

---

ಇಂದ್ರನು ಹನ್ನೊಂದು ಅಕ್ಷರಗಳ ಮಂತ್ರದಿಂದ ತ್ರಿಷ್ಟುಪ್ ಛಂದಸ್ಸನ್ನೂ, ವಿಶ್ವೇ ದೇವತೆಗಳು ಹನ್ನೆರಡು ಅಕ್ಷರಗಳ ಮಂತ್ರದಿಂದ ಜಗತೀ ಛಂದಸ್ಸನ್ನೂ, ವಸುಗಳು ಹದಿಮೂರು ಅಕ್ಷರಗಳುಳ್ಳ ಮಂತ್ರದಿಂದ ಹದಿಮೂರು ಸಂಖ್ಯೆಯುಳ್ಳ ಸ್ತೋಮವನ್ನೂ,

# ನ್ರುದ್ರಾಶ್ಚತುರ್ದಶಾಕ್ಷರೇಣ ಚತುರ್ದಶಗ್ಂ ಸ್ತೋಮ-ಮುದಜಯನ್ನಾದಿತ್ಯಾಃ ಪಂಚದಶಾಕ್ಷರೇಣ ಪಂಚದಶಗ್ಂ ಸ್ತೋಮಮುದಜಯನ್ನದಿತಿಃ ಷೋಡಶಾಕ್ಷರೇಣ

---

ರುದ್ರಾಃ । ಚತುರ್ದಶಾಕ್ಷರೇಣೇತಿ ಚತುರ್ದಶ-ಅಕ್ಷರೇಣ । ಚತುರ್ದಶಮಿತಿ ಚತುಃ-ದಶಮ್ । ಸ್ತೋಮಮ್ । ಉದಿತಿ । ಅಜಯನ್ನ್ । ಆದಿತ್ಯಾಃ । ಪಂಚದಶಾಕ್ಷರೇಣೇತಿ ಪಂಚದಶ-ಅಕ್ಷರೇಣ । ಪಂಚದಶಮಿತಿ ಪಂಚ-ದಶಮ್ । ಸ್ತೋಮಮ್ । ಉದಿತಿ । ಅಜಯನ್ನ್ । ಅದಿತಿಃ । ಷೋಡಶಾಕ್ಷರೇಣೇತಿ ಷೋಡಶ-ಅಕ್ಷರೇಣ ।

---

| ಮಂತ್ರ | ವಿನಿಯೋಗ |
|---|---|
| ರುದ್ರಾಃ..... ಉದಜಯನ್ । | ರಥಧಾವನದಲ್ಲಿನ ಹದಿನಾಲ್ಕನೆಯ ಮಂತ್ರ. |
| ಆದಿತ್ಯಾಃ...... ಉದಜಯನ್ । | ರಥಧಾವನದಲ್ಲಿನ ಹದಿನೈದನೆಯ ಮಂತ್ರ. |
| ಅದಿತಿಃ.... ಉದಜಯತ್ । | ರಥಧಾವನದಲ್ಲಿನ ಹದಿನಾರನೆಯ ಮಂತ್ರ. |

---

✢ **ರುದ್ರಾಃ** = ಏಕಾದಶ ರುದ್ರರು; **ಚತುರ್ದಶಾಕ್ಷರೇಣ** = ಹದಿನಾಲ್ಕು ಅಕ್ಷರಗಳ ಮಂತ್ರದಿಂದ; **ಚತುರ್ದಶಂ ಸ್ತೋಮಮ್** = [ಗಾನದ ಋಕ್‌ಗಳಲ್ಲಿ] ಹದಿನಾಲ್ಕು ಸಂಖ್ಯೆಯುಳ್ಳ ಸ್ತೋಮವನ್ನು; **ಉದಜಯನ್** = ಗೆದ್ದರು; ✢ **ಆದಿತ್ಯಾಃ** = ದ್ವಾದಶಾದಿತ್ಯರು; **ಪಂಚದಶಾಕ್ಷರೇಣ** = ಹದಿನೈದು ಅಕ್ಷರಗಳ ಮಂತ್ರದಿಂದ; **ಪಂಚದಶಂ ಸ್ತೋಮಮ್** =[ಸ್ತೋತ್ರೀಯ ಋಕ್‌ಗಳಲ್ಲಿ] ಹದಿನೈದು ಸಂಖ್ಯೆಯುಳ್ಳ ಸ್ತೋಮವನ್ನು; **ಉದಜಯನ್** = ಜಯಸಿದರು; ✢**ಅದಿತಿಃ** = ಅದಿತಿಯು; **ಷೋಡಶಾಕ್ಷರೇಣ** = ಹದಿನಾರು ಅಕ್ಷರಗಳ ಮಂತ್ರದಿಂದ;

---

ರುದ್ರರು ಹದಿನಾಲ್ಕು ಅಕ್ಷರಗಳುಳ್ಳ ಮಂತ್ರದಿಂದ ಹದಿನಾಲ್ಕು ಸಂಖ್ಯೆಯುಳ್ಳ ಸ್ತೋಮವನ್ನೂ, ದ್ವಾದಶಾದಿತ್ಯರು ಹದಿನೈದು ಅಕ್ಷರಗಳ ಮಂತ್ರದಿಂದ ಪಂಚದಶ ಸ್ತೋಮವನ್ನೂ, ಅದಿತಿಯು ಹದಿನಾರು ಅಕ್ಷರಗಳ ಮಂತ್ರದಿಂದ ಷೋಡಶ ಸ್ತೋಮ

ಷೋಡಶಗ್ಗ್ಂ ಸ್ತೋಮಮುದಜಯತ್ಪ್ರಜಾಪತಿಃ ಸಪ್ತದಶಾ ಕ್ಷರೇಣ ಸಪ್ತದಶಗ್ಗ್ಂ ಸ್ತೋಮಮುದಜಯತ್॥ಳಳ-11॥

[ತ್ರಿವೃತಗ್ಗ್ಂ ಸ್ತೋಮಮುದಜಯತ್ಷಟ್ಚತ್ವಾರಿಗ್ಂಶಚ್ಚ]

---

ಷೋಡಶಮ್ । ಸ್ತೋಮಮ್ । ಉದಿತಿ । ಅಜಯತ್ । ಪ್ರಜಾಪತಿರಿತಿ ಪ್ರಜಾ-ಪತಿಃ। ಸಪ್ತದಶಾಕ್ಷರೇಣೇತಿ ಸಪ್ತದಶ-ಅಕ್ಷರೇಣ। ಸಪ್ತದಶಮಿತಿ ಸಪ್ತ-ದಶಮ್ । ಸ್ತೋಮಮ್। ಉದಿತಿ । ಅಜಯತ್ ॥ ೧೧ ॥

---

| ಮಂತ್ರ | ವಿನಿಯೋಗ |
|---|---|
| ಪ್ರಜಾಪತಿಃ.... ಉದಜಯತ್ । | ರಥಧಾವನದಲ್ಲಿನ ಹದಿನೇಳನೆಯ ಮಂತ್ರ. |

---

**ಷೋಡಶಂ ಸ್ತೋಮಮ್** = [ಗಾನ ಮಾಡುವ ತೃಚದಲ್ಲಿ] ಹದಿನಾರು ಸಂಖ್ಯೆಯುಳ್ಳ ಸ್ತೋಮವನ್ನು; **ಉದಜಯತ್** = ಜಯಿಸಿದಳು; ✢ **ಪ್ರಜಾಪತಿಃ** = ಪ್ರಜಾಪತಿಯು; **ಸಪ್ತದಶಾಕ್ಷರೇಣ** = ಹದಿನೇಳು ಅಕ್ಷರಗಳುಳ್ಳ ಮಂತ್ರದಿಂದ; **ಸಪ್ತದಶಂ ಸ್ತೋಮಮ್** = [ಸ್ತೋತ್ರೀಯ ತೃಚದಲ್ಲಿ] ಹದಿನೇಳು ಸಂಖ್ಯೆಯ ಆವೃತ್ತಿಯುಳ್ಳ ಸ್ತೋಮವನ್ನು; **ಉದಜಯತ್** = ಜಯಿಸಿದನು.

---

ವನ್ನೂ ಮತ್ತು ಪ್ರಜಾಪತಿಯು ಹದಿನೇಳು ಅಕ್ಷರಗಳುಳ್ಳ ಮಂತ್ರ ದಿಂದ ಸಪ್ತದಶಸ್ತೋಮವನ್ನೂ ಜಯಿಸಿದರು.

## ವಿನಿಯೋಗ ಸಂಗ್ರಹ

ಅಗ್ನಿಃ 1-17 ಸಪ್ತದಶಾಮ್ನಾತಾ ಉಜ್ಜಿತೀರ್ವಾಚಯೇದಮೂಃ ।
ಯಜಮಾನಂ ರಥೇಷ್ವೇಷು ಧಾವತ್ಸ್ವಧ್ವರ್ಯುರಾದರಾತ್ ॥

**ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ—17**

★ ★ ★

# ॥ ದ್ವಾದಶೋಽನುವಾಕಃ ॥

ಉಪಯಾಮಗೃಹೀತೋಽಸಿ ನೃಷದಂ ತ್ವಾ ದ್ರುಷದಂ
ಭುವನಸದಮಿಂದ್ರಾಯ

---

ಉಪಯಾಮಗೃಹೀತ ಇತ್ಯುಪಯಾಮ-ಗೃಹೀತಃ । ಅಸಿ। ನೃಷದಮಿತಿ ನೃ-ಸದಮ್ । ತ್ವಾ। ದ್ರುಷದಮಿತಿ ದ್ರು-ಸದಮ್ । ಭುವನಸದಮಿತಿ ಭುವನ-ಸದಮ್ । ಇಂದ್ರಾಯ।

---

ಹನ್ನೊಂದನೆಯ ಅನುವಾಕದಲ್ಲಿ ಉಜ್ಜಿತಿಮಂತ್ರಗಳು ಉಕ್ತವಾಗಿವೆ. ಈ ಹನ್ನೆರಡನೆಯ ಅನುವಾಕದಲ್ಲಿ ಅತಿಗ್ರಾಹ್ಯಗ್ರಹಣಮಂತ್ರಗಳು ಉಕ್ತವಾಗಿವೆ.

ಆಗ್ರಯಣಗ್ರಹಣಾನಂತರದಲ್ಲಿ 'ಉಪಯಾಮಗೃಹೀತೋಽಸಿ' ಎಂದು ಪ್ರಾರಂಭವಾಗುವ ಐದು ಮಂತ್ರಗಳಿಂದ ಐದು ಅತಿಗ್ರಾಹ್ಯಗಳನ್ನು ಗ್ರಹಿಸಿ 'ಏಷ ತೇ ಯೋನಿಃ' ಎಂದು ಖರಪ್ರದೇಶದಲ್ಲಿ ಸಾದನ ಮಾಡಬೇಕು.

---

| ಮಂತ್ರ | ವಿನಿಯೋಗ |
| --- | --- |
| ಉಪಯಾಮಗೃಹೀತಃ... ಇಂದ್ರಾಯ ತ್ವಾ । | ಅತಿಗ್ರಾಹ್ಯಗ್ರಹಣದ ಪ್ರಥಮ ಮಂತ್ರ |

---

[ಓ! ಪ್ರಥಮಾತಿಗ್ರಾಹ್ಯವೇ! ನೀನು] **ಉಪಯಾಮಗೃಹೀತಃ ಅಸಿ** = ಪೃಥಿವೀವಿಕಾರವಾದ ದಾರುಪಾತ್ರೆಯಿಂದ ಗ್ರಹಿಸಲ್ಪಟ್ಟಿರುವೆ; **ನೃಷದಮ್** = ಮನುಷ್ಯರಲ್ಲಿ ಸ್ವಾಮಿಯಾಗಿ ರುವ; **ದ್ರುಷದಮ್** = ವನಸ್ಪತಿಗಳಲ್ಲಿ ಸ್ವಾಮಿಯಾಗಿರುವ; **ಭುವನಸದಮ್** = ಭುವನಕ್ಕೆ / ಪ್ರಾಣಿಕುಲಕ್ಕೆ ಸ್ವಾಮಿಯಾಗಿರುವ; **ಇಂದ್ರಾಯ** = ಇಂದ್ರನಿಗೆ;

---

**ಇದು ಅತಿಗ್ರಾಹ್ಯಗ್ರಹಣದ ಪ್ರಥಮಮಂತ್ರ. 'ಆದದೇ ಗ್ರಾವಾಸಿ' ಎಂಬಲ್ಲಿ ಹೇಳಿರುವಂತೆಯೇ ಗ್ರಹಣ-ಸಾದನಮಂತ್ರಗಳಾಗಿವೆ.**

ಎಲೈ! ಪೃಥಿವೀವಿಕಾರವಾದ ದಾರುಪಾತ್ರದಲ್ಲಿ ಗ್ರಹಣ ಮಾಡುವ ಅತಿ ಗ್ರಾಹ್ಯವೇ! ನೀನು ಪ್ರಜೆಗಳಲ್ಲಿ ಪ್ರಭುವಾಗಿ ಇರುವೆ. ವನಸ್ಪತಿಗಳಲ್ಲಿ ಪ್ರಭುವಾಗಿರುವೆ.

ಜುಷ್ಟಂ ಗೃಹ್ಣಾಮ್ಯೇಷ ತೇ ಯೋನಿರಿಂದ್ರಾಯ ತ್ವೋಪಯಾ-
ಮಗೃಹೀತೋಽಸ್ಯಪ್ಸುಷದಂ ತ್ವಾ ಘೃತಸದಂ ವ್ಯೋಮಸದ-
ಮಿಂದ್ರಾಯ ಜುಷ್ಟಂ ಗೃಹ್ಣಾಮ್ಯೇಷ

---

ಜುಷ್ಟಮ್ । ಗೃಹ್ಣಾಮಿ । ಏಷಃ । ತೇ। ಯೋನಿಃ । ಇಂದ್ರಾಯ । ತ್ವಾ । ಉಪಯಾಮ-ಗೃಹೀತ ಇತ್ಯುಪಯಾಮ-ಗೃಹೀತಃ । ಅಸಿ । ಅಪ್ಸುಷದಮಿತ್ಯಪ್ಸು-ಸದಮ್। ತ್ವಾ । ಘೃತಸದಮಿತಿ ಘೃತ-ಸದಮ್ । ವ್ಯೋಮಸದಮಿತಿ ವ್ಯೋಮ- ಸದಮ್ । ಇಂದ್ರಾಯ। ಜುಷ್ಟಮ್ । ಗೃಹ್ಣಾಮಿ। ಏಷಃ ।

---

| ಮಂತ್ರ | ವಿನಿಯೋಗ |
|---|---|
| ಉಪಯಾಮಗೃಹೀತೋಽಸ್ಯಪ್ಸುಷದಂ... ತ್ವಾ। | ಅತಿಗ್ರಾಹ್ಯಗ್ರಹಣದ ಎರಡನೆಯ ಮಂತ್ರ. |

---

**ಜುಷ್ಟಮ್** = ಪ್ರಿಯನಾಗಿರುವ; **ತ್ವಾ ಗೃಹ್ಣಾಮಿ** = ನಿನ್ನನ್ನು [ಅತಿಗ್ರಾಹ್ಯಪಾತ್ರದಲ್ಲಿ] ಗ್ರಹಿಸುತ್ತೇನೆ; **ಏಷಃ** = ಈ ಖರಪ್ರದೇಶವು; **ತೇ** = ನಿನಗೆ; **ಯೋನಿಃ** =ಸ್ಥಾನವಾಗಿದೆ; **ಇಂದ್ರಾಯ** = ಇಂದ್ರನಿಗಾಗಿ; **ತ್ವಾ** = ನಿನ್ನನ್ನು; ಸಾದಯಾಮಿ = ಇಲ್ಲಿ ಸ್ಥಾಪಿಸುತ್ತೇನೆ; ✣ [ಎಲ್ಯೆ ದ್ವಿತೀಯಾತಿಗ್ರಾಹ್ಯವೇ!] **ಉಪಯಾಮಗೃಹೀತಃ ಅಸಿ** = ಪೃಥಿವೀವಿಕಾರವಾದ ದಾರುಪಾತ್ರದಿಂದ ಗ್ರಹಿಸಲ್ಪಟ್ಟಿರುವೆ; **ಅಪ್ಸುಷದಮ್** = ನೀರಿನ ಸ್ವಾಮಿಯಾಗಿರುವ; **ಘೃತಸದಮ್** = ಆಜ್ಯಸ್ವಾಮಿಯಾಗಿರುವ; **ವ್ಯೋಮಸದಮ್** = ಅಂತರಿಕ್ಷದಲ್ಲಿ ಇರುವವನಾದ; **ಇಂದ್ರಾಯ ಜುಷ್ಟಮ್**= ಇಂದ್ರನಿಗೆ ಪ್ರಿಯನಾದ; **ತ್ವಾ** = ನಿನ್ನನ್ನು; **ಇಂದ್ರಾಯ** = ಇಂದ್ರನಿಗಾಗಿ; **ಗೃಹ್ಣಾಮಿ** = ಗ್ರಹಿಸುತ್ತೇನೆ; **ಏಷಃ** = ಈ ಖರಪ್ರದೇಶವು;

---

ಭೂತ / ಪ್ರಾಣಿಸಮೂಹದಲ್ಲಿ ಸ್ವಾಮಿಯಾಗಿ ಇರುವೆ. ಇಂದ್ರನಿಗೆ ಪ್ರಿಯವಾಗಿರುವೆ. ಇಂತಹ ನಿನ್ನನ್ನು ಈ ದಾರುಪಾತ್ರದಲ್ಲಿ ಗ್ರಹಿಸುತ್ತೇನೆ. ಇಂದ್ರನಿಗಾಗಿ ನಿನ್ನ ಸ್ಥಾನವಾದ ಖರ ಪ್ರದೇಶದಲ್ಲಿ ಇಡುತ್ತೇನೆ.

**ತೇ ಯೋನಿರಿಂದ್ರಾಯ ತ್ವೋಪಯಾಮಗೃಹೀತೋಽಸಿ ಪೃಥಿವಿಷದಂ ತ್ವಾಽಂತರಿಕ್ಷಸದಂ ನಾಕಸದಮಿಂದ್ರಾಯ ಜುಷ್ಟಂ ಗೃಹ್ಣಾಮ್ಯೇಷ ತೇ ಯೋನಿರಿಂದ್ರಾಯ ತ್ವಾ ॥**

---

ತೇ । ಯೋನಿಃ । ಇಂದ್ರಾಯ । ತ್ವಾ। ಉಪಯಾಮಗೃಹೀತ ಇತ್ಯುಪಯಾಮ-ಗೃಹೀತಃ। ಅಸಿ । ಪೃಥಿವಿಷದಮಿತಿ ಪೃಥಿವಿ-ಸದಮ್। ತ್ವಾ । ಅಂತರಿಕ್ಷಸದಮಿತ್ಯಂತರಿಕ್ಷ-ಸದಮ್। ನಾಕಸದಮಿತಿ ನಾಕ-ಸದಮ್ । ಇಂದ್ರಾಯ । ಜುಷ್ಟಮ್। ಗೃಹ್ಣಾಮಿ । ಏಷಃ । ತೇ । ಯೋನಿಃ । ಇಂದ್ರಾಯ । ತ್ವಾ ॥

---

| ಮಂತ್ರ | ವಿನಿಯೋಗ |
|---|---|
| ಉಪಯಾಮಗೃಹೀತೋಽಸಿ.... ತ್ವಾ ॥ | ಅತಿಗ್ರಾಹ್ಯಗ್ರಹಣದ ಮೂರನೆಯ ಮಂತ್ರ. |

---

**ತೇ ಯೋನಿಃ** = ನಿನ್ನ ಸ್ಥಾನವು; **ಇಂದ್ರಾಯ ತ್ವಾ** = ಇಂದ್ರನಿಗಾಗಿ ನಿನ್ನನ್ನು; ಸಾದಯಾಮಿ = ಇಡುತ್ತೇನೆ; ✢ [ಎಲೈ! ತೃತೀಯಾತಿಗ್ರಾಹ್ಯವೇ!] **ಉಪಯಾಮಗೃಹೀತಃ ಅಸಿ** = ಭೂಮಿಯಲ್ಲಿ ಬೆಳೆದ ಮರದ ಪಾತ್ರದಿಂದ ಗ್ರಹಿಸಲ್ಪಟ್ಟಿರುವೆ; **ಪೃಥಿವಿಷದಮ್** = ಭೂಮಿಗೆ ಒಡೆಯನಾಗಿರುವ; **ಅಂತರಿಕ್ಷಸದಮ್** = ಅಂತರಿಕ್ಷದ ಒಡೆಯನಾಗಿರುವ; **ನಾಕಸದಮ್** = ಸ್ವರ್ಗಪತಿಯೂ ಆಗಿರುವ; **ಇಂದ್ರಾಯ ಜುಷ್ಟಮ್** = ಇಂದ್ರನಿಗೆ ಪ್ರಿಯನಾದ; **ತ್ವಾ** = ನಿನ್ನನ್ನು; **ಗೃಹ್ಣಾಮಿ**= [ಈ ಪಾತ್ರದಲ್ಲಿ] ಗ್ರಹಿಸುತ್ತೇನೆ; **ಏಷಃ ತೇ ಯೋನಿಃ** = ಈ ಖರಪ್ರದೇಶವು ನಿನ್ನಸ್ಥಾನವು; **ಇಂದ್ರಾಯ ತ್ವಾ** = ಇಂದ್ರನಿಗಾಗಿ ನಿನ್ನನ್ನು [ಇಲ್ಲಿ ಇಡುತ್ತೇನೆ].

---

ಎಲೈ! ದ್ವಿತೀಯಾತಿಗ್ರಾಹ್ಯವೇ! ನೀರಿನಲ್ಲಿ ಒಡೆಯನಾಗಿ ಇರುವೆ. ಆಜ್ಯದಲ್ಲಿ ಪ್ರಭುವಾಗಿರುವೆ. ಅಂತರಿಕ್ಷದ ಅಧಿಪತಿಯೂ ಆಗಿರುವೆ. ಇಂದ್ರನಿಗೆ ಪ್ರಿಯನಾಗಿರುವೆ. ಇಂತಹ ನಿನ್ನನ್ನು ಗ್ರಹಣ ಮಾಡುತ್ತೇನೆ.

ನಿನ್ನ ಸ್ಥಾನವಾದ ಖರಪ್ರದೇಶದಲ್ಲಿ ನಿನ್ನನ್ನು ಇಂದ್ರನಿಗೋಸ್ಕರ ಇಟ್ಟಿರುತ್ತೇನೆ.

**ಯೇ ಗ್ರಹಾಃ ಪಂಚಜನೀನಾ ಯೇಷಾಂ ತ್ರಿಸ್ರಃ ಪರಮಜಾಃ। ದೈವ್ಯಃ ಕೋಶಃ [ಕೋಶಃ (೧)] ಸಮುಬ್ಜಿತಃ । ತೇಷಾಂ ವಿಶಿಪ್ರಿಯಾಣಾಮಿಷಮೂರ್ಜಗ್ಂ**

---

ಯೇ । ಗ್ರಹಾಃ । ಪಂಚಜನೀನಾ ಇತಿ ಪಂಚ-ಜನೀನಾಃ । ಯೇಷಾಮ್ । ತ್ರಿಸ್ರಃ । ಪರಮಜಾ ಇತಿ ಪರಮ-ಜಾಃ ॥ ದೈವ್ಯಃ । ಕೋಶಃ (೧)। ಸಮುಬ್ಜಿತ ಇತಿ ಸಮ್-ಉಬ್ಜಿತಃ॥ ತೇಷಾಮ್ । ವಿಶಿಪ್ರಿಯಾಣಾಮಿತಿ ವಿ-ಶಿಪ್ರಿಯಾಣಾಮ್ । ಇಷಮ್ । ಊರ್ಜಮ್ ।

---

| ಮಂತ್ರ | ವಿನಿಯೋಗ |
|---|---|
| ಯೇ ಗ್ರಹಾಃ.... ಇಂದ್ರಾಯ ತ್ವಾ । | ಅತಿಗ್ರಾಹ್ಯಗ್ರಹಣದ ನಾಲ್ಕನೆಯ ಮಂತ್ರ. |

---

✢ **ಯೇ ಗ್ರಹಾಃ** = ಯಾವ ಅತಿಗ್ರಾಹ್ಯಪಾತ್ರಗಳು; **ಪಂಚಜನೀನಾಃ** = [ದೇವ-ಅಸುರ-ರಕ್ಷೋ-ಮನುಷ್ಯ-ಗಂಧರ್ವರಿಗೆ] ಅಥವಾ [ಬೇಡರಿಂದ ಕೂಡಿದ ನಾಲ್ಕು ವರ್ಣದವರಿಗೆ] ಹಿತವಾಗಿವೆಯೋ; **ಯೇಷಾಮ್** = ಯಾವ ಪಾತ್ರಗಳಿಗೆ; **ತಿಸ್ರಃ** = ಮೂರು [ಆಗ್ನೇಯ, ಐಂದ್ರ, ಸೌರ್ಯಗಳು] **ಪರಮಜಾಃ** = ಪ್ರಕೃತಿಯಾಗಿವೆಯೋ; **ಯೇಷಾಮ್** = ಯಾವುಗಳ ಪ್ರಭಾವದಿಂದ; **ದೈವ್ಯಃ ಕೋಶಃ** = ಅಂತರಿಕ್ಷದಲ್ಲಿರುವ ಮೇಘವೆಂಬ ಕೋಶವು; **ಸಮುಬ್ಜಿತಃ** = ಮಳೆಯನ್ನು ಸುರಿಸಲು ಅಧೋಮುಖವಾಗು ವುದೋ; **ತೇಷಾಮ್ ವಿಶಿಪ್ರಿಯಾಣಾಮ್** = ದವಡೆಯಂತಿರುವ ಆ ಸೋಮಪಾತ್ರಗಳಿ ಗಾಗಿ; **ಇಷಮ್** = ಅನ್ನಸದೃಶವಾದ; **ಊರ್ಜಮ್** = ಬಲಪ್ರದವಾದ ಸೋಮರಸವನ್ನು;

---

ಎಲೈ! ಮೂರನೆಯ ಅತಿಗ್ರಾಹ್ಯವೇ! ನೀನು ಪೃಥಿವಿಯಲ್ಲಿಯೂ, ಅಂತರಿಕ್ಷ ದಲ್ಲಿಯೂ, ದ್ಯುಲೋಕದಲ್ಲಿಯೂ ಅಧಿಪತಿಯಾಗಿ ಇರುವೆ. ಇಂದ್ರನಿಗೆ ಪ್ರಿಯನಾಗಿ ರುವೆ. ನಿನ್ನನ್ನು ಈ ಪಾತ್ರದಲ್ಲಿ ಗ್ರಹಿಸುತ್ತೇನೆ. ಇಂದ್ರನಿಗೆ ಸಮರ್ಪಿಸುವುದಕ್ಕಾಗಿ ನಿನ್ನ ಸ್ಥಾನವಾದ ಖರಪ್ರದೇಶದಲ್ಲಿ ನಿನ್ನನ್ನು ಇಟ್ಟಿರುತ್ತೇನೆ.

ಎಲೈ! ಚತುರ್ಥಾತಿಗ್ರಾಹ್ಯವೇ! ಪಂಚಜನರಾದ ದೇವ-ಅಸುರ-ಮನುಷ್ಯ-ರಕ್ಷೋ-ಗಂಧರ್ವರಿಗೆ ಅಥವಾ ನಿಷಾದರೇ ಐದನೆಯವರಾಗಿರುವ ಚತುರ್ವರ್ಣದವರಿಗೆ ನೀವು ಹಿತರಾಗಿದ್ದೀರಿ. ಆಗ್ನೇಯ, ಐಂದ್ರ, ಸೌರ್ಯಗಳೆಂಬ ಮೂರು ನಿಮಗೆ ಪ್ರಕೃತಿ

**ಸಮಗ್ರಭೀಮೇಷ ತೇ ಯೋನಿರಿಂದ್ರಾಯ ತ್ವಾ॥ ಅಪಾಗ್‌ಂ ರಸಮುದ್ವಯಸಗ್‌ಂ ಸೂರ್ಯರಶ್ಮಿಗ್‌ಂ ಸಮಾಭೃತಮ್ । ಅಪಾಗ್‌ಂ ರಸಸ್ಯ ಯೋ ರಸಸ್ತಂ ವೋ ಗೃಹ್ಣಾಮ್ಯುತ್ತಮ-ಮೇಷ ತೇ ಯೋನಿರಿಂದ್ರಾಯ ತ್ವಾ ॥**

---

ಸಮಿತಿ । ಅಗ್ರಭೀಮ್ । ಏಷಃ । ತೇ । ಯೋನಿಃ । ಇಂದ್ರಾಯ । ತ್ವಾ ॥ ಅಪಾಮ್। ರಸಮ್। ಉದ್ವಯಸಮಿತ್ಯುತ್-ವಯಸಮ್ । ಸೂರ್ಯರಶ್ಮಿಮಿತಿ ಸೂರ್ಯ-ರಶ್ಮಿಮ್। ಸಮಾಭೃತಮಿತಿ ಸಮ್-ಆಭೃತಮ್॥ ಅಪಾಮ್। ರಸಸ್ಯ । ಯಃ । ರಸಃ । ತಮ್ । ವಃ। ಗೃಹ್ಣಾಮಿ। ಉತ್ತಮಮಿತ್ಯುತ್-ತಮಮ್। ಏಷಃ । ತೇ । ಯೋನಿಃ। ಇಂದ್ರಾಯ। ತ್ವಾ॥

---

| ಮಂತ್ರ | ವಿನಿಯೋಗ |
|---|---|
| ಅಪಾಮ್....ಇಂದ್ರಾಯ ತ್ವಾ ॥ | ಅತಿಗ್ರಾಹ್ಯಗ್ರಹಣದ ಐದನೆಯ ಮಂತ್ರ. |

---

**ಸಮಗ್ರಭೀಮ್** = ಚೆನ್ನಾಗಿ ಹಿಡಿದಿಟ್ಟೆನು; **ಏಷಃ** = ಈ ಖರಪ್ರದೇಶವು; **ತೇ ಯೋನಿಃ** = ನಿನ್ನ ಸ್ಥಾನವಾಗಿದೆ; **ಇಂದ್ರಾಯ ತ್ವಾ** = ಇಂದ್ರನಿಗಾಗಿ ನಿನ್ನನ್ನು; ಸಾದಯಾಮಿ = ಇಡುತ್ತೇನೆ; ✢ [ಎಲೈ! ಪಂಚಮಾತಿಗ್ರಾಹ್ಯವೇ] **ಅಪಾಮ್ ರಸಮ್** = ನೀರಿನಿಂದ ಪೋಷಿಸಲ್ಪಟ್ಟ ಸೋಮವಲ್ಲಿಯ ಸಾರವಾದ; **ಉದ್ವಯಸಮ್** = ಅನ್ನರೂಪವಾಗಿ ಜೀವನಹೇತುವಾದ; **ಸೂರ್ಯರಶ್ಮಿಮ್** = ಸೂರ್ಯರಶ್ಮಿಯೇ ಪಕ್ವಕಾರಣವಾಗಿರುವ; **ಸಮಾಭೃತಮ್** = [ಗಾಯತ್ರಿಯಿಂದ ದ್ಯುಲೋಕದಿಂದ] ತರಲ್ಪಟ್ಟಿರುವ; **ಅಪಾಮ್ ರಸಸ್ಯ ಯಃ ರಸಃ** = ನೀರಿನಿಂದ ಬೆಳೆದಿರುವ ಆ ಸೋಮಲತೆಯ ರಸವು ಯಾವುದಿದೆಯೋ ಅಂತಹ; **ವಃ ಉತ್ತಮಮ್** = ನಿಮ್ಮಲ್ಲಿ ಕೊನೆಯದಾಗಿರುವ/ಐದನೆಯದಾಗಿರುವ; **ತಮ್** = ಆ ಸೋಮರಸವನ್ನು; **ಗೃಹ್ಣಾಮಿ** =[ಈ ದಾರುಪಾತ್ರದಲ್ಲಿ] ಹಿಡಿದಿಟ್ಟಿರುತ್ತೇನೆ. **ಏಷಃ** = ಈ ಖರಪ್ರದೇಶವು; **ತೇ ಯೋನಿಃ** = ನಿನ್ನಸ್ಥಾನವಾಗಿದೆ; [ಇಲ್ಲಿ] **ತ್ವಾ** = ನಿನ್ನನ್ನು; **ಇಂದ್ರಾಯ** = ಇಂದ್ರನಿಗೆ[ಸಮರ್ಪಿಸಲು] ಸಾದಯಾಮಿ = ಇಟ್ಟಿರುತ್ತೇನೆ;

---

ಗಳಾಗಿವೆ. ಆ ದೇವತೆಗಳ ಅನುಗ್ರಹದಿಂದ ದ್ಯುಲೋಕದಲ್ಲಿರುವ ಮೇಘವು ಮಳೆಯನ್ನು ಸುರಿಸಲು ಅಧೋಮುಖವಾದುದಾಗುತ್ತದೆ. ದೇವತೆಗಳ ದವಡೆಗಳಂತಿರುವ ಸೋಮ ಗ್ರಹಗಳನ್ನು ತುಂಬಿಸಲು ಅನ್ನದಂತೆ ಬಲಸಾಧನವಾದ ಸೋಮರಸವನ್ನು

**ಅಯಾ ವಿಷ್ಠಾ ಜನಯನ್ಕರ್ವರಾಣಿ ಸ ಹಿ ಘೃಣಿರುರುರ್ವರಾಯ ಗಾತುಃ । ಸ ಪ್ರತ್ಯುದೈದ್ಧರುಣೋ ಮಧ್ವೋ ಅಗ್ರಗ್ಂ ಸ್ವಾಯಾಂ ಯತ್ತನುವಾಂ ತನೂಮೈರಯತ ।**

---

ಅಯಾ । ವಿಷ್ಠಾ ಇತಿ ವಿ-ಸ್ಥಾಃ । ಜನಯನ್ । ಕರ್ವರಾಣಿ । ಸಃ । ಹಿ । ಘೃಣಿಃ । ಉರುಃ । ವರಾಯ । ಗಾತುಃ ॥ ಸಃ । ಪ್ರತಿ । ಉದಿತಿ । ಐತ್ । ಧರುಣಃ । ಮಧ್ವಃ । ಅಗ್ರಮ್ । ಸ್ವಾಯಾಮ್ । ಯತ್ । ತನುವಾಮ್ । ತನೂಮ್ । ಐರಯತ ॥

---

| ಮಂತ್ರ | ವಿನಿಯೋಗ |
|---|---|
| ಅಯಾ.... ಪ್ರಜಾಪತಯೇ ತ್ವಾ । | ಸಪ್ತದಶಪ್ರಾಜಾಪತ್ಯಗ್ರಹಣ-ಸಾದನಕ್ಕಾಗಿ |

---

✢ **ಅಯಾ** = ಈ ಪ್ರಜಾಪತಿಯು; **ವಿಷ್ಠಾಃ** = ವಿಶೇಷವಾಗಿ ಇಲ್ಲಿರುವವನಾಗಿ; **ಕರ್ವರಾಣಿ** = ಈ ಕರ್ಮಗಳನ್ನು; **ಜನಯನ್** [ವರ್ತತೇ] = ಉಂಟು ಮಾಡುತ್ತಾ ಇರುತ್ತಾನೆ; **ಹಿ** = ಯಾವ ಕಾರಣದಿಂದ; **ಸಃ** = ಆ ಪ್ರಜಾಪತಿಯು; **ಘೃಣಿಃ** = ಪ್ರಕಾಶಕನಾಗಿ; **ವರಾಯ** = ಶ್ರೇಷ್ಠವಾದ ಕರ್ಮಫಲಕ್ಕೆ; **ಉರುಃ ಗಾತುಃ** = ವಿಸ್ತೀರ್ಣನಾಗಿರುತ್ತಾನೆಯೋ[ಆ ಕಾರಣದಿಂದ] **ಸಃ** = ಆ ಪ್ರಜಾಪತಿಯು; **ಮಧ್ವಃ** = ಮಾಧುರ್ಯಯುಕ್ತವಾದ ಕರ್ಮಫಲವಾದ; **ಧರುಣಃ** = ಧಾರಕನಾಗಿ; **ಅಗ್ರಮ್ ಪ್ರತಿ** = ನಮ್ಮ ಸಮೀಪಕ್ಕೆ; **ಪ್ರತಿ ಉದೈತ್** = ಬಂದನು; [ಮಧ್ವಃ ಅಗ್ರಂ ಪ್ರಾಪ್ನೋತು = ಧಾರಕನು ಸಮೀಪಕ್ಕೆ ಬರಲಿ] **ಯತ್** = ಯಾವ ಕಾರಣದಿಂದ; **ಸ್ವಾಯಾಮ್ ತನುವಾಂ** = ತನ್ನ ಶರೀರದಲ್ಲಿ; **ತನೂಮ್ ಐರಯತ** = ನಮ್ಮ ಶರೀರವನ್ನು ಸೇರಿಸುತ್ತಾರೆಯೋ; [ತಸ್ಮಾತ್ ಫಲಂ ವಯಂ ಪ್ರಾಪ್ಸ್ಯಾಮಃ = ಕರ್ಮಫಲವನ್ನು ಹೊಂದುತ್ತೇವೆ]

---

ಸಂಗ್ರಹಿಸುತ್ತೇನೆ. ಇಂದ್ರನಿಗಾಗಿ ನಿನ್ನ ಸ್ಥಾನವಾದ ಖರಪ್ರದೇಶದಲ್ಲಿ ನಿನ್ನನ್ನು ಇಡುತ್ತೇನೆ.

ಎಲೈ! ಐದನೆಯ ಅತಿಗ್ರಾಹ್ಯವೇ! ಈ ಸೋಮರಸವು ನೀರಿನಿಂದ ಪೋಷಿಸಲ್ಪಟ್ಟು ಅನ್ನರೂಪವಾಗಿ ಜೀವನಹೇತುವಾಗಿದೆ. ಸೂರ್ಯರಶ್ಮಿಯು ಇದರ ಪಾಕಕಾರಣವಾಗಿದೆ.

**ಉಪಯಾಮಗೃಹೀತೋಽಸಿ ಪ್ರಜಾಪತಯೇ ತ್ವಾ ಜುಷ್ಟಂ ಗೃಹ್ಣಾಮ್ಯೇಷ ತೇ ಯೋನಿಃ ಪ್ರಜಾಪತಯೇ ತ್ವಾ ॥೧೨-46॥**

**[ಕೋಶಸ್ತ್ವನುವಾಂ ತ್ರಯೋದಶ ಚ ॥]**

---

ಉಪಯಾಮಗೃಹೀತ ಇತ್ಯುಪಯಾಮ-ಗೃಹೀತಃ । ಅಸಿ । ಪ್ರಜಾಪತಯ ಇತಿ ಪ್ರಜಾ-ಪತಯೇ । ತ್ವಾ । ಜುಷ್ಟಮ್ । ಗೃಹ್ಣಾಮಿ । ಏಷಃ । ತೇ । ಯೋನಿಃ । ಪ್ರಜಾಪತಯ ಇತಿ ಪ್ರಜಾ-ಪತಯೇ । ತ್ವಾ ॥

---

ಉಪಯಾಮಗೃಹೀತಃ ಅಸಿ = ದಾರುಪಾತ್ರಗೃಹೀತರಾಗಿದ್ದೀರಿ; ಪ್ರಜಾಪತಯೇ ಜುಷ್ಟಮ್ ತ್ವಾ (ವಃ) ಗೃಹ್ಣಾಮಿ = ಪ್ರಜಾಪತಿಗೆ ಪ್ರಿಯರಾದ ನಿಮ್ಮನ್ನು ಈ ಪಾತ್ರ ಗಳಲ್ಲಿ ಸಂಗ್ರಹಿಸುತ್ತೇನೆ; ಏಷಃ ತೇ ಯೋನಿಃ = ಈ ಖರಪ್ರದೇಶವು ನಿಮ್ಮ ಸ್ಥಾನ; ಪ್ರಜಾಪತಯೇ ತ್ವಾ ಸಾದಯಾಮಿ = ಪ್ರಜಾಪತಿಗಾಗಿ ನಿಮ್ಮನ್ನು ಇಲ್ಲಿ ಇಡುತ್ತೇನೆ.

---

ಈ ಸೋಮವು ದೇವಲೋಕದಿಂದ ಗಾಯತ್ರಿಯು ತಂದುದಾಗಿದೆ. ನೀರಿನಿಂದ ಪುಷ್ಟವಾದ ಸೋಮಲತೆಯ ರಸವಾಗಿದೆ. ಇದು ಅತಿಗ್ರಾಹ್ಯಗಳಲ್ಲಿ ಉತ್ತಮವಾಗಿದೆ. ಕೊನೆಯ ದಾಗಿದೆ. ಇಂದ್ರನಿಗೆ ಪ್ರಿಯವಾಗಿದೆ. ಇಂತಹ ಸೋಮರಸವನ್ನು ಈ ದಾರುಪಾತ್ರದಲ್ಲಿ ಸಂಗ್ರಹಿಸುತ್ತೇನೆ.

ಈ ಖರಪ್ರದೇಶವು ನಿನ್ನ ಸ್ಥಾನವಾಗಿದೆ. ಇಂದ್ರನಿಗೆ ಸಮರ್ಪಿಸಲು ನಿನ್ನನ್ನು ಇಲ್ಲಿ ಸಾದನ ಮಾಡುತ್ತೇನೆ.

ಈ ಪ್ರಜಾಪತಿಯು ಇಲ್ಲಿ ಸ್ಥಿತನಾಗಿ ಕರ್ಮಗಳನ್ನು ಸಂಪಾದಿಸುತ್ತಾ ಇರುತ್ತಾನೆ. ಪ್ರಕಾಶಕನಾದ ಆತನು ಕರ್ಮಫಲಕ್ಕೆ ವಿಸ್ತೀರ್ಣಮಾರ್ಗನಾಗಿದ್ದಾನೆ. ಆತನು ಮಧುರವಾದ ಕರ್ಮಫಲವನ್ನು ಕೊಡಲು ನಮ್ಮಲ್ಲಿ ಬರಲಿ. ತನ್ನ ದೇಹದಲ್ಲಿ ನಮ್ಮ ದೇಹವನ್ನು ಸೇರಿಸುವುದರಿಂದ ನಾವು ಕರ್ಮಫಲವನ್ನು ಹೊಂದುತ್ತೇವೆ.

ವಾಜಪೇಯಮಂತ್ರಗಳು ಸಮಾಪ್ತವಾದವು.

## ವಿನಿಯೋಗ ಸಂಗ್ರಹ

[1]ಉಪೇತ್ಯತಿಗ್ರಾಹ್ಯಮೈಂದ್ರಂ ಗೃಹೀತ್ವೈಷೇತಿ[2] ಸಾದಯೇತ್ ।
[3-10]ಉತ್ತರೇಷು ಚತುರ್ಷ್ವೇವಮಯಾ[11-12] ಸಪ್ತದಶ ಗ್ರಹಾನ್ ।
ಪ್ರಾಜಾಪತ್ಯಾನ್ ಪ್ರಗೃಹ್ಣಾತಿ ಮಂತ್ರಾ ದ್ವಾದಶ ವರ್ಣಿತಾಃ ।

### ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ–12

### ಅನುವಾಕದ ವಿಶೇಷವಿಷಯಗಳು

### ಅ) ಛಂದಸ್ಸು

| ಮಂತ್ರ | ಛಂದಸ್ಸು |
|---|---|
| 1) ಯೇ ಗ್ರಹಾಃ.... ಸಮಗ್ರಭೀಮ್ ॥ | ಪಂಚಪದಾ ಪಂಕ್ತಿಃ |
| 2) ಅಪಾಗ್ಂ.... ಉತ್ತಮಮ್ ॥ | ಅನುಷ್ಟುಪ್ |
| 3) ಅಯಾ ವಿಷ್ಠಾ... ಪ್ರಜಾಪತಯೇ ತ್ವಾ ॥ | ಯಜುರಂತಾ ತ್ರಿಷ್ಟುಪ್ |

★ ★ ★

## ॥ ತ್ರಯೋದಶೋಽನುವಾಕಃ ॥

**ಅನ್ವಹ ಮಾಸಾ ಅನ್ವಿದ್ವನಾನ್ಯನ್ವೋಷಧೀರನು ಪರ್ವತಾಸಃ।**

---

॥ ವೈ ॥ ಅನ್ವಿತಿ । ಅಹ । ಮಾಸಾಃ । ಅನ್ವಿತಿ । ಇತ್ । ವನಾನಿ । ಅನ್ವಿತಿ । ಓಷಧೀಃ। ಅನ್ವಿತಿ। ಪರ್ವತಾಸಃ ॥

---

ಹದಿಮೂರನೆಯ ಈ ಅನುವಾಕದಲ್ಲಿ ಕಾಮ್ಯೇಷ್ಟಿಯ ಯಾಜ್ಯಾ-ಪುರೋನುವಾಕ್ಯೆಗಳು ಉಕ್ತವಾಗಿವೆ. ಇವು ವೈಶ್ವದೇವಕಾಂಡಕ್ಕೆ ಸೇರಿದವುಗಳಾಗಿವೆ. 'ಇಂದ್ರಾಯಾನ್ವೃಜವೇ ಪುರೋಡಾಶಮೇಕಾದಶಕಪಾಲಂ ನಿರ್ವಪೇದ್ಗ್ರಾಮಕಾಮಃ' ಎಂದು ಗ್ರಾಮಸ್ವಾಮಿಯಾಗಲು ಬಯಸುವವನು ಮಾಡಬೇಕಾದ ಇಷ್ಟಿಯಿದು.

---

| ಮಂತ್ರ | ವಿನಿಯೋಗ |
|---|---|
| ಅನ್ವಹ..... ಜಾಯಮಾನಮ್ ॥ | ಮೇಲಿನ ಇಷ್ಟಿಯ ಪುರೋನುವಾಕ್ಯೆ. |

---

**ಜಾಯಮಾನಮ್ ಇಂದ್ರಮ್ ಅನು** = ಹುಟ್ಟುತ್ತಿರುವ/ನಮ್ಮನ್ನು ಅನುಗ್ರಹಿಸಲು ಬರುತ್ತಿರುವ ಇಂದ್ರನನ್ನು ಅನುಸರಿಸಿ; **ಮಾಸಾಃ ಅಹ** = ಚೈತ್ರಾದಿಮಾಸಗಳೂ; **ಅನು ಅಜಿಹತ** = [ಅನುಗ್ರಹಿಸಲು] ಅನುಸರಿಸಿ ಬಂದವು; **ವನಾನಿ ಇತ್** = ಅರಣ್ಯಗಳೂ; **ಅನು ಅಜಿಹತ** = ಅನುಸರಿಸಿ [ಬಂದವು]; **ಓಷಧೀಃ ಅನು** = ಸಸ್ಯಗಳೂ ಅನುಸರಿಸಿ [ಬಂದವು] **ಪರ್ವತಾಸಃ ಅನು** = ಪರ್ವತಗಳೂ ಹಿಂಬಾಲಿಸಿ [ಬಂದವು].

---

ಪ್ರಭುವು ಬಂದರೆ ಪರಿವಾರದವರೂ ಅನುಸರಿಸಿ ಬರುತ್ತಾರಷ್ಟೆ. ಹಾಗೆಯೇ ನಮ್ಮನ್ನು ಅನುಗ್ರಹಿಸಲು ಬರುತ್ತಿರುವ ಸ್ವಾಮಿಯಾದ ಇಂದ್ರನನ್ನು ಅನುಸರಿಸಿ, ಮಾಸದೇವತೆಗಳೂ, ಅರಣ್ಯದೇವತೆಗಳೂ, ಓಷಧಿಗಳೂ, ಪರ್ವತದೇವತೆಗಳೂ, ನಮ್ಮನ್ನು

**ಅನ್ವಿಂದ್ರ॒ಗ್ಂ ರೋದ॑ಸೀ ವಾವ॒ಶಾನೇ ಅನ್ವಾ॑ಪೋ ಅಜಿಹತ॒ ಜಾ॑ಯಮಾ॑ನಮ್ ॥ ಅನು ತೇ ದಾಯಿ ಮ॒ಹ ಇ॑ಂದ್ರಿ॒ಯಾಯ॑ ಸ॒ತ್ರಾ ತೇ॒ ವಿಶ್ವ॑ಮನು ವೃತ್ರ॒ಹತ್ಯೇ ।**

---

ಅನ್ವಿತಿ । ಇಂದ್ರಮ್ । ರೋದಸೀ ಇತಿ । ವಾವಶಾನೇ ಇತಿ । ಅನ್ವಿತಿ । ಆಪಃ । ಅಜಿಹತ। ಜಾಯಮಾನಮ್ ॥ ಅನ್ವಿತಿ । ತೇ । ದಾಯಿ । ಮಹೇ । ಇಂದ್ರಿಯಾಯ। ಸತ್ರಾ । ತೇ। ವಿಶ್ವಮ್ । ಅನ್ವಿತಿ । ವೃತ್ರಹತ್ಯ ಇತಿ ವೃತ್ರ-ಹತ್ಯೇ॥

---

| ಮಂತ್ರ | ವಿನಿಯೋಗ |
|---|---|
| ಅನು ತೇ.... ನ್ನಷಹ್ಯೇ ॥ | ಹಿಂದಿನ ಇಷ್ಟಿಯ ಯಾಜ್ಯಾನುವಾಕ್ಯೆ. |

---

**ವಾವಶಾನೇ** = ನಮ್ಮನ್ನು ಅನುಗ್ರಹಿಸಲು ಬಯಸುವ; **ರೋದಸೀ** = ದ್ಯಾವಾಪೃಥಿವಿಗಳೂ; **ಅನು** = ಅನುಸರಿಸಿ[ಬಂದವು]; * **ಆಪಃ ಅನು ಅಜಿಹತ** = ಜಲದೇವತೆಗಳೂ ಅನುಸರಿಸಿ [ಬಂದವು]; ✣ **ಯಜತ್ರ ಇಂದ್ರ** = ಯಾಗಕ್ಕೆ ಉದ್ದೇಶ್ಯಭೂತನಾದ ಇಂದ್ರನೇ! **ವೃತ್ರಹತ್ಯೇ ಅನು** = [ನೀನು ಮಾಡಿದ] ವೃತ್ರಾಸುರವಧವನ್ನನುಸರಿಸಿ; **ತೇ** = ನಿನ್ನ; **ಇಂದ್ರಿಯಾಯ** = ಬಲಸಿದ್ಧಿಗಾಗಿ;

---

ಅನುಗ್ರಹಿಸಲು ಇಚ್ಛಿಸುವ ದ್ಯಾವಾಪೃಥಿವಿಗಳೂ, ಜಲದೇವತೆಗಳೂ ಬಂದಿದ್ದಾರೆ/ಬರಲಿ. ಇಂತಹ ಇಂದ್ರನು ಗ್ರಾಮಾಧಿಪತ್ಯವನ್ನು ಕೊಡಲಿ.

ಯಾಗಪ್ರಧಾನವಾದ ಇಂದ್ರನೇ! ವೃತ್ರಾಸುರನನ್ನು ಕೊಂದು ನೀನು ಮಹೇಂದ್ರನೆಂದು ಪ್ರಸಿದ್ಧನಾಗಿರುವೆ. ನಿನ್ನ ಬಲಕ್ಕಾಗಿ, ಕ್ಷತ್ರಿಯತ್ವಜಾತ್ಯಭಿಮಾನಕ್ಕಾಗಿ

---

* 'ಅನು' ಎಂಬ ಪದವು ಬೇರೆ ಬೇರೆ ಇರುವುದರಿಂದ ಬೇರೆ ಬೇರೆ ವಾಕ್ಯಗಳನ್ನು ಮಾಡಲಾಗಿದೆ.

# ಅನು ಕ್ಷತ್ರಮನು ಸಹೋ ಯಜತ್ರೇಂದ್ರ ದೇವೇಭಿರನು ತೇ ನೃಷಹ್ಯೇ। ಇಂದ್ರಾಣೀಮಾಸು ನಾರಿಷು ಸುಪತ್ನೀಮಹಮಶ್ರವಮ್ । ನ ಹ್ಯಸ್ಯಾ ಅಪರಂ ಚನ

---

ಅನ್ವಿತಿ । ಕ್ಷತ್ರಮ್। ಅನ್ವಿತಿ । ಸಹಃ । ಯಜತ್ರ। ಇಂದ್ರ । ದೇವೇಭಿಃ । ಅನ್ವಿತಿ । ತೇ। ನೃಷಹ್ಯ ಇತಿ ನೃ-ಸಹ್ಯೇ ॥ ಇಂದ್ರಾಣೀಮ್ । ಆಸು । ನಾರಿಷು । ಸುಪತ್ನೀಮಿತಿ ಸು-ಪತ್ನೀಮ್ । ಅಹಮ್ । ಅಶ್ರವಮ್ ॥ ನ । ಹಿ । ಅಸ್ಯಾಃ । ಅಪರಮ್ । ಚನ ।

---

| ಮಂತ್ರ | ವಿನಿಯೋಗ |
|---|---|
| ಇಂದ್ರಾಣೀಮ್... ಪತಿಃ ॥ | ಯಾವನ ಸೈನ್ಯವು ಕಾರ್ಯಸಮರ್ಥವಾಗಿಲ್ಲವೋ ಅವನಿಗೆ ವಿಹಿತವಾದ ಚರುಯಾಗದ ಪುರೋನುವಾಕ್ಯೆ. |

---

**ಕ್ಷತ್ರಮ್ ಅನು** = ಕ್ಷತ್ರಿಯತ್ವಜಾತ್ಯಭಿಮಾನವನ್ನು/ಧನವನ್ನು ಅನುಸರಿಸಿ; **ಸಹಃ ಅನು** = ಬಲವನ್ನೂ ಅನುಸರಿಸಿ; **ನೃಷಹ್ಯೇ ಅನು** = ವೈರಿಗಳ ತಿರಸ್ಕಾರವನ್ನೂ ಅನುಸರಿಸಿ; **ತೇ** = ನಿನಗೆ; **ದೇವೇಭಿಃ** = ಅಗ್ನ್ಯಾದಿದೇವತೆಗಳಿಂದ/ಋತ್ವಿಜರಿಂದ; **ಸತ್ರಾ** = ಸತ್ರಾದಿ ಯಾಗಗಳಲ್ಲಿ; **ಮಹೇ ತೇ** = [ಸರ್ವದೇವತೆಗಳಲ್ಲಿಯೂ] ಅಧಿಕನಾದ ನಿನಗೆ; **ವಿಶ್ವಮ್** = ಸೋಮಾದಿಹವಿಸ್ಸೆಲ್ಲವೂ; **ಅನು ದಾಯಿ** = ಅನುಸರಿಸಿ ಕೊಡಲ್ಪಡುತ್ತದೆ; ✣ **ಆಸು ನಾರಿಷು** = ಈ ಸ್ತ್ರೀಯರಲ್ಲಿ; **ಇಂದ್ರಾಣೀಮ್** = ಇಂದ್ರಾಣೀದೇವಿಯನ್ನು; **ಸುಪತ್ನೀಮ್** = ಪತಿವ್ರತೆಯೆಂದು; **ಅಹಮ್ ಅಶ್ರವಮ್** = ನಾನು ಕೇಳಿದೆನು; **ಅಪರಮ್ ಚನ ಅಸ್ತಿ** = ಬೇರೆಯ ವಿಷಯವೂ ಇದೆ; **ಅಸ್ಯಾಃ** = ಈ ದೇವಿಯ;

---

ಧನಕ್ಕಾಗಿ, ಶತ್ರುಗಳನ್ನು ತಿರಸ್ಕರಿಸುವ ಗುಣವನ್ನೂ, ಬಲವನ್ನೂ ಅನುಸರಿಸಿ, ನಿನ್ನ ಗುಣಗಳನ್ನೂ ಗಮನಿಸಿ, ಅಗ್ನ್ಯಾದಿದೇವತೆಗಳಿಂದ ಎಲ್ಲ ಯಾಗಗಳಲ್ಲಿಯೂ/ಎಲ್ಲ ದೇವತೆಗಳಿಗಿಂತಲೂ ಹೆಚ್ಚಾಗಿ ಋತ್ವಿಜರಿಂದ-ನಿನಗೆ ಹವಿಸ್ಸು ಕೊಡಲ್ಪಡುತ್ತದೆ. ಇಂತಹ

ಜರಸಾ [ಜರಸಾ(೧)]ಮರತೇಪತಿಃ ॥ ನಾಹಮಿಂದ್ರಾಣಿ ರಾರಣ ಸಖ್ಯುರ್ವೃಷಾಕಪೇರ್ ಋತೇ । ಯಸ್ಯೇದಮಪ್ಯಗ್ಂ ಹವಿಃ ಪ್ರಿಯಂ ದೇವೇಷು ಗಚ್ಛತಿ ॥

---

ಜರಸಾ (೧)। ಮರತೇ । ಪತಿಃ ॥ ನ । ಅಹಮ್ । ಇಂದ್ರಾಣಿ । ರಾರಣ । ಸಖ್ಯುಃ। ವೃಷಾಕಪೇರಿತಿ ವೃಷಾ-ಕಪೇಃ । ಋತೇ ॥ ಯಸ್ಯ । ಇದಮ್ । ಅಪ್ಯಮ್ । ಹವಿಃ । ಪ್ರಿಯಮ್ । ದೇವೇಷು । ಗಚ್ಛತಿ ॥

---

| ಮಂತ್ರ | ವಿನಿಯೋಗ |
|---|---|
| ನಾಹಮಿಂದ್ರಾಣಿ.... ಗಚ್ಛತಿ ॥ | ಹಿಂದಿನ ಚರುಯಾಗದ ಯಾಜ್ಯಾನುವಾಕ್ಯೆ. |

---

**ಪತಿಃ** = ಗಂಡನು; **ಜರಸಾ** = ಮುಪ್ಪಿನಿಂದ; **ನ ಹಿ ಮರತೇ** = ಸಾಯುವುದಿಲ್ಲ. ·ಇಂದ್ರಾಣಿ = ಇಂದ್ರಪತ್ನಿಯೇ! **ಯಸ್ಯ** = ಯಾವ ಯಜಮಾನನಾದ ನನ್ನ; **ಅಪ್ಯಮ್ ಹವಿಃ** = ನೀರಿನಿಂದ ಪುಷ್ಟವಾಗಿರುವ ಸೋಮಚರ್ವಾದಿಯಾದ; **ಇದಮ್** = ಈ ಹವಿಸ್ಸು; **ದೇವೇಷು** = ದೇವತೆಗಳಲ್ಲಿ; **ಪ್ರಿಯಮ್ ಗಚ್ಛತಿ** = ಪ್ರೀತಿಪಾತ್ರವಾಗಿ ಹೋಗಿ ಸೇರುತ್ತದೆಯೋ; [ಅಂತಹ] **ಅಹಮ್** = ನಾನು; **ಸಖ್ಯುಃ** = [ನಿನ್ನ] ಪ್ರಿಯನಾದ; ***ವೃಷಾಕಪೇಃ** = ಇಂದ್ರನ; **ಋತೇ** = ಹೊರತಾಗಿ [ಬೇರೆಯವರನ್ನು] **ನ ರಾರಣ** = ಕೀರ್ತಿಸುವುದಿಲ್ಲ/ಹೊಗಳುವುದಿಲ್ಲ [ನನ್ನ ಇಷ್ಟವನ್ನು ಸಲ್ಲಿಸು].

---

ನೀನು ಗ್ರಾಮಾಧಿಪತ್ಯವನ್ನು ಕರುಣಿಸು.

ನಾನು ಈ ಸ್ತ್ರೀಯರಲ್ಲಿ ಇಂದ್ರಪತ್ನಿಯನ್ನೇ ಪತಿವ್ರತೆಯೆಂದು ಕೇಳಿದೆನು. ಆಕೆಯು ಸೇನೆಯ ದೇವತೆ. ಮತ್ತೊಂದು ವಿಷಯವೆಂದರೆ ಆಕೆಯು ನಿತ್ಯಸುಮಂಗಲಿ. ಅವಳ ಪತಿಯು ಮುಪ್ಪಿನಿಂದ ಸಾಯುವುದಿಲ್ಲ. ಆ ದೇವಿಯು ಸೇನೆಯನ್ನು ಯುದ್ಧದಲ್ಲಿ ಶತ್ರುಗಳನ್ನು ಜಯಿಸಲು ಸಮರ್ಥವನ್ನಾಗಿ ಮಾಡಲಿ.

---

* 'ವೃಷಾಕಪಿ' ಶಬ್ದಕ್ಕೆ ಆದಿತ್ಯ, ವಿಷ್ಣು ಎಂಬ ಅರ್ಥವೂ ಇದೆ. ಆದರೆ ಈ ಸಂದರ್ಭಕ್ಕೆ ಹೊಂದುವುದಿಲ್ಲ.

# ಯೋ ಜಾತ ಏವ ಪ್ರಥಮೋ ಮನಸ್ವಾನ್ದೇವೋ ದೇವಾನ್ಕ್ರತುನಾ ಪರ್ಯಭೂಷತ್ । ಯಸ್ಯ ಶುಷ್ಮಾದ್ರೋದಸೀ ಅಭ್ಯಸೇತಾಂ ನೃಮ್ಣಸ್ಯ ಮಹ್ನಾ ಸ ಜನಾಸ ಇಂದ್ರಃ ॥

---

ಯಃ । ಜಾತಃ । ಏವ । ಪ್ರಥಮಃ । ಮನಸ್ವಾನ್ । ದೇವಃ । ದೇವಾನ್ । ಕ್ರತುನಾ । ಪರ್ಯಭೂಷದಿತಿ ಪರಿ-ಅಭೂಷತ್ ॥ ಯಸ್ಯ । ಶುಷ್ಮಾತ್ । ರೋದಸೀ ಇತಿ । ಅಭ್ಯಸೇತಾಮ್ । ನೃಮ್ಣಸ್ಯ । ಮಹ್ನಾ । ಸಃ । ಜನಾಸಃ । ಇಂದ್ರಃ ॥

---

| ಮಂತ್ರ | ವಿನಿಯೋಗ |
|---|---|
| ಯೋ ಜಾತ ಏವ.... ಇಂದ್ರಃ ॥ | ಯುದ್ಧವು ಪ್ರಾಪ್ತವಾದ ಸಮಯದಲ್ಲಿ ಜಯಕ್ಕಾಗಿ ಮಾಡುವ ಇಷ್ಟಿಯ ಪುರೋನುವಾಕ್ಯೆ. |

---

✢**ಯಃ ದೇವಃ** = ಯಾವ ಇಂದ್ರದೇವನು; **ಜಾತಃ ಏವ** = ಹುಟ್ಟಿದೊಡನೆಯೇ; **ಪ್ರಥಮಃ** = ಮುಖ್ಯನಾಗಿ; **ಮನಸ್ವಾನ್** =ಧೈರ್ಯಶಾಲಿಯಾಗಿ; **ದೇವಾನ್** = ಅಗ್ನ್ಯಾದಿಗಳನ್ನು; **ಕ್ರತುನಾ** = ವೃತ್ರವಧಾದಿಕಾರ್ಯಗಳಿಂದ; **ಪರ್ಯಭೂಷತ್** = ಮೀರಿಸಿದನೋ; **ಯಸ್ಯ** = ಯಾವ ಇಂದ್ರನ; **ಶುಷ್ಮಾತ್** = ಬಲದಿಂದ; **ರೋದಸೀ** = ದ್ಯಾವಾಪೃಥಿವಿಗಳು; **ಅಭ್ಯಸೇತಾಮ್**= ಹೆದರಿದವೋ; **ಜನಾಸಃ** = ಎಲೈ! ಜನಗಳೇ! **ಸಃ** = ಅಂತಹ ಪರಾಕ್ರಮಿಯಾದ ಇಂದ್ರನು; **ನೃಮ್ಣಸ್ಯ ಮಹ್ನಾ** = ತನ್ನ ಬಲದ ಆಧಿಕ್ಯದಿಂದ; [**ಯಷ್ಮಾನ್ ಅವತು**= ನಿಮ್ಮನ್ನು ರಕ್ಷಿಸಲಿ]

---

ಇಂದ್ರಾಣಿದೇವಿಯೇ! ಸೋಮ, ಚರು ಮುಂತಾಗಿ ನಾನು ಕೊಡುವ ಹವ್ಯವು ಪ್ರೀತಿಪಾತ್ರವಾಗಿ ಆಯಾ ದೇವತೆಗಳಿಗೆ ಸೇರುತ್ತದೆ. ಆದರೆ ನಾನು ನಿನ್ನ ಪ್ರಿಯನಾದ ಇಂದ್ರನ ಹೊರತಾಗಿ ಯಾರನ್ನೂ ಅಧಿಕವಾಗಿ ಹೊಗಳುವುದಿಲ್ಲ. ನೀನು ನನ್ನ ಸೈನ್ಯವನ್ನು ಕಾರ್ಯದಕ್ಷವನ್ನಾಗಿ ಮಾಡು.

**ಆ ತೇ ಮಹ ಇಂದ್ರೋತ್ಯುಗ್ರ ಸಮನ್ಯವೋ ಯತ್ಸಮರಂತ ಸೇನಾಃ । ಪತಾತಿ ದಿದ್ಯುನ್ನರ್ಯಸ್ಯ ಬಾಹುವೋರ್ಮಾ ತೇ [...ತೇ (೨)] ಮನೋ ವಿಷ್ವದ್ರಿಯಗ್ವಿಚಾರೀತ್ ॥**

---

ಆ । ತೇ । ಮಹಃ । ಇಂದ್ರ । ಊತೀ । ಉಗ್ರ । ಸಮನ್ಯವ ಇತಿ ಸ-ಮನ್ಯವಃ । ಯತ್। ಸಮರಂತೇತಿ ಸಮ್-ಅರಂತ । ಸೇನಾಃ ॥ ಪತಾತಿ । ದಿದ್ಯುತ್ । ನರ್ಯಸ್ಯ । ಬಾಹುವೋಃ। ಮಾ । ತೇ (೨)। ಮನಃ । ವಿಷ್ವದ್ರಿಯಗಿತಿ ವಿಷ್ವ-ದ್ರಿಯಕ್ । ವೀತಿ । ಚಾರೀತ್ ॥

---

| ಮಂತ್ರ | ವಿನಿಯೋಗ |
|---|---|
| ಆ ತೇ.... ವಿಚಾರೀತ್ ॥ | ಹಿಂದಿನ ಇಷ್ಟಿಯ ಯಾಜ್ಯಾನುವಾಕ್ಯೆ. |

---

✣ **ಉಗ್ರ** = ಶತ್ರುಭಯಂಕರನಾದ; **ಇಂದ್ರ** = ಇಂದ್ರದೇವನೇ! **ಆ** = ಎಲ್ಲೆಡೆಯಲ್ಲಿಯೂ; **ತೇ** = ನಿನ್ನ; **ಊತೀ** = ರಕ್ಷಣವು; **ಮಹಃ** =ಅಧಿಕವಾಗಿದೆ. **ಯತ್** = ಯಾವ ಕಾರಣದಿಂದ; [ನಿನ್ನ ರಕ್ಷಣವನ್ನು ಹೊಂದಿ]; **ಸಮನ್ಯವಃ** = [ಶತ್ರುಗಳ ವಿಷಯದಲ್ಲಿ] ಕೋಪಯುಕ್ತರಾಗಿ; **ಸೇನಾಃ** = [ನಮ್ಮ] ಸೈನ್ಯಗಳು; **ಸಮರಂತ** = ಅನಾಯಾಸವಾಗಿ ಯುದ್ಧ ಮಾಡಿದವೋ; [ಆ ಕಾರಣದಿಂದ ನಿನ್ನ ರಕ್ಷಣೆಯು ದೊಡ್ಡದು] **ನರ್ಯಸ್ಯ** = ಮನುಷ್ಯರಿಗೆ ಹಿತನಾದ; **ತೇ** = ನಿನ್ನ; **ಬಾಹುವೋಃ** = ತೋಳುಗಳಲ್ಲಿರುವ; **ದಿದ್ಯುತ್** = [ಕತ್ತಿಯೇ ಮೊದಲಾದ ಆಯುಧಗಳ] ಕಾಂತಿಯು; **ಪತಾತಿ** = ಎಲ್ಲೆಡೆಗಳಲ್ಲಿಯೂ ಬೀಳುತ್ತಿದೆ; **ತೇ ಮನಃ** = ನಿನ್ನ ಮನಸ್ಸು; **ವಿಷ್ವದ್ರಿಯಕ್** = ಬಹುಮುಖವಾಗಿ; **ಮಾ ವಿಚಾರೀತ್** = ಸಂಚರಿಸದಿರಲಿ.

---

ಇಂದ್ರನು ಹುಟ್ಟಿದೊಡನೆಯೇ ಧೈರ್ಯಶಾಲಿಯಾಗಿ ದೇವತೆಗಳಲ್ಲಿ ಮುಖ್ಯನಾದನು. ವೃತ್ರವಧಾದಿಕಾರ್ಯಗಳಿಂದ ಅಗ್ನ್ಯಾದಿದೇವತೆಗಳನ್ನು ಮೀರಿಸಿದನು. ಇಂದ್ರನ ಬಲದಿಂದ ದ್ಯಾವಾಪೃಥಿವಿಗಳೂ ಹೆದರಿದವು. ಜನಗಳೇ! ಆ ಇಂದ್ರನು ತನ್ನ ಬಲದ ಆಧಿಕ್ಯದಿಂದ ನಿಮ್ಮನ್ನು ರಕ್ಷಿಸಲಿ. ಯುದ್ಧದಲ್ಲಿ ಗೆಲುವನ್ನು ನೀಡಲಿ.

**ಮಾ ನೋ ಮರ್ಧೀರಾ ಭರಾ ದದ್ಧಿ ತನ್ನಃ ಪ್ರ ದಾಶುಷೇ ದಾತವೇ ಭೂರಿ ಯತ್ತೇ । ನವ್ಯೇ ದೇಷ್ಣೇ ಶಸ್ತೇ ಅಸ್ಮಿನ್ತ ಉಕ್ಥೇ ಪ್ರ ಬ್ರವಾಮ ವಯಮಿಂದ್ರ ಸ್ತುವಂತಃ ॥**

---

ಮಾ । ನಃ । ಮರ್ಧೀಃ। ಐತಿ । ಭರ । ದದ್ಧಿ । ತತ್ । ನಃ । ಪ್ರೇತಿ । ದಾಶುಷೇ । ದಾತವೇ । ಭೂರಿ । ಯತ್ । ತೇ ॥ ನವ್ಯೇ । ದೇಷ್ಣೇ । ಶಸ್ತೇ । ಅಸ್ಮಿನ್ । ತೇ । ಉಕ್ಥೇ । ಪ್ರೇತಿ । ಬ್ರವಾಮ । ವಯಮ್ । ಇಂದ್ರ । ಸ್ತುವಂತಃ ॥

---

| ಮಂತ್ರ | ವಿನಿಯೋಗ |
|---|---|
| ಮಾ ನೋ ಮರ್ಧೀರಾ... ಸ್ತುವಂತಃ ॥ | ನನ್ನ ಪ್ರಜೆಗಳು ದಾನಶೀಲರಾಗಬೇಕೆಂದು ಬಯಸುವವನು ಮಾಡುವ ಇಷ್ಟಿಯ ಪುರೋನುವಾಕ್ಯೆ. |

---

✣ **ಇಂದ್ರ** = ಇಂದ್ರದೇವನೇ! **ನಃ** = ನಮ್ಮನ್ನೂ/ನಮ್ಮ ಪ್ರಜೆಗಳನ್ನೂ; **ಮಾ ಮರ್ಧೀಃ** = ಜಗಳವಾಡದಿರುವಂತೆ ಮಾಡು; **ಪ್ರ ದಾಶುಷೇ** = ಹೆಚ್ಚಾಗಿ ಹವ್ಯವನ್ನು ಸಮರ್ಪಿಸಿರುವ ಯಜಮಾನನಿಗೆ; **ದಾತವೇ** = ಕೊಡುವುದಕ್ಕೆ; **ತೇ** = ನಿನ್ನ; **ಯತ್ ಭೂರಿ** = ಯಾವ ಅಧಿಕವಾದ ದ್ರವ್ಯವಿದೆಯೋ; **ತತ್ ಆ ಭರ** = ಅದನ್ನು ತೆಗೆದುಕೊಂಡು ಬಾ; [ತಂದು] **ನಃ ದದ್ಧಿ** = ನಮಗೆ ಕೊಡು; [ಇಂದ್ರದೇವನೇ!] **ನವ್ಯೇ** = ನೂತನವಾದ; **ದೇಷ್ಣೇ** = ನಿನ್ನ ದಾನಸಾಧನವಾದ; **ಶಸ್ತೇ** = ಪ್ರಶಸ್ತವಾದ; **ಅಸ್ಮಿನ್** = ಈ ಯಾಗಕರ್ಮದಲ್ಲಿ; **ತೇ ಉಕ್ಥೇ** = ನಿನ್ನ ಶಸ್ತ್ರ [ಋಗ್ರೂಪವಾದ ಸ್ತೋತ್ರ]ದಲ್ಲಿ; **ಸ್ತುವಂತಃ** = [ನಿನ್ನನ್ನು] ಹೊಗಳುತ್ತಾ; **ವಯಂ ಪ್ರ ಬ್ರವಾಮ** = ನಾವು ಹೆಚ್ಚಾಗಿ ಪ್ರಾರ್ಥಿಸುತ್ತೇವೆ.

---

ಶತ್ರುಭಯಂಕರನಾದ ಇಂದ್ರದೇವನೇ! ನೀನು ಕೊಡುವ ರಕ್ಷಣೆಯು ಅಧಿಕವಾದುದು. ಆ ರಕ್ಷಣೆಯ ಬಲದಿಂದಲೇ ಶತ್ರುಗಳ ಮೇಲೆ ಕೋಪಗೊಂಡ ನಮ್ಮ ಸೈನ್ಯಗಳು ಅನಾಯಾಸವಾಗಿ ಶತ್ರುಗಳ ಮೇಲೆ ಯುದ್ಧ ಮಾಡಬಲ್ಲವು. ಮನುಷ್ಯ ಹಿತನಾದ ನಿನ್ನ ತೋಳುಗಳಲ್ಲಿರುವ ಆಯುಧಗಳ ಕಾಂತಿಯು ಎಲ್ಲೆಡೆಯೂ ಬೀಳುತ್ತದೆ. ನಿನ್ನ ಮನಸ್ಸು ಸರ್ವತೋಮುಖವಾಗಿ ಚಲಿಸದಿರಲಿ. ನಮ್ಮ ಜಯವನ್ನೇ ಗಮನಿಸಲಿ.

**ಆ ತೂ ಭರ ಮಾಕಿರೇತತ್ಪರಿಷ್ಠಾದ್ವಿದ್ಮಾ ಹಿ ತ್ವಾ ವಸುಪತಿಂ ವಸೂನಾಮ್ । ಇಂದ್ರ ಯತ್ತೇ ಮಾಹಿನಂ ದತ್ರಮಸ್ತ್ಯ-ಸ್ಮಭ್ಯಂ ತದ್ಧರ್ಯಶ್ವ [ತದ್ಧರ್ಯಶ್ವ(೩)] ಪ್ರಯಂಧಿ ॥**

---

ಏತಿ । ತು । ಭರ । ಮಾಕಿಃ । ಏತತ್ । ಪರೀತಿ । ಸ್ಥಾತ್ । ವಿದ್ಮ । ಹಿ । ತ್ವಾ । ವಸುಪತಿಮಿತಿ ವಸು-ಪತಿಮ್ । ವಸೂನಾಮ್ ॥ ಇಂದ್ರ । ಯತ್ । ತೇ । ಮಾಹಿನಮ್। ದತ್ರಮ್ । ಅಸ್ತಿ । ಅಸ್ಮಭ್ಯಮಿತ್ಯಸ್ಮ-ಭ್ಯಮ್ । ತತ್ । ಹರ್ಯಶ್ವೇತಿ ಹರಿ-ಅಶ್ವ (೩)। ಪ್ರೇತಿ । ಯಂಧಿ ॥

---

| ಮಂತ್ರ | ವಿನಿಯೋಗ |
| --- | --- |
| ಆ ತೂ ಭರ.... ಪ್ರಯಂಧಿ । | ಹಿಂದಿನ ಇಷ್ಟಿಯ ಯಾಜ್ಯಾನುವಾಕ್ಯೆ. |

---

✢ **ಇಂದ್ರ** = ಇಂದ್ರನೇ! [ನೀನು]; **ಆ ತು ಭರ** = [ಧನವನ್ನು] ತಂದೇ ಕೊಡು; **ಏತತ್** = ಈ ಧನವು; **ಮಾಕಿಃ ಪರಿಷ್ಠಾತ್** = ಬೇರೆಯ ಕಡೆಯಲ್ಲಿ ಇಲ್ಲದಿರಲಿ; **ಹಿ** = ಏತಕ್ಕೆಂದರೆ; **ತ್ವಾ** = ನಿನ್ನನ್ನು; **ವಸೂನಾಮ್ ವಸುಪತಿಮ್** = ಎಲ್ಲ ಐಶ್ವರ್ಯಗಳಿಗೂ ಅಧಿಪತಿಯಾಗಿ; **ವಿದ್ಮ** = ತಿಳಿದಿರುತ್ತೇವೆ; **ಮಾಹಿನಮ್** = ಪೂಜಾರ್ಹವಾದ; **ಅಸ್ಮಭ್ಯಮ್ ದತ್ರಮ್** = ನಮಗೆ ಕೊಡಬೇಕೆಂದಿರುವ; **ತೇ** = ನಿನ್ನ; **ಯತ್ ಧನಮ್ ಅಸ್ತಿ** = ಯಾವ/ಧನವಿದೆಯೋ; **ತತ್** = ಆ ಧನವನ್ನು; **ಹರ್ಯಶ್ವ** = 'ಹರಿ' ಎಂಬ ಹೆಸರಿನ ಕುದುರೆಗಳುಳ್ಳ ಇಂದ್ರನೇ! **ಪ್ರಯಂಧಿ** = [ನಮಗೆ] ಕೊಡು.

---

ಇಂದ್ರದೇವನೇ! ನೀನು ನನ್ನ ಪ್ರಜೆಗಳು ಜಗಳವಾಡದೆ ಒಂದಾಗಿರುವಂತೆ ಮಾಡು. ನಿನಗೆ ಹವ್ಯವನ್ನು ಅಧಿಕವಾಗಿ ಕೊಡುತ್ತಿರುವ ಯಜಮಾನನಿಗೆ ಕೊಡಬೇಕೆಂದಿರುವ ನಿನ್ನ ಅಧಿಕವಾದ ದ್ರವ್ಯವನ್ನು ತಂದು ನಮಗೆ ಕೊಡು. ಇಂದ್ರನೇ! ಈ ಪ್ರಶಸ್ತವಾದ ನೂತನಯಾಗದಲ್ಲಿ ನಾವು ನಿನ್ನನ್ನು ಶಸ್ತ್ರ(ಋಗ್ರೂಪವಾದ ಸ್ತೋತ್ರ)ಗಳಿಂದ ಹೊಗಳುತ್ತಾ ನಿನ್ನನ್ನು ಅಧಿಕವಾಗಿ ಪ್ರಾರ್ಥಿಸುತ್ತೇವೆ.

**ಪ್ರ ದಾತಾರಗ್ಂ ಹವಾಮಹ ಇಂದ್ರ ಮಾ ಹವಿಷಾ ವಯಮ್। ಉಭಾ ಹಿ ಹಸ್ತಾ ವಸುನಾ ಪೃಣಸ್ವಾಽಽಪ್ರ ಯಚ್ಛ ದಕ್ಷಿಣಾದೋತ ಸವ್ಯಾತ್ ॥ ಪ್ರ ದಾತಾ ವಜ್ರೀ ವೃಷಭ-**

---

ಪ್ರ ದಾತಾರಮಿತಿ ಪ್ರ-ದಾತಾರಮ್ । ಹವಾಮಹೇ । ಇಂದ್ರಮ್ । ಐತಿ । ಹವಿಷಾ । ವಯಮ್ ॥ ಉಭಾ । ಹಿ । ಹಸ್ತಾ । ವಸುನಾ । ಪೃಣಸ್ವ । ಆ । ಪ್ರೇತಿ । ಯಚ್ಛ । ದಕ್ಷಿಣಾತ್ । ಐತಿ । ಉತ । ಸವ್ಯಾತ್ ॥ ಪ್ರ ದಾತೇತಿ ಪ್ರ-ದಾತಾ । ವಜ್ರೀ । ವೃಷಭಃ।

---

| ಮಂತ್ರ | ವಿನಿಯೋಗ |
|---|---|
| ಪ್ರ ದಾತಾರಂ... ಸವ್ಯಾತ್ ॥ | ಪ್ರದಾತ್ರಿಷ್ಟಿಯ ಪುರೋನುವಾಕ್ಯೆ. |
| ಪ್ರ ದಾತಾ ವಜ್ರೀ.... ಶಂ ಯೋಃ ॥ | ಹಿಂದಿನ ಇಷ್ಟಿಯ ಯಾಜ್ಯಾನುವಾಕ್ಯೆ. |

---

✢ಪ್ರದಾತಾರಮ್ ಇಂದ್ರಮ್ = ಹೆಚ್ಚಾಗಿ ಕೊಡುವ/ ಕೊಡಿಸುವ ಇಂದ್ರನನ್ನು; ವಯಮ್ = ನಾವು; ಹವಿಷಾ = ಸಮರ್ಪಿಸುವ ಹವಿಸ್ಸಿನಿಂದ ಕೂಡಿದವರಾಗಿ; ಆ ಹವಾಮಹೇ = ಆಹ್ವಾನಿಸುತ್ತೇವೆ. [ಇಂದ್ರ=ಇಂದ್ರನೇ!] ಉಭಾ ಹಿ ಹಸ್ತಾ= ಎರಡು ಕೈಗಳನ್ನೂ; ವಸುನಾ = ಧನದಿಂದ; ಪೃಣಸ್ವ = ತುಂಬು; [ಅನಂತರ] ದಕ್ಷಿಣಾತ್ = ಬಲಗೈಯಿಂದ; ಆ ಪ್ರ ಯಚ್ಛ = ನಮಗೆ ಅಭಿಮುಖವಾಗಿ ಕೊಡು; ಉತ = ಮತ್ತೆ; ಸವ್ಯಾತ್ = ಎಡಗೈ ಯಿಂದಲೂ; ಆ ಪ್ರಯಚ್ಛ = ನಮಗೆ ಎದುರಾಗಿ ಕೊಡು; ✢ [ಇಂದ್ರನೇ! ನೀನು] ಪ್ರದಾತಾ = ಹೆಚ್ಚಾಗಿ ಕೊಡತಕ್ಕವನು; ವಜ್ರೀ = ವಜ್ರಾಯುಧ ಧಾರಿಯು; ವೃಷಭಃ = [ಕೋರಿದ ವಸ್ತುಗಳನ್ನು] ಸುರಿಸತಕ್ಕವನು.

---

'ಹರಿ' ಎಂಬ ಹೆಸರುಳ್ಳ ಕುದುರೆಗಳುಳ್ಳ ಓ! ಇಂದ್ರನೇ! ನಮಗೆ ಅಧಿಕವಾದ ಧನವನ್ನು ತಂದುಕೊಡು. ಅದು ನಮ್ಮಲ್ಲಿಯೇ ಇರಲಿ. ಬೇರೆಯ ಕಡೆ ಹೋಗದಿರಲಿ. ನೀನು ಐಶ್ವರ್ಯಗಳೆಲ್ಲಕ್ಕೂ ಅಧಿಪತಿಯೆಂದು ನಾವು ತಿಳಿದಿರುತ್ತೇವೆ. ನಮಗೆ ಕೊಡ ಬೇಕೆಂದಿರುವ ಮಹತ್ತಾದ ಧನವನ್ನು ನಮಗೆ ನೀನು ಅಧಿಕವಾಗಿ ಕೊಡು.

ಇಂದ್ರನು ಕೊಡುವವನೂ, ಕೊಡಿಸುವವನೂ ಆಗಿರುತ್ತಾನೆ. ಆವನನ್ನು ಹವಿಸ್ಸಿನಿಂದ ತೃಪ್ತಿಪಡಿಸಿ ಆಹ್ವಾನಿಸುತ್ತೇವೆ. ಇಂದ್ರನೇ! ಎರಡು ಕೈಗಳನ್ನೂ ಧನದಿಂದ ತುಂಬು. ಅನಂತರ ನಮಗೆ ಅಭಿಮುಖವಾಗಿ ಎಡಗೈಯಿಂದಲೂ ಬಲಗೈಯಿಂದಲೂ ತುಂಬಿ ತುಂಬಿ ಕೊಡು.

ತು॒ರಾ॒ಷಾಟ್ಛು॒ಷ್ಮೀ ರಾಜಾ॑ ವೃತ್ರ॒ಹಾ ಸೋ॒ಮ॒ಪಾ ವಾ॑ ।
ಅ॒ಸ್ಮಿನ್ ಯ॒ಜ್ಞೇ ಬ॒ರ್‌ಹಿಷ್ಯಾ ನಿ॒ಷದ್ಯಾಥಾ ಭವ॒ ಯಜ॑ಮಾ-
ನಾ॒ಯ ಶಂ ಯೋಃ ॥ ಇಂದ್ರ॑ಸ್ಸು॒ತ್ರಾ॒ಮಾ ಸ್ವ॒ವಾ॒ಗ್ಂ

---

ತು॒ರಾ॒ಷಾಟ್ । ಶು॒ಷ್ಮೀ । ರಾಜಾ॑ । ವೃ॒ತ್ರ॒ಹೇತಿ॑ ವೃತ್ರ-ಹಾ । ಸೋ॒ಮ॒ಪಾವೇತಿ॑ ಸೋಮ-ಪಾವಾ॑ ॥ ಅ॒ಸ್ಮಿನ್ನ್ । ಯ॒ಜ್ಞೇ । ಬ॒ರ್‌ಹಿಷಿ॑ । ಏತಿ॑ । ನಿ॒ಷದ್ಯೇತಿ॑ ನಿ-ಸದ್ಯ॑ । ಅಥ॑ । ಭ॒ವ । ಯಜ॑ಮಾನಾಯ । ಶಮ್ । ಯೋಃ ॥ ಇಂದ್ರಃ॑ । ಸು॒ತ್ರಾಮೇತಿ॑ ಸು-ತ್ರಾಮಾ॑ । ಸ್ವ॒ವಾನಿತಿ॒ ಸ್ವ-ವಾ॒ನ್ ।

---

| ಮಂತ್ರ | ವಿನಿಯೋಗ |
|---|---|
| ಇಂದ್ರ॑ಸ್ಸು॒ತ್ರಾ॒ಮಾ... ಸ್ಯಾಮ ॥ | ರಾಜ್ಯಭ್ರಷ್ಟನಿಗೆ ವಿಹಿತವಾದ ಸುತ್ರಾಮೇಷ್ಟಿಯ ಪುರೋನುವಾಕ್ಯೆ. |

---

**ತುರಾಷಾಟ್** = ಶತ್ರುಗಳನ್ನು ಶೀಘ್ರವಾಗಿ ಸೋಲಿಸತಕ್ಕವನು. **ಶುಷ್ಮೀ** = ಬಲವಂತನು; **ರಾಜಾ** = ಪ್ರಕಾಶಮಾನನು/ತ್ರೈಲೋಕ್ಯಾಧಿಪತಿಯು; **ವೃತ್ರಹಾ** = ವೃತ್ರನನ್ನು ಸಂಹರಿಸಿದವನು; **ಸೋಮಪಾವಾ** = ಸೋಮಪಾನ ಮಾಡುವವನೂ [ಆಗಿದ್ದೀಯೆ] [ನೀನು] **ಅಸ್ಮಿನ್ ಯಜ್ಞೇ** = ಈ ಯಜ್ಞದಲ್ಲಿ; **ಬರ್‌ಹಿಷಿ** = [ವೇದಿಯಲ್ಲಿ ಹರಡಿರುವ] ದರ್ಭೆಗಳಲ್ಲಿ; **ಆ ನಿಷದ್ಯ** = ಬಂದು ಕುಳಿತು; **ಅಥ** = ಅನಂತರ; **ಯಜಮಾನಾಯ** = ಯಜಮಾನನಿಗೆ; **ಶಮ್** = ಸುಖಕರನೂ; **ಯೋಃ** = ಅನಿಷ್ಟಪರಿಹಾರಕನೂ; **ಭವ** = ಆಗು; ✢ **ಸುತ್ರಾಮಾ** = ಚೆನ್ನಾಗಿ ರಕ್ಷಿಸುವ; **ಸ್ವವಾನ್** = ಧನವುಳ್ಳ; **ಇಂದ್ರಃ** = ಇಂದ್ರನು;

---

ಇಂದ್ರನೇ! ನೀನು ಚೆನ್ನಾಗಿ ಕೊಡತಕ್ಕವನು. ವಜ್ರಾಯುಧಧಾರಿಯು. ಇಷ್ಟಾರ್ಥಗಳನ್ನು ಸುರಿಸುವವನು. ಶತ್ರುಗಳನ್ನು ಬೇಗನೇ ಸೋಲಿಸತಕ್ಕವನು. ಬಲಶಾಲಿಯು. ತ್ರೈಲೋಕ್ಯಾಧಿಪತಿಯು. ಪ್ರಕಾಶಮಾನನು. ವೃತ್ರನನ್ನು ಕೊಂದವನು. ಯಾಗಗಳಲ್ಲಿ ಸೋಮಪಾನ ಮಾಡತಕ್ಕವನು. ಇಂತಹ ನೀನು ಈ ಯಜ್ಞದಲ್ಲಿ ವೇದಿಗೆ ಬಂದು ದರ್ಭಾಸನದಲ್ಲಿ ಕುಳಿತು ಯಜಮಾನನಿಗೆ ಸುಖಪ್ರದನೂ, ಅನಿಷ್ಟ ಪರಿಹಾರಕನೂ ಆಗು.

**ಅವೋಭಿಸ್ಸುಮೃಡೀಕೋ ಭವತು ವಿಶ್ವವೇದಾಃ । ಬಾಧತಾಂ ದ್ವೇಷೋ ಅಭಯಂ ಕೃಣೋತು ಸುವೀರ್ಯಸ್ಯ [ಸುವೀರ್ಯಸ್ಯ (೪)] ಪತಯಃ ಸ್ಯಾಮ ॥ ತಸ್ಯ ವಯಗ್ಂ ಸುಮತೌ ಯಜ್ಞಿಯಸ್ಯಾಪಿ ಭದ್ರೇ ಸೌಮನಸೇ ಸ್ಯಾಮ ।**

---

ಅವೋಭಿರಿತ್ಯವಃ-ಭಿಃ । ಸುಮೃಡೀಕ ಇತಿ ಸು-ಮೃಡೀಕಃ। ಭವತು । ವಿಶ್ವವೇದಾ ಇತಿ ವಿಶ್ವ-ವೇದಾಃ ॥ ಬಾಧತಾಮ್ । ದ್ವೇಷಃ । ಅಭಯಮ್ । ಕೃಣೋತು । ಸುವೀರ್ಯಸ್ಯೇತಿ ಸು-ವೀರ್ಯಸ್ಯ(೪)। ಪತಯಃ । ಸ್ಯಾಮ ॥ ತಸ್ಯ । ವಯಮ್ । ಸುಮತಾವಿತಿ ಸು-ಮತೌ। ಯಜ್ಞಿಯಸ್ಯ । ಅಪೀತಿ । ಭದ್ರೇ । ಸೌಮನಸೇ । ಸ್ಯಾಮ ॥

---

| ಮಂತ್ರ | ವಿನಿಯೋಗ |
|---|---|
| **ತಸ್ಯ ವಯಂ..... ಯುಯೋತು ॥** | ಹಿಂದಿನ ಇಷ್ಟಿಯ ಯಾಜ್ಯಾನುವಾಕ್ಯೆ. |

---

**ವಿಶ್ವವೇದಾಃ** = ನಮ್ಮ ಪರಿಚರ್ಯೆಯನ್ನು ತಿಳಿದವನಾಗಿ; **ಅವೋಭಿಃ** = ರಕ್ಷಣೆಗಳಿಂದ; **ಸುಮೃಡೀಕಃ** = ಚೆನ್ನಾಗಿ ಸುಖಕರನಾಗಿ; **ಭವತು** = ಆಗಲಿ. **ಬಾಧತಾಂ ದ್ವೇಷಃ** = ನಮ್ಮ ವೈರಿಗಳಿಗೆ ದ್ವೇಷಿಯಾಗಿ/ಬಾಧತಾಂ ದ್ವೇಷಃ = ನಮ್ಮ ವೈರಿಗಳನ್ನು ಬಾಧಿಸಲಿ. **ಅಭಯಮ್** = [ನಮಗೆ] ಭಯವಿಲ್ಲದಿರುವಂತೆ; **ಕೃಣೋತು** = ಮಾಡಲಿ; **ಸುವೀರ್ಯಸ್ಯ** = [ಶತ್ರುಗಳನ್ನು ಜಯಿಸುವ] ಪೌರುಷಕ್ಕೆ; **ಪತಯಃ ಸ್ಯಾಮ** = ನಾವು ಸ್ವಾಮಿಗಳಾಗೋಣ. **ವಯಮ್** = ನಾವು; **ಯಜ್ಞಿಯಸ್ಯ** = ಯಜ್ಞದೇವತೆಯಾದ; **ತಸ್ಯ** = ಆ ಇಂದ್ರನ; **ಸುಮತೌ** = ಅನುಗ್ರಹಯುಕ್ತವಾದ ಮನಸ್ಸಿನಲ್ಲಿ; **ಸ್ಯಾಮ** = ಇರೋಣ ; **ಅಪಿ ಚ**= ಮತ್ತು; **ಭದ್ರೇ ಸೌಮನಸೇ** = ಮಂಗಲಕರವಾದ ಸಮಾಧಾನಯುಕ್ತವಾದ ಮನಸ್ಸಿನಲ್ಲಿ; **ಸ್ಯಾಮ** = ಇರೋಣ;

---

ಇಂದ್ರನು ಆಶ್ರಿತರನ್ನು ಚೆನ್ನಾಗಿ ರಕ್ಷಿಸುವವನು. ಧನವುಳ್ಳವನು. ರಕ್ಷಣೆ ಮಾಡಿ ನಮಗೆ ಸುಖವನ್ನು ಕೊಡತಕ್ಕವನು. ಅವನು ನಮ್ಮ ಯಾಗಾದಿಪರಿಚರ್ಯೆಯನ್ನು ತಿಳಿದು

ಸ ಸುತ್ರಾಮಾ ಸ್ವವಾಗ್ಂ ಇಂದ್ರೋ ಅಸ್ಮೇ ಆರಾಚ್ಚಿದ್ದ್ವೇಷಃ ಸನುತರ್ಯುಯೋತು ॥ ರೇವತೀರ್ನಸ್ಸಧಮಾದ ಇಂದ್ರೇ ಸಂತು ತುವಿವಾಜಾಃ । ಕ್ಷುಮಂತೋ ಯಾಭಿರ್ಮದೇಮ ॥

---

ಸಃ । ಸುತ್ರಾಮೇತಿ ಸು-ತ್ರಾಮಾ । ಸ್ವವಾನಿತಿ ಸ್ವ-ವಾನ್ । ಇಂದ್ರಃ । ಅಸ್ಮೇ ಇತಿ । ಆರಾತ್ । ಚಿತ್ । ದ್ವೇಷಃ । ಸನುತಃ । ಯುಯೋತು ॥ ರೇವತೀಃ । ನಃ । ಸಧಮಾದ ಇತಿ ಸಧ-ಮಾದಃ । ಇಂದ್ರೇ । ಸಂತು । ತುವಿವಾಜಾ ಇತಿ ತುವಿ-ವಾಜಾಃ । ಕ್ಷುಮಂತಃ। ಯಾಭಿಃ । ಮದೇಮ ॥

---

| ಮಂತ್ರ | ವಿನಿಯೋಗ |
|---|---|
| ರೇವತೀಃ....ಮದೇಮ ॥ | ಶ್ರೀಕಾಮನಿಗೆ ವಿಹಿತವಾದ ಐಂದ್ರೇಷ್ಟಿಯಲ್ಲಿನ ಪುರೋನುವಾಕ್ಯೆ. |

---

**ಸುತ್ರಾಮಾ** = ರಕ್ಷಿಸುವ; **ಸ್ವವಾನ್** = ಧನವಂತನಾದ; **ಸಃ ಇಂದ್ರಃ** = ಆ ಇಂದ್ರನು; **ಸನುತಃ** = ಹವಿಸ್ಸನ್ನು ಸಮರ್ಪಿಸುವ; **ಅಸ್ಮೇ** = ನಮ್ಮ; **ದ್ವೇಷಃ** = ವೈರಿಗಳನ್ನು; **ಆರಾತ್ ಚಿತ್** = ದೂರದಿಂದಲೇ; **ಯುಯೋತು** = ಬೇರ್ಪಡಿಸಲಿ/ನಾಶಪಡಿಸಲಿ. ✢ **ರೇವತೀಃ**=ಧನಯುಕ್ತವಾದ; **ನಃ ಸಧಮಾದಃ** = ನಮ್ಮೊಡನೆ ಸಂತೋಷಯುಕ್ತವಾಗಿರುವ; **ತುವಿವಾಜಾಃ** = ಬಹ್ವನ್ನಯುಕ್ತವಾದ; ತಾಃ ಆಪಃ = ಆ ಜಲದೇವತೆಗಳು; **ಇಂದ್ರೇ ಸಂತು** = [ನಮ್ಮ ಸ್ವಾಮಿಯಾದ] ಇಂದ್ರನಲ್ಲಿ ಸುಖಕರವಾಗಿರಲಿ; **ಯಾಭಿಃ** = ಯಾವ ನೀರುಗಳಿಂದ; **ಕ್ಷುಮಂತಃ** = ಶಬ್ದಯುಕ್ತವಾಗಿ/ಮಂತ್ರಪೂರ್ವಕವಾಗಿ ಸ್ತುತಿಸುತ್ತಾ; **ಮದೇಮ** = ಸಂತೋಷಿಸುತ್ತೇವೆಯೋ; [ಆ ನೀರುಗಳು ಸುಖಕರವಾಗಿರಲಿ.]

---

ಅನುಗ್ರಹಿಸಲಿ. ನಮ್ಮ ಶತ್ರುಗಳನ್ನು ಬಾಧಿಸಲಿ. ಬಾಧಿಸುವ ನಮ್ಮ ಶತ್ರುಗಳಿಗೆ ವೈರಿಯಾಗಲಿ. ನಮಗೆ ಅಭಯವನ್ನು ಕೊಡಲಿ. ಆತನ ಅನುಗ್ರಹದಿಂದ ಶತ್ರುಗಳನ್ನು ಗೆಲ್ಲುವ ಪೌರುಷವನ್ನು ಪಡೆಯೋಣ.

ನಾವು ಯಜ್ಞದೇವತೆಯಾದ ಇಂದ್ರನ ಅನುಗ್ರಹಯುಕ್ತವಾದ ಮನಸ್ಸಿನಲ್ಲಿ ಇರೋಣ ಮತ್ತು ಮಂಗಲಕರವಾದ ಸಮಾಧಾನಯುಕ್ತವಾದ ಮನಸ್ಸಿನಲ್ಲಿ ಇರೋಣ.

**ಪ್ರೋ ಷ್ವಸ್ಮೈ ಪುರೋರಥಮಿಂದ್ರಾಯ ಶೂಷಮರ್ಚತ । ಅಭೀಕೇ ಚಿದು ಲೋಕಕೃತ್ಸಂಗೇ ಸಮತ್ಸು ವೃತ್ರಹಾ । ಅಸ್ಮಾಕಂ ಬೋಧಿ ಚೋದಿತಾ ನಭಂತಾಮನ್ಯಕೇಷಾಮ್ ।**

---

ಪ್ರೋ ಇತಿ । ಸ್ವಿತಿ । ಅಸ್ಮೈ । ಪುರೋರಥಮಿತಿ ಪುರಃ-ರಥಮ್ । ಇಂದ್ರಾಯ । ಶೂಷಮ್। ಅರ್ಚತ ॥ ಅಭೀಕೇ । ಚಿತ್ । ಉ । ಲೋಕಕೃದಿತಿ ಲೋಕ-ಕೃತ್ । ಸಂಗೇ। ಸಮತ್ಸ್ವಿತಿ ಸಮತ್-ಸು । ವೃತ್ರಹೇತಿ ವೃತ್ರ-ಹಾ ॥ ಅಸ್ಮಾಕಮ್ । ಬೋಧಿ । ಚೋದಿತಾ। ನಭಂತಾಮ್ । ಅನ್ಯಕೇಷಾಮ್ ॥

---

| ಮಂತ್ರ | ವಿನಿಯೋಗ |
|---|---|
| ಪ್ರೋ ಷ್ವಸ್ಮೈ.... ಧನ್ವಸು ॥ | ಹಿಂದಿನ ಇಷ್ಟಿಯ ಯಾಜ್ಯಾನುವಾಕ್ಯೆ. |

---

✣ **ಅಸ್ಮೈ ಇಂದ್ರಾಯ** = ಈ ಇಂದ್ರನ; **ಪುರೋರಥಮ್** = ರಥದ ಮುಂಭಾಗದಲ್ಲಿ; **ಶೂಷಮ್** =[ಇಂದ್ರನ] ಬಲವನ್ನು; **ಪ್ರೋ ಸು ಅರ್ಚತ** = ಚೆನ್ನಾಗಿ ಪೂಜಿಸಿರಿ/ಹೊಗಳಿರಿ; **ಅಭೀಕೇ ಚಿತ್ ಉ** = ಶತ್ರುವು ಸಮೀಪದಲ್ಲಿಯೇ ಇದ್ದರೂ[ಕೊಲ್ಲಬೇಕೆಂದಿದ್ದರೂ]; **ಸಮತ್ಸು**= ಯುದ್ಧಗಳಲ್ಲಿ; **ಸಂಗೇ**=ಶತ್ರುಗಳೊಡನೆ ಸೇರಿದ್ದರೂ; **ವೃತ್ರಹಾ**= ವೃತ್ರಘಾತಿ ಯಾದ ಇಂದ್ರನು; **ಲೋಕಕೃತ್** = [ಯುದ್ಧರಂಗದಲ್ಲಿಯೇ] ಸ್ಥಿರನಾಗಿರುತ್ತಾನೆ. **ಅಸ್ಮಾಕಮ್** = ನಮ್ಮನ್ನು; **ಚೋದಿತಾ** = ಪ್ರೇರಿಸುವವನಾಗಿ; **ಬೋಧಿ** = ಜಾಗರೂಕನಾಗಿ ರಲಿ; **ಅನ್ಯಕೇಷಾಮ್** = ಕುತ್ಸಿತರಾದ ಶತ್ರುಗಳ;

---

ಚೆನ್ನಾಗಿ ರಕ್ಷಿಸುವ ಧನವಂತನಾದ ಇಂದ್ರನು ಹವಿಸ್ಸನ್ನು ಸಮರ್ಪಿಸುವ ನಮ್ಮ ವೈರಿಗಳನ್ನು ದೂರದಲ್ಲಿಯೇ ಇಟ್ಟು ನಾಶಪಡಿಸಲಿ.

ಈ ನೀರುಗಳು ಧನಯುಕ್ತವಾಗಿವೆ. ನಮ್ಮೊಡನೆ ಹರ್ಷಯುಕ್ತವಾಗಿವೆ. ಬಹ್ವನ್ನ ಯುಕ್ತವಾಗಿವೆ. ಯಾವ ಈ ನೀರುಗಳೊಡನೆ ಶಬ್ದ ಮಾಡುತ್ತಾ ಇಂದ್ರನ ಸ್ತುತಿಯಿಂದ ಸಂತೋಷಿಸುತ್ತೇವೆಯೋ, ಆ ನೀರುಗಳು ನಮ್ಮ ಸ್ವಾಮಿಯಾದ ಇಂದ್ರನಿಗೆ ಶಾಂತಿಕರ ವಾಗಿರಲಿ.

श्री:श्री:श्री:श्री:श्री:श्री:श्री:श्री:श्री:श्री:श्री:श्री:श्री:श्री: | श्री: | श्री:श्री:श्री:श्री:श्री:श्री:श्री:श्री:श्री:श्री:श्री:श्री:श्री:

## ಜ್ಯಾಕಾ ಅಧಿ ಧನ್ವಸು ॥ [೧೩-51]

### [ಜರಸಾ ಮಾ ತೇ ಹರ್ಯಶ್ವ ಸುವೀರ್ಯಸ್ಯಾಧ್ಯೇಕಂ ಚ॥]

---

ಜ್ಯಾಕಾಃ । ಅಧೀತಿ । ಧನ್ವಸ್ವಿತಿ ಧನ್ವ-ಸು ॥

---

ಅಧಿ ಧನ್ವಸು = ಬಿಲ್ಲುಗಳಲ್ಲಿ [ಇರುವ]; ಜ್ಯಾಕಾಃ = ಕುತ್ಸಿತವಾದ ಹೆದೆಗಳು; ನಭಂತಾಮ್ = ಕತ್ತರಿಸಿ ಬಿದ್ದು ನಾಶವಾಗಲಿ.

---

ಇಂದ್ರನ ರಥದ ಮುಂದೆ ಇಂದ್ರನ ಬಲವನ್ನು ಹೊಗಳಿರಿ. ಇಂದ್ರನು ಯುದ್ಧಗಳಲ್ಲಿ ಶತ್ರುಗಳು ಆಕ್ರಮಿಸಿದ್ದರೂ ಸ್ಥಿರವಾಗಿರುತ್ತಾನೆ. ವೃತ್ರನಂತಹ ಶತ್ರುಗಳನ್ನೂ ಸಂಹರಿಸುತ್ತಾನೆ. ಆತನು ನಮ್ಮನ್ನು ಪ್ರೇರಿಸಲಿ. ನಮ್ಮ ಇಷ್ಟಾರ್ಥಗಳನ್ನು ತಿಳಿಯಲಿ. ಆತನ ಆಗ್ರಹದಿಂದ ಶತ್ರುಗಳ ಬಿಲ್ಲುಗಳ ಹೆದೆಗಳು ಭಿನ್ನವಾಗಿ ಹೋಗಲಿ. ಹೀಗೆ ಇಂದ್ರನ ಬಲವನ್ನು ಹೊಗಳಿರಿ.

---

ಪಾಕಯಜ್ಞಗ್ಂ ಸಗ್ಂಶ್ರ ವಾಃ ಪರೋಕ್ಷಂ ಬರ್ಹಿಷೋಽಹಂ
ಧ್ರುವಾಮಗನ್ಮೇತ್ಯಾಹ ದೇವ ಸವಿತರ್ದೇವಸ್ಯಾ೩ಂ ಕ್ಷತ್ರಸ್ಯೋಲ್ಬಂ
ವಾಜಸ್ಯೇಮಮಗ್ನಿರೇಕಾಕ್ಷರೇಣೋಪಯಾಮಗೃಹೀತೋಽಸ್ಯನ್ವಹ
ಮಾಸಾಸ್ತ್ರಯೋದಶ ॥ ೧೩ ॥

ಪಾಕಯಜ್ಞಂ ಪರೋಕ್ಷಂ ಧ್ರುವಾಂ ವಿಸೃಜತೇ ಚ ನಃ
ಸರ್ವವೀರಾಂ ಪತಯಸ್ಸ್ಯಾಮ್ಯೆಕಪಂಚಾಶತ್ ॥ ೫೧ ॥

**ಪಾಕಯಜ್ಞಂ ಧನ್ವಸು ॥**

ಹರಿಃ ಓಂ ಶ್ರೀಕೃಷ್ಣಾರ್ಪಣಮಸ್ತು । ಇತಿ ಪ್ರಥಮಕಾಂಡೇ ಸಪ್ತಮಃ ಪ್ರಶ್ನಃ

श्री:श्री:श्री:श्री:श्री:श्री:श्री:श्री:श्री:श्री:श्री:श्री:श्री:श्री: | श्री: | श्री:श्री:श्री:श्री:श्री:श्री:श्री:श्री:श्री:श्री:श्री:श्री:श्री:

# ವಿನಿಯೋಗ ಸಂಗ್ರಹ

[1-2]ಅನ್ವಹಾನ್ವೃಜುಮತ್ಯೈಂದ್ರೇ, [3-4]ಇಂದ್ರಾಣೀತಿ ತು (ಮಿತಿ) ತಚ್ಚರೌ ।
[5-6]ಯೋ ಜಾತೋ ಮನ್ಯುಮತ್ಯೈಂದ್ರೇ ಮಾ ನೋ ದಾತ್ಯಮದ್ಯೈಂದ್ರಕೇ ।
[9-10]ಪ್ರದಾ ಪ್ರದಾತ್ಯಮತ್ಯೈಂದ್ರೇ [11-12] ಇಂದ್ರಸ್ಸುತ್ರಾಮಸಂಯುತೇ ।
[13-14]ರೇವತೀಃ ಶ್ರೀಪ್ರದ್ಯೈಂದ್ರೇ ಸ್ಯಾದತ್ರ ಮಂತ್ರಾಶ್ಚತುರ್ದಶ ॥

## ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ- 14

## ಅನುವಾಕದ ವಿಶೇಷವಿಷಯಗಳು

### ಅ) ಛಂದಸ್ಸು

| | ಮಂತ್ರ | ಛಂದಸ್ಸು |
|---|---|---|
| ೧) | ಅನ್ವಹ..... ಜಾಯಮಾನಮ್ । | ತ್ರಿಷ್ಟುಪ್ |
| ೨) | ಅನು ತೇ.... ನ್ವೃಷಹ್ಯೇ ॥ | ತ್ರಿಷ್ಟುಪ್ |
| ೩) | ಇಂದ್ರಾಣೀಂ.... ಪತಿಃ ॥ | ಅನುಷ್ಟುಪ್ |
| ೪) | ನಾಹಂ....ಗಚ್ಛತಿ ॥ | ಅನುಷ್ಟುಪ್ |
| ೫) | ಯೋ ಜಾತಃ.... ಇಂದ್ರಃ ॥ | ತ್ರಿಷ್ಟುಪ್ |
| ೬) | ಆ ತೇ ಮಹಃ..... ವಿಚಾರೀತ್ ॥ | ಪುರಸ್ತಾಜ್ಜ್ಯೋತಿಸ್ತ್ರಿಷ್ಟುಪ್ ಅಥವಾ ತ್ರಿಷ್ಟುಪ್ |
| ೭) | ಮಾ ನೋ ಮರ್ಧೀಃ.... ಸ್ತುವಂತಃ ॥ | ತ್ರಿಷ್ಟುಪ್ |
| ೮) | ಆ ತೂ ಭರ... ಪ್ರಯಂಧಿ ॥ | ತ್ರಿಷ್ಟುಪ್ |
| ೯) | ಪ್ರದಾತಾರಂ.... ಸ್ವವ್ಯಾತ್ ॥ | ಬೃಹತೀ |
| ೧೦) | ಪ್ರದಾತಾ.... ಶಂ ಯೋಃ ॥ | ತ್ರಿಷ್ಟುಪ್ |

| | | |
|---|---|---|
| ೧೧) | ಇಂದ್ರಸ್ಸುತ್ರಾಮಾ... ಸ್ಯಾಮ ॥ | ತ್ರಿಷ್ಟುಪ್ |
| ೧೨) | ತಸ್ಯ ವಯಂ....ಯುಯೋತು ॥ | ತ್ರಿಷ್ಟುಪ್ |
| ೧೩) | ರೇವತೀಃ .... ಮದೇಮ ॥ | ಗಾಯತ್ರೀ |
| ೧೪) | ಪ್ರೋ ಷ್ವಸ್ಮೈ.... ಧನ್ವಸು ॥ | ಶಕ್ವರೀ |

★ ★ ★

# ತೈತ್ತಿರೀಯ ಸಂಹಿತಾ

ಪ್ರಥಮಃ ಕಾಂಡಃ ಅಷ್ಟಮಃ ಪ್ರಶ್ನಃ

ಹರಿಃ ಓಮ್ ॥

ಅನುಮತ್ಯೈ ಪುರೋಡಾಶಮಷ್ಟಾಕಪಾಲಂ

---

॥ವೈ॥ ಅನುಮತ್ಯಾ ಇತ್ಯನು-ಮತ್ಯೈ । ಪುರೋಡಾಶಮ್ । ಅಷ್ಟಾಕಪಾಲಮಿತ್ಯಷ್ಟಾ-ಕಪಾಲಮ್ ।

---

ಈ ಎಂಟನೆಯ ಪ್ರಶ್ನೆಯಲ್ಲಿ ಮೊದಲಿನಿಂದ ಇಪ್ಪತ್ತನೆಯ ಅನುವಾಕದವರೆಗೂ ರಾಜಸೂಯವಿಧಿಯನ್ನು ಹೇಳಲಾಗಿದೆ. ಇಪ್ಪತ್ತೊಂದನೆಯ ಅನುವಾಕದಲ್ಲಿ ಸೌತ್ರಾಮಣಿ ಮತ್ತು ಇಪ್ಪತ್ತೆರಡನೆಯ ಅನುವಾಕದಲ್ಲಿ ಕಾಮ್ಯೇಷ್ಟಿಯಾಜ್ಯಾ ಮಂತ್ರಗಳಿವೆ.

ಇಲ್ಲಿ ಮಂತ್ರಗಳಿದ್ದರೂ ಮುಖ್ಯಕರ್ಮಗಳ ವಿನಿಯೋಗವನ್ನು ಹೇಳಿರುವುದ ರಿಂದ ಬ್ರಾಹ್ಮಣವೆಂದೂ ಹೇಳುತ್ತಾರೆ. ಬ್ರಾಹ್ಮಣಗ್ರಂಥದ ಮೊದಲನೆಯ ಅಷ್ಟಕದ ೬-೭-೮ ನೆಯ ಪ್ರಶ್ನೆಗಳಲ್ಲಿ ಪ್ರಯೋಗಕ್ರಮವನ್ನು ಸಾಂಗವಾಗಿ ಹೇಳಿರುವುದರಿಂದ ಅವುಗಳನ್ನು 'ಅನುಬ್ರಾಹ್ಮಣ'ವೆಂದು ಹೇಳಿರುತ್ತಾರೆ.

**'ಮಂತ್ರಬ್ರಾಹ್ಮಣಯೋರ್ವೇದನಾಮಧೇಯಮ್' ಎಂಬ ವಚನದಿಂದ ಮಂತ್ರವನ್ನು ಬಿಟ್ಟು ಉಳಿದೆಲ್ಲವನ್ನೂ ಬ್ರಾಹ್ಮಣವೆಂದು ಹೇಳಲಾಗಿದೆ. ಕಲ್ಪಬ್ರಾಹ್ಮಣ, ಕರ್ಮಬ್ರಾಹ್ಮಣ, ಕೃತಿ, ಗಾಥಾ, ಇತಿಹಾಸ, ಪರಕೃತಿ, ಪುರಾಕಲ್ಪ ಇವೆಲ್ಲವನ್ನೂ 'ಬ್ರಾಹ್ಮಣ'ವೆನ್ನುತ್ತಾರೆ. [ಭ.ಭಾ.ಭಾ.]**

ಇಷ್ಟಿ, ಚರುಯಾಗಗಳಲ್ಲಿ 'ನಿರ್ವಪತಿ' ಎಂದೂ, ಪಶುಯಾಗಗಳಲ್ಲಿ 'ಆಲಭತೇ' ಎಂದು ಹೇಳುವುದೂ ವಾಡಿಕೆ. ಹವಿಸ್ಸಿಗೆ ಬೇಕಾದಷ್ಟು ಧಾನ್ಯವನ್ನು ಬೇರ್ಪಡಿಸುವುದು

---

**ಅನುಮತ್ಯೈ..... ಕೃಷ್ಣತೂಷಂ ದಕ್ಷಿಣಾ ।**

**ರಾಜಸೂಯದಲ್ಲಿ ಐದನೆಯ ದಿನ ಪವಿತ್ರಾಗ್ನಿಷ್ಟೋಮವು ಮುಗಿದ ಮೇಲೆ ಆರನೆಯ ದಿನದಲ್ಲಿ ಮಾಡಬೇಕಾದ ಯಾಗದ ವಿಧಿ.**

ನಿರ್ವಪತಿ ಧೇನುರ್ದಕ್ಷಿಣಾ ಯೇ ಪ್ರತ್ಯಂಚಶ್ಶಮ್ಯಾಯಾ
ಅವಶೀಯಂತೇ ತಂ ನೈರ್‌ಋತಮೇಕಕಪಾಲಂ

---

ನಿರಿತಿ । ವಪತಿ । ಧೇನುಃ । ದಕ್ಷಿಣಾ । ಯೇ । ಪ್ರತ್ಯಂಚಃ । ಶಮ್ಯಾಯಾಃ । ಅವಶೀಯಂತ ಇತ್ಯವ-ಶೀಯಂತೇ । ತಮ್ । ನೈರ್‌ಋತಮಿತಿ ನೈಃ-ಋತಮ್ । ಏಕಕಪಾಲಮಿತ್ಯೇಕ-ಕಪಾಲಮ್ ।

---

ಎಂದು 'ನಿರ್ವಪತಿ' ಎಂಬ ಪದದ ಅರ್ಥ. ಆಲಭತೇ = ಮುಟ್ಟುತ್ತಾನೆ, ಹಿಂಸಿಸುತ್ತಾನೆ ಎಂದು ಅರ್ಥ. 'ಯಜತೇ' ಎಂಬುದು ಯಾಗಸಾಮಾನ್ಯವಾಚಕ.

---

| ಬ್ರಾಹ್ಮಣಭಾಗ | ವಿವರಣೆ |
|---|---|
| ಅನುಮತ್ಯೈ ಅಷ್ಟಾಕಪಾಲಂ ಪುರೋಡಾಶಂ ನಿರ್ವಪತಿ | *ಅನುಮತಿದೇವತೆಗಾಗಿರುವ ಎಂಟು ಕಪಾಲಗಳಲ್ಲಿ ಸಂಸ್ಕೃತವಾದ ಪುರೋಡಾಶಕ್ಕಾಗಿ ನಿರ್ವಾಪ ಮಾಡಬೇಕು. |
| ಧೇನುಃ ದಕ್ಷಿಣಾ | [ಈ ಯಾಗದಲ್ಲಿ] ಹೊಸದಾಗಿ ಕರು ಹಾಕಿರುವ ಹಸುವನ್ನು ದಕ್ಷಿಣೆಯನ್ನಾಗಿ [ಕೊಡಬೇಕು.] |
| ಯೇ ಪ್ರತ್ಯಂಚಃ ಶಮ್ಯಾಯಾಃ ಅವಶೀಯಂತೇ | ಶಮ್ಯೆ [ಗೂಟುಕೋಲು]ಯಿಂದ ಪಶ್ಚಿಮ ದಿಕ್ಕಿನಲ್ಲಿ ಯಾವ [ಹಿಟ್ಟಿನ ಭಾಗಗಳು] ಬಿದ್ದಿವೆಯೋ |
| ತಮ್ ನೈರ್‌ಋತಮ್ ಏಕಕಪಾಲಮ್ | ಏಕಕಪಾಲದಲ್ಲಿ [ಆ ಹಿಟ್ಟಿನಿಂದ ಮಾಡಿದ ಪುರೋಡಾಶವನ್ನು] *ನಿರ್‌ಋತಿದೇವತೆಗಾಗಿ ಹೋಮ ಮಾಡಬೇಕು. |

---

**ತಾತ್ಪರ್ಯ:**—ಕೃಷ್ಣಾಜಿನವನ್ನು ಹಾಸಿ, ಅದರ ಮೇಲೆ ದೃಷದುಪಲೆಗಳಿಂದ ಅಕ್ಕಿಯನ್ನು

---

* ಒಂದು ಕಲೆ ಕಡಿಮೆಯಾದ ಚಂದ್ರನುಳ್ಳ ಹುಣ್ಣಿಮೆಯ ದೇವತೆ ಅಥವಾ ಫಲವತ್ತಾದ ಭೂಮಿಯ ಅಧಿದೇವತೆ.

* ಬಂಜರುಭೂಮಿಯ ಅಧಿದೇವತೆ ಅಥವಾ ಹಿಂಸೆಗೆ ಕಾರಣವಾದ ದೇವತೆ.

ಕೃಷ್ಣಂ ವಾಸಃ ಕೃಷ್ಣತೂಷಂ ದಕ್ಷಿಣಾ ವೀಹಿ ಸ್ವಾಹಾಽಹುತಿಂ ಜುಷಾಣ

---

ಕೃಷ್ಣಮ್ । ವಾಸಃ । ಕೃಷ್ಣತೂಷಮಿತಿ ಕೃಷ್ಣ-ತೂಷಮ್ । ದಕ್ಷಿಣಾ । ವೀತಿ । ಇಹಿ । ಸ್ವಾಹಾ । ಆಹುತಿಮಿತ್ಯಾ-ಹುತಿಮ್ । ಜುಷಾಣಃ ।

---

| | |
|---|---|
| ಕೃಷ್ಣಮ್ ವಾಸಃ ಕೃಷ್ಣತೂಷಮ್ ದಕ್ಷಿಣಾ | ಕಪ್ಪು ಅಂಚುಗಳುಳ್ಳ ಕಪ್ಪು ಬಟ್ಟೆಯು ಈ ಯಾಗದ ದಕ್ಷಿಣೆ. |

---

| ಮಂತ್ರ | ವಿನಿಯೋಗ |
|---|---|
| ವೀಹಿ.... ಜುಷಾಣಃ । | ನಿರ್‌ಋತಿಯಾಗಕ್ಕೆ ಹೊರಡುವ ಮೊದಲು ಗಾರ್ಹಪತ್ಯದಲ್ಲಿ ಹೋಮ ಮಾಡಲು |

---

+ [ಗಾರ್‌ಹಪತ್ಯಾಗ್ನಿಯೇ! ನಿನಗಾಗಿ] ಸ್ವಾಹಾ = ದತ್ತವಾದ; ಆಹುತಿಮ್ ಜುಷಾಣಃ = ಆಹುತಿಯನ್ನು ಸ್ವೀಕರಿಸಿದವನಾಗಿ; ವೀಹಿ = [ನಿರ್‌ಋತಿಯಾಗಕ್ಕಾಗಿ ಹೋಗುತ್ತಿರುವ ನಮ್ಮಿಂದ] ವಿಮುಕ್ತನಾಗು; [ನಮ್ಮನ್ನು ಹಿಂಬಾಲಿಸಬೇಡ].

---

ಅರೆದು ಹಿಟ್ಟು ಮಾಡುತ್ತಾರೆ. ದೃಷತ್ತಿನ ಕೆಳಗೆ ಶಮ್ಯೆಯನ್ನು [ಗೂಟುಕೋಲು] ಇಟ್ಟಿರುತ್ತಾರೆ. ಅದರ ಪಶ್ಚಿಮಭಾಗದಲ್ಲಿ ಬಿದ್ದಿರುವ ಹಿಟ್ಟಿನಿಂದ ಒಂದು ಕಪಾಲದಲ್ಲಿ ಪುರೋಡಾಶವನ್ನು ಮಾಡುತ್ತಾರೆ. ಆ ಪುರೋಡಾಶವನ್ನು ನಿರ್‌ಋತಿದೇವತೆಗೆ ಹೋಮ ಮಾಡಬೇಕು. ಬೇರೆಯ ಭಾಗದಲ್ಲಿ ಬಿದ್ದಿರುವ ಹಿಟ್ಟನ್ನು ಎಂಟು ಕಪಾಲಗಳಲ್ಲಿ ಪುರೋಡಾಶವನ್ನು ಮಾಡಿ ಅನುಮತಿದೇವತೆಗಾಗಿ ಹೋಮ ಮಾಡಬೇಕು.

## ಏಷ ತೇ ನಿರ್ಋತೇ ಭಾಗೋ ಭೂತೇ ಹವಿಷ್ಮತ್ಯಸಿ ಮುಂಚೇಮಮಗ್ಂಹಸಃ ಸ್ವಾಹಾ ನಮೋ ಯ ಇದಂ

---

ಏಷಃ । ತೇ । ನಿರ್ಋತ ಇತಿ ನಿಃ-ಋತೇ । ಭಾಗಃ । ಭೂತೇ । ಹವಿಷ್ಮತೀ । ಅಸಿ । ಮುಂಚ । ಇಮಮ್ । ಅಗ್ಂಹಸಃ । ಸ್ವಾಹಾ । ನಮಃ । ಯಃ । ಇದಮ್ । ಚಕಾರ।

---

| ಮಂತ್ರ | ವಿನಿಯೋಗ |
|---|---|
| ಏಷ...... ಅಗ್ಂಹಸಃ । | ನಿರ್ಋತಿಯಾಗದ ಹೋಮ |
| ಸ್ವಾಹಾ......ಚಕಾರ । | ನಿರ್ಋತಿಯಾಗದಿಂದ ಹಿಂದಿರುಗಿ ಬಂದು ಗಾರ್ಹಪತ್ಯದಲ್ಲಿ ಹೋಮ ಮಾಡಲು. |

---

∻ **ನಿರ್ಋತೇ** = ನಿರ್ಋತಿದೇವತೆಯೇ! **ಏಷಃ** = [ನಾವು ಕೊಡುತ್ತಿರುವ] ಈ ಏಕಕಪಾಲವು; **ತೇ** = ನಿನ್ನ; **ಭಾಗಃ** = ಭಾಗವಾಗಿದೆ. **ಭೂತೇ** = [ನಮಗೆ] ಐಶ್ವರ್ಯಪ್ರದಳೇ! [ನೀನು] **ಹವಿಷ್ಮತೀ ಅಸಿ** = ಹವಿಸ್ಸನ್ನು ಹೊಂದಿದವಳಾಗಿದ್ದೀಯೆ; **ಇಮಮ್** = ಈ ಯಜಮಾನನನ್ನು; **ಅಗ್ಂಹಸಃ** = ಬಡತನಕ್ಕೆ ಕಾರಣವಾದ ಪಾಪದಿಂದ; **ಮುಂಚ**= ಬಿಡಿಸು; [ಸ್ವಾಹಾ = ಇದು ನಿನಗೆ ಹುತವಾಗಲಿ. [ಬೌಧಾಯನ] ∻ **ಯಃ** = ಯಾವ ಗಾರ್ಹಪತ್ಯಾಗ್ನಿಯು; **ಇದಮ್ ಚಕಾರ** = ನಮ್ಮ ಪ್ರಾರ್ಥನೆಯನ್ನು ನಡೆಸಿಕೊಟ್ಟನೋ; **ತಸ್ಮೈ** = ಆ ಗಾರ್ಹಪತ್ಯಾಗ್ನಿಗೆ; **ಸ್ವಾಹಾ** = [ಈ ಆಜ್ಯಾಹುತಿಯು] ಹುತವಾಗಲಿ; **ನಮಃ** = ನಮಸ್ಕಾರವೂ ಮಾಡಲ್ಪಟ್ಟಿದೆ.

---

ಮೊದಲು ಅನುಮತಿಯಾಗವನ್ನು ಹೇಳಿದ್ದರೂ ನಿರ್ಋತಿಯಾಗವನ್ನು ಮೊದಲು ಮಾಡಬೇಕು. ನಿರ್ಋತಿಯಾಗದಲ್ಲಿ ಕಪ್ಪು ಅಂಚುಗಳುಳ್ಳ ಕರಿಬಟ್ಟೆಯನ್ನು ದಕ್ಷಿಣೆಯನ್ನಾಗಿ ಕೊಡಬೇಕು.

ಗಾರ್ಹಪತ್ಯಾಗ್ನಿಯಲ್ಲಿ ಮೊದಲು ಹೋಮ ಮಾಡಿ, ಅನಂತರ ಒಂದು ಕೊಳ್ಳಿಯನ್ನು ತೆಗೆದುಕೊಂಡು ಬಂಜರುಭೂಮಿಗೆ ಅಥವಾ ತಾನೇ ಆಗಿರುವ ಹಳ್ಳದ ಕಡೆಗೆ ಹೋಗಿ ಅಲ್ಲಿ ನಿರ್ಋತಿಹೋಮಮಾಡಿ, ಹಿಂದೆ ನೋಡದೆ ಯಾಗಶಾಲೆಗೆ ಬಂದು ಆಜ್ಯದಿಂದ ಗಾರ್ಹಪತ್ಯಾಗ್ನಿಯಲ್ಲಿ ಹೋಮ ಮಾಡಬೇಕು.

ಚತುರಾದಿತ್ಯಂ ಚರುಂ ನಿರ್ವಪತಿ ವರೋ
ದಕ್ಷಿಣಾಽಗ್ನಾವೈಷ್ಣವಮೇಕಾದಶಕಪಾಲಂ

---

ಆದಿತ್ಯಮ್ । ಚರುಮ್ । ನಿರಿತಿ । ವಪತಿ । ವರಃ । ದಕ್ಷಿಣಾ । ಆಗ್ನಾವೈಷ್ಣವ ಮಿತ್ಯಾಗ್ನಾ-ವೈಷ್ಣವಮ್ । ಏಕಾದಶಕಪಾಲಮಿತ್ಯೇಕಾದಶ-ಕಪಾಲಮ್ ।

---

ಆದಿತ್ಯಂ ಚರುಮ್...ಗಾವೌದಕ್ಷಿಣ ॥

ಆದಿತ್ಯಾದಿಸಪ್ತಯಾಗಗಳು ವಿಹಿತವಾಗಿವೆ. ಅನುಮತಾನುಷ್ಠಾನಾನಂತರ ದಿನಕ್ಕೊಂದ ರಂತೆ ಅನುಷ್ಠಾನ ಮಾಡಬೇಕು.

| ಬ್ರಾಹ್ಮಣ ಭಾಗ | ವಿವರಣೆ |
|---|---|
| ಆದಿತ್ಯಂ ಚರುಂ ನಿರ್ವಪತಿ | ಅದಿತಿದೇವತೆಗಾಗಿ ಚರುಯಾಗವನ್ನು ಮಾಡಬೇಕು. |
| ವರಃ ದಕ್ಷಿಣಾ | ಶ್ರೇಷ್ಠವಾದ ಗೋವು ಈ ಯಾಗದ ದಕ್ಷಿಣಾ. |
| ಆಗ್ನಾವೈಷ್ಣವಮ್ ಏಕಾದಶಕಪಾಲಮ್ | ಅಗ್ನಿ-ವಿಷ್ಣು ಈ ದೇವತೆಗಳಿಗಾಗಿ ಏಕಾದಶಕಪಾಲ ಸಂಸ್ಕೃತ[ಪುರೋಡಾಶವನ್ನು]ಯಾಗ ಮಾಡಬೇಕು. |

---

ಗಾರ್ಹಪತ್ಯಾಗ್ನಿಯೇ! ನಾವು ನಿನಗೆ ಕೊಡುವ ಆಹುತಿಯನ್ನು ಸ್ವೀಕರಿಸಿ ತೃಪ್ತನಾಗಿರು. ನಿರ್‌ಋತಿಯಾಗವನ್ನು ಮಾಡಲು ಹೋಗುತ್ತಿರುವ ನಮ್ಮನ್ನು ಹಿಂಬಾಲಿಸಿ ಬರಬೇಡ.

ನಿರ್‌ಋತಿದೇವತೆಯೇ! ಈ ಏಕಕಪಾಲಪುರೋಡಾಶವು ನಿನ್ನ ಭಾಗವಾಗಿದೆ. ಹವಿಸ್ಸನ್ನು ಹೊಂದಿರುವ ನೀನು ಈ ಯಜಮಾನನನ್ನು ಬಡತನಕ್ಕೆ ಕಾರಣವಾದ ಪಾಪದಿಂದ ಬಿಡಿಸು. ನಿನಗೆ ಇದು ಹುತವಾಗಲಿ.

ಯಾವ ಗಾರ್ಹಪತ್ಯಾಗ್ನಿಯು ನಮ್ಮ ಪ್ರಾರ್ಥನೆಯನ್ನು ನಡೆಸಿಕೊಟ್ಟನೋ ಆತನಿಗಾಗಿ ಈ ಆಜ್ಯಹವಿಸ್ಸನ್ನು ಅರ್ಪಿಸುತ್ತೇವೆ. ಇದು ಹುತವಾಗಲಿ. ಅವನಿಗೆ ನಮಸ್ಕಾರವನ್ನೂ ಮಾಡುತ್ತೇವೆ.

ಅನುಮತಯಾಗಾನಂತರ ಏಳು ದಿನಗಳಲ್ಲಿ ಆದಿತ್ಯಾದಿಸಪ್ತಯಾಗಗಳನ್ನು ಮಾಡಬೇಕು. ಬ್ರಾಹ್ಮಣಭಾಗದಲ್ಲಿ ದೇವತಾ, ಯಾಗದ್ರವ್ಯ ಮತ್ತು ದಕ್ಷಿಣೆಗಳು ಹೇಳಲ್ಪಟ್ಟಿವೆ. ಅನುಮತವೂ ಸೇರಿ ಎಂಟು ಯಾಗಗಳು. ೧) ಅನುಮತ ೨) ಆದಿತ್ಯ

ವಾಮನೋ ವಹೀ ದಕ್ಷಿಣಾಗ್ನೀಷೋಮೀಯ [...ಗ್ನೀಷೋ-ಮೀಯಮ್(೧)ಏಕಾದಶ..] ಮೇಕಾದಶಕಪಾಲಗ್ಂ ಹಿರಣ್ಯಂ ದಕ್ಷಿಣೈಂದ್ರಮೇಕಾದಶಕಪಾಲಮೃಷಭೋ ವಹೀ ದಕ್ಷಿಣಾಽಽಗ್ನೇಯ-

---

ವಾಮನಃ । ವಹೀ । ದಕ್ಷಿಣಾ । ಅಗ್ನೀಷೋಮೀಯಮಿತ್ಯಗ್ನೀ-ಸೋಮೀಯಮ್ (೧) । ಏಕಾದಶಕಪಾಲಮಿತ್ಯೇಕಾದಶ-ಕಪಾಲಮ್ । ಹಿರಣ್ಯಮ್ । ದಕ್ಷಿಣಾ । ಐಂದ್ರಮ್ । ಏಕಾದಶಕಪಾಲಮಿತ್ಯೇಕಾದಶ-ಕಪಾಲಮ್। ಋಷಭಃ । ವಹೀ । ದಕ್ಷಿಣಾ । ಆಗ್ನೇಯಮ್।

---

| | |
|---|---|
| ವಾಮನಃ ವಹೀ ದಕ್ಷಿಣಾ | ಭಾರವನ್ನು ಹೊರಲು ಸಮರ್ಥವಾದ ಕುಳ್ಳಾಗಿರುವ ಎತ್ತು [ಈ ಯಾಗದ] ದಕ್ಷಿಣೆ. |
| ಅಗ್ನೀಷೋಮೀಯಮ್ ಏಕಾದಶಕಪಾಲಮ್ | ಏಕಾದಶಕಪಾಲಸಂಸ್ಕೃತವಾದ [ಪುರೋಡಾಶವನ್ನು] ಅಗ್ನೀಷೋಮದೇವತೆಗಳಿಗಾಗಿ [ಯಾಗ ಮಾಡಬೇಕು] |
| ಹಿರಣ್ಯಮ್ ದಕ್ಷಿಣಾ | ಇದಕ್ಕೆ ಬಂಗಾರವು ದಕ್ಷಿಣೆ. |
| ಐಂದ್ರಮ್ ಏಕಾದಶಕಪಾಲಮ್ | ಇಂದ್ರದೇವತೆಗಾಗಿ ಹನ್ನೊಂದು ಕಪಾಲಗಳಲ್ಲಿ ಸಂಸ್ಕೃತವಾದ [ಪುರೋಡಾಶವನ್ನು ಯಾಗ ಮಾಡಬೇಕು]. |
| ಋಷಭಃ ವಹೀ ದಕ್ಷಿಣಾ | ಇದರಲ್ಲಿ ರೇತಸ್ಸೇಚನ ಸಮರ್ಥವಾದ ಭಾರವನ್ನು ಹೊರುವ ಎತ್ತು ದಕ್ಷಿಣೆ. |
| ಆಗ್ನೇಯಮ್ | ಅಗ್ನಿದೇವತೆಗಾಗಿ |

---

೩) ಆಗ್ನಾವೈಷ್ಣವ ೪) ಅಗ್ನೀಷೋಮೀಯ ೫) ಐಂದ್ರ, ೬) ಆಗ್ನೇಯ ಅಷ್ಟಾಕಪಾಲ, ಐಂದ್ರದಧಿಯಾಗ ೭) ಐಂದ್ರಾಗ್ನದ್ವಾದಶಕಪಾಲ, ವೈಶ್ವದೇವ ಚರು, ಸೌಮ್ಯ ಶ್ಯಾಮಾಕಚರು ೮) ಸಾರಸ್ವತಚರುಯಾಗ.

-ಮಷ್ಟಾಕಪಾಲಮೈಂದ್ರಂ ದಧ್ಯೃಷಭೋ ವಹೀ
ದಕ್ಷಿಣೈಂದ್ರಾಗ್ನಂ ದ್ವಾದಶಕಪಾಲಂ ವೈಶ್ವದೇವಂ ಚರುಂ
ಪ್ರಥಮಜೋ ವತ್ಸೋ ದಕ್ಷಿಣಾ ಸೌಮ್ಯಗ್ಂ
ಶ್ಯಾಮಾಕಂ ಚರುಂ ವಾಸೋ ದಕ್ಷಿಣಾ

---

ಅಷ್ಟಾಕಪಾಲಮಿತ್ಯಷ್ಟಾ-ಕಪಾಲಮ್ । ಐಂದ್ರಮ್ । ದಧಿ । ಋಷಭಃ । ವಹೀ । ದಕ್ಷಿಣಾ। ಐಂದ್ರಾಗ್ನಮಿತ್ಯೈಂದ್ರ-ಆಗ್ನಮ್ । ದ್ವಾದಶಕಪಾಲಮಿತಿ ದ್ವಾದಶ-ಕಪಾಲಮ್। ವೈಶ್ವದೇವಮಿತಿ ವೈಶ್ವ-ದೇವಮ್ । ಚರುಮ್ । ಪ್ರಥಮಜ ಇತಿ ಪ್ರಥಮ-ಜಃ । ವತ್ಸಃ। ದಕ್ಷಿಣಾ । ಸೌಮ್ಯಮ್ । ಶ್ಯಾಮಾಕಮ್ । ಚರುಮ್ । ವಾಸಃ । ದಕ್ಷಿಣಾ ।

---

| | |
|---|---|
| ಅಷ್ಟಾಕಪಾಲಮ್ | ಅಷ್ಟಾಕಪಾಲಸಂಸ್ಕೃತವಾದ [ಪುರೋಡಾಶದಿಂದ ಯಾಗ ಮಾಡಬೇಕು]. |
| ಐಂದ್ರಂ ದಧಿ | ಇಂದ್ರದೇವತೆಗಾಗಿ ದಧಿಯಾಗ ಮಾಡಬೇಕು. |
| ಋಷಭಃ ವಹೀ ದಕ್ಷಿಣಾ | ರೇತಸ್ಸೇಚನಸಮರ್ಥವಾದ, ಭಾರವನ್ನು ಹೊರುವ ಎತ್ತು ಈ ಯಾಗದ ದಕ್ಷಿಣೆ. |
| ಐಂದ್ರಾಗ್ನಮ್ ದ್ವಾದಶ ಕಪಾಲಮ್ | ಇಂದ್ರಾಗ್ನಿದೇವತಾಕವಾದ ಹನ್ನೆರಡು ಕಪಾಲಗಳಲ್ಲಿ ಸಂಸ್ಕೃತವಾದ ಪುರೋಡಾಶದಿಂದ ಯಾಗ ಮಾಡಬೇಕು. |
| ವೈಶ್ವದೇವಮ್ ಚರುಮ್ | ವಿಶ್ವೇದೇವರಿಗಾಗಿ ಚರುಯಾಗ ಮಾಡಬೇಕು. |
| ಪ್ರಥಮಜಃ ವತ್ಸಃ ದಕ್ಷಿಣಾ | ಮೊದಲನೆಯದಾಗಿ ಹುಟ್ಟಿದ ಹೋರಿಕರುವು ಈ ಯಾಗದ ದಕ್ಷಿಣೆ. |
| ಸೌಮ್ಯಮ್ ಶ್ಯಾಮಾಕಮ್ ಚರುಮ್ | ಸೋಮದೇವತಾಕವಾದ ಸಾಮೆ ಅಕ್ಕಿಯ ಅನ್ನವನ್ನು ಯಾಗ ಮಾಡಬೇಕು. |
| ವಾಸಃ ದಕ್ಷಿಣಾ | ಈ ಯಾಗಕ್ಕೆ ವಸ್ತ್ರವು ದಕ್ಷಿಣೆ. |

ಸರಸ್ವತ್ಯೈ ಚರುಗ್ಂ ಸರಸ್ವತೇ ಚರುಂ ಮಿಥುನೌ ಗಾವೌ ದಕ್ಷಿಣಾ ॥ ೧-2 ॥

[ಅಗ್ನೀಷೋಮೀಯಂ ಚತುಸ್ತ್ರಿಗ್ಂಶಚ್ಚ ॥]

---

ಸರಸ್ವತ್ಯೈ । ಚರುಮ್ । ಸರಸ್ವತೇ । ಚರುಮ್ । ಮಿಥುನೌ । ಗಾವೌ । ದಕ್ಷಿಣಾ ॥೧॥

---

| | |
|---|---|
| ಸರಸ್ವತ್ಯೈ ಚರುಮ್ | ಸರಸ್ವತೀದೇವತೆಗಾಗಿ ಚರುಯಾಗವನ್ನೂ, |
| ಸರಸ್ವತೇ ಚರುಮ್ | ಸರಸ್ವಂತನಿಗಾಗಿ ಚರುಯಾಗವನ್ನೂ ಮಾಡಬೇಕು. |
| ಮಿಥುನೌ ಗಾವೌ ದಕ್ಷಿಣಾ | ಹಸು-ಹೋರಿಗಳು ಈ ಯಾಗದ ದಕ್ಷಿಣೆಯಾಗಿವೆ. |

## ವಿನಿಯೋಗ ಸಂಗ್ರಹ

ಆದಾವನುಮತಂ ತಸ್ಯ ಮಧ್ಯೇ ನೈರ್ಋತಮತ್ರ ಚ ।
ವೀಹೀತ್ಯಾದ್ಯಾಸ್ತ್ರಯೋ ಮಂತ್ರಾ ವಿನಿಯೋಗಸ್ತು ವಣ್ಯತೇ ॥
1-3 ವೀಹ್ಯೇಷ ನಮ ಇತ್ಯಗ್ನಿಪ್ರದರಾಗ್ನಿಷು ಹೂಯತೇ ।
ಸಹ್ಯೈವಾನುಮತೇನಾಷ್ಟೌ ಯಾಗಾಃ ಪ್ರಥಮ ಈರಿತಾಃ ॥

**ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ-3**

**ಉಳಿದುದು ಬ್ರಾಹ್ಮಣಭಾಗ.**

# ಅನುವಾಕದ ವಿಶೇಷ ವಿಷಯಗಳು

## ಅ) ಮೀಮಾಂಸಾ

**೧) ರಾಜಸೂಯದಲ್ಲಿ ಫಲಸಂಬಂಧವು ಯಾವುದಕ್ಕೆ? [ಜೈ.ಸೂ. 4. 4.]**

ರಾಜಸೂಯದಲ್ಲಿ ಅನುಮತಾದಿ ಇಷ್ಟಿಗಳಿವೆ. 'ಆದಿತ್ಯಾಂ ಮಲ್‌ಹಾಮ್' ಇತ್ಯಾದಿ ಪಶುಯಾಗಗಳಿವೆ. ಅಭಿಷೇಚನೀಯಾದಿ ಸೋಮಯಾಗಗಳಿವೆ. ವಲ್ಮೀಕ ಹೋಮಾದಿ ದರ್ವೀಹೋಮಗಳಿವೆ. ಇವೆಲ್ಲವೂ ಯಾಗರೂಪಗಳಾಗಿವೆ. ಹಾಗೆಯೇ ದೇವನಾದಿಕ್ರಿಯೆಗಳೂ [ಜೂಜು] ಇವೆ. ಇವು ಅಯಾಗರೂಪಗಳು. ಇವೆಲ್ಲಕ್ಕೂ ಫಲಸಂಬಂಧವಿದೆಯೇ? ಎಂದು ಇಲ್ಲಿನ **ಸಂಶಯ.**

ಎಲ್ಲವೂ ರಾಜಸೂಯಪ್ರಕರಣದಲ್ಲಿಯೇ ಇರುವುದರಿಂದ ಎಲ್ಲಕ್ಕೂ ಫಲಸಂಬಂಧವಿದೆ. ಇದು ಇಲ್ಲಿನ **ಪೂರ್ವಪಕ್ಷ.**

**'ರಾಜಾ ರಾಜಸೂಯೇನ ಸ್ವಾರಾಜ್ಯಕಾಮೋ ಯಜೇತ'** ಎಂದು ಯಾಗರೂಪ ವಾದವುಗಳಿಗೇ ಫಲಸಂಬಂಧವನ್ನು ಹೇಳಿರುವುದರಿಂದ ಅವುಗಳಿಗೇ ಫಲಸಂಬಂಧ. ಅವುಗಳೇ ಮುಖ್ಯಗಳು. ಉಳಿದವು ಅಂಗಗಳು-ಇದು ಇಲ್ಲಿನ **ಸಿದ್ಧಾಂತ.**

**೨) ಅನುಮತ್ಯಾದಿ ಇಷ್ಟಿಗಳಲ್ಲಿ ಅನ್ವಾರಂಭಣೀಯೇಷ್ಟಿಯು ಇದೆಯೇ? [ಜೈ.ಸೂ. 10.1]**

ರಾಜಸೂಯದಲ್ಲಿ ಅನುಮತ್ಯಾದಿ ಇಷ್ಟಿಗಳಿವೆ. ಇವು ದರ್ಶ-ಪೂರ್ಣಮಾಸ ವಿಕೃತಿಗಳಾದುದರಿಂದ ಆರಂಭದಲ್ಲಿ ಅನ್ವಾರಂಭಣೀಯೇಷ್ಟಿಯನ್ನು ಮಾಡಬೇಕೇ ಇಲ್ಲವೇ? ಇದು ಇಲ್ಲಿನ **ಸಂಶಯ.**

ಇವೂ ಉಳಿದ ಸೋಮಯಾಗಾದಿಗಳಂತೆಯೇ ಮುಖ್ಯವಾದುದರಿಂದ ಆರಂಭ ದಲ್ಲಿ ಮಾಡಬೇಕಾದ ಅನ್ವಾರಂಭಣೀಯೇಷ್ಟಿಯನ್ನು ಮಾಡಬೇಕು. ದರ್ಶ-ಪೂರ್ಣಮಾಸ ದಲ್ಲಿ ಮಾಡುವಂತೆ ಸರ್ವಾರ್ಥವಾಗಿ ಮೊದಲಿನಲ್ಲಿ ಒಂದು ಬಾರಿ ಮಾಡಬೇಕು. ಇದು **ಪೂರ್ವಪಕ್ಷ.**

ರಾಜಸೂಯದಲ್ಲಿ ಹಲವು ವಿಧದ ಯಾಗಗಳು ಇವೆ. ಯಾಗಸಂಘವು ದರ್ಶ-ಪೂರ್ಣಮಾಸದ ವಿಕಾರವಲ್ಲ. ಅಲ್ಲದೆ ರಾಜಸೂಯದ ಪ್ರಾರಂಭದಲ್ಲಿ **'ಅಗ್ನಿಷ್ಟೋಮಮಗ್ರ ಆಹರತಿ'** ಎಂದು ಬೇರೊಂದು ಯಾಗವನ್ನು ಹೇಳಿರುತ್ತಾರೆ. ಆದುದರಿಂದ ಅನ್ವಾರಂಭಣೀಯೇಷ್ಟಿಯನ್ನು ಮಾಡಬೇಕಾಗಿಲ್ಲ. ಇದು **ಸಿದ್ಧಾಂತ.**

**೩) ರಾಜಸೂಯದ ಆಗ್ರಯಣೇಷ್ಟಿಯ ದಕ್ಷಿಣಾವಿಚಾರ; [ಜೈ.ಸೂ. 10.3]**

ರಾಜಸೂಯದ ಆಗ್ರಯಣೇಷ್ಟಿಯಲ್ಲಿ ವಾಸಸ್ಸನ್ನೂ, ವತ್ಸವನ್ನೂ ದಕ್ಷಿಣೆಯನ್ನಾಗಿ ಹೇಳಿರುತ್ತಾರೆ. ಪ್ರಕೃತಿಯಾದ ದರ್ಶ-ಪೂರ್ಣಮಾಸದಲ್ಲಿ ಅನ್ವಾಹಾರ್ಯದಕ್ಷಿಣೆಯಿದೆ. ಎರಡನ್ನೂ ಕೊಡಬೇಕೆ? ಬೇಡವೇ? ಎಂಬುದು ಇಲ್ಲಿನ ಸಂಶಯ.

ವಿರೋಧವಿಲ್ಲದುದರಿಂದ ಎರಡನ್ನೂ ಕೊಡಬೇಕೆಂಬುದು ಇಲ್ಲಿನ ಪೂರ್ವಪಕ್ಷ.

ಎರಡಕ್ಕೂ ಋತ್ವಿಜರ ಆನತಿಸಾಧನತ್ವವೆಂಬ ಒಂದೇ ಕಾರ್ಯವಿರುವುದರಿಂದ ಪ್ರಾಕೃತಿಕದಕ್ಷಿಣೆಗೆ ಬಾಧ ಬರುತ್ತದೆ. ಇಲ್ಲಿ ಹೇಳಿರುವ ದಕ್ಷಿಣೆಯನ್ನೇ ಕೊಡಬೇಕು. ಇದು ಸಿದ್ಧಾಂತ.

**೪) ವಾಸೋವತ್ಸಗಳಲ್ಲಿ ಅನ್ವಾಹಾರ್ಯಧರ್ಮಗಳಿವೆಯೇ? [ಜೈ.ಸೂ. 10.3]**

ವಾಸೋವತ್ಸಗಳಲ್ಲಿ 'ಉಪಹರ್ತವೈ' ಮುಂತಾದ ಅನ್ವಾಹಾರ್ಯಧರ್ಮಗಳಿವೆಯೇ? ಇದು ಸಂಶಯ.

ಪ್ರಕೃತಿಯ ದಕ್ಷಿಣೆಯಾದ ಅನ್ವಾಹಾರ್ಯವಿಲ್ಲದಿದ್ದ ಮೇಲೆ ಅದಕ್ಕೆ ಸಂಬಂಧಿಸಿದ ಆ ಧರ್ಮಗಳೂ ಇಲ್ಲವೆಂಬುದು ಇಲ್ಲಿನ ಪೂರ್ವಪಕ್ಷ.

'ತತ್ಸ್ಥಾನಾಪನ್ನಃ ತದ್ಧರ್ಮಾನ್ ಲಭತೇ' ಎಂಬ ನ್ಯಾಯದಂತೆ ಅನ್ವಾಹಾರ್ಯಧರ್ಮವಾದ ಪ್ರೈಷಾದಿಗಳನ್ನು ಮಾಡಬೇಕೆಂಬುದು ಇಲ್ಲಿನ ಸಿದ್ಧಾಂತ.

**೫) ಅನ್ವಾಹಾರ್ಯದಂತೆ ಪಾಕವಿದೆಯೇ? [ಜೈ.ಸೂ. 10.3]**

ಅನ್ವಾಹಾರ್ಯಧರ್ಮವು ವಾಸೋವತ್ಸಗಳಿಗೆ ಬರುವುದಾದರೆ ಅನ್ವಾಹಾರ್ಯದಂತೆ ಪಾಕವಿದೆಯೇ? ಇದು ಸಂಶಯ.

ಇತರಧರ್ಮದಂತೆ ಪಾಕವನ್ನೂ ಮಾಡಬೇಕೆಂಬುದು ಇಲ್ಲಿನ ಪೂರ್ವಪಕ್ಷ.

ಪಾಕ ಮಾಡುವುದರಿಂದ ವತ್ಸ(ಕರು)ದ ಸ್ವರೂಪಕ್ಕೇ ನಾಶ ಬರುವುದರಿಂದ ಪಾಕ ಮಾಡಬೇಕಾಗಿಲ್ಲ. ವತ್ಸವನ್ನು ದಕ್ಷಿಣೆಯನ್ನಾಗಿ ಹೇಳಿದ್ದಾರೆಯೇ ಹೊರತು ಮಾಂಸವನ್ನಲ್ಲ. ಆದುದರಿಂದ ಪಾಕವಿಲ್ಲವೆಂಬುದು ಇಲ್ಲಿನ ಸಿದ್ಧಾಂತ.

**೬) ವಸ್ತ್ರಕ್ಕೆ ಪಾಕವಿದೆಯೇ? [ಜೈ.ಸೂ. 10.3]**

ವಸ್ತ್ರವನ್ನು ಪಾಕ ಮಾಡಬಹುದೆಂದು ಇಲ್ಲಿನ ಸಂಶಯ.

ಪಾಕವನ್ನು ಮಾಡುವುದರಿಂದ ವತ್ಸವು ನಾಶವಾದಂತೆ ವಸ್ತ್ರವು ನಾಶವಾಗುವುದಿಲ್ಲ. ಆದುದರಿಂದ ವಸ್ತ್ರದ ಪಾಕವನ್ನು ಮಾಡಬೇಕು. ಇದು ಇಲ್ಲಿನ ಪೂರ್ವಪಕ್ಷ.

ಭೋಜನಕ್ಕಾಗಿ ಅನ್ನಪಾಕವನ್ನು ಮಾಡಬೇಕು. ಅದೃಷ್ಟಾರ್ಥಕ್ಕಾಗಿ ಅಲ್ಲ. ವಸ್ತ್ರವನ್ನು ಬಿಸಿನೀರಿನಲ್ಲಿ ಹಾಕುವುದರಿಂದ ಪ್ರಯೋಜನವೇನೂ ಇಲ್ಲ. ಆದುದರಿಂದ ಪಾಕ ಮಾಡಬೇಕಾಗಿಲ್ಲ. ಇದು ಇಲ್ಲಿನ ಸಿದ್ಧಾಂತ.

**೭) ವಾಸೋವತ್ಸಗಳಿಗೆ ಅಭಿಘಾರವಿದೆಯೇ? [ಜೈ.ಸೂ. 10-3.]**

ವಾಸೋವತ್ಸಗಳಿಗೆ ಅಭಿಘಾರವಿದೆಯೇ? ಇದು ಸಂಶಯ.

ವಿರೋಧವಿಲ್ಲದುದರಿಂದ ವಾಸೋವತ್ಸಗಳಿಗೆ ಅಭಿಘಾರವನ್ನು ಮಾಡಬೇಕು. ಇದು ಇಲ್ಲಿನ ಪೂರ್ವಪಕ್ಷ.

ಅನ್ನಕ್ಕೆ ವಿಶೇಷರುಚಿಯನ್ನು ಉಂಟುಮಾಡುವುದಕ್ಕಾಗಿ ಮಾಡುವ ಅಭಿಘಾರವು ವಾಸೋವತ್ಸಗಳಿಗೆ ಬೇಕಾಗಿಲ್ಲ. ಇದು ಸಿದ್ಧಾಂತ.

**೮) ವಾಸಃ, ಅನಃ ಶಬ್ದಗಳು ಕ್ರಿಯಾತಿದೇಶಕಗಳೇ? [ಜೈ.ಸೂ. 7.3.]**

'ವಾಸೋ ದದಾತಿ' 'ಅನೋ ದದಾತಿ' ಎಂಬ ಶ್ರುತಿವಾಕ್ಯಗಳಿವೆ. [ವಾಸಃ = ಬಟ್ಟೆ; ಅನಃ = ಗಾಡಿ] ಇವು ನೇಯುವ ಮತ್ತು ಕೆತ್ತುವ ಕ್ರಿಯೆಗಳನ್ನು ಅತಿದೇಶ ಮಾಡುತ್ತವೆಯೇ? ಎಂಬುದು ಸಂಶಯ.

ಶಾಸ್ತ್ರೀಯಸಂಸ್ಕಾರವಾದ ಮೇಲೆ ಮರದ ತುಂಡನ್ನು 'ಯೂಪ' ಎನ್ನುತ್ತಾರೆ. ಹಾಗೆಯೇ ನೇಯುವುದು, ಕೆತ್ತುವುದು— ಇವುಗಳನ್ನು ಮಾಡಿಯೇ ದಾನ ಮಾಡಬೇಕೆಂಬುದು ಪೂರ್ವಪಕ್ಷ.

'ಪಾಚಕ' ಮುಂತಾದ ಶಬ್ದಗಳು ಕ್ರಿಯಾನಿಮಿತ್ತವಾದವು. ಗೋ-ಅಶ್ವಶಬ್ದಗಳು ಜಾತಿವಾಚಿಯಾದವುಗಳು. ಅವುಗಳಂತೆಯೇ ವಾಸಃ, ಅನಃ ಶಬ್ದಗಳೂ ಜಾತಿವಾಚಕಗಳೇ ಆದುದರಿಂದ ಅವುಗಳಲ್ಲಿ ಸಂಸ್ಕಾರ ಮಾಡಬೇಕಾಗಿಲ್ಲ. ಆ ಶಬ್ದಗಳು ಕ್ರಿಯೆಯನ್ನು ಅತಿದೇಶ ಮಾಡುವುದಿಲ್ಲ. ಇದು ಇಲ್ಲಿನ ಸಿದ್ಧಾಂತ.

**೯) ಆಗ್ರಯಣೇಷ್ಟಿಯಲ್ಲಿನ ಐಂದ್ರಾಗ್ನಾದಿಗಳಲ್ಲಿ ಬರ್ಹಿಸ್ಸು ಯಾವುದು? [ಜೈ.ಸೂ. 12.2.]**

ಆಗ್ರಯಣೇಷ್ಟಿಯಲ್ಲಿ ಐಂದ್ರಾಗ್ನ, ವೈಶ್ವದೇವ, ದ್ಯಾವಾಪೃಥಿವ್ಯ ಎಂಬ ಮೂರು ಯಾಗಗಳು ಇವೆ. ಇವುಗಳನ್ನು ಒಟ್ಟಾಗಿ ಮಾಡಬೇಕು. ಇವುಗಳ ಬರ್ಹಿಸ್ಸು [ದರ್ಭೆ]

ಯಾವುದೆಂಬುದರ ವಿಷಯದಲ್ಲಿ ಸಾಮಾನ್ಯ ಬರ್ಹಿಸ್ಸೇ ಅಥವಾ ಪ್ರಸೂನಬರ್ಹಿಸ್ಸೇ ಎಂದು ಸಂಶಯ. ಪ್ರಸೂನಬರ್ಹಿಸ್ಸೆಂದರೆ ಹೂ ಬಿಟ್ಟಿರುವ ದರ್ಭೆ ಅಥವಾ ಒಂದು ಬಾರಿ ಕತ್ತರಿಸಿದ ಮೇಲೆ ಮತ್ತೆ ಚಿಗುರಿರುವ ದರ್ಭೆ. ಐಂದ್ರಾಗ್ನ, ವೈಶ್ವದೇವಗಳಲ್ಲಿ ಸಾಮಾನ್ಯಬರ್ಹಿಸ್ಸು. ದ್ಯಾವಾಪೃಥಿವ್ಯದಲ್ಲಿ ಪ್ರಸೂನಬರ್ಹಿಸ್ಸು ಆಯಾ ಪ್ರಕೃತಿಯಿಂದ ಪ್ರಾಪ್ತವಾಗುತ್ತದೆ. ಹೀಗಿರುವಾಗ ಸಾಮಾನ್ಯ ಬರ್ಹಿಸ್ಸನ್ನು ತರಬೇಕೇ ಅಥವಾ ಪ್ರಸೂನ ಬರ್ಹಿಸ್ಸನ್ನು ತರಬೇಕೇ? ಎಂಬುದು ಸಂಶಯ.

ಇಲ್ಲಿಯ ಪೂರ್ವಪಕ್ಷವು ಹೀಗಿದೆ; ಮುಖ್ಯಾನುಗ್ರಹನ್ಯಾಯದಿಂದ, ಅನೇಕಾನುಗ್ರಹನ್ಯಾಯದಿಂದ ಸಾಮಾನ್ಯಬರ್ಹಿಸ್ಸು. ಐಂದ್ರಾಗ್ನ ಮತ್ತು ವೈಶ್ವದೇವಗಳು ಎರಡು. ಅವುಗಳ ಸಂಖ್ಯೆ ದ್ಯಾವಾಪೃಥಿವ್ಯಕ್ಕಿಂತಲೂ ಹೆಚ್ಚು. ಹೀಗಾಗಿ ಅನೇಕಾನುಗ್ರಹನ್ಯಾಯ. ದ್ಯಾವಾಪೃಥಿವ್ಯಕ್ಕಿಂತಲೂ ಮೊದಲು ಮಾಡುವ ಯಾಗಗಳಾದುದರಿಂದ ಪ್ರಾಥಮ್ಯವೂ ಅವುಗಳಿಗೆ ಇದೆ. ಹೀಗಾಗಿ ಸಾಮಾನ್ಯಬರ್ಹಿಸ್ಸನ್ನೇ ತರಬೇಕು.

ವಿರೋಧವಿಲ್ಲದುದರಿಂದಲೂ ಕಾಂಸ್ಯಭೋಜನ್ಯಾಯದಿಂದಲೂ ಪ್ರಸೂನ ಬರ್ಹಿಸ್ಸನ್ನೇ ತರಬೇಕೆಂಬುದು ಇಲ್ಲಿನ ಸಿದ್ಧಾಂತ.

**೧೦) ಐಂದ್ರಾಗ್ನಾದಿಗಳ ಅನುಷ್ಠಾನ ತಂತ್ರದಿಂದಲೇ [ಜೈ.ಸೂ. 12.2.]**

'ಅನೇಕೋದ್ದೇಶೇನಸಕೃದನುಷ್ಠಾನಂತಂತ್ರಮ್'. ಹಿಂದೆ ಹೇಳಿರುವ ಬರ್ಹಿಸ್ಸಿನ ನಿಯಮದಂತೆಯೇ ದ್ಯಾವಾಪೃಥಿವ್ಯವೇ ತಂತ್ರೀ. ಉಳಿದವುಗಳು ಅದನ್ನು ಅನುಸರಿಸುತ್ತವೆಯೆಂಬುದು ಇಲ್ಲಿನ ಪೂರ್ವಪಕ್ಷ.

ವಿರೋಧವಿಲ್ಲದುದರಿಂದ ಬರ್ಹಿಸ್ಸಿನ ವಿಷಯದಲ್ಲಿ ತಂತ್ರವನ್ನು ಅನುಸರಿಸಲಾಯಿತು. ಇಲ್ಲಿ ದರ್ಶ-ಪೂರ್ಣಮಾಸದ ಆಗ್ನೇಯಾದಿಗಳಂತೆ ಎಲ್ಲವೂ ಸ್ವತಂತ್ರವೇ. ತಂತ್ರದಿಂದ ಅನುಷ್ಠಾನವಿಲ್ಲವೆಂಬುದು ಸಿದ್ಧಾಂತ.

---

**ಕಾಂಸ್ಯಭೋಜನ್ಯಾಯ:—** ಶಿಷ್ಯನು ಕಂಚಿನ ಪಾತ್ರೆಯಲ್ಲಿ ಊಟ ಮಾಡುವ ನಿಯಮವನ್ನು ಅನುಸರಿಸುತ್ತಾನೆ. ಹಾಗೆಯೇ ಗುರೂಚ್ಛಿಷ್ಟಭೋಜನನಿಯಮವನ್ನೂ ಅನುಸರಿಸುತ್ತಾನೆ. ಗುರುವಿನ ಭೋಜನಕ್ಕೆ ಯಾವ ಪಾತ್ರವಾದರೂ ಸರಿ. ಹೀಗಿರುವಾಗ ಶಿಷ್ಯನ ನಿಯಮವನ್ನನುಸರಿಸಿ ಗುರುವೂ ಕಂಚಿನ ಪಾತ್ರೆಯಲ್ಲಿಯೇ ಊಟ ಮಾಡುತ್ತಾನೆ.

ಧ್ಯಾವಾಪೃಥಿವ್ಯದಲ್ಲಿನ ನಿಯಮವನ್ನನುಸರಿಸಿ ಐಂದ್ರಾಗ್ನಾದಿಗಳಲ್ಲಿಯೂ ಪ್ರಸೂನಬರ್ಹಿಸ್ಸು.

## ಆ) ಛಂದಸ್ಸು

| ಮಂತ್ರ | ಛಂದಸ್ಸು |
| --- | --- |
| ೧) ವೀಹಿ..... ಜುಷಾಣಃ । | ಯಜುಃ |
| ೨) ಏಷ...... ಅಗ್ಂಹಸಃ । | ಗಾಯತ್ರಿ/ಯಜುಃ |
| ೩) ಸ್ವಾಹಾ..... ಚಕಾರ । | ಯಜುಃ |

★ ★ ★

## ॥ ದ್ವಿತೀಯೋಽನುವಾಕಃ ॥

ಆಗ್ನೇಯಮಷ್ಟಾಕಪಾಲಂ ನಿರ್ವಪತಿ ಸೌಮ್ಯಂ ಚರುಗ್ಂ
ಸಾವಿತ್ರಂ ದ್ವಾದಶಕಪಾಲಗ್ಂ ಸಾರಸ್ವತಂ ಚರುಂ

---

ಆಗ್ನೇಯಮ್ । ಅಷ್ಟಾಕಪಾಲಮಿತ್ಯಷ್ಟಾ-ಕಪಾಲಮ್ । ನಿರಿತಿ । ವಪತಿ । ಸೌಮ್ಯಮ್। ಚರುಮ್ । ಸಾವಿತ್ರಮ್ । ದ್ವಾದಶಕಪಾಲಮಿತಿ ದ್ವಾದಶ-ಕಪಾಲಮ್ । ಸಾರಸ್ವತಮ್। ಚರುಮ್ ।

---

ಮೊದಲನೆಯ ಅನುವಾಕದಲ್ಲಿ ಆನುಮತ್ಯಾದಿ ಅಷ್ಟಯಾಗಗಳು ಉಕ್ತವಾಗಿವೆ. ಈ ಎರಡನೆಯ ಅನುವಾಕದಲ್ಲಿ ಚಾತುರ್ಮಾಸ್ಯದ ವೈಶ್ವದೇವಪರ್ವದ ಎಂಟು ಯಾಗಗಳು ಉಕ್ತವಾಗಿವೆ.

---

| | |
|---|---|
| **ಆಗ್ನೇಯಮ್ ಅಷ್ಟಾಕಪಾಲಮ್ ನಿರ್ವಪತಿ** | ಅಗ್ನಿದೇವತಾಕವಾದ ಎಂಟು ಕಪಾಲಗಳಲ್ಲಿ ಸಂಸ್ಕೃತವಾದ ಪುರೋಡಾಶಯಾಗವನ್ನು ಮಾಡ ಬೇಕು. |
| **ಸೌಮ್ಯಮ್ ಚರುಮ್** | ಸೋಮದೇವತಾಕವಾದ ಚರುಯಾಗವನ್ನೂ, |
| **ಸಾವಿತ್ರಮ್ ದ್ವಾದಶಕಪಾಲಮ್** | ಸವಿತೃದೇವತಾಕವಾದ ದ್ವಾದಶಕಪಾಲಯಾಗ ವನ್ನೂ |
| **ಸಾರಸ್ವತಂ ಚರುಮ್** | ಸರಸ್ವತೀದೇವತಾಕವಾದ ಚರುಯಾಗವನ್ನೂ, |

---

**ತಾತ್ಪರ್ಯ:—** ಆಗ್ನೇಯ, ಸೌಮ್ಯ, ಸಾವಿತ್ರ, ಸಾರಸ್ವತ ಮತ್ತು ಪೌಷ್ಣ-ಈ ಐದು ಯಾಗಗಳು ಪಂಚಸಂಚರಗಳು. ಮಾರುತ, ವೈಶ್ವದೇವ ಮತ್ತು ದ್ಯಾವಾಪೃಥಿವ್ಯಗಳನ್ನು

ಪೌಷ್ಣಂ ಚರುಂ ಮಾರುತಗ್ಂ ಸಪ್ತಕಪಾಲಂ ವೈಶ್ವದೇವೀ ಮಾಮಿಕ್ಷಾಂ ದ್ಯಾವಾಪೃಥಿವ್ಯಮೇಕಕಪಾಲಮ್ ॥ ೨-3 ॥

[ಆಗ್ನೇಯಗ್ಂ ಸೌಮ್ಯಂ ಮಾರುತಮಷ್ಟಾದಶ]

---

ಪೌಷ್ಣಮ್ । ಚರುಮ್ । ಮಾರುತಮ್ । ಸಪ್ತಕಪಾಲಮಿತಿ ಸಪ್ತ-ಕಪಾಲಮ್ । ವೈಶ್ವದೇವೀಮಿತಿ ವೈಶ್ವ-ದೇವೀಮ್ । ಆಮಿಕ್ಷಾಮ್ । ದ್ಯಾವಾಪೃಥಿವ್ಯಮಿತಿ ದ್ಯಾವಾ-ಪೃಥಿವ್ಯಮ್ । ಏಕಕಪಾಲಮಿತ್ಯೇಕ-ಕಪಾಲಮ್ ॥ ೨ ॥

---

| | |
|---|---|
| ಪೌಷ್ಣಮ್ ಚರುಮ್ | ಪೂಷದೇವತಾಕವಾದ ಚರುಯಾಗವನ್ನೂ, |
| ಮಾರುತಮ್ ಸಪ್ತಕಪಾಲಮ್ | ಮರುದ್ದೇವತಾಕವಾದ ಸಪ್ತಕಪಾಲಯಾಗವನ್ನೂ, |
| ವೈಶ್ವದೇವೀಮ್ ಆಮಿಕ್ಷಾಮ್ | ವಿಶ್ವೇದೇವದೇವತಾಕವಾದ *ಆಮಿಕ್ಷಾಯಾಗವನ್ನೂ |
| ದ್ಯಾವಾಪೃಥಿವ್ಯಮ್ ಏಕಕಪಾಲಮ್ | ದ್ಯಾವಾಪೃಥಿವೀದೇವತಾಕವಾದ ಏಕಕಪಾಲಯಾಗವನ್ನೂ ಮಾಡಬೇಕು. |

---

ಸೇರಿಸಿ ಎಂಟು ಯಾಗಗಳು ವೈಶ್ವದೇವಪರ್ವದ ಯಾಗಗಳು.

ಇವುಗಳನ್ನು ಸಂವತ್ಸರದಲ್ಲಿ ಮೂರು ಸಲ ಮಾಡಬೇಕು. ಸಂಚರಯಾಗಗಳು ಉಳಿದ ಪರ್ವಗಳಲ್ಲಿಯೂ ಇರುತ್ತವೆ.

---

* ಚೆನ್ನಾಗಿ ಕಾಯಿಸಿದ ಹಾಲಿನಲ್ಲಿ ಮೊಸರನ್ನು ಹಾಕಿದರೆ ಆಗುವ ಗಟ್ಟಿಭಾಗವು ಆಮಿಕ್ಷಾ. ನೀರಾದ ಭಾಗವು ವಾಜಿನ.

# ಅನುವಾಕದ ವಿಶೇಷ ವಿಷಯಗಳು

## ಅ) ಮೀಮಾಂಸಾ

### ೧) 'ವೈಶ್ವದೇವೇನ ಯಜೇತ' ಎಂಬುದು ಗುಣವಿಧಿಯೇ? ನಾಮಧೇಯವೇ?

[ಜೈ.ಸೂ. 1.4.]

ಚಾತುರ್ಮಾಸ್ಯದಲ್ಲಿ ವೈಶ್ವದೇವ, ವರುಣಪ್ರಘಾಸ, ಸಾಕಮೇಧ ಮತ್ತು ಶುನಾಸೀರೀಯ ಎಂಬ ಐದುನಾಲ್ಕು ಪರ್ವಗಳಿವೆ. ಅವುಗಳಲ್ಲಿ ಮೊದಲನೆಯ ಪರ್ವದಲ್ಲಿ ಆಗ್ನೇಯವೇ ಮೊದಲಾದ ಎಂಟು ಯಾಗಗಳು ವಿಹಿತವಾಗಿವೆ. ಅವುಗಳ ಸಮೀಪದಲ್ಲಿ 'ವೈಶ್ವದೇವೇನ ಯಜೇತ' ಎಂಬ ವಾಕ್ಯವಿದೆ. ಇದು ಗುಣವಿಧಿಯೇ? ನಾಮಧೇಯವೇ? ಎಂಬ ಸಂಶಯ.

ಇಲ್ಲಿಯ ಪೂರ್ವಪಕ್ಷವು ಹೀಗಿದೆ; ವೈಶ್ವದೇವಶಬ್ದವು ವಿಶ್ವೇದೇವದೇವತಾ ರೂಪಗುಣವನ್ನು ವಿಧಿಸುತ್ತದೆ. ಆಮಿಕ್ಷಾಯಾಗದಲ್ಲಿ ವಿಶ್ವದೇವದೇವತೆಗಳಿದ್ದರೂ ಆಗ್ನೇಯಾದಿಗಳಲ್ಲಿ ಇಲ್ಲದಿರುವ ಈ ಗುಣವು ವಿಧಿಸಲ್ಪಡುತ್ತದೆ. ಅಗ್ನ್ಯಾದಿದೇವತೆ ಗಳಿಗೂ ವಿಶ್ವೇದೇವದೇವತೆಗಳಿಗೂ ವಿಕಲ್ಪದಿಂದ ವಿನಿಯೋಗ. ನಾಮಧೇಯವೆಂದರೆ ವಿಧೇಯಾಂಶವಿಲ್ಲದಿರುವುದರಿಂದ 'ಯಜೇತ' ಎಂಬುದು ವ್ಯರ್ಥವಾಗುತ್ತದೆ. ಹೀಗಾಗಿ 'ವೈಶ್ವದೇವೇನ ಯಜೇತ' ಎಂಬುದು ಗುಣವಿಧಿ.

ಉತ್ಪತ್ತಿಶಿಷ್ಟವಾದ ಅಗ್ನ್ಯಾದಿದೇವತೆಗಳೊಡನೆ ಉತ್ಪನ್ನಶಿಷ್ಟವಾದುದರಿಂದ ದುರ್ಬಲರಾದ ವಿಶ್ವೇದೇವದೇವತೆಗಳಿಗೆ ವಿಕಲ್ಪವು ಸಾಧ್ಯವಿಲ್ಲ. ಆಮಿಕ್ಷಾಯಾಗದಲ್ಲಿ ವಿಶ್ವೇದೇವದೇವತೆಗಳಿರುವುದರಿಂದ ಛತ್ರಿನ್ಯಾಯದಿಂದ ವೈಶ್ವದೇವಶಬ್ದವು ಎಂಟು ಯಾಗಗಳ ನಾಮಧೇಯ. ಅರ್ಥವಾದದಲ್ಲಿ ಈ ಯಾಗಕರ್ತಾರರು ವಿಶ್ವೇದೇವರೆಂದು ಹೇಳಿರುವುದರಿಂದ ವೈಶ್ವದೇವಶಬ್ದವು ನಾಮಧೇಯ. ಇದರಿಂದ 'ಪ್ರಾಚೀನಪ್ರವಣೇ ವೈಶ್ವದೇವೇನ ಯಜೇತ' ಮೊದಲಾದ ವಿಧಿಗಳು ಈ ಯಾಗಸಮುದಾಯಕ್ಕೆ ಅನ್ವಯಿಸುತ್ತವೆ. ಇದು ಇಲ್ಲಿನ ಸಿದ್ಧಾಂತ.

ಇಲ್ಲಿ ಗುರುಮತವು ಹೀಗಿದೆ; 'ವೈಶ್ವದೇವೇನ ಯಜೇತ' ಎಂಬ ವಾಕ್ಯದಲ್ಲಿ ಗುಣವಿಧಿಯೇ, ನಾಮಧೇಯವೇ ಎಂಬ ಸಂಶಯವಿರುವುದರಿಂದ ವಾಕ್ಯವು ಅಪ್ರಮಾಣ ಎಂಬುದು ಪೂರ್ವಪಕ್ಷ.

ಹಿಂದೆ ಹೇಳಿರುವ ನ್ಯಾಯಗಳಿಂದ ಅದು ನಾಮಧೇಯವೇ ಎಂಬುದು ಸಿದ್ಧಾಂತ. ಆದುದರಿಂದ ವಾಕ್ಯವು ಅಪ್ರಮಾಣವಲ್ಲ.

**೨) 'ವಾಜಿಭ್ಯೋ ವಾಜಿನಮ್' ಎಂಬುದು ಯಾವ ವಿಧಿ? [ಜೈ.ಸೂ. 2-2.]**

'ತಪ್ತೇ ಪಯಸಿ ದಧ್ಯಾನಯತಿ, ಸಾ ವೈಶ್ವದೇವ್ಯಾಮಿಕ್ಷಾ, ವಾಜಿಭ್ಯೋ ವಾಜಿನಮ್' ಎಂದು ಶ್ರುತವಾಗಿದೆ. ಇಲ್ಲಿ'ವಾಜಿಭ್ಯೋ ವಾಜಿನಮ್' ಎಂದು ಗುಣವಿಧಿಯೇ? ಅಥವಾ ಕರ್ಮಾಂತರವಿಧಿಯೇ? ಇದು ಇಲ್ಲಿನ **ಸಂಶಯ.**

ಇಲ್ಲಿ 'ವಾಜಿಭ್ಯಃ' ಎಂದು ವಿಶ್ವೇದೇವರನ್ನು ಅನುವಾದ ಮಾಡಿ ಆ ಯಾಗದಲ್ಲಿ ವಾಜಿನರೂಪದ್ರವ್ಯಾಂತರವಿಧಿ. ಆಮಿಕ್ಷಾದ್ರವ್ಯಕ್ಕೂ, ವಾಜಿನದ್ರವಕ್ಕೂ ವಿಕಲ್ಪವಾಗ ಬಹುದು. ಸಮುಚ್ಚಯವಾದರೂ ಆಗಬಹುದು. ಇದು ಇಲ್ಲಿನ **ಪೂರ್ವಪಕ್ಷ.**

ಇಲ್ಲಿನ ಸಿದ್ಧಾಂತವು ಹೀಗಿದೆ. 'ಸಾ ವೈಶ್ವದೇವ್ಯಾಮಿಕ್ಷಾ' ಎಂದು ದ್ರವ್ಯದೇವತಾ ಯುಕ್ತವಾಗಿ ವಿಹಿತವಾದ ಯಾಗದಲ್ಲಿ ವಾಜಿನದ್ರವ್ಯಕ್ಕೆ ನಿವೇಶವು ಬರುವುದಿಲ್ಲ. ಆದುದರಿಂದ ಈ ವಾಕ್ಯದಿಂದ ವಾಜಿದೇವತಾಕವಾದ, ವಾಜಿನದ್ರವ್ಯಕವಾದ ಯಾಗಾಂತರವು ವಿಹಿತವಾಗಿದೆ.

**೩) ದಧ್ಯಾನಯನಕ್ಕೆ ಪ್ರಯೋಜಕ ಯಾವುದು? [ಜೈ.ಸೂ.4-2]**

ಹಿಂದೆ ಹೇಳಿದ 'ತಪ್ತೇ ಪಯಸಿ ದಧ್ಯಾನಯತಿ' 'ಸಾ ವೈಶ್ವದೇವ್ಯಾಮಿಕ್ಷಾ ವಾಜಿಭ್ಯೋ ವಾಜಿನಮ್' ಎಂಬ ವಾಕ್ಯದ್ವಯದ ವಿಷಯದಲ್ಲಿ–ಕುದಿಸಿದ ಹಾಲಿನಲ್ಲಿ ಮೊಸರನ್ನು ಹಾಕುವ ಈ ದಧ್ಯಾನಯನಕ್ಕೆ ಪ್ರಯೋಜಕವು ಯಾವುದೆಂದು–**ಸಂಶಯವಿದೆ.**

ದಧ್ಯಾನಯನದಿಂದ ಆಮಿಕ್ಷಾ [ಗಟ್ಟಿಯಾದ ಭಾಗ] ವಾಜಿನ [ನೀರಾದ ಭಾಗ] ಎರಡೂ ಆಗುವುದರಿಂದ ಅವೆರಡೂ ಪ್ರಯೋಜಕಗಳಾಗುತ್ತವೆ ಎಂದು **ಪೂರ್ವಪಕ್ಷ.**

ಇಲ್ಲಿಯ ಸಿದ್ಧಾಂತವು ಹೀಗಿದೆ; 'ಯಸ್ಮಿನ್ ತಪ್ತೇ ಪಯಸಿ ದಧ್ಯಾನಯತಿ ಸಾ ವೈಶ್ವದೇವ್ಯಾಮಿಕ್ಷಾ' ಎಂಬುದಾಗಿ ತತ್ ಶಬ್ದದಿಂದ ಪಯಸ್ಸನ್ನು ಹೇಳಿರುತ್ತಾರೆ. 'ಜುಷಂತಾಂ ಯುಜ್ಯಂ ಪಯಃ' ಎಂದು ಮಂತ್ರವೂ ಇದೆ. ಪಯಸ್ಸಿನ ಮಧುರರಸವೂ ಆಮಿಕ್ಷೆಯನ್ನು ಅನುಸರಿಸುತ್ತದೆ. ವಾಜಿನವನ್ನಲ್ಲ. ಆದುದರಿಂದ ಆಮಿಕ್ಷೆಯೇ ಮುಖ್ಯ. ಆಮಿಕ್ಷೆಯನ್ನು ಮಾಡುವಾಗ ವಾಜಿನವೂ ಆಗಿದೆ ಅಷ್ಟೆ. ಅದು ಅನುನಿಷ್ಪಾದಿ. ಹೀಗಾಗಿ ಆಮಿಕ್ಷೆಯೇ ದಧ್ಯಾನಯನಕ್ಕೆ ಪ್ರಯೋಜಕ.

**೪) ವಾಜಿನ ಮತ್ತು ಸುರಾಗಳ ವಿಷಯದಲ್ಲಿ ಸೋಮಧರ್ಮವೇ? ಇಷ್ಟಿಧರ್ಮವೇ? [ಜೈ.ಸೂ. 8.2]**

ಸೌತ್ರಾಮಣಿಯಲ್ಲಿ ಸುರಾಗ್ರಹಗ್ರಹಣವನ್ನು ಹೇಳಿದ್ದಾರೆ. ಚಾತುರ್ಮಾಸ್ಯದಲ್ಲಿ ವಾಜಿನಯಾಗವಿದೆ. 'ಸೋಮೋ ವೈ ವಾಜಿನಮ್, ಸುರಾ ಸೋಮಃ' ಎಂಬ ಬೇರೆಯ ವಾಕ್ಯಗಳಿವೆ. ಇಲ್ಲಿ ಸೋಮಧರ್ಮವೇ? ಇಷ್ಟಿಧರ್ಮವೇ? ಎಂದು **ಸಂಶಯ.**

ಸುರಾ ಮತ್ತು ವಾಜಿನಗಳನ್ನು ಸೋಮವೆಂದು ಹೇಳಿರುವುದರಿಂದ ಇಲ್ಲಿ ಸೋಮಧರ್ಮವೆಂದು ಪೂರ್ವಪಕ್ಷ.

ಸುರೆಯು ಓಷಧಿವಿಕಾರ. ವಾಜಿನವು ಸಾನ್ನಾಯ್ಯವಿಕಾರ. ಸಾನ್ನಾಯ್ಯವೆಂದರೆ ಮೊಸರು ಮತ್ತು ಹಾಲು. ಸಾನ್ನಾಯ್ಯವು ಐಷ್ಟಿಕಹವಿಸ್ಸಾದುದರಿಂದ ಅದರ ಸಾಮ್ಯವಿರುವ ಸುರಾ-ವಾಜಿನಗಳಿಗೆ ಇಷ್ಟಿಧರ್ಮವೇ ನ್ಯಾಯ. **'ಸೋಮೋ ವೈ ವಾಜಿನಮ್' 'ಸುರಾ ಸೋಮಃ'** ಎಂಬಲ್ಲಿ ಸೋಮಶಬ್ದವು ಸ್ತುತಿಗಾಗಿ ಅರ್ಥವಾದ ಮಾತ್ರ ಎಂಬುದು ಇಲ್ಲಿನ ಸಿದ್ಧಾಂತ.

**೫) ಆಮಿಕ್ಷಾಯಾಗಕ್ಕೆ ದಧಿಧರ್ಮವೇ? ಪಯೋಧರ್ಮವೇ? [ಜೈ.ಸೂ.8-2.]**

ಹಾಲು ಮತ್ತು ಮೊಸರಿನಿಂದ ಆಮಿಕ್ಷೆಯು ಉತ್ಪನ್ನವಾಗಿದೆ. ಹೀಗಾಗಿ ಇಲ್ಲಿ ಪಯೋದಧಿಯಾಗಗಳೆರಡರ ಧರ್ಮವನ್ನೂ ಅನುಸರಿಸಬೇಕು. ಆಮಿಕ್ಷೆಯು ಗಟ್ಟಿಯಾಗಿ ರುವುದರಿಂದ ದಧಿಯಾಗದ ಧರ್ಮವನ್ನು ಅನುಸರಿಸಬೇಕು. ಹೀಗೆ ಎರಡು ಪೂರ್ವಪಕ್ಷಗಳು.

'ಪಯಸಿ ದಧ್ಯಾನಯತಿ' ಎಂದು ಹಾಲು ಆಮಿಕ್ಷೆಯಾಗುವುದಕ್ಕೆ ಮೊಸರು ಸಹಕಾರಿ. ಕಾಯಿಸಿದ ಹಾಲೇ ಮುಖ್ಯವಾದುದರಿಂದ ಮುಖ್ಯವಾದ ಪಯಸ್ಸಿನ ಯಾಗದ ಧರ್ಮಗಳನ್ನೇ ಅನುಸರಿಸಬೇಕು. ಇದು ಇಲ್ಲಿನ ಸಿದ್ಧಾಂತ.

★ ★ ★

## ॥ ತೃತೀಯೋಽನುವಾಕಃ ॥

ಐಂದ್ರಾಗ್ನಮೇಕಾದಶಕಪಾಲಂ ಮಾರುತೀಮಾಮಿಕ್ಷಾಂ
ವಾರುಣೀಮಾಮಿಕ್ಷಾಂ ಕಾಯಮೇಕಕಪಾಲಂ

---

ಐಂದ್ರಾಗ್ನಮಿತ್ಯೈಂದ್ರ-ಅಗ್ನಮ್ । ಏಕಾದಶಕಪಾಲಮಿತ್ಯೇಕಾದಶ-ಕಪಾಲಮ್ । ಮಾರುತೀಮ್ । ಆಮಿಕ್ಷಾಮ್ । ವಾರುಣೀಮ್ । ಆಮಿಕ್ಷಾಮ್ । ಕಾಯಮ್ । ಏಕಕಪಾಲಮಿತ್ಯೇಕ-ಕಪಾಲಮ್ ।

---

ಈ ಅನುವಾಕದಲ್ಲಿ ವರುಣಪ್ರಘಾಸಪರ್ವವು ಹೇಳಲ್ಪಟ್ಟಿದೆ.

| ಬ್ರಾಹ್ಮಣಭಾಗ | ವಿವರಣೆ |
|---|---|
| ಐಂದ್ರಾಗ್ನಮ್ ಏಕಾದಶಕಪಾಲಮ್ [ನಿರ್ವಪತಿ] | ಇಂದ್ರಾಗ್ನಿದೇವತಾಕವಾದ ಏಕಾದಶಕಪಾಲ ಪುರೋಡಾಶಯಾಗವನ್ನು ಮಾಡಬೇಕು. |
| ಮಾರುತೀಮ್ ಆಮಿಕ್ಷಾಮ್ | ಮರುದ್ದೇವತಾಕವಾದ ಆಮಿಕ್ಷಾಯಾಗವನ್ನು ಮಾಡಬೇಕು. |
| ವಾರುಣೀಮ್ ಆಮಿಕ್ಷಾಮ್ | ವರುಣದೇವತಾಕವಾದ ಆಮಿಕ್ಷಾಯಾಗವನ್ನು ಮಾಡಬೇಕು. |
| ಕಾಯಮ್ ಏಕಕಪಾಲಮ್ | [ಕ=ಪ್ರಜಾಪತಿ] ಪ್ರಜಾಪತಿದೇವತಾಕವಾದ ಏಕ ಕಪಾಲಪುರೋಡಾಶಯಾಗವನ್ನು ಮಾಡಬೇಕು. |

---

**ತಾತ್ಪರ್ಯ:—**ಪಂಚಸಂಚರಾನಂತರ ವರುಣಪ್ರಘಾಸಪರ್ವದ ನಾಲ್ಕು ಪ್ರಧಾನ ಹವಿಸ್ಸುಗಳು [ಐಂದ್ರಾಗ್ನ, ಮರುದ್ದೇವತೆಗಳು, ವರುಣ ಮತ್ತು 'ಕ' ದೇವತೆ]

**ಪ್ರಘಾಸ್ಯಾನ್ ಹವಾಮಹೇ ಮರುತೋ ಯಜ್ಞವಾಹಸಃ ಕರಂಭೇಣ ಸಜೋಷಸಃ ॥ ಮೋ ಷೂ ಣ ಇಂದ್ರ ಪೃತ್ಸು ದೇವಾಸ್ತು ಸ್ಮ ತೇ ಶುಷ್ಮಿನ್ನವಯಾ ।**

---

**ಪ್ರಘಾಸ್ಯಾನಿತಿ ಪ್ರ-ಘಾಸ್ಯಾನ್ । ಹವಾಮಹೇ । ಮರುತಃ । ಯಜ್ಞವಾಹಸ ಇತಿ ಯಜ್ಞ-ವಾಹಸಃ । ಕರಂಭೇಣ । ಸಜೋಷಸ ಇತಿ ಸ-ಜೋಷಸಃ ॥ ಮೋ ಇತಿ । ಸ್ವಿತಿ । ನಃ। ಇಂದ್ರ । ಪೃತ್ಸ್ವಿತಿ ಪೃತ್-ಸು । ದೇವ। ಅಸ್ತು । ಸ್ಮ । ತೇ । ಶುಷ್ಮಿನ್ । ಅವಯಾ॥**

---

| ಮಂತ್ರ | ವಿನಿಯೋಗ |
|---|---|
| ಪ್ರಘಾಸ್ಯಾನ್.... ಸಜೋಷಸಃ ॥ | ಪ್ರತಿಪ್ರಸ್ಥಾತನು ಪತ್ನಿಯನ್ನು ಆಮಂತ್ರಿಸಲು, ಕರಂಭಪಾತ್ರೆಗಳನ್ನು ತಂದಿರುವ ಯಜಮಾನಪತ್ನಿಯಿಂದ ಹೇಳಿಸಲು. |
| ಮೋ ಷೂ ಣ.... ಗೀಃ ॥ | ಕರಂಭಪಾತ್ರಹೋಮದಲ್ಲಿ ಯಜಮಾನನು ಹೇಳುವ ಪುರೋನುವಾಕ್ಯೆ. |

---

÷ **ಪ್ರಘಾಸ್ಯಾನ್** = ವರುಣಪ್ರಘಾಸಯಾಗಸಂಬಂಧಿಗಳಾದ; **ಯಜ್ಞವಾಹಸಃ** = ಯಜ್ಞಭಾರವನ್ನು ವಹಿಸುವ; **ಕರಂಭೇಣ** = ಮೊಸರು, ತುಪ್ಪಗಳಿಂದ ಕಲಸಿದ ಯವಪಿಷ್ಟ ಪಾತ್ರೆಗಳಿಂದ; **ಸಜೋಷಸಃ** = ಸಮಾನವಾದ ಪ್ರೀತಿಯುಳ್ಳ; **ಮರುತಃ** = ಮರುದ್ದೇವತೆಗಳನ್ನು; **ಹವಾಮಹೇ** = ಆಹ್ವಾನಿಸುತ್ತೇವೆ; ÷ **ಇಂದ್ರ ದೇವ** = ಎಲೈ! ಇಂದ್ರದೇವನೇ! **ನಃ** = ನಮ್ಮನ್ನು; **ಪೃತ್ಸು** = ಯುದ್ಧಗಳಲ್ಲಿ; **ಮೋ** = [ತೊಡಗುವಂತೆ] ಮಾಡಬೇಡ; [ಇದು] **ಸು** = ಒಳ್ಳೆಯದು; **ಶುಷ್ಮಿನ್** = ಬಲವಂತನಾದ ಇಂದ್ರನೇ! **ತೇ** = ನಿನ್ನ [ಅನುಗ್ರಹದಿಂದ;] **ಅವಯಾ** = ಅನಿಷ್ಟನಾಶವು; **ಅಸ್ತು ಸ್ಮ** = ಯಾವಾಗಲೂ ಉಂಟಾಗಲಿ.

---

ಹೇಳಲ್ಪಟ್ಟಿವೆ. ಮರುದ್ದೇವತೆಗಳು, ವರುಪ್ರಘಾಸದೇವತೆಗಳು, ವರುಣಪಾಶದಿಂದ ಬಿಡುಗಡೆ ಮಾಡಬಲ್ಲವರು. ಕರಂಭದಿಂದ ಮಾಡಿದ ಪಾತ್ರಗಳ ಹೋಮದಿಂದ

ಮಹೀ ಹ್ಯಸ್ಯ ಮೀಢುಷೋ ಯವ್ಯಾ॥ ಹವಿಷ್ಮತೋ ಮರುತೋ ವಂದತೇ ಗೀಃ॥ ಯದ್ಗ್ರಾಮೇ ಯದರಣ್ಯೇ ಯತ್ಸಭಾಯಾಂ ಯದಿಂದ್ರಿಯೇ । ಯಚ್ಛೂದ್ರೇ ಯದರ್ಯೆ ಏನಶ್ಚಕೃಮಾ ವಯಮ್ ॥

---

ಮಹೀ। ಹಿ। ಅಸ್ಯ । ಮೀಢುಷಃ। ಯವ್ಯಾ ॥ ಹವಿಷ್ಮತಃ । ಮರುತಃ । ವಂದತೇ । ಗೀಃ॥ ಯತ್। ಗ್ರಾಮೇ। ಯತ್ । ಅರಣ್ಯೇ । ಯತ್ । ಸಭಾಯಾಮ್ । ಯತ್ । ಇಂದ್ರಿಯೇ॥ ಯತ್। ಶೂದ್ರೇ । ಯತ್ । ಅರ್ಯೇ । ಏನಃ । ಚಕೃಮ । ವಯಮ್ ॥

---

| ಮಂತ್ರ | ವಿನಿಯೋಗ |
|---|---|
| ಯದ್ಗ್ರಾಮೇ..... ಸ್ವಾಹಾ ॥ | ಕರಂಭಹೋಮದಲ್ಲಿ ಪತ್ನೀ-ಯಜಮಾನರು ಹೇಳುವ ಯಾಜ್ಯೆ. |

---

ಹಿ = ಏತಕ್ಕೆಂದರೆ; ಅಸ್ಯ = ಈ ಯಜಮಾನನ; ಮಹೀ = ಭೂಮಿಯು; ಮೀಢುಷಃ = ಮಳೆಯನ್ನು ಸುರಿಸುವ ನಿನ್ನ ಅನುಗ್ರಹದಿಂದ; ಯವ್ಯಾ = ಯವಾದಿ ಸಮೃದ್ಧಿಯುಳ್ಳದ್ದೋ [ಅದರಿಂದ ಅನಿಷ್ಟಪರಿಹಾರವಾಗಲಿ]; ಹವಿಷ್ಮತಃ = ಈ ಹವಿಸ್ಸನ್ನು ಹೊಂದುವ; ಮರುತಃ = ಮರುದ್ದೇವತೆಗಳನ್ನು। ಗೀಃ =ನಮ್ಮ ಸ್ತುತಿರೂಪವಾದ ವಾಕ್ಕು; ವಂದತೇ = ಸ್ತುತಿಸುತ್ತದೆ/ ನಮಸ್ಕರಿಸುತ್ತದೆ. ÷ ಗ್ರಾಮೇ = ಗ್ರಾಮದ ವಿಷಯದಲ್ಲಿ [ಗ್ರಾಮನಿಮಿತ್ತವಾಗಿ ಎಂದು ನಿಮಿತ್ತಸಪ್ತಮಿಯನ್ನೂ ಹೇಳಬಹುದು]; ಯತ್ = ಯಾವ; ಏನಃ = ಪಾಪವನ್ನು; *ವಯಮ್ = ನಾವು; ಚಕೃಮ = ಮಾಡಿದೆವೋ;

---

ಪರಸ್ಪರವಾಗಿ ಸಂತೋಷಿಸತಕ್ಕವರು. ಇಂತಹ ಮರುದ್ದೇವತೆಗಳನ್ನು ನಾವು ಆಹ್ವಾನಿಸುತ್ತೇವೆ.

ಎಲೈ! ಇಂದ್ರದೇವನೇ! ಶತ್ರುಗಳು ಇಲ್ಲದಂತೆ ಮಾಡಿ ನಮಗೆ ಯುದ್ಧ ಪ್ರವೃತ್ತಿಯೇ ಒದಗದಂತೆ ಮಾಡು. ಇದು ಸಮೀಚೀನವಾದುದು. ಬಲವಂತನಾದ ಇಂದ್ರನೇ! ನಿನ್ನ ಅನುಗ್ರಹದಿಂದ ಯಾವಾಗಲೂ ನಮ್ಮ ಸರ್ವಾನಿಷ್ಟಗಳೂ

---

* ವಯಮ್ = ನಾವಿಬ್ಬರು [ದಂಪತಿಗಳು] [ಭ.ಭಾ.] / ಯಾಗಕ್ಕೆ ಸಂಬಂಧಿಸಿದ ಎಲ್ಲರೂ. [ಸಾಯಣಾಚಾರ್ಯರು]

ಯದೇಕಸ್ಯಾಧಿ ಧರ್ಮಣಿ ತಸ್ಯಾವಯಜನಮಸಿ ಸ್ವಾಹಾ ||
ಅಕ್ರನ್ಕರ್ಮ ಕರ್ಮಕೃತಸ್ಸಹ

---

ಯತ್ । ಏಕಸ್ಯ । ಅಧೀತಿ । ಧರ್ಮಣಿ । ತಸ್ಯ । ಅವಯಜನಮಿತ್ಯವ-ಯಜನಮ್ । ಅಸಿ । ಸ್ವಾಹಾ || ಅಕ್ರನ್ । ಕರ್ಮ। ಕರ್ಮಕೃತ ಇತಿ ಕರ್ಮ-ಕೃತಃ । ಸಹ ।

---

| ಮಂತ್ರ | ವಿನಿಯೋಗ |
|---|---|
| ಅಕ್ರನ್.... ಸುದಾನವಃ । | ಪತ್ನೀ-ಯಜಮಾನರು ಮಾಡುವ ಮಂತ್ರ ಜಪ |

---

**ಅರಣ್ಯೇ ಯತ್** ಏನಃ ಚಕೃಮ = ಕಾಡಿನ ವಿಷಯದಲ್ಲಿ ಯಾವ ಪಾಪವನ್ನು ಮಾಡಿದೆವೋ; **ಸಭಾಯಾಮ್ ಯತ್** = ಸಭೆಯ ವಿಷಯದಲ್ಲಿ ಯಾವ [ಪಾಪವನ್ನು ಮಾಡಿದೆವೋ]; **ಇಂದ್ರಿಯೇ ಯತ್** = ಇಂದ್ರಿಯಗಳ ವಿಷಯದಲ್ಲಿ ಯಾವ [ಪಾಪವನ್ನು ಮಾಡಿದೆವೋ]; **ಶೂದ್ರೇ ಯತ್** = ಶೂದ್ರವಿಷಯದಲ್ಲಿ ಯಾವ [ಪಾಪವನ್ನು ಮಾಡಿದೆವೋ] **ಅರ್ಯೇ ಯತ್** = ಸ್ವಾಮಿಯ/ ವೈಶ್ಯನ ವಿಷಯದಲ್ಲಿ ಯಾವ [ಪಾಪವನ್ನು ಮಾಡಿದೆವೋ]; **ಏಕಸ್ಯ** = ನಮ್ಮಿಬ್ಬರಲ್ಲಿ ಒಬ್ಬರು ಮತ್ತೊಬ್ಬರ; **ಧರ್ಮಣಿ** = ಧರ್ಮವಿಷಯದಲ್ಲಿ; **ಅಧಿ** ಏನಃ ಚಕೃಮ = ಅಧಿಕ ವಾಗಿ ಪಾಪ ಮಾಡಿರುತ್ತೇವೆಯೋ; **ತಸ್ಯ** = ಆ ಸರ್ವಪಾಪಗಳಿಗೂ; **ಅವಯಜನಮ್ ಅಸಿ** = ನಾಶಕರವಾಗಿದ್ದೀಯೆ; **ಸ್ವಾಹಾ** = ಇದನ್ನು ಅಗ್ನಿಯಲ್ಲಿ ಸಮರ್ಪಿಸುತ್ತೇನೆ [ಇದು ಹುತವಾಗಲಿ] + [ಅಧ್ವರ್ಯು ಮೊದಲಾದ] **ಕರ್ಮಕೃತಃ** = ಯಾಗಕರ್ಮವನ್ನು ಮಾಡತಕ್ಕ;

---

ನಾಶಹೊಂದಲಿ. ವೃಷ್ಟಿಯನ್ನು ಸುರಿಸುವ ನಿನ್ನ ಅನುಗ್ರಹದಿಂದ ಈ ಯಜಮಾನನ ಭೂಮಿಯು ಯವಾದಿಸರ್ವಸಸ್ಯಸಮೃದ್ಧಿಯನ್ನು ಹೊಂದಿರಲಿ. ನಮ್ಮ ಮಾತು ಈ ಹವ್ಯವನ್ನು ಸ್ವೀಕರಿಸುವ ಮರುದ್ದೇವತೆಗಳನ್ನು ಸ್ತುತಿಸಲಿ/ನಮಸ್ಕರಿಸಲಿ.

**ವಾಚಾ ಮಯೋಭುವಾ । ದೇವೇಭ್ಯಃ ಕರ್ಮ ಕೃತ್ವಾಽಸ್ತಂ ಪ್ರೇತ ಸುದಾನವಃ ॥ ೩-4॥**

**[ವಯಂ ಯದ್ವಿಗ್ಂಶತಿಶ್ಚ]**

---

ವಾಚಾ । ಮಯೋಭುವೇತಿ ಮಯಃ-ಭುವಾ ॥ ದೇವೇಭ್ಯಃ । ಕರ್ಮ । ಕೃತ್ವಾ । ಅಸ್ತಮ್। ಪ್ರೇತಿ । ಇತ । ಸುದಾನವ ಇತಿ ಸು-ದಾನವಃ ॥ ೩ ॥

---

**ಮಯೋಭುವಾ ವಾಚಾ ಸಹ** = ಸುಖಕರವಾದ ಮಾತಿನೊಡನೆ; **ಕರ್ಮ ಅಕ್ರನ್** = ಯಾಗಕರ್ಮವನ್ನು ಮಾಡಿದರು; **ಸುದಾನವಃ** = ಚೆನ್ನಾಗಿ ಹವಿಸ್ಸನ್ನು ಅರ್ಪಿಸಿದ [ಋತ್ವಿಜರೇ!]; **ದೇವೇಭ್ಯಃ ಕರ್ಮ ಕೃತ್ವಾ** = ದೇವತೆಗಳಿಗಾಗಿ ಈ ಕರ್ಮವನ್ನು ಮಾಡಿ; **ಅಸ್ತಮ್ ಪ್ರೇತ** = ಮನೆಗೆ ಹೋಗಿರಿ.

---

ಈ ಮಂತ್ರದಲ್ಲಿ ಹೇಳಿರುವಂತೆ ಸರ್ವಪಾಪನಿವೃತ್ತ್ಯರ್ಥವಾಗಿ ದಂಪತಿಗಳು ಈ ಕರಂಭಹೋಮವನ್ನು ಮಾಡುತ್ತಾರೆ.

ಎಲೈ ಕರಂಭಪಾತ್ರಸಮೂಹವೇ! ನಾವು ಗ್ರಾಮ, ಅರಣ್ಯ, ಸಭೆ, ಇಂದ್ರಿಯ ಗಳು, ಶೂದ್ರ, ವೈಶ್ಯ, ಸ್ವಾಮಿ ಇವರೆಲ್ಲರ ವಿಷಯದಲ್ಲಿ ಮಾಡಿದ ಪಾಪಪರಿಹಾರಕವಾಗಿ ದ್ದೀಯೆ. ನಾವಿಬ್ಬರೂ ಧರ್ಮದ ವಿಷಯದಲ್ಲಿ ಅನ್ಯೋನ್ಯ ಮಾಡಿದ ಪಾಪಕ್ಕೂ ಪರಿಹಾರಕವಾಗಿದ್ದೀಯೆ. ಇದು ದೇವತೆಗಳಿಗೆ ಹುತವಾಗಲಿ.

ಎಲೈ! ಅಧ್ವರ್ಯು ಮೊದಲಾದವರೇ! ಈ ಯಾಗವನ್ನು ಸುಖಕರವಾದ ಮಾತಿನಿಂದ ಮಾಡಿದ್ದೀರಿ. ಚೆನ್ನಾಗಿ ದೇವತೆಗಳಿಗೆ ಹವಿಸ್ಸನ್ನು ಕೊಡತಕ್ಕವರೇ! ನೀವು ಈ ಕಾರ್ಯವನ್ನು ಮುಗಿಸಿ ಮನೆಗೆ ಹೋಗಿರಿ.

## ವಿನಿಯೋಗ ಸಂಗ್ರಹ

ಪತ್ನ್ಯಾಹ್ವಾನಂ [1]ಪ್ರಘಾಸ್ಯೇತಿ ಪ್ರತಿಪ್ರಸ್ಥಾತೃಕರ್ಮ ತತ್ ।
ಸ್ವಾಮೀ[2]ಮೋ ಷ್ಟ್ವಿತ್ಯನುಬ್ರೂಯಾದ್ಯದ್ಗ್ರಾಮ[3] ಇತಿ ದಂಪತೀ ॥
[4]ಅಕ್ರನ್ನಿತ್ಯಪಿ ತಾವೇವ ಮಂತ್ರಾಶ್ಚತ್ವಾರ ಈರಿತಾಃ ॥

**ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ-4**
**ಉಳಿದುದು ಬ್ರಾಹ್ಮಣಭಾಗ.**

## ಅನುವಾಕದ ವಿಶೇಷ ವಿಷಯಗಳು

### ಅ) ಮೀಮಾಂಸಾ

**೧) ವರುಣಪ್ರಘಾಸಾದಿಪರ್ವಗಳಲ್ಲಿ ಅತಿದೇಶ ಯಾವುದಕ್ಕೆ? [ಜೈ.ಸೂ.7-1.]**

ಚಾತುರ್ಮಾಸ್ಯದಲ್ಲಿ ವೈಶ್ವದೇವ, ವರುಣಪ್ರಘಾಸ, ಸಾಕಮೇಧ ಮತ್ತು ಶುನಾಸೀರೀಯ ಎಂಬ ನಾಲ್ಕು ಪರ್ವಗಳು. ವೈಶ್ವದೇವದಲ್ಲಿನ ಆಗ್ನೇಯ, ಸೌಮ್ಯ, ಸಾವಿತ್ರ, ಸಾರಸ್ವತ ಮತ್ತು ಪೌಷ್ಣ ಎಂಬ ಐದು ಯಾಗಗಳು ಪ್ರತಿಯೊಂದು ಪರ್ವದಲ್ಲಿಯೂ ಇವೆ. ಇವು ಪಂಚಸಂಚರಗಳು. ಈ ಹವಿಸ್ಸುಗಳಿಗೆ ಸಂಬಂಧಿಸಿದಂತೆ 'ವಾರ್ತ್ರಘ್ನಾನಿ ವಾ ಏತಾನಿ' ಎಂಬ ಅರ್ಥವಾದವಾಕ್ಯವಿದೆ. ವರುಣಪ್ರಘಾಸಾದಿಗಳಲ್ಲಿ 'ಏತದ್ಬ್ರಾಹ್ಮಣಾನ್ಯೇವ ಪಂಚ ಹವೀಂಷಿ, ಯದ್ಬ್ರಾಹ್ಮಣಾನೀತರಾಣಿ' ಎಂದು ಅತಿದೇಶ ಮಾಡಲಾಗಿದೆ. ಇಲ್ಲಿ ಸ್ತುತ್ಯರ್ಥವಾಗಿ ಇರುವ ಅರ್ಥವಾದಕ್ಕೆ ಮಾತ್ರ ಅತಿದೇಶವೆಂದು ಪೂರ್ವಪಕ್ಷ.

ಉಪಕಾರ್ಯೋಪಕಾರಕಭಾವದಿಂದ ಅಂಗವಿಧಿಗಳಿಗೂ ಅನ್ವಯವಾಗುವುದರಿಂದ ಅಂಗವಿಧಿಸಹಿತವಾದ ಅರ್ಥವಾದಗಳಿಗೂ ಅತಿದೇಶವೆಂಬುದು ಇಲ್ಲಿನ ಸಿದ್ಧಾಂತ.

**೨) ಸಾಕಮೇಧದಿಂದ ಅತಿದೇಶ ಯಾವುದಕ್ಕೆ? [ಜೈ.ಸೂ. 7.1.]**

ವೈಶ್ವದೇವ-ವರುಣಪ್ರಘಾಸಪರ್ವಗಳಲ್ಲಿ ಏಕಕಪಾಲಬ್ರಾಹ್ಮಣವಿದೆ. ಐಂದ್ರಾಗ್ನಬ್ರಾಹ್ಮಣವು ವರುಣಪ್ರಘಾಸಪರ್ವದಲ್ಲಿದೆ. ಸಾಕಮೇಧಪರ್ವದಲ್ಲಿ 'ಏತದ್ಬ್ರಾಹ್ಮಣ ಐಂದ್ರಾಗ್ನಃ', 'ಏತದ್ಬ್ರಾಹ್ಮಣ ಏಕಕಪಾಲಃ' ಎಂಬ ಅತಿದೇಶವಾಕ್ಯವಿದೆ. ಇಲ್ಲಿಯೂ

ಸಹ ಹಿಂದಿನ ನ್ಯಾಯದಂತೆ ಸಾಕಮೇಧದಿಂದ ಉಳಿದ ಎರಡು ಪರ್ವಗಳಿಗೆ ಅರ್ಥವಾದಸಹಿತವಾದ ಅಂಗಸಮೂಹಕ್ಕೇ ಅತಿದೇಶವಿದೆ.

**೩) ಆಮಿಕ್ಷಾಯಾಗದಲ್ಲಿ ತಂತ್ರವಿದೆಯೇ? [ಜೈ.ಸೂ. 11.2.]**

ವರುಣಪ್ರಘಾಸಪರ್ವದಲ್ಲಿ ಒಂಬತ್ತು ಹವಿಸ್ಸುಗಳಿವೆ. ಅವುಗಳಲ್ಲಿ ಎಂಟನ್ನು ಅಧ್ವರ್ಯುವು ಉತ್ತರವೇದಿಯಲ್ಲಿ ಮಾಡುತ್ತಾನೆ. ಮರುದ್ದೇವತಾಕವಾದ ಆಮಿಕ್ಷಾ ಯಾಗವನ್ನು ಪ್ರತಿಪ್ರಸ್ಥಾತನು ದಕ್ಷಿಣವೇದಿಯಲ್ಲಿ ಮಾಡುತ್ತಾನೆ. ಇಲ್ಲಿ **'ಪ್ರಯೋಗೈಕ್ಯಾತ್ ತಂತ್ರಮ್'** ಎಂಬ ನ್ಯಾಯದಂತೆ ಎಂಟರಲ್ಲಿ ತಂತ್ರದಿಂದ ಅನುಷ್ಠಾನ ವಿದೆ. **'ಅನೇಕೋದ್ದೇಶೇನ ಸಕೃದನುಷ್ಠಾನಮ್ ತಂತ್ರಮ್'.** ಈ ರೀತಿ ತಂತ್ರದಿಂದ ಅಂಗಾನುಷ್ಠಾನವು ಉಭಯವಾದಿಸಮ್ಮತವಾಗಿದೆ. ಹಾಗೆಯೇ ಆಮಿಕ್ಷಾಯಾಗದಲ್ಲಿಯೂ ತಂತ್ರವೇ. ಇದು ಇಲ್ಲಿನ **ಪೂರ್ವಪಕ್ಷ.**

ದೇಶಭೇದವಿರುವುದರಿಂದಲೂ ಕರ್ತೃಭೇದವಿರುವುದರಿಂದಲೂ ಅಂಗಗಳ ಅನುಷ್ಠಾನವೂ ಭಿನ್ನವೇ. ಇದು ಇಲ್ಲಿನ **ಸಿದ್ಧಾಂತ.**

**೪) ಋತ್ವಿಗ್ಭೇದವೂ ಇದೆಯೇ? [ಜೈ. ಸೂ.11.2.]**

ಅಂಗಭೇದವೂ ಇರುವಂತೆ ಋತ್ವಿಗ್ಭೇದವೂ ಇದೆಯೇ? ಇದು **ಸಂಶಯ.**

ಅಂಗಭೇದದಂತೆಯೇ ಋತ್ವಿಗ್ಭೇದವೂ ನ್ಯಾಯ್ಯ. ಇದು **ಪೂರ್ವಪಕ್ಷ.**

ಚಾತುರ್ಮಾಸ್ಯದಲ್ಲಿ ಅಧ್ವರ್ಯು, ಪ್ರತಿಪ್ರಸ್ಥಾತ, ಹೋತಾ, ಬ್ರಹ್ಮ ಮತ್ತು ಆಗ್ನೀಧ್ರರೆಂಬ ಐದು ಜನರು ಋತ್ವಿಜರು ಎಂದು ಹೇಳಿರುವುದರಿಂದ ಋತ್ವಿಗ್ಭೇದ ವಿಲ್ಲ. ಇದು **ಸಿದ್ಧಾಂತ.**

**೫) ಪತ್ನೀಸಂಯಾಜದಲ್ಲಿ ತಂತ್ರವಿದೆಯೇ? [ಜೈ.ಸೂ. 11.2.]**

ಪತ್ನೀಸಂಯಾಜಾನುಷ್ಠಾನದಲ್ಲಿ ತಂತ್ರದಿಂದ ಅನುಷ್ಠಾನವಿದೆಯೇ? ಇದು **ಸಂಶಯ.**

ಗಾರ್ಹಪತ್ಯಾಗ್ನಿಯು ಒಂದೇ ಆದುದರಿಂದ ಅಧ್ವರ್ಯು ಮತ್ತು ಪ್ರತಿಪ್ರಸ್ಥಾತ ಮಾಡುವ ಪತ್ನೀಸಂಯಾಜಾನುಷ್ಠಾನವನ್ನು ತಂತ್ರದಿಂದ ಮಾಡಬೇಕು. ಇದು **ಪೂರ್ವಪಕ್ಷ.**

ಅಧ್ವರ್ಯುವು ಮಾಡಿದ ಹೋಮದಿಂದ ಪ್ರತಿಪ್ರಸ್ಥಾತನು ಮಾಡಿದ ಯಾಗಕ್ಕೆ ಉಪಕಾರವಾಗದಿರುವುದರಿಂದ ಗಾರ್ಹಪತ್ಯದಲ್ಲಿ ಅಧ್ವರ್ಯು ಮತ್ತು ಪ್ರತಿಪ್ರಸ್ಥಾತ

ಇಬ್ಬರೂ ಬೇರೆಬೇರೆಯಾಗಿ ಪತ್ನೀಸಂಯಾಜಹೋಮಗಳನ್ನು ಮಾಡಬೇಕು. ಇದು **ಸಿದ್ಧಾಂತ.**

**೬) ನಿರ್ವಾಪಮಂತ್ರಪಾಠದಲ್ಲಿ ತಂತ್ರವೇ? ಭೇದವೇ? [ಜೈ.ಸೂ. 12.1.]**

ಅಧ್ವರ್ಯು ಮತ್ತು ಪ್ರತಿಪ್ರಸ್ಥಾತೃವು ಮಾಡುವ ಹವಿರ್ನಿರ್ವಾಪಮಂತ್ರದಲ್ಲಿ ಪಾಠ ಮಾಡುವಾಗ ತಂತ್ರವೇ? ಭೇದವಿದೆಯೇ? ಇದು **ಸಂಶಯ.**

ಒಬ್ಬರು ಹೇಳುವುದರಿಂದಲೂ ಅರ್ಥಸ್ಮೃತಿಯು ಇನ್ನೊಬ್ಬರಿಗೆ ಬರುವುದರಿಂದ ತಂತ್ರದಿಂದಲೇ ಪಾಠ. ಇದು **ಪೂರ್ವಪಕ್ಷ.**

'ನಿರ್ವಪಾಮಿ' ಎಂದು ಉತ್ತಮಪುರುಷಪ್ರಯೋಗವಿರುವುದರಿಂದ ಅಧ್ವರ್ಯು ಮತ್ತು ಪ್ರತಿಪ್ರಸ್ಥಾತರು ಬೇರೆ ಬೇರೆಯಾಗಿಯೇ ಮಂತ್ರಪಾಠವನ್ನು ಮಾಡಬೇಕು. ಇದು ಇಲ್ಲಿನ **ಸಿದ್ಧಾಂತ.**

**೭) 'ವಾರುಣ್ಯಾ.... ಯಂತಿ' ಎಂಬುದು ಕರ್ಮಾಂತರವೇ? [ಜೈ.ಸೂ. 7.3.]**

ವರುಣಪ್ರಘಾಸಪರ್ವದಲ್ಲಿ 'ವಾರುಣ್ಯಾ ನಿಷ್ಕಾಸೇನ ತುಷೈಶ್ಚಾವಭೃಥಮ ವಯಂತಿ' ಎಂಬ ವಚನವಿದೆ. ಇದು 'ದರ್ಶಪೂರ್ಣಮಾಸಯೋರವಭೃಥಃ' ಎಂದು ಹೇಳಿರುವುದರ ಅನುವಾದವೇ? ಅಥವಾ ಕರ್ಮಾಂತರವಿಧಿಯೇ? ಎಂದು **ಸಂಶಯ.**

ಇದು ಅನುವಾದಮಾತ್ರವೆಂದು **ಪೂರ್ವಪಕ್ಷ.**

ಅವಭೃಥಶಬ್ದವು ಸೌಮಿಕ ಅವಭೃಥದಲ್ಲಿ ಮುಖ್ಯವಾಗಿರುವುದರಿಂದ ಆ ಸೌಮಿಕ ಅವಭೃಥದ ಧರ್ಮಗಳುಳ್ಳ ಕರ್ಮಾಂತರವಿಧಿಯೇ ಇದು. ಅನುವಾದವಲ್ಲ ಎಂಬುದು **ಸಿದ್ಧಾಂತ.**

**೮) ಕರ್ಮಾಂತರವಾದರೆ ಪುರೋಡಾಶವಿದೆಯೇ? [ಜೈ.ಸೂ. 7.3.]**

ವರುಣಪ್ರಘಾಸದಲ್ಲಿನ ಈ ಕರ್ಮಾಂತರದಲ್ಲಿ ಪುರೋಡಾಶಕ್ಕೆ ಪ್ರಾಪ್ತಿ ಇದೆಯೇ? ಇದು **ಸಂಶಯ.**

ಪುರೋಡಾಶಕ್ಕೆ ತುಷ, ನಿಷ್ಕಾಸಗಳೊಡನೆ ಸಮುಚ್ಚಯವಿದೆಯೆಂದು ಇಲ್ಲಿನ **ಪೂರ್ವಪಕ್ಷ.**

ಅತಿದೇಶವು ಉಪದೇಶಕ್ಕಿಂತ ದುರ್ಬಲವಾದುದರಿಂದ ಇಲ್ಲಿ ಪ್ರತ್ಯಕ್ಷವಾಗಿ ಹೇಳಿರುವ ತುಷ, ನಿಷ್ಕಾಸಗಳಿಂದ ಆತಿದೇಶಿಕವಾಗಿರುವ ಪುರೋಡಾಶಕ್ಕೆ ಬಾಧ ಬರುತ್ತದೆ. ಆದುದರಿಂದ ಇಲ್ಲಿ ತುಷ, ನಿಷ್ಕಾಸಗಳಿಗೆ ಪುರೋಡಾಶದೊಡನೆ ಸಮುಚ್ಚಯ ವಿಲ್ಲ. ತುಷ, ನಿಷ್ಕಾಸಗಳೇ ಇರುತ್ತವೆ.

೯) ವರುಣಪ್ರಘಾಸದಲ್ಲಿನ ಅವಭೃಥದಲ್ಲಿ ಪ್ರಚಾರವಿಪ್ರಕರ್ಷವೇ?

[ಜೈ.ಸೂ. 11-2.]

ವರುಣಪ್ರಘಾಸಪರ್ವದಲ್ಲಿ ಎಂಟನೆಯದು ವಾರುಣ್ಯಾಮಿಕ್ಷಾಯಾಗ. ಒಂಬತ್ತನೆಯದು ಕಾಯ ಏಕಕಪಾಲ. ಆಮಿಕ್ಷೆಯಲ್ಲಿ ಯವಪಿಷ್ಟನಿರ್ಮಿತವಾದ ಮೇಷವನ್ನೂ ಸೇರಿಸಿ ಸರ್ವಹೋಮವನ್ನು ಮಾಡಬೇಕು. ಅನಂತರ ಏಕಕಪಾಲ ಹೋಮ. ಬಳಿಕ ಅವಭೃಥ. ಇಲ್ಲಿ ಸೌಮಿಕಾವಭೃಥದಂತೆ ಪ್ರಚಾರವಿಪ್ರಕರ್ಷ ವಿದೆಯೆಂಬುದು ಒಂದು **ಪೂರ್ವಪಕ್ಷ.**

ಅವಭೃಥಶಬ್ದವು ವ್ಯರ್ಥವಾಗುವುದರಿಂದ ಇದು ಪ್ರಚಾರವಿಪ್ರಕರ್ಷವಲ್ಲ. ಕರ್ಮಾಂತರ.

ಇಲ್ಲಿಯ ತುಷನಿಷ್ಕಾಸಶೇಷಗಳಿಗೆ ಇದು *ಪ್ರತಿಪತ್ತಿಕರ್ಮವೆಂದು ಇನ್ನೊಂದು **ಪೂರ್ವಪಕ್ಷ.**

ಅವಭೃಥಶಬ್ದಪ್ರಾಧಾನ್ಯದಿಂದ ಇದು ಅರ್ಥಕರ್ಮ ಅಥವಾ ಪ್ರಧಾನ ಕರ್ಮವೇ. ಚಾತುರ್ಮಾಸ್ಯದಲ್ಲಿ ಸೌಮಿಕಾವಭೃಥವಿಲ್ಲದಿದ್ದರೆ ಅವಭೃಥದ ಧರ್ಮವುಳ್ಳ ಕರ್ಮಾಂತರದಲ್ಲಿ ವಾಚನಿಕವಾಗಿ ತುಷ-ನಿಷ್ಕಾಸಗಳ ಉಪಯೋಗ. ಆದುದರಿಂದ ಇದು ಅರ್ಥಕರ್ಮವೇ. ಪ್ರತಿಪತ್ತಿಕರ್ಮವಲ್ಲ. ಇದು ಇಲ್ಲಿನ ಸಿದ್ಧಾಂತ.

## ಆ) ಛಂದಸ್ಸು

| ಮಂತ್ರ | ಛಂದಸ್ಸು |
|---|---|
| ೧) ಪ್ರಘಾಸ್ಯಾನ್.....ಸಜೋಷಸಃ ॥ | ಗಾಯತ್ರೀ |
| ೨) ಮೋ ಷೂ ಣ.... ಗೀಃ ॥ | ಪಂಕ್ತಿಪ್ರಕಾರ |
| ೩) ಯದ್ಗ್ರಾಮೇ.... ಸ್ವಾಹಾ ॥ | ಷಟ್ಪದಾ ಜಗತೀ |
| ೪) ಅಕ್ರನ್.... ಸುದಾನವಃ ॥ | ಅನುಷ್ಟುಪ್ |

---

* ಉಪಯುಕ್ತಸ್ಯ ಆಕೀರ್ಣಕರತಾನಿವರ್ತಕಂ ಕರ್ಮ ಪ್ರತಿಪತ್ತಿಕರ್ಮ.

# || ಚತುರ್ಥೋಽನುವಾಕಃ ||

ಅಗ್ನಯೇಽನೀಕವತೇ ಪುರೋಡಾಶಮಷ್ಟಾಕಪಾಲಂ
ನಿರ್ವಪತಿ ಸಾಕಗ್ಂ ಸೂರ್ಯೇಣೋದ್ಯತಾ ಮರುದ್ಭ್ಯಃ
ಸಾಂತಪನೇಭ್ಯೋ ಮಧ್ಯಂದಿನೇ ಚರುಂ

---

ಅಗ್ನಯೇ । ಅನೀಕವತ ಇತ್ಯನೀಕ-ವತೇ । ಪುರೋಡಾಶಮ್ । ಅಷ್ಟಾಕಪಾಲಮಿತ್ಯಷ್ಟಾ-ಕಪಾಲಮ್। ನಿರಿತಿ । ವಪತಿ । ಸಾಕಮ್। ಸೂರ್ಯೇಣ । ಉದ್ಯತೇತ್ಯುತ್-ಯತಾ। ಮರುದ್ಭ್ಯ ಇತಿ ಮರುತ್-ಭ್ಯಃ। ಸಾಂತಪನೇಭ್ಯ ಇತಿ ಸಾಮ್-ತಪನೇಭ್ಯಃ। ಮಧ್ಯಂದಿನೇ। ಚರುಮ್ ।

---

ಮೂರನೆಯ ಅನುವಾಕದಲ್ಲಿ ಚಾತುರ್ಮಾಸ್ಯದ ವರುಣಪ್ರಘಾಸಪರ್ವವು ಹೇಳಲ್ಪಟ್ಟಿತು. 4, 5 ಮತ್ತು 6ನೆಯ ಅನುವಾಕಗಳಲ್ಲಿ ಸಾಕಮೇಧವೆಂಬ ಮೂರನೆಯ ಪರ್ವವು ಹೇಳಲ್ಪಟ್ಟಿದೆ.

| ಬ್ರಾಹ್ಮಣಭಾಗ | ವಿವರಣೆ |
|---|---|
| ಅನೀಕವತೇ ಅಗ್ನಯೇ | *ಅನೀಕವಂತನಾದ ಅಗ್ನಿಗೆ |
| ಅಷ್ಟಾಕಪಾಲಮ್ ಪುರೋಡಾಶಮ್ ನಿರ್ವಪತಿ | ಎಂಟು ಕಪಾಲಗಳಲ್ಲಿ ಸಂಸ್ಕೃತವಾದ ಪುರೋಡಾಶದಿಂದ ಯಾಗ ಮಾಡಬೇಕು. |
| ಉದ್ಯತಾ ಸೂರ್ಯೇಣ ಸಾಕಮ್ | ಸೂರ್ಯನ ಉದಯದ ಸಮಯದಲ್ಲಿ [ಮಾಡಬೇಕು] |
| ಸಾಂತಪನೇಭ್ಯಃ ಮರುದ್ಭ್ಯಃ ಮಧ್ಯಂದಿನೇ ಚರುಮ್ [ನಿರ್ವಪತಿ] | [ಶತ್ರು]ಸಾಂತಪನರಾದ ಮರುದ್ದೇವತೆಗಳಿಗೆ ಮಧ್ಯಾಹ್ನಸಮಯದಲ್ಲಿ ಚರುಯಾಗವನ್ನು ಮಾಡಬೇಕು. |

---

ಸಾಕಮೇಧದ ಮೊದಲನೆಯ ದಿನ ಈ ಯಾಗಗಳನ್ನು ಮಾಡಬೇಕು. ಸೂರ್ಯೋದಯದ

---

* ಅಸೌ ವಾ ಆದಿತ್ಯೋಽಗ್ನಿರನೀಕವಾನ್ । ತಸ್ಯ ರಶ್ಮಯೋಽನೀಕಾನಿ । = ಸೂರ್ಯನೇ ಅಗ್ನಿ. ಅವನ ಕಿರಣಗಳೇ ಅನೀಕಗಳು.

ಮರುದ್ಭ್ಯೋ ಗೃಹಮೇಧಿಭ್ಯಸ್ಸರ್ವಾಸಾಂ ದುಗ್ಧೇ ಸಾಯಂ

ಚರುಂ ಪೂರ್ಣಾ ದರ್ವಿ ಪರಾ ಪತ ಸುಪೂರ್ಣಾ ಪುನರಾ ಪತ।

---

ಮರುದ್ಭ್ಯ ಇತಿ ಮರುತ್-ಭ್ಯಃ। ಗೃಹ ಮೇಧಿಭ್ಯ ಇತಿ ಗೃಹ-ಮೇಧಿಭ್ಯಃ। ಸರ್ವಾಸಾಮ್। ದುಗ್ಧೇ। ಸಾಯಮ್। ಚರುಮ್। ಪೂರ್ಣಾ। ದರ್ವಿ। ಪರೇತಿ। ಪತ। ಸುಪೂರ್ಣೇತಿ ಸು-ಪೂರ್ಣಾ। ಪುನಃ। ಏತಿ। ಪತ॥

---

ಗೃಹಮೇಧಿಭ್ಯಃ ಮರುದ್ಭ್ಯಃ ಸರ್ವಾಸಾಮ್ ದುಗ್ಧೇ ಸಾಯಮ್ ಚರುಮ್ [ನಿರ್ವಪತಿ]

ಗೃಹಮೇಧಿ[ಗೃಹ-ಯಜ್ಞರಕ್ಷಕರಾದ]ಗಳಾದ ಮರುದ್ದೇವತೆಗಳಿಗೆ, ಸಾಯಂಕಾಲದಲ್ಲಿ ಯಜಮಾನನ ಎಲ್ಲ ಹಸುಗಳನ್ನು ಕರೆದ ಮೇಲೆ/ಎಲ್ಲ ಹಸುಗಳ ಹಾಲಿನಲ್ಲಿ ಪಕ್ವ ಮಾಡಿದ ಚರುವನ್ನು ಯಾಗ ಮಾಡಬೇಕು.

---

| ಮಂತ್ರ | ವಿನಿಯೋಗ |
|---|---|
| ಪೂರ್ಣಾ....ಶತಕ್ರತೋ। | ಶರನಿಷ್ಕಾಸಹೋಮದ ಪುರೋನುವಾಕ್ಯೆ. |

---

✣ ದರ್ವಿ = ಹೋಮಸಾಧನವಾದ ದರ್ವಿಯೇ! ಪೂರ್ಣಾ = ಶರನಿಷ್ಕಾಸಪೂರ್ಣವಾಗಿ; ಪರಾ ಪತ = [ಇಂದ್ರನಿಗಾಗಿ] ಹೊರಹೋಗು; ಪುನಃ = ಮತ್ತೆ; ಸುಪೂರ್ಣಾ = [ಇಂದ್ರನು ಕೊಡುವ ಧನಾದಿಗಳಿಂದ] ಚೆನ್ನಾಗಿ ತುಂಬಿದವಳಾಗಿ; ಆ ಪತ = ನಮ್ಮಲ್ಲಿಗೆ ಬಾ.

---

ಸಮಯದಲ್ಲಿ ಅನೀಕವದಗ್ನಿಗೆ ಅಷ್ಟಾಕಪಾಲ ಪುರೋಡಾಶಯಾಗವನ್ನು ಮಾಡಬೇಕು. ಮಧ್ಯಾಹ್ನದ ಸಮಯದಲ್ಲಿ ಸಾಂತಪನ ಮರುದ್ದೇವತೆಗಳಿಗೆ ಚರುವನ್ನು ಯಾಗ ಮಾಡಬೇಕು. ಸಾಯಂಕಾಲದಲ್ಲಿ ಯಜಮಾನನ ಎಲ್ಲ ಹಸುಗಳ ಹಾಲಿನಲ್ಲಿ ಪಕ್ವ ಮಾಡಿದ [ಹಸುಗಳ ಹಾಲನ್ನು ಕರೆದ ಮೇಲೆ] ಚರುವನ್ನು ಗೃಹಮೇಧಿ ಮರುತ್ತುಗಳಿಗೆ ಯಾಗ ಮಾಡಬೇಕು.

ವಸ್ನೇವ ವಿ ಕ್ರೀಣಾವಹಾ ಇಷಮೂರ್ಜಗ್ಂ ಶತಕ್ರತೋ ॥
ದೇಹಿ ಮೇ ದದಾಮಿ ತೇ ನಿ ಮೇ ಧೇಹಿ ನಿ ತೇ ದಧೇ ।

---

ವಸ್ನಾ । ಇವ । ವೀತಿ । ಕ್ರೀಣಾವಹೈ । ಇಷಮ್ । ಊರ್ಜಮ್ । ಶತಕ್ರತೋ ಇತಿ ಶತ-ಕ್ರತೋ ॥ ದೇಹಿ । ಮೇ । ದದಾಮಿ। ತೇ । ನೀತಿ । ಮೇ । ಧೇಹಿ । ನೀತಿ । ತೇ। ದಧೇ ॥

---

| ಮಂತ್ರ | ವಿನಿಯೋಗ |
|---|---|
| ದೇಹಿ ಮೇ.... ನಿಹರಾಮಿ ತೇ । | ಶರನಿಷ್ಕಾಸಹೋಮದ ಯಾಜ್ಯೆ. |

---

**ಶತಕ್ರತೋ** = ಇಂದ್ರನೇ! [ನಾವಿಬ್ಬರೂ] **ವಸ್ನಾ ಇವ** = ಮೂಲ್ಯಧನದಿಂದ ಹೇಗೋ ಹಾಗೆ; **ಇಷಮ್** = ಅನ್ನವನ್ನೂ; **ಊರ್ಜಮ್** = ಬಲವನ್ನೂ; **ವಿ ಕ್ರೀಣಾವಹೈ** = [ದ್ರವ್ಯವಿನಿಮಯಮಾಡಿಕೊಳ್ಳುವ ರೀತಿಯಲ್ಲಿ *ಶರನಿಷ್ಕಾಸ, ಇಷ, ಊರ್ಜಗಳನ್ನು] ವಿನಿಮಯ ಮಾಡಿಕೊಳ್ಳೋಣ. ✢ [ಇಂದ್ರನೇ] **ಮೇ** = ನನಗೆ; [ನೀನು]; **ದೇಹಿ** = ಕೊಡು; **ತೇ** = ನಿನಗೆ [ನಾನು] **ದದಾಮಿ** = ಕೊಡುತ್ತೇನೆ; **ಮೇ ನಿ ಧೇಹಿ** = ಅನ್ನಾದಿಗಳನ್ನು ನನ್ನಲ್ಲಿ ಇಡು. **ತೇ ನಿ ದಧೇ** = ಹವಿಸ್ಸುಗಳನ್ನು ನಿನ್ನಲ್ಲಿ ಅರ್ಪಿಸುತ್ತೇನೆ.

---

ಎಲೈ ದರ್ವಿಯೇ! ನೀನು ಶರನಿಷ್ಕಾಸಪೂರ್ಣಳಾಗಿ ಇಂದ್ರನ ಬಳಿಗೆ ಹೋಗು. ಅದನ್ನು ಸ್ವೀಕರಿಸಿ ತೃಪ್ತನಾದ ಇಂದ್ರನು ಕೊಡುವ ಅನ್ನವನ್ನೂ, ಬಲವನ್ನೂ ತುಂಬಿಕೊಂಡು ನಮ್ಮಲ್ಲಿಗೆ ಬಾ. ಇಂದ್ರನೇ! ಮೂಲ್ಯದಿಂದ ಅಥವಾ ದ್ರವ್ಯಾಂತರದಿಂದ ವಸ್ತುಗಳ ವಿನಿಮಯ ಮಾಡಿಕೊಳ್ಳುವಂತೆ ನಾವಿಬ್ಬರೂ ಈ ಶರನಿಷ್ಕಾಸ, ಅನ್ನ, ಬಲಾದಿಗಳನ್ನು ವಿನಿಮಯ ಮಾಡಿಕೊಳ್ಳೋಣ.

---

* **ಶರನಿಷ್ಕಾಸ** = ಅನ್ನ ಮಾಡುವಾಗ ಅನ್ನದ ಮೇಲೆ ಹಾಲು ಕೆನೆಯಂತೆ ಗಟ್ಟಿಯಾಗುವ ದ್ರವ್ಯ. (ಗಂಜಿ).

**ನಿಹಾರಮಿನ್ನಿ ಮೇ ಹರಾ ನಿಹಾರ [ನಿಹಾರಮ್(೧) ನಿಹರಾಮಿ] ನ್ನಿಹರಾಮಿ ತೇ ॥ ಮರುದ್ಭ್ಯಃ ಕ್ರೀಡಿಭ್ಯಃ ಪುರೋಡಾಶಗ್ಂ ಸಪ್ತಕಪಾಲಂ ನಿರ್ವಪತಿ ಸಾಕಗ್ಂ ಸೂರ್ಯೇಣೋದ್ಯ**

---

ನಿಹಾರಮಿತಿ ನಿ-ಹಾರಮ್ । ಇತ್ । ನೀತಿ । ಮೇ । ಹರ । ನಿಹಾರಮಿತಿ ನಿ-ಹಾರಮ್। ನೀತಿ । ಹರಾಮಿ । ತೇ ॥ ಮರುದ್ಭ್ಯ ಇತಿ ಮರುತ್-ಭ್ಯಃ । ಕ್ರೀಡಿಭ್ಯ ಇತಿ ಕ್ರೀಡಿ-ಭ್ಯಃ। ಪುರೋಡಾಶಮ್। ಸಪ್ತಕಪಾಲಮಿತಿ ಸಪ್ತ-ಕಪಾಲಮ್ । ನಿರಿತಿ । ವಪತಿ । ಸಾಕಮ್ । ಸೂರ್ಯೇಣ । ಉದ್ಯತೇತ್ಯುತ್-ಯತಾ ।

---

**ನಿಹಾರಮ್ ಇತ್ ಮೇ ನಿ ಹರ** = ಮತ್ತೆ ಮತ್ತೆ ತೆಗೆದುಕೊಂಡು ಬಂದೇ [ಅನ್ನಾದಿ ಧನಗಳನ್ನು] ನನ್ನಲ್ಲಿಡು; **ನಿಹಾರಮ್**= [ನಾನು] ಮತ್ತೆ ಮತ್ತೆ [ಹವಿಸ್ಸುಗಳನ್ನು] ತಂದೇ; **ತೇ ನಿಹರಾಮಿ** = ನಿನ್ನಲ್ಲಿಡುತ್ತೇನೆ;

---

### ಸಾಕಮೇಧಯಾಗಗಳ ವಿಧಿ

| ಬ್ರಾಹ್ಮಣಭಾಗ | ವಿವರಣೆ |
|---|---|
| ಮರುದ್ಭ್ಯಃ ಕ್ರೀಡಿಭ್ಯಃ | ಕ್ರೀಡಿಮರುದ್ದೇವತೆಗಳಿಗಾಗಿ |
| ಉದ್ಯತಾ ಸೂರ್ಯೇಣ ಸಾಕಮ್ ಸಪ್ತಕಪಾಲಮ್ ಪುರೋಡಾಶಮ್ ನಿರ್ವಪತಿ | ಸೂರ್ಯನ ಉದಯದ ಸಮಯದಲ್ಲಿ ಸಪ್ತಕಪಾಲಗಳಲ್ಲಿ ಸಂಸ್ಕೃತವಾದ ಪುರೋಡಾಶವನ್ನು ಯಾಗ ಮಾಡಬೇಕು. |

---

ಇಂದ್ರನೇ! ನೀನು ಧನಾದಿಗಳನ್ನು ನನಗೆ ಕೊಡು. ನಾನು ನಿನಗೆ ಹವಿರಾದಿಗಳನ್ನು ಕೊಡುತ್ತೇನೆ. ನೀನು ಧನ ಮೊದಲಾದವುಗಳನ್ನು ನನ್ನಲ್ಲಿ ಸ್ಥಾಪಿಸು. ನಾನು ಹವಿರಾದಿಗಳನ್ನು ನಿನ್ನಲ್ಲಿ ನೆಲೆಗೊಳಿಸುತ್ತೇನೆ. ಒಂದು ಬಾರಿಯೇ ಅಲ್ಲ. ನೀನು ಅನ್ನಾದಿಗಳನ್ನು ಮತ್ತೆ ಮತ್ತೆ ತಂದೇ ಕೊಡು. ನಾನು ಹವಿರಾದಿಗಳನ್ನು ಮತ್ತೆ ಮತ್ತೆ ತಂದು ಕೊಡುತ್ತೇನೆ.

### ಸಾಕಮೇಧಯಾಗಗಳ ವಿಧಿ

**ತಾತ್ಪರ್ಯ:**—ಸಾಕಮೇಧಪರ್ವದಲ್ಲಿ ಕ್ರೀಡಿಮರುತ್ತುಗಳಿಗಾಗಿ, ಅಗ್ನ್ಯಾದಿದೇವತೆಗಳಿಗಾಗಿ

ತಾऽऽಗ್ನೇಯಮಷ್ಟಾಕಪಾಲಂ ನಿರ್ವಪತಿ ಸೌಮ್ಯಂ ಚರುಗ್ಂ ಸಾವಿತ್ರಂ ದ್ವಾದಶಕಪಾಲಗ್ಂ ಸಾರಸ್ವತಂ ಚರುಂ ಪೌಷ್ಣಂ ಚರುಮೈಂದ್ರಾಗ್ನಮೇಕಾದಶಕಪಾಲಮೈಂದ್ರಂ ಚರುಂ

---

ಆಗ್ನೇಯಮ್ । ಅಷ್ಟಾಕಪಾಲಮಿತ್ಯಷ್ಟಾ-ಕಪಾಲಮ್ । ನಿರಿತಿ । ವಪತಿ । ಸೌಮ್ಯಮ್। ಚರುಮ್ । ಸಾವಿತ್ರಮ್ । ದ್ವಾದಶಕಪಾಲಮಿತಿ ದ್ವಾದಶ-ಕಪಾಲಮ್ । ಸಾರಸ್ವತಮ್। ಚರುಮ್। ಪೌಷ್ಣಮ್ । ಚರುಮ್ । ಐಂದ್ರಾಗ್ನಮಿತ್ಯೈಂದ್ರ-ಅಗ್ನಮ್ । ಏಕಾದಶಕಪಾಲ-ಮಿತ್ಯೇಕಾದಶ-ಕಪಾಲಮ್ । ಐಂದ್ರಮ್ । ಚರುಮ್ ।

---

| | |
|---|---|
| ಆಗ್ನೇಯಮ್ ಅಷ್ಟಾಕಪಾಲಮ್ ನಿರ್ವಪತಿ | ಅಗ್ನಿದೇವತೆಗಾಗಿ ಎಂಟು ಕಪಾಲಗಳಲ್ಲಿ ಸಂಸ್ಕೃತವಾದ ಪುರೋಡಾಶವನ್ನು ಯಾಗ ಮಾಡಬೇಕು. |
| ಸೌಮ್ಯಮ್ ಚರುಮ್ [ನಿರ್ವಪತಿ] | ಸೋಮದೇವತಾಕವಾದ ಚರುಯಾಗವನ್ನು ಮಾಡಬೇಕು. |
| ಸಾವಿತ್ರಮ್ ದ್ವಾದಶಕಪಾಲಮ್ [ನಿರ್ವಪತಿ] | ಸವಿತೃದೇವನಿಗಾಗಿ ದ್ವಾದಶಕಪಾಲಸಂಸ್ಕೃತವಾದ ಪುರೋಡಾಶವನ್ನು ಯಾಗ ಮಾಡಬೇಕು. |
| ಸಾರಸ್ವತಮ್ ಚರುಮ್ [ನಿರ್ವಪತಿ] | ಸರಸ್ವತೀದೇವತಾಕಚರುವನ್ನು ಯಾಗ ಮಾಡಬೇಕು. |
| ಪೌಷ್ಣಮ್ ಚರುಮ್ [ನಿರ್ವಪತಿ] | ಪೂಷದೇವತಾಕವಾದ ಚರುಯಾಗವನ್ನು ಮಾಡಬೇಕು. |
| ಐಂದ್ರಾಗ್ನಮ್ ಏಕಾದಶಕಪಾಲಮ್ [ನಿರ್ವಪತಿ] | ಇಂದ್ರಾಗ್ನಿದೇವತೆಗಳಿಗಾಗಿ ಏಕಾದಶಕಪಾಲಗಳಲ್ಲಿ ಸಂಸ್ಕೃತವಾದ ಪುರೋಡಾಶವನ್ನು ಯಾಗ ಮಾಡಬೇಕು. |
| ಐಂದ್ರಮ್ ಚರುಮ್ [ನಿರ್ವಪತಿ] | ಇಂದ್ರದೇವತಾಕವಾದ ಚರುಯಾಗವನ್ನು ಮಾಡಬೇಕು. |

# ವೈಶ್ವಕರ್ಮಣಮೇಕಕಪಾಲಮ್ ॥ ೪-6 ॥

**[ಹರಾ ನಿಹಾರನ್ತ್ರಿಗ್ಂಶಚ್ಚ।]**

---

ವೈಶ್ವಕರ್ಮಣಮಿತಿ ವೈಶ್ವ-ಕರ್ಮಣಮ್ । ಏಕಕಪಾಲಮಿತ್ಯೇಕ-ಕಪಾಲಮ್ ॥ ೪ ॥

---

| | |
|---|---|
| ವೈಶ್ವಕರ್ಮಣಮ್ ಏಕಕಪಾಲಮ್ [ನಿರ್ವಪತಿ] | ವಿಶ್ವಕರ್ಮದೇವನಿಗಾಗಿ ನಿರ್ವಾಪ ಮಾಡಿ ಏಕ ಕಪಾಲದಲ್ಲಿ ಪುರೋಡಾಶವನ್ನು ಸಿದ್ಧಪಡಿಸಿ ಯಾಗ ಮಾಡಬೇಕು. |

---

ಈ ಮಂತ್ರಭಾಗದಲ್ಲಿ ವಿಹಿತವಾದ ಯಾಗಗಳನ್ನು ಮಾಡಬೇಕು.

## ವಿನಿಯೋಗ ಸಂಗ್ರಹ

[1]ಪೂರ್ಣೇತ್ಯನೂಚ್ಯ ದೇಹೀತಿ[2] ಯಾಜ್ಯಾಮಧ್ವರ್ಯುರೀರಯೇತ್ ॥

**ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ - 2**

**ಉಳಿದುದು ಬ್ರಾಹ್ಮಣಭಾಗ.**

# ಅನುವಾಕದ ವಿಶೇಷ ವಿಷಯಗಳು

## ಅ) ಮೀಮಾಂಸಾ

**೧) ಸಾಕಮೇಧಪರ್ವದ ಇಷ್ಟಿಯ ಅನುಷ್ಠಾನ ಹೇಗೆ? [ಜೈ.ಸೂ. 5.1]**

ಚಾತುರ್ಮಾಸ್ಯಪ್ರಕರಣದಲ್ಲಿ ಸಾಕಮೇಧಪರ್ವದಲ್ಲಿ 'ಅಗ್ನಯೇ ಅನೀಕವತೇ' ಮೊದಲಾಗಿ ವಿಹಿತವಾದ ಮೂರು ಇಷ್ಟಿಗಳು ಇವೆ. ಇವು ಕ್ರಮವಾಗಿ ಪ್ರಾತಃಕಾಲ, ಮಧ್ಯಾಹ್ನ ಮತ್ತು ಸಾಯಂಕಾಲಗಳಲ್ಲಿ ವಿಹಿತವಾಗಿವೆ. ಇವುಗಳಿಗೆ ಪ್ರಕೃತಿಯಾದ ದರ್ಶ-ಪೂರ್ಣಮಾಸೇಷ್ಟಿಗಳಿಂದ ಅತಿದೇಶದಿಂದ ಅಂಗಗಳು ಪ್ರಾಪ್ತವಾಗುತ್ತವೆ. ಪ್ರಕೃತಿಯಲ್ಲಿ ಮೊದಲನೆಯ ದಿನ ಅನ್ವಾಧಾನ, ಎರಡನೆಯ ದಿನ ಇಷ್ಟಿ-ಹೀಗೆ ಎರಡು ದಿನಗಳ ಅನುಷ್ಠಾನವಿದೆ. ಸಾಕಮೇಧಪರ್ವದ ಈ ಇಷ್ಟಿಗಳಲ್ಲಿಯೂ ಸಹ ಹಾಗೆಯೇ ಅನುಷ್ಠಾನವೇ? ಅಥವಾ ಒಂದೇ ದಿನದಲ್ಲಿ ಅನುಷ್ಠಾನವೇ? ಇದು **ಸಂಶಯ.**

ಪ್ರಕೃತಿಯಲ್ಲಿ ಎರಡು ದಿನಗಳ ಅನುಷ್ಠಾನವಿರುವುದರಿಂದ ಇಲ್ಲಿಯೂ ಪ್ರಾತಃ ಕಾಲಾದಿಗಳು ಉಕ್ತವಾಗಿದ್ದರೂ ಹಿಂದಿನ ದಿನ ಪ್ರಾತಃ, ಮಧ್ಯಾಹ್ನ, ಸಾಯಂಕಾಲ ಆಯಾ ಇಷ್ಟಿಗಳನ್ನು ಆರಂಭಿಸಿ ಮರುದಿನ ಆಯಾ ಕಾಲಕ್ಕೆ ಸಮಾಪ್ತಿಗೊಳಿಸಬೇಕು. ಇದು ಇಲ್ಲಿನ **ಪೂರ್ವಪಕ್ಷ.**

ಇಲ್ಲಿಯ **ಸಿದ್ಧಾಂತವು** ಹೀಗಿದೆ; ಇಲ್ಲಿ ಸಾಂಗಯಾಗಾನುಷ್ಠಾನಕ್ಕೆ ಪ್ರಾತಃ ಕಾಲಾದಿಗಳು ಉಕ್ತವಾಗಿವೆ. ಉಪದೇಶವು ಅತಿದೇಶಕ್ಕಿಂತಲೂ ಪ್ರಬಲ. ಆದುದರಿಂದ ಒಂದೇ ದಿನದಲ್ಲಿಯೇ ಈ ಯಾಗಗಳನ್ನು ಮಾಡಬೇಕು.

**೨) ವೈಶ್ವಕರ್ಮಣ ಏಕಕಪಾಲಕ್ಕೆ ಯಾವುದರ ಧರ್ಮಾತಿದೇಶ? [ಜೈ.ಸೂ. 7.1.]**

ಚಾತುರ್ಮಾಸ್ಯದಲ್ಲಿ ವೈಶ್ವದೇವಪರ್ವದಲ್ಲಿ ದ್ಯಾವಾಪೃಥಿವ್ಯ ಏಕಕಪಾಲವಿದೆ. ವರುಣಪ್ರಘಾಸದಲ್ಲಿ ಕಾಯ ಏಕಕಪಾಲವಿದೆ. ಸಾಕಮೇಧಪರ್ವದಲ್ಲಿ ವೈಶ್ವಕರ್ಮಣ ಏಕಕಪಾಲವಿದೆ. ಈ ವೈಶ್ವಕರ್ಮಣ ಏಕಕಪಾಲಕ್ಕೆ ವೈಶ್ವದೇವಪರ್ವದ ಏಕಕಪಾಲ ಧರ್ಮಾತಿದೇಶವೇ? ಅಥವಾ ವರುಣಪ್ರಘಾಸಪರ್ವದ ಏಕಕಪಾಲಧರ್ಮಾತಿದೇಶವೇ? ಎಂದು **ಸಂಶಯ.**

ವೈಶ್ವದೈವಿಕ ಏಕಕಪಾಲದಲ್ಲಿ ಹೆಚ್ಚು ಧರ್ಮಗಳು ಉಕ್ತವಾಗಿವೆ. ಆದುದರಿಂದ ಭೂಯೋನುಗ್ರಹನ್ಯಾಯದಿಂದ ಅದರಿಂದಲೇ ಧರ್ಮಾತಿದೇಶವನ್ನು ಮಾಡಬೇಕು. ಇದು ಇಲ್ಲಿನ **ಪೂರ್ವಪಕ್ಷ.**

ವರುಣಪ್ರಘಾಸದ ಐಂದ್ರಾಗ್ನಧರ್ಮಾತಿದೇಶವನ್ನು ಸಾಕಮೇಧದಲ್ಲಿ ಮಾಡಬೇಕು. ವೈಶ್ವದೇವಪರ್ವದಲ್ಲಿ ಐಂದ್ರಾಗ್ನವಿಲ್ಲ. ಆದುದರಿಂದ ಸಮೀಪದಲ್ಲಿರುವುದರಿಂದ ಸಾಕಮೇಧದಲ್ಲಿಯೂ ವರುಣಪ್ರಘಾಸದ ಏಕಕಪಾಲಧರ್ಮಾತಿದೇಶವೇ ಯುಕ್ತ. ವರುಣಪ್ರಘಾಸದ ಏಕಕಪಾಲದಲ್ಲಿ ಹೇಳಿರುವ 'ಹಿರಣ್ಮಯ್ಯಃ ವಾ ಸ್ರುಚೋ ಭವಂತಿ' ಮುಂತಾದ ವಿಶೇಷಧರ್ಮಪ್ರಾಪ್ತಿಗಾಗಿಯೂ ವರುಣಪ್ರಘಾಸದ ಏಕಕಪಾಲದ ಧರ್ಮಾತಿದೇಶವೇ ಯುಕ್ತವಾದುದು. ಇದು ಇಲ್ಲಿನ ಸಿದ್ಧಾಂತ.

**೩) ಸಾಕಮೇಧದ ಗೃಹಮೇಧೀಯಯಾಗದಲ್ಲಿನ 'ಆಜ್ಯಭಾಗೌ ಯಜತಿ' ಎಂಬ ವಾಕ್ಯದ ತಾತ್ಪರ್ಯವೇನು? [ಜೈ.ಸೂ. 10.7]**

ಸಾಕಮೇಧಪರ್ವದಲ್ಲಿ 'ಮರುದ್ಭ್ಯೋ ಗೃಹಮೇಧಿಭ್ಯಃ ಸರ್ವಾಸಾಂ ದುಗ್ಧೇ ಸಾಯಂ ಚರುಮ್' ಎಂದು ವಿಹಿತವಾದ ಗೃಹಮೇಧೀಯಯಾಗದಲ್ಲಿ 'ಆಜ್ಯಭಾಗೌ ಯಜತಿ'ಎಂಬ ವಚನವಿದೆ. ಈ ವಾಕ್ಯದ ವಿಷಯದಲ್ಲಿ 8 ಪಕ್ಷಗಳು ಇವೆ.

೧) ಇದು ಅತಿದೇಶದಿಂದ ಪ್ರಾಪ್ತವಾದ ಆಜ್ಯಭಾಗಗಳ ಅನುವಾದ.

೨) ಓಷಧಿದ್ರವ್ಯತ್ವಾದಿಗಳು ಪ್ರಕೃತಿಯು ಯಾವುದೆಂಬುದನ್ನು ನಿರ್ಧರಿಸಲು ಸಹಾಯಕವಾಗುವಂತೆ ಈ ಆಜ್ಯಭಾಗವಾಕ್ಯವೂ ಲಿಂಗವಾಗಿದೆ.

೩) ಇದು ಅರ್ಥವಾದರೂಪವಾಗಿ ಪ್ರಶಂಸಾರ್ಥವಾಗಿದೆ.

೪) ಬೇರೆ ಬೇರೆ ಪ್ರಕರಣದಲ್ಲಿರುವುದರಿಂದ ವಿಧಿವಾಕ್ಯದೊಡನೆ ಏಕವಾಕ್ಯತೆಯು ಬರುವುದಿಲ್ಲ. ಹೀಗಾಗಿ ಇದು ಅರ್ಥವಾದವಾಗುವುದಿಲ್ಲ. ಪ್ರಕೃತಿಯಿಂದ ಪ್ರಾಪ್ತವಾಗುವ ಆಜ್ಯಭಾಗಕ್ಕಿಂತ ಬೇರೆಯದಾದ ಕರ್ಮಾಂತರವಿದು.

೫) ಆಜ್ಯಭಾಗವನ್ನು ಬಿಟ್ಟು ಉಳಿದ ಪ್ರಯಾಜಾದ್ಯಂಗಗಳ ಪರಿಸಂಖ್ಯೆಯಿದು.

೬) ಪ್ರಯಾಜಾದ್ಯಂಗಗಳಲ್ಲಿ ಅತಿದೇಶವಾಕ್ಯದ ಸಂಕೋಚವು ಇಲ್ಲಿ ಉಕ್ತವಾಗಿದೆ.

೭) ಒಂದೇ ಚೋದಕವಾಕ್ಯವಿರುವುದರಿಂದ ಆಜ್ಯಭಾಗಗಳಲ್ಲಿ ಅತಿದೇಶವಾಕ್ಯದ ಉಪಸಂಹಾರ. 'ಆಗ್ನೇಯಂ ಚತುರ್ಧಾ ಕರೋತಿ, ಪುರೋಡಾಶಂ ಚತುರ್ಧಾ ಕರೋತಿ' ಎಂಬಲ್ಲಿ 'ಆಗ್ನೇಯಂ ಪುರೋಡಾಶಂ ಚತುರ್ಧಾ ಕರೋತಿ' ಎಂದು ಅರ್ಥ ಮಾಡುವಂತೆ ಇಲ್ಲಿಯೂ ಉಪಸಂಹಾರ.

೮) ಇಲ್ಲಿ ವಿಹಿತವಾದ ಆಜ್ಯಭಾಗದಿಂದಲೇ ಗೃಹಮೇಧೀಯದ ಇತಿಕರ್ತವ್ಯತಾ

ಕಾಂಕ್ಷೆಯು ಪೂರಣವಾಗುವುದರಿಂದ ಇಲ್ಲಿ ಅತಿದೇಶವೇ ಬೇಕಾಗಿಲ್ಲ. ಇದು ಇಲ್ಲಿನ ಸಿದ್ಧಾಂತ.

**೪) ಗೃಹಮೇಧೀಯಯಾಗದಲ್ಲಿ ಉಳಿದ ಅಂಗಗಳು ಇವೆಯೇ? [ಜೈ.ಸೂ. 10.7.]**

ಆಜ್ಯಭಾಗದಿಂದಲೇ ಗೃಹಮೇಧೀಯಯಾಗದ ಇತಿಕರ್ತವ್ಯತಾಕಾಂಕ್ಷೆಯು ಪೂರ್ತಿಯಾಗುವುದಾದರೆ ಬೇರೆಯ ಅಂಗಗಳ ಅನುಷ್ಠಾನವಿದೆಯೇ? ಇದು ಇಲ್ಲಿನ **ಸಂಶಯ.**

ಬೇರೆಯ ಅಂಗಗಳ ಅನುಷ್ಠಾನವನ್ನೂ ಮಾಡಬೇಕು. ಇದು ಇಲ್ಲಿನ **ಪೂರ್ವಪಕ್ಷ.**

ಇಲ್ಲಿಯೇ ವಿಹಿತವಾಗಿರುವ ಸ್ವಿಷ್ಟಕೃದಾದಿಗಳನ್ನು ಮಾಡಬೇಕು. ಅನುಕ್ತವಾದುದನ್ನ ಮಾಡಬೇಕಾಗಿಲ್ಲ. ಇದು ಸಿದ್ಧಾಂತ.

**೫) 'ಆಜ್ಯಭಾಗೌ ಯಜತಿ' ಎಂಬಲ್ಲಿ ಐದನೆಯ ಪಕ್ಷದಂತೆ ಪ್ರಾಶಿತ್ರಹರಣಾದಿಗಳಿವೆಯೇ? [ಜೈ.ಸೂ. 10-7.]**

ಗೃಹಮೇಧೀಯಯಾಗದಲ್ಲಿ 'ಆಜ್ಯಭಾಗೌ ಯಜತಿ' ಎಂಬಲ್ಲಿ ಪರಿಸಂಖ್ಯೆಯೆಂಬ ಐದನೆಯ ಪಕ್ಷವಿದ್ದರೆ, ಪ್ರಾಶಿತ್ರಹರಣಾದಿಗಳು ಇವೆಯೇ? ಇದು ಇಲ್ಲಿನ **ಸಂಶಯ.**

ಇಡಾಭಕ್ಷಣದರ್ಶನದಿಂದ ಅದನ್ನೂ ಮಾಡಬೇಕು. ಇದು **ಪೂರ್ವಪಕ್ಷ.**

ಇಡಾಭಕ್ಷಣವನ್ನು ಪ್ರತ್ಯಕ್ಷವಾಗಿ ಹೇಳಿರುವುದರಿಂದ ಅದನ್ನು ಮಾಡಬೇಕು. ಪ್ರಾಶಿತ್ರಹರಣಾದಿಗಳನ್ನು–ಪರಿಸಂಖ್ಯಾತವಾಗಿರುವುದರಿಂದ–ಮಾಡಬೇಕಾಗಿಲ್ಲ. ಇದು **ಸಿದ್ಧಾಂತ.**

**೬) ಚಾತುರ್ಮಾಸ್ಯದಲ್ಲಿನ 'ದ್ವಯೋಃ ಪ್ರಣಯತಿ' ಎಂಬ ವಚನದ ತಾತ್ಪರ್ಯವೇನು? [ಜೈ.ಸೂ.7.3.]**

ಚಾತುರ್ಮಾಸ್ಯಗಳಲ್ಲಿ 'ದ್ವಯೋಃ ಪ್ರಣಯತಿ' ಎಂಬ ವಾಕ್ಯವಿದೆ. ಉತ್ತರವೇದಿ ಮತ್ತು ದಕ್ಷಿಣವೇದಿಗಳಲ್ಲಿ ಅಗ್ನಿಪ್ರಣಯನ ಮಾಡಬೇಕು ಎಂದು ಇದರ ಅರ್ಥ. ಒಂದು ಅಗ್ನಿಪ್ರಣಯನವು ದರ್ಶ-ಪೂರ್ಣಮಾಸದಿಂದ ಅತಿದೇಶದಿಂದ ಪ್ರಾಪ್ತವಾಗುತ್ತದೆ. ಪ್ರಣಯನವೆಂದರೆ ಸೌಮಿಕವಾದ ಅಗ್ನಿಪ್ರಣಯನ. ಆದುದರಿಂದ ನಾಮಾತಿದೇಶದಿಂದ ಸೌಮಿಕಾಗ್ನಿಪ್ರಣಯನಧರ್ಮಗಳು ಬರುತ್ತವೆ. ಇದು ಇಲ್ಲಿನ **ಪೂರ್ವಪಕ್ಷ.**

'ಪ್ರಣಯನ' ಶಬ್ದವು ಬರ್ಹಿರಾದಿಶಬ್ದಗಳಂತೆ ಲೌಕಿಕವಾದುದರಿಂದ ಇಲ್ಲಿ ಸೌಮಿಕಾಗ್ನಿಪ್ರಣಯನದ ಧರ್ಮಗಳಿಲ್ಲ. ಪ್ರಾಕೃತಪ್ರಣಯನವೇ ಅತಿದೇಶದಿಂದ ಬರುವುದರಿಂದ ಇಲ್ಲಿ ಪುನಃ ವಿಧಿಯು ವ್ಯರ್ಥವೆನ್ನುವುದಾದರೆ ಸ್ತುತಿಗಾಗಿ 'ದ್ವಯೋಃ ಪ್ರಣಯತಿ' ಎಂಬ ವಾಕ್ಯವಿರಲಿ. ಇದು ಇಲ್ಲಿನ **ಸಿದ್ಧಾಂತ.**

**೭) 'ದ್ವಯೋಃ ಪ್ರಣಯತಿ' ಎಂಬ ವಾಕ್ಯದಿಂದ ದ್ವಿತೀಯಾಗ್ನಿಪ್ರಣಯನವು ಯಾವುದರಲ್ಲಿ? [ಜೈ.ಸೂ. 7.3]**

'ದ್ವಯೋಃ ಪ್ರಣಯತಿ' 'ತಸ್ಮಾದ್ದ್ವಾಭ್ಯಾಂ ಯಂತಿ' ಎಂಬ ವಚನವಿದೆ. ಚಾತುರ್ಮಾಸ್ಯದ ನಾಲ್ಕು ಪರ್ವದಲ್ಲಿ ಯಾವ ಎರಡರಲ್ಲಿ ಅಗ್ನಿಪ್ರಣಯನ? ಎಂಬುದು **ಸಂಶಯ.**

ಅಪ್ರಸಕ್ತವಾದುದಕ್ಕೆ ಪ್ರತಿಷೇಧ ಯುಕ್ತವಲ್ಲ. 'ನ ವೈಶ್ವದೇವ ಉತ್ತರವೇದಿಮುಪವಪತಿ, ನ ಶುನಾಸೀರ್ಯೇ' ಎಂದು ಆದ್ಯಂತಪರ್ವಗಳಲ್ಲಿ ಉತ್ತರವೇದಿಯ ಉಪವಾಪದ ನಿಷೇಧವಿದೆ. ಉತ್ತರವೇದಿಯು ಅಗ್ನಿಪ್ರಣಯನಕ್ಕಾಗಿಯೇ. ಅದರ ನಿಷೇಧವು ಅಗ್ನಿಪ್ರಣಯನದ ಪ್ರಸಕ್ತಿಯನ್ನು ತೋರಿಸುತ್ತದೆ. ಹೀಗಾಗಿ ವೈಶ್ವದೇವ ಮತ್ತು ಶುನಾಸೀರ್ಯದಲ್ಲಿ ಅಗ್ನಿಪ್ರಣಯನ ಎಂದು **ಪೂರ್ವಪಕ್ಷ.**

**'ಊರೂ ವಾ ಏತೇ ಯಜ್ಞಸ್ಯ ಯದ್ವರುಣಪ್ರಘಾಸಾಃ ಸಾಕಮೇಧಶ್ಚ'** ಎಂದು ಗಮನಸಾಧನವಾದ ಊರುತ್ವವನ್ನು ದ್ವಿತೀಯ ತೃತೀಯ ಪರ್ವಗಳಿಗೇ ಹೇಳಿರುತ್ತಾರೆ. ಅನಾರಭ್ಯಾಧೀತವಾದ **'ಉತ್ತರವೇದಿಮುಪವಪತಿ'** ಎಂಬ ವಚನವಿದೆ. **'ಅನಾರಭ್ಯಾಧೀತಾನಾಂ ಪ್ರಕೃತಿಗಾಮಿತ್ವಮ್'** ಎಂಬ ವಚನಾಂತರದಿಂದ ಪ್ರಕೃತಿಪ್ರಾಪ್ತವಾದ ಉತ್ತರವೇದಿಯು ಅತಿದೇಶದಿಂದ ಎಲ್ಲೆಲ್ಲಿಯೂ ಬರುತ್ತದೆ. **'ನೋತ್ತರವೇದಿಮ್'** ಎಂಬುದು ಉತ್ತರವೇದಿಪ್ರಾಪ್ತಿಯನ್ನು ನಿಷೇಧಿಸುತ್ತದೆ. ಇದು **ಸಿದ್ಧಾಂತ.**

ಈ ಎರಡೂ ಅಧಿಕರಣಗಳನ್ನು ಸಂಗ್ರಹಿಸಿ, ವಾರ್ತಿಕಕಾರರ ನಿರ್ಣಯವಿದು.

**ಅನಾಮತ್ವಾಚ್ಚ ವೈಯರ್ಥ್ಯಾತ್ ಸೌಮಿಕಂ ಪ್ರಾಕೃತಂ ಚ ನ ।**
**ಅಪೂರ್ವಂ ತತ್ಪ್ರಣಯನಂ ಶಾಖಾಂತರಸಮೋಕ್ತಿಕಮ್ ॥**

**'ಆಹವನೀಯಾದಗ್ನಿಂ ಪ್ರಣಯತಃ'** ಎಂದು ಶಾಖಾಂತರದಲ್ಲಿ ಮಧ್ಯಮಪರ್ವಗಳಲ್ಲಿ ಅಪೂರ್ವವಾದ ಪ್ರಣಯನವು ವಿಹಿತವಾಗಿದೆ. ಆ ವಚನಕ್ಕೆ ಸಮಾನವಾದುದರಿಂದ ಇಲ್ಲಿಯೂ ಪ್ರಣಯನವು ವಿಹಿತವಾಗಿದೆ. ಅದು ಮಧ್ಯಮಪರ್ವಗಳಲ್ಲಿ ಎಂಬುದು **ಸಿದ್ಧಾಂತ.**



# ॥ ಪಂಚಮೋಽನುವಾಕಃ ॥

ಸೋಮಾಯ ಪಿತೃಮತೇ ಪುರೋಡಾಶಗ್ಂ ಷಟ್ಕಪಾಲಂ
ನಿರ್ವಪತಿ ಪಿತೃಭ್ಯೋ ಬರ್ಹಿಷದ್ಭ್ಯೋ ಧಾನಾಃ
ಪಿತೃಭ್ಯೋಽಗ್ನಿಷ್ವಾತ್ತೇಭ್ಯೋಽಭಿವಾನ್ಯಾಯೈ ದುಗ್ಧೇ

---

**ಸೋಮಾಯ** । ಪಿತೃಮತ ಇತಿ ಪಿತೃ-ಮತೇ । ಪುರೋಡಾಶಮ್ । ಷಟ್ಕಪಾಲಮಿತಿ ಷಟ್-ಕಪಾಲಮ್ । ನಿರಿತಿ । ವಪತಿ । ಪಿತೃಭ್ಯ ಇತಿ ಪಿತೃ-ಭ್ಯಃ । ಬರ್ಹಿಷದ್ಭ್ಯ ಇತಿ ಬರ್ಹಿಷತ್-ಭ್ಯಃ । ಧಾನಾಃ । ಪಿತೃಭ್ಯ ಇತಿ ಪಿತೃ-ಭ್ಯಃ । ಅಗ್ನಿಷ್ವಾತ್ತೇಭ್ಯ ಇತ್ಯಗ್ನಿ-ಸ್ವಾತ್ತೇಭ್ಯಃ । ಅಭಿವಾನ್ಯಾಯಾ ಇತ್ಯಭಿ-ವಾನ್ಯಾಯೈ । ದುಗ್ಧೇ ।

---

ನಾಲ್ಕನೆಯ ಅನುವಾಕದಲ್ಲಿ ಸಾಕಮೇಧಹವಿಸ್ಸುಗಳು ಉಕ್ತವಾಗಿವೆ. ಈ ಐದನೆಯ ಅನುವಾಕದಲ್ಲಿ ಸಾಕಮೇಧಶೇಷವಾದ ಮಹಾಪಿತೃಯಜ್ಞವು ಹೇಳಲ್ಪಟ್ಟಿದೆ.

---

| ಬ್ರಾಹ್ಮಣಭಾಗ | ವಿವರಣೆ |
|---|---|
| ಪಿತೃಮತೇ ಸೋಮಾಯ | ಪಿತೃಸ್ವಾಮಿಯಾದ ಸಂವತ್ಸರಸ್ವರೂಪನಾದ ಸೋಮದೇವನಿಗೆ |
| ಷಟ್ಕಪಾಲಂ ಪುರೋಡಾಶಂ ನಿರ್ವಪತಿ | ಆರು ಕಪಾಲಗಳಲ್ಲಿ ಸಂಸ್ಕೃತವಾದ ಪುರೋಡಾಶ ದ್ರವ್ಯವನ್ನು ಯಾಗ ಮಾಡಬೇಕು. |
| ಪಿತೃಭ್ಯಃ ಬರ್ಹಿಷದ್ಭ್ಯಃ ಧಾನಾಃ [ನಿರ್ವಪತಿ] | ಮಾಸರೂಪರಾದ ಯಜ್ಞನಿಷ್ಠರಾದ ಪಿತೃಗಳಿಗೆ ಹುರಿದ ಯವಧಾನ್ಯವನ್ನು [ಕೊಡಬೇಕು] |
| ಪಿತೃಭ್ಯಃ ಅಗ್ನಿಷ್ವಾತ್ತೇಭ್ಯಃ | ಅರ್ಧಮಾಸರೂಪರಾದ ಯಜ್ಞನಿಷ್ಠರಲ್ಲದ ಪಿತೃಗಳಿಗೆ |
| ಅಭಿವಾನ್ಯಾಯೈ ದುಗ್ಧೇ | ಕರುವು ಸತ್ತು ಹೋಗಿರುವ ಹಸುವಿನ ಹಾಲಿನಲ್ಲಿ |

---

ಈ ಮಹಾಪಿತೃಯಜ್ಞದಲ್ಲಿ ಪಿತೃಮಂತನಾದ ಸೋಮನಿಗೆ ಷಟ್ಕಪಾಲ ಪುರೋಡಾಶ, ಬರ್ಹಿಷತ್ತುಗಳಾದ ಪಿತೃಗಳಿಗೆ ಧಾನಗಳು [ಹುರಿದ ಹಿಟ್ಟು], ಅಗ್ನಿಷ್ವಾತ್ತ

ಮಂಥಮೇತತ್ತೇ ತತ ಯೇ ಚ ತ್ವಾಮನ್ವೇತತ್ತೇ ಪಿತಾಮಹ* ಪ್ರಪಿತಾಮಹ* ಯೇ ಚ ತ್ವಾಮನ್ವತ್ರ ಪಿತರೋ ಯಥಾಭಾಗಂ

---

ಮಂಥಮ್ । ಏತತ್ । ತೇ । ತತ । ಯೇ । ಚ । ತ್ವಾಮ್ । ಅನ್ವಿತಿ । ಏತತ್ । ತೇ। ಪಿತಾಮಹ । ಪ್ರಪಿತಾಮಹೇತಿ ಪ್ರ-ಪಿತಾಮಹ । ಯೇ । ಚ । ತ್ವಾಮ್ । ಅನ್ವಿತಿ । ಅತ್ರ । ಪಿತರಃ । ಯಥಾಭಾಗಮಿತಿ ಯಥಾ-ಭಾಗಮ್ ।

---

ಮಂಥಮ್ [ನಿರ್ವಪತಿ] ಹಾಕಿ ಮಂಥನ ಮಾಡಿದ ಯವದ ಅಥವಾ ಅಕ್ಕಿಯ ಹಿಟ್ಟನ್ನು ಕೊಡಬೇಕು.

---

| ಮಂತ್ರ | ವಿನಿಯೋಗ |
|---|---|
| ಏತತ್ತೇ... ಪ್ರಪಿತಾಮಹ...ತ್ವಾಮನು । | ಪಿಂಡಪ್ರದಾನಮಂತ್ರವಿದು. |
| ಅತ್ರ....ಮಂದಧ್ವಮ್ । | ಪಿತೃಪ್ರಾರ್ಥನೆಗಾಗಿ |

---

✣ ತತ = ತಂದೆಯೇ! ಏತತ್ = ಈ ಪಿಂಡರೂಪಾನ್ನವು; ತೇ = ನಿನಗೆ ಕೊಡಲ್ಪಟ್ಟಿದೆ; ಚ = ಮತ್ತು; ಯೇ = ಯಾರು; ತ್ವಾಮ್ ಅನು = ನಿನ್ನನ್ನು ಅನುಸರಿಸುತ್ತಾರೆಯೋ; [ಅವರಿಗೂ ಕೊಡಲ್ಪಟ್ಟಿದೆ]; ✣ ಪಿತಾಮಹ = ಅಜ್ಜನೇ! ತೇ ಏತತ್ = ನಿನಗೆ ಈ ಪಿಂಡರೂಪಾನ್ನವು [ಕೊಡಲ್ಪಟ್ಟಿದೆ.] ಯೇ ಚ ತ್ವಾಮ್ ಅನು = ಯಾರು ನಿನ್ನ ಅನುವರ್ತಿಗಳೋ ಅವರಿಗೂ [ಕೊಡಲ್ಪಟ್ಟಿದೆ] ✣ ಪ್ರಪಿತಾಮಹ = ಮುತ್ತಜ್ಜನೇ! ತೇ ಏತತ್ = ನಿನಗೆ ಈ ಪಿಂಡವು ಕೊಡಲ್ಪಟ್ಟಿದೆ; ಯೇ ಚ ತ್ವಾಮ್ ಅನು = ಯಾರು ನಿನ್ನನ್ನು ಅನುಸರಿಸಿ ಇರುವರೋ ಅವರಿಗೂ ಕೊಡಲ್ಪಟ್ಟಿದೆ. ✣ ಪಿತರಃ = ಪಿತೃದೇವತೆಗಳೇ! ಅತ್ರ = ನಿಮಗೆ ಕೊಡಲ್ಪಟ್ಟ ಪಿಂಡಗಳಲ್ಲಿ; ಯಥಾಭಾಗಮ್ = ನಿಮ್ಮ ನಿಮ್ಮ ಭಾಗಗಳನ್ನನುಸರಿಸಿ; ಮಂದಧ್ವಮ್ = ಸಂತುಷ್ಟರಾಗಿರಿ.

---

ಪಿತೃಗಳಿಗೆ ಮಂಥ.* ಈ ಮೂರು ಪಿತೃಯಜ್ಞದ ಹವಿಸ್ಸುಗಳು.

ಓ! ತಂದೆಯೇ! ಈ ಪಿಂಡವು ನಿನಗೂ ನಿನ್ನ ಅನುವರ್ತಿಗಳಿಗೂ ಕೊಡಲ್ಪಟ್ಟಿದೆ.

---

* ಮಂಥ=ಅಭಿವಾನ್ಯೆಯ [ಕರು ಸತ್ತುಹೋಗಿರುವ ಹಸು] ಹಾಲಿನಲ್ಲಿ ಕಲಸಿರುವ ಯವಪಿಷ್ಟ.

**ಮಂದದ್ಧ್ವಗ್ಂ ಸುಸಂದೃಶಂ ತ್ವಾ ವಯಂ ಮಘವನ್ಮಂದಿಷೀಮಹಿ । ಪ್ರ ನೂನಂ ಪೂರ್ಣವಂಧುರಃ ಸ್ತುತೋ ಯಾಸಿ ವಶಾಗ್ಂ ಅನು । ಯೋಜಾ ನ್ವಿಂದ್ರ ತೇ ಹರೀ [೧] ॥**

---

ಮಂದದ್ಧ್ವಮ್ । ಸುಸಂದೃಶಮಿತಿ ಸು-ಸಂದೃಶಮ್ । ತ್ವಾ । ವಯಮ್ । ಮಘವನ್ನಿತಿ ಮಘ-ವನ್ । ಮಂದಿಷೀಮಹಿ ॥ ಪ್ರೇತಿ । ನೂನಮ್ । ಪೂರ್ಣವಂಧುರ ಇತಿ ಪೂರ್ಣ-ವಂಧುರಃ । ಸ್ತುತಃ । ಯಾಸಿ । ವಶಾನ್ । ಅನು ॥ ಯೋಜಾ । ನು । ಇಂದ್ರ । ತೇ । ಹರೀ ಇತಿ ॥

---

| ಮಂತ್ರ | ವಿನಿಯೋಗ |
|---|---|
| ಸುಸಂದೃಶಂ... ಹರೀ ॥ | ಆಹವನೀಯಾಗ್ನಿಯ ಉಪಸ್ಥಾನ ಮಾಡಲು |

---

✣ **ಮಘವನ್** = ಹೇ! ಇಂದ್ರದೇವನೇ ! **ಸುಸಂದೃಶಃ** = ನಮ್ಮನ್ನು ಅನುಗ್ರಹದೃಷ್ಟಿಯಿಂದ ನೋಡುವ; **ತ್ವಾ** = ನಿನ್ನನ್ನು; **ವಯಮ್** = ನಾವು; **ಮಂದಿಷೀಮಹಿ** = [ಹವಿಸ್ಸುಗಳಿಂದ] ತೃಪ್ತಿ ಪಡಿಸುತ್ತೇವೆ. [ನೀನು] **ಸ್ತುತಃ** = [ನಮ್ಮಿಂದ ಸ್ತುತಿಸಲ್ಪಟ್ಟವನಾಗಿ] **ಪೂರ್ಣವಂಧುರಃ** = ರಥದ ಹಿಂಭಾಗದಲ್ಲಿ ಆನಂದಪೂರ್ಣನಾಗಿ ಕುಳಿತು; **ವಶಾನ್ ಅನು** = ಇಷ್ಟವಾದ ಪ್ರದೇಶಗಳನ್ನು; **ನೂನಮ್** = ನಿಶ್ಚವಾಗಿಯೂ; **ಪ್ರ ಯಾಸಿ** = ಪ್ರಯಾಣ ಮಾಡುವೆ. **ಇಂದ್ರ** = ಇಂದ್ರನೇ! **ತೇ ಹರೀ** = ನಿನ್ನ ಹರಿನಾಮಕಗಳಾದ ಕುದುರೆಗಳು; **ಯೋಜಾ ನು** = [ರಥದಲ್ಲಿ] ಯೋಜಿಸಲ್ಪಟ್ಟಿವೆಯಷ್ಟೆ.

---

ಎಲೈ! ಅಜ್ಜನೇ ! ಈ ಪಿಂಡವು ನಿನಗೂ, ನಿನ್ನ ಅನುವರ್ತಿಗಳಿಗೂ ಕೊಡಲ್ಪಟ್ಟಿದೆ.

ಓ! ಮುತ್ತಜ್ಜನೇ ! ಈ ಪಿಂಡವು ನಿನಗೂ ನಿನ್ನ ಅನುವರ್ತಿಗಳಿಗೂ ಕೊಡಲ್ಪಟ್ಟಿದೆ. ನಿಮಗೆ ಕೊಟ್ಟಿರುವ ಈ ಪಿಂಡಗಳಲ್ಲಿ ನಿಮ್ಮ ನಿಮ್ಮ ಭಾಗಗಳನ್ನು ಸ್ವೀಕರಿಸಿ ತೃಪ್ತರಾಗಿರಿ. [ಈ ಮಂತ್ರವನ್ನು ಹೇಳಿದ ಬಳಿಕ ಉತ್ತರ ದಿಕ್ಕಿಗೆ ಹೋಗಿ ಆಹವನೀಯೋಪಸ್ಥಾನ ಮಾಡಬೇಕು.]

**ಅಕ್ಷನ್ನಮೀಮದಂತ ಹ್ಯವ ಪ್ರಿಯಾ ಅಧೂಷತ ।**
**ಅಸ್ತೋಷತ ಸ್ವಭಾನವೋ ವಿಪ್ರಾ ನವಿಷ್ಠಯಾ ಮತೀ ।**
**ಯೋಜಾ ನ್ವಿಂದ್ರ ತೇ ಹರೀ ॥**

---

**ಅಕ್ಷನ್ನ್** । ಅಮೀಮದಂತ । ಹಿ । ಅವೇತಿ । ಪ್ರಿಯಾಃ । ಅಧೂಷತ ॥ ಅಸ್ತೋಷತ । ಸ್ವಭಾನವ ಇತಿ ಸ್ವ-ಭಾನವಃ । ವಿಪ್ರಾಃ । ನವಿಷ್ಠಯಾ । ಮತೀ ॥ ಯೋಜಾ । ನು । ಇಂದ್ರ । ತೇ । ಹರೀ ಇತಿ ॥

---

| ಮಂತ್ರ | ವಿನಿಯೋಗ |
|---|---|
| **ಅಕ್ಷನ್ನ್.... ಹರೀ ।** | ಗಾರ್ಹಪತ್ಯೋಪಸ್ಥಾನ ಮಾಡಲು |

---

✣ [ಪಿತೃದೇವತೆಗಳು] **ಅಕ್ಷನ್ನ್** = [ಅನ್ನವನ್ನು] ಭುಜಿಸಿದರು; **ಅಮೀಮದಂತ** = ತೃಪ್ತಿ ಹೊಂದಿದರಷ್ಟೆ. [ಅದರಿಂದ] **ಪ್ರಿಯಾಃ** ತನೂಃ = ಇಷ್ಟವಾದ ಅಂಗಗಳನ್ನು; **ಅವ ಅಧೂಷತ** = [ತುಷ್ಟಿಸೂಚಕವಾಗಿ] ಅಲ್ಲಾಡಿಸಿದರು; **ಸ್ವಭಾನವಃ** = ಸ್ವಪ್ರಕಾಶಯುಕ್ತರಾದ ಪಿತೃಗಳು; **ವಿಪ್ರಾಃ** = ಭೋಜನತುಷ್ಟರಾದ ಬ್ರಾಹ್ಮಣರಂತೆ/ [ಮೇಧಾವಿಗಳಾದ ಬ್ರಾಹ್ಮಣರಂತೆ] **ನವಿಷ್ಠಯಾ ಮತೀ** = ಅತಿಶಯವಾಗಿ ಹೊಸದಾಗಿರುವ ಬುದ್ಧಿಯಿಂದ; **ಅಸ್ತೋಷತ** = ಹೊಗಳಿದರು. **ಇಂದ್ರ ತೇ ಹರೀ** = ಇಂದ್ರನೇ! ನಿನ್ನ ಹರಿಗಳೆಂಬ ಕುದುರೆಗಳು; **ಯೋಜಾ ನು** = ರಥದಲ್ಲಿ ಹೂಡಲ್ಪಟ್ಟಿವೆಯಷ್ಟೆ.

---

ಇಂದ್ರದೇವನೇ! ನೀನು ನಮ್ಮನ್ನು ದಯಾಪೂರ್ಣದೃಷ್ಟಿಯಿಂದ ನೋಡು. ನಿನ್ನನ್ನು ನಾವು ಹವಿಸ್ಸುಗಳಿಂದ ತೃಪ್ತಿಪಡಿಸುತ್ತೇವೆ. ನೀನು ಆನಂದಪೂರ್ಣವಾಗಿ ರಥದ ಹಿಂಭಾಗದಲ್ಲಿ ಕುಳಿತು ನಮ್ಮಿಂದ [ನಿನ್ನ ವಂದಿಮಾಗಧರಿಂದ] ಸ್ತುತಿಸಲ್ಪಡುತ್ತಾ ನಿನಗೆ ಇಷ್ಟವಾದ ಕಡೆಗೆ ಪ್ರಯಾಣ ಮಾಡುವೆಯಷ್ಟೆ. ನಿನ್ನ 'ಹರಿ' ಎಂಬ ಹೆಸರಿನ ಕುದುರೆಗಳನ್ನು ರಥದಲ್ಲಿ ಹೂಡಲಾಗಿದೆಯಷ್ಟೆ.

**ಅಕ್ಷನ್ನಿತರೋಽಮೀಮದಂತ ಪಿತರೋಽತೀತೃಪಂತ ಪಿತರೋಽಮೀಮೃಜಂತ ಪಿತರಃ । ಪರೇತ ಪಿತರಸ್ಸೋಮ್ಯಾ ಗಂಭೀರೈಃ ಪಥಿಭಿಃ ಪೂರ್ವ್ಯೈಃ॥**

---

**ಅಕ್ಷನ್ । ಪಿತರಃ । ಅಮೀಮದಂತ । ಪಿತರಃ । ಅತೀತೃಪಂತ । ಪಿತರಃ । ಅಮೀಮೃಜಂತ। ಪಿತರಃ । ಪರೇತಿ । ಇತ । ಪಿತರಃ । ಸೋಮ್ಯಾಃ । ಗಂಭೀರೈಃ । ಪಥಿಭಿರಿತಿ ಪಥಿ-ಭಿಃ । ಪೂರ್ವ್ಯೈಃ ॥**

---

| ಮಂತ್ರ | ವಿನಿಯೋಗ |
|---|---|
| ಅಕ್ಷನ್ನಿತರಃ.....ಪಿತರಃ । | ದಕ್ಷಿಣಾಗ್ನಿಯ ಉಪಸ್ಥಾನವನ್ನು ಮಾಡಲು |
| ಪರೇತ....ಮದಂತಿ । | ಪಿಂಡರೂಪಿಗಳ ಪಿತೃಗಳ ಉದ್ವಾಸನೆಯಲ್ಲಿ |

---

✢**ಪಿತರಃ** = ಪಿತೃದೇವತೆಗಳು; **ಅಕ್ಷನ್** = [ಅನ್ನವನ್ನು] ಭುಜಿಸಿದರು. **ಪಿತರಃ** = ಪಿತೃಗಳು; **ಅಮೀಮದಂತ** = ಸಂತೋಷಿಸಿದರು. **ಪಿತರಃ** = ಪಿತೃದೇವತೆಗಳು; **ಅತೀತೃಪಂತ** = [ನಮ್ಮನ್ನೂ] ತೃಪ್ತಿಪಡಿಸಿದರು; **ಪಿತರಃ** = ಪಿತೃಗಳು; **ಅಮೀಮೃಜಂತ** = ಅತಿಶಯವಾಗಿ ಶುದ್ಧಿಗೊಳಿಸಿದರು; ✢ **ಪಿತರಃ** = ಪಿತೃದೇವತೆಗಳೇ! **ಸೋಮ್ಯಾಃ** = ಶಾಂತವಾದ ಮನಸ್ಸುಳ್ಳ/ಸೋಮಾರ್ಹರಾದ [ನೀವು]; **ಗಂಭೀರೈಃ** = ಅನ್ನಾದಿಸಮೃದ್ಧವಾಗಿರುವ; **ಪೂರ್ವ್ಯೈಃ** = ಹಿಂದಿನವರು ಮಾಡಿರುವ; **ಪಥಿಭಿಃ** = ಮಾರ್ಗಗಳಿಂದ; **ಪರೇತ** = ನಿಮ್ಮ ಸ್ಥಾನಕ್ಕೆ ಹಿಂದಿರುಗಿರಿ.

---

[ಹಿಂದಿನ ಎರಡು ಋಕ್‌ಗಳೂ ಇಂದ್ರದೇವತಾಕವಾಗಿವೆ. ಅಗ್ನ್ಯುಪಸ್ಥಾನದಲ್ಲಿ ವಿನಿಯುಕ್ತವಾಗಿವೆ. ಆದುದರಿಂದ ಇಲ್ಲಿ ಇಂದ್ರಶಬ್ದವು ಪರಮೈಶ್ವರ್ಯಯುಕ್ತನಾದ ಇಂದ್ರನೆಂಬ ಎಂದರೆ ಅಗ್ನಿಯೆಂಬ ಅರ್ಥವನ್ನು ಕೊಡುತ್ತದೆ.]

ಪಿತೃಗಳು ನಾವು ಕೊಟ್ಟ ಅನ್ನವನ್ನು ಸ್ವೀಕರಿಸಿ ತೃಪ್ತರಾದರು. ಭೋಜನದಿಂದ ತೃಪ್ತರಾದ ಮೇಧಾವಿಗಳಾದ ಬ್ರಾಹ್ಮಣರಂತೆ ಪ್ರಶಂಸಾಸೂಚಕವಾಗಿ ತಲೆಯನ್ನು ಅಲ್ಲಾಡಿಸಿದರು. ಸ್ವಪ್ರಕಾಶಯುಕ್ತರಾದ ಪಿತೃದೇವತೆಗಳು ನವನವೀನವಾದ ಬುದ್ಧಿಯಿಂದ ನಮ್ಮನ್ನು ಹೊಗಳಿದರು. ಇಂದ್ರನೇ! ಹೀಗೆ ಪಿತೃಗಳನ್ನು ತೃಪ್ತಿಪಡಿಸಿ ಈಗ ನಿನ್ನ ಉಪಸ್ಥಾನ ಮಾಡುತ್ತೇನೆ. ರಥದಲ್ಲಿ 'ಹರಿ' ಎಂಬ ಕುದುರೆಗಳನ್ನು ಹೂಡಲಾಗಿದೆಯಷ್ಟೆ.

**ಅಥಾ ಪಿತೄನ್ತ್ಸುವಿದತ್ರಾಗ್ಂ ಅಪೀತ ಯಮೇನ ಯೇ ಸಧಮಾದಂ ಮದಂತಿ ॥ ಮನೋ ನ್ವಾ ಹುವಾಮಹೇ ನಾರಾಶಗ್ಂಸೇನ ಸ್ತೋಮೇನ ಪಿತೃಣಾಂ ಚ ಮನ್ಮಭಿಃ ॥**

---

ಅಥ । ಪಿತೄನ್ । ಸುವಿದತ್ರಾನಿತಿ ಸು-ವಿದತ್ರಾನ್ । ಅಪೀತಿ । ಇತ । ಯಮೇನ । ಯೇ । ಸಧಮಾದಮಿತಿ ಸಧ-ಮಾದಮ್ । ಮದಂತಿ ॥ ಮನಃ । ನು । ಏತಿ । ಹುವಾಮಹೇ । ನಾರಾಶಗ್ಂಸೇನ । ಸ್ತೋಮೇನ । ಪಿತೃಣಾಮ್ । ಚ । ಮನ್ಮಭಿರಿತಿ ಮನ್ಮ-ಭಿಃ ।

---

| ಮಂತ್ರ | ವಿನಿಯೋಗ |
|---|---|
| ಮನೋ...ಮನ್ಮಭಿಃ ॥ | ಪಿತೃಗಳ ಉಪಸ್ಥಾನದ ಮೊದಲನೆಯ ಮಂತ್ರ. |

---

**ಅಥ** = ಆನಂತರ; **ಯೇ** = ಯಾವ ಪಿತೃಗಳು; **ಯಮೇನ** = ಯಮನೊಡನೆ; **ಸಧಮಾದಂ ಮದಂತಿ** = [ಇರುವವರಾಗಿ] ಅವನೊಡನೆ ಇರುವುದರಿಂದ ಉಂಟಾದ ಸಂತೋಷವನ್ನು ಹೊಂದಿ ಸಂತೋಷಿಸುತ್ತಾರೆಯೋ ಅಂತಹ; **ಸುವಿದತ್ರಾನ್** = ಅಲ್ಲಿಯ ವೃತ್ತಾಂತವನ್ನು ತಿಳಿದಿರುವ; **ಪಿತೄನ್ ಅಪೀತ** = ಪಿತೃಗಳ ಜೊತೆಗೂಡಿರಿ. ✢ **ನಾರಾಶಗ್ಂಸೇನ** = ಮನುಷ್ಯರ ಪ್ರಶಂಸೆಗೆ ಯೋಗ್ಯವಾದ; **ಸ್ತೋಮೇನ** = ವಾಕ್ಯಗಳಿಂದ; **ಪಿತೃಣಾಮ್ ಚ ಮನ್ಮಭಿಃ** = ಪಿತೃಗಳಿಗೂ ಅತ್ಯಂತ ಪ್ರಿಯವಾದ/ ಸ್ವಧಾದಿಪದಯುಕ್ತವಾದ; **ಸ್ತೋಮೇನ** = ವಾಚನಿಕವಾದ ಮತ್ತು ಮಾನಸಿಕವಾದ ಸ್ತೋತ್ರವಾಕ್ಯಗಳಿಂದ; **ಮನಃ** = ಮನಸ್ಸನ್ನು; **ನು** = ಬೇಗನೆ; **ಆ ಹುವಾಮಹೇ**= ಆಹ್ವಾನಿಸುತ್ತೇವೆ.

---

ಅನ್ವಾಹಾರ್ಯಾಗ್ನಿಯೇ! ಪಿತೃದೇವತೆಗಳು ನಾವು ಕೊಟ್ಟ ಅನ್ನ [ಪಿಂಡ]ವನ್ನು ಸ್ವೀಕರಿಸಿದರು. ತೃಪ್ತರಾದರು. ಸಂತೋಷಿಸಿದರು. ನಮ್ಮನ್ನೂ ತೃಪ್ತಿಗೊಳಿಸಿದರು. ನಮ್ಮನ್ನು ಅತಿಶುದ್ಧರನ್ನಾಗಿ ಮಾಡಿದ್ದಾರೆ. ಹೀಗೆ ಪಿತೃಗಳನ್ನು ತೃಪ್ತಿಪಡಿಸಿ, ಈಗ ಉಪಸ್ಥಾನದಿಂದ ನಿನ್ನನ್ನು ಸೇವಿಸುತ್ತಿದ್ದೇವೆ.

ಎಲೈ! ಸೌಮ್ಯವಾದ/ಸೋಮಾರ್ಹವಾದ ಮನಸ್ಸುಳ್ಳ ಪಿತೃಗಳೇ! ನೀವು ಅನ್ನಾದಾನಾದಿಸಮೃದ್ಧವಾದ, ಹಿಂದಿನವರು ಮಾಡಿದ ಮಾರ್ಗಗಳಿಂದ ನಿಮ್ಮ ಲೋಕಕ್ಕೆ ಹಿಂದಿರುಗಿರಿ. ಬಳಿಕ ಯಮಲೋಕದಲ್ಲಿ ಯಮನೊಡನೆ ಸಂತೋಷದಿಂದಿರುವ ಶೋಭನವಾದ ಬುದ್ಧಿಯುಳ್ಳ ಪಿತೃಗಳೊಡನೆ ಸೇರಿರಿ.

[ಪಿತೃದೇವತೆಗಳು ಸ್ವಲೋಕಕ್ಕೆ ತೆರಳಿದರೆಂದು ಭಾವಿಸಿ ಪ್ರಾರ್ಥನೆ ಮಾಡಲಾಗಿದೆ.]

ಆ[(ಗ)... ನ ಏತು ಮನಃ] ನ ಏತು ಮನಃ ಪುನಃ ಕ್ರತ್ವೇ ದಕ್ಷಾಯ ಜೀವಸೇ । ಜ್ಯೋಕ್ಚ ಸೂರ್ಯಂ ದೃಶೇ ॥ ಪುನರ್ನಃ ಪಿತರೋ ಮನೋ ದದಾತು ದೈವ್ಯೋ ಜನಃ । ಜೀವಂ ವ್ರಾತಗ್ಂ ಸಚೇಮಹಿ ॥

---

ಏತಿ । ನಃ । ಏತು । ಮನಃ । ಪುನಃ । ಕ್ರತ್ವೇ । ದಕ್ಷಾಯ । ಜೀವಸೇ ॥ ಜ್ಯೋಕ್ । ಚ । ಸೂರ್ಯಮ್ । ದೃಶೇ ॥ ಪುನಃ । ನಃ । ಪಿತರಃ । ಮನಃ । ದದಾತು । ದೈವ್ಯಃ । ಜನಃ ॥ ಜೀವಮ್ । ವ್ರಾತಮ್ । ಸಚೇಮಹಿ ॥

---

| ಮಂತ್ರ | ವಿನಿಯೋಗ |
|---|---|
| ಆ ನಃ ..... ದೃಶೇ ॥ | ಉಪಸ್ಥಾನದ ಎರಡನೆಯ ಮಂತ್ರ. |
| ಪುನರ್ನಃ.... ಸಚೇಮಹಿ ॥ | ಉಪಸ್ಥಾನದ ಮೂರನೆಯ ಮಂತ್ರ. |

---

✢ [ಪಿತೃಗಳ ಅನುಗ್ರಹದ] **ಕ್ರತ್ವೇ** =ಯಜ್ಞಾನುಷ್ಠಾನಕ್ಕಾಗಿಯೂ; **ದಕ್ಷಾಯ** = ಸಾಮರ್ಥ್ಯಕ್ಕಾಗಿಯೂ; **ಜೀವಸೇ** = ದೀರ್ಘಾಯುಸ್ಸಿಗಾಗಿಯೂ; **ಚ** = ಮತ್ತು; **ಜ್ಯೋಕ್** = ಚಿರಕಾಲ; **ಸೂರ್ಯಂ ದೃಶೇ** = ಸೂರ್ಯನನ್ನು ನೋಡುವುದಕ್ಕಾಗಿಯೂ/ಮೋಕ್ಷಕ್ಕಾಗಿಯೂ; [ಯೋಗ್ಯವಾದ] **ಮನಃ** = ಮನಸ್ಸನ್ನು [ಸೇರಿ] **ನಃ** = ನಮ್ಮನ್ನು; **ಪುನಃ** = ಮತ್ತೆ ಮತ್ತೆ; **ಆ ಏತು** = ಕುರಿತು ಬರಲಿ. ✢ **ಪಿತರಃ** =* ಪಿತೃದೇವತೆಗಳೇ! [ನಿಮ್ಮ ಅನುಗ್ರಹದಿಂದ]; **ದೈವ್ಯಃ ಜನಃ** = ದೇವಲೋಕದ ಪುರುಷನು; **ನಃ** = ನಮಗೆ, **ಮನಃ**= ಒಳ್ಳೆಯ ಮನಸ್ಸನ್ನು; **ಪುನಃ ದದಾತು** = ಮತ್ತೆ ಮತ್ತೆ ಕೊಡಲಿ. [ನಾವು ಕೂಡ] **ವ್ರಾತಮ್** = ಶತಸಂವತ್ಸರಸಮೂಹರೂಪವಾದ; **ಜೀವಮ್** = ಜೀವನವನ್ನು; **ಸಚೇಮಹಿ** = ಸೇವಿಸುವಂತಾಗಲಿ.

---

ಎಲೈ! ಪಿತೃಗಳೇ! ಮನುಷ್ಯರಿಗೆ ಪ್ರಿಯವಾದ ಸ್ತೋತ್ರವಾಕ್ಯಗಳಿಂದಲೂ, ಪಿತೃಗಳಿಗೆ ಪ್ರಿಯವಾದ ಸ್ವಧಾದಿಪದಯುಕ್ತವಾದ ವಾಕ್ಯಗಳಿಂದಲೂ, ನಿಮ್ಮನ್ನು ಪಿತೃಯಜ್ಞಪರವಾದ ಮನಸ್ಸನ್ನು ಕೊಡುವಂತೆ ಪ್ರಾರ್ಥಿಸುತ್ತೇವೆ. ಪಿತೃಯಜ್ಞಾನುಷ್ಠಾನಪರವಾದ ಮನಸ್ಸನ್ನು ಆಹ್ವಾನಿಸುತ್ತೇವೆ.

---

* ಸಂಬೋಧನಾರ್ಥದಲ್ಲಿ ಶುದ್ಧಪ್ರಥಮಾ.

**ಯದಂತರಿಕ್ಷಂ ಪೃಥಿವೀಮುತ ದ್ಯಾಂ ಯನ್ಮಾತರಂ ಪಿತರಂ ವಾ ಜಿಹಿಗ್ಂಸಿಮ । ಅಗ್ನಿರ್ಮಾ ತಸ್ಮಾದೇನಸೋ ಗಾರ್ಹ-ಪತ್ಯಃ ಪ್ರ ಮುಂಚತು ದುರಿತಾ ಯಾನಿ**

---

ಯತ್ । ಅಂತರಿಕ್ಷಮ್ । ಪೃಥಿವೀಮ್ । ಉತ । ದ್ಯಾಮ್ । ಯತ್ । ಮಾತರಮ್। ಪಿತರಮ್ । ವಾ । ಜಿಹಿಗ್ಂಸಿಮ ॥ ಅಗ್ನಿಃ । ಮಾ । ತಸ್ಮಾತ್ । ಏನಸಃ । ಗಾರ್ಹಪತ್ಯ ಇತಿ ಗಾರ್ಹ-ಪತ್ಯಃ । ಪ್ರೇತಿ । ಮುಂಚತು । ದುರಿತೇತಿ ದುಃ-ಇತಾ । ಯಾನಿ ।

---

| ಮಂತ್ರ | ವಿನಿಯೋಗ |
|---|---|
| ಯದಂತರಿಕ್ಷಮ್...ಅನೇನಸಮ್ ॥ | ಗಾರ್ಹಪತ್ಯೋಪಸ್ಥಾನಕ್ಕಾಗಿ |

---

∻ [ನಾವು] **ಅಂತರಿಕ್ಷಮ್** = ಅಂತರಿಕ್ಷಲೋಕವನ್ನೂ; **ಪೃಥಿವೀಮ್** = ಭೂಲೋಕವನ್ನೂ; **ಉತ** = ಮತ್ತು; **ದ್ಯಾಮ್** = ಸ್ವರ್ಗಲೋಕವನ್ನೂ; **ಜಿಹಿಗ್ಂಸಿಮ** = [ನಮ್ಮ ನಿಷಿದ್ಧಕರ್ಮಾನುಷ್ಠಾನದಿಂದ] ಹಿಂಸಿಸಲು ಇಚ್ಛಿಸಿದೆವೋ/ಹಿಂಸಿಸಿದೆವೋ; ಇತಿ **ಯತ್** = ಎಂಬುದು ಯಾವುದುಂಟೋ; **ಮಾತರಮ್ ಪಿತರಮ್** ವಾ = ತಾಯಿಯನ್ನಾಗಲೀ, ತಂದೆಯನ್ನಾಗಲೀ; **ಜಿಹಿಗ್ಂಸಿಮ** = ಹಿಂಸಿಸಿದೆವು ಅಥವಾ ಹಿಂಸಿಸಲು ಇಚ್ಛಿಸಿದೆವು; ಇತಿ **ಯತ್** = ಎಂಬುದು ಯಾವುದುಂಟೋ; **ತಸ್ಮಾತ್ ಏನಸಃ** = ಆ ಎಲ್ಲಾ ಪಾಪಗಳಿಂದಲೂ; **ಮಾ** = ನನ್ನನ್ನು/ನಮ್ಮನ್ನು; **ಅಗ್ನಿಃ ಗಾರ್ಹಪತ್ಯಃ** = ಗಾರ್ಹಪತ್ಯಾಗ್ನಿಯು; **ಪ್ರ ಮುಂಚತು** = ಬಿಡಿಸಲಿ; **ದುರಿತಾ ಯಾನಿ** = [ಇನ್ನಿತರ] ಯಾವ ಪಾಪಗಳನ್ನು;

---

ಪಿತೃಗಳ ಅನುಗ್ರಹದಿಂದ ಪಿತೃಯಜ್ಞಾದಿಗಳ ಅನುಷ್ಠಾನಕ್ಕಾಗಿಯೂ, ಸಾಮರ್ಥ್ಯಕ್ಕಾಗಿಯೂ, ಚಿರಕಾಲ ಬದುಕುವುದಕ್ಕಾಗಿಯೂ, ಸೂರ್ಯನನ್ನು ಬಹುಕಾಲ ನೋಡುವುದಕ್ಕಾಗಿಯೂ/ಮೋಕ್ಷವನ್ನು ಪಡೆಯುವುದಕ್ಕಾಗಿಯೂ ಅನುಷ್ಠಾನಪರವಾದ ಮನಸ್ಸು ಮತ್ತೆ ಮತ್ತೆ ಬರಲಿ.

ಎಲೈ ಪಿತೃದೇವತೆಗಳೇ! ನಿಮ್ಮ ಅನುಗ್ರಹದಿಂದ ದೇವಲೋಕಜನವೂ [ದೇವತೆಗಳೂ] ನಮಗೆ ಯಜ್ಞಾದಿಕರ್ಮಾನುಷ್ಠಾನಪರವಾದ ಮನಸ್ಸನ್ನು ಕೊಡುವಂತಾಗಲಿ. ನಿಮ್ಮ ಅನುಗ್ರಹದಿಂದ ನಾವೂ ನೂರು ಸಂವತ್ಸರಗಳ ಕಾಲ ಜೀವಿಸುವಂತಾಗಲಿ.

# ಚಕೃಮ ಕರೋತು ಮಾಮನೇನಸಮ್ ॥ ೫-9 ॥

## [ಹರೀ ಮನ್ಮಭಿರಾ ಚತುಶ್ಚತ್ವಾರಿಗ್ಂಶಚ್ಚ]

---

ಚಕೃಮ । ಕರೋತು । ಮಾಮ್ । ಅನೇನಸಮ್ ॥ ೫ ॥

---

**ಚಕೃಮ** = ನಾವು ಮಾಡಿರುವೆವೋ; [ಅದರಿಂದಲೂ] **ಮಾಮ್** = ನನ್ನನ್ನು/ನಮ್ಮನ್ನು; **ಅನೇನಸಮ್ ಕರೋತು** = ಸರ್ವಪಾಪರಹಿತರನ್ನಾಗಿ ಮಾಡಲಿ.

---

ಮಾನವನು ಮಾನಸಿಕವಾಗಿ ವಾಚನಿಕವಾಗಿ ಅಥವಾ ಕಾಯಿಕವಾಗಿ ಪಾಪಕರ್ಮಗಳನ್ನು ಮಾಡಬಹುದು ಅಥವಾ ಪಾಪ ಮಾಡಲು ಇಚ್ಛಿಸಬಹುದು. ಆದುದರಿಂದ ಓ! ಗಾರ್ಹಪತ್ಯಾಗ್ನಿಯೇ ! ಪೃಥಿವ್ಯಾದಿಲೋಕಗಳ ವಿಷಯದಲ್ಲಿಯೂ, ತಾಯಿತಂದೆಯರ ವಿಷಯದಲ್ಲಿಯೂ, ನಾನು ಮತ್ತು ನಮ್ಮವರು ಮಾಡಿರಬಹುದಾದ ಎಲ್ಲ ಪಾಪಗಳಿಂದಲೂ ಬಿಡಿಸು ಎಂದು ಪ್ರಾರ್ಥಿಸುತ್ತೇವೆ. ಆ ಗಾರ್ಹಪತ್ಯಾಗ್ನಿಯು ನಮ್ಮನ್ನು ಸರ್ವವಿಧಪಾಪರಹಿತರನ್ನಾಗಿ ಮಾಡಲಿ.

### ವಿನಿಯೋಗ ಸಂಗ್ರಹ

[1-3]ಏತತ್ತೇ ಇತಿ ದತ್ತೇ ತ್ರೀನ್ ವೇದ್ಯಾಃ ಕೋಣೇಷು ಪಿಂಡಕಾನ್ ।
ಬ್ರೂಯುರತ್ರೇ[4]ತ್ಯುಪಸ್ಥಾನಂ ಪೂರ್ವಸ್ಯಾಗ್ನೇಃ [5]ಸುಸಂದೃಶಮ್ ॥
[6]ಅಕ್ಷನ್ನಿತಿ ಪ್ರತೀಚೋಽಗ್ನೇಸ್ತಥಾಕ್ಷನ್[7] ದಕ್ಷಿಣಾನಲಮ್ ।
[8]ಪರೇತೇತಿ ಪ್ರವಾಹ್ಯಾಥ [9-11]ಮನ ಆದ್ಯೈರುಪಸ್ಥಿತಿಃ ।
[12]ಯತ್ಪೃಶ್ವಿಮಾಗ್ನ್ಯುಪಸ್ಥಾನಂ ಮಂತ್ರಾ ದ್ವಾದಶ ವರ್ಣಿತಾಃ ॥

**ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ—12**

**ಉಳಿದುದು ಬ್ರಾಹ್ಮಣಭಾಗ.**

## ಅನುವಾಕದ ವಿಶೇಷ ವಿಷಯಗಳು

## ಆ) ಮೀಮಾಂಸಾ

**೧) 'ಧಾನಾ' ದ್ರವ್ಯಕ್ಕೆ ಅವಹನನವಿದೆಯೇ? [ಜೈ.ಸೂ. 10-2.]**

ಮಹಾಪಿತೃಯಜ್ಞದಲ್ಲಿ 'ಪಿತೃಭ್ಯೋ ಬರ್‌ಹಿಷದ್ಭ್ಯೋ ಧಾನಾಃ' ಎಂದು ಹವಿಸ್ಸನ್ನು ಹೇಳಿದೆ. ಧಾನಾ ಎಂದರೆ ಹುರಿದ ಯವಧಾನ್ಯ. ಪ್ರಕೃತಿಯಾದ ದರ್ಶ-ಪೂರ್ಣಮಾಸದಿಂದ ಅತಿದೇಶದಿಂದ ಅವಹನನವೂ ಪ್ರಾಪ್ತವಾಗುತ್ತದೆ. ಅವಹನನ(ಕುಟ್ಟುವಿಕೆ) ವನ್ನು ಮಾಡಿದರೆ ಧಾನಾತ್ವವೇ ನಷ್ಟವಾಗುವುದರಿಂದ ಅವಹನನವಿಲ್ಲ ಎಂಬುದು ಇಲ್ಲಿನ **ಪೂರ್ವಪಕ್ಷ**.

ಇಲ್ಲಿಯ ಸಿದ್ಧಾಂತವು ಹೀಗಿದೆ; 'ಧಾನಾ ಅವಹಂತವ್ಯಾಃ' ಎಂದು ಅತಿದೇಶ ವಾಕ್ಯದಿಂದ ತಿಳಿಯುತ್ತದೆ. ಮೊದಲು ಧಾನಾತ್ವಸಂಪಾದನ, ಅನಂತರ ಅವಹನನ ಎಂಬ ಈ ಕ್ರಮವನ್ನು ಬಾಧ ಮಾಡಿ [ಬಿಟ್ಟು] ಮೊದಲು ಅವಹನನ, ಅನಂತರ ಹುರಿಯುವುದರಿಂದ ಧಾನಾತ್ವಸಂಪಾದನ ಎಂಬುದಾಗಿ ಕ್ರಮಮಾತ್ರ ಬಾಧ. ಆದುದರಿಂದ ಅವಹನನವಿದೆ. ಕ್ರಮ ಬೇರೆ.

ಈ ವಿಷಯದಲ್ಲಿಯೇ ವಾರ್ತಿಕಕಾರರ ಮತ ಹೀಗಿದೆ;

**೨) ಪೇಷಣವು ನೂತನವಾಗಿ ವಿಹಿತವೇ? [ಜೈ.ಸೂ. 10.2.]**

ಪಿತೃಯಜ್ಞದಲ್ಲಿ **'ಪಿತೃಭ್ಯೋಽಗ್ನಿಷ್ವಾತ್ತೇಭ್ಯೋಽಭಿವಾನ್ಯಾಯೈ ದುಗ್ಧೇ ಮಂಥಮ್'** ಎಂಬ ವಾಕ್ಯವಿದೆ. ಕರುವು ಸತ್ತು ಹೋಗಿರುವ ಹಸುವಿನ ಹಾಲಿನಲ್ಲಿ ಹಾಕಿ ಕುಟ್ಟಿದ ಹಿಟ್ಟೇ ಮಂಥ. ಪ್ರಕೃತಿಯಾಗದಲ್ಲಿ ಹೇಳಿರುವ ಕ್ರಮವು ಇಲ್ಲಿ ವ್ಯತ್ಯಾಸವಾಗುತ್ತದೆ. ಪ್ರಕೃತಿಯಲ್ಲಿ ಮೊದಲು ಪೇಷಣ, ಅನಂತರ ಪುರೋಡಾಶಶ್ರಪಣ. ಇಲ್ಲಿ ಶ್ರಪಣದಿಂದ ಧಾನಾಗಳನ್ನು ಮಾಡಿ ನಂತರ ಹಿಟ್ಟಿಗಾಗಿ ಪೇಷಣ. ಹೀಗಾಗಿ ಇದು ನೂತನವಾಗಿ ವಿಹಿತವಾದ ಪೇಷಣ. ಇದು ಇಲ್ಲಿನ **ಪೂರ್ವಪಕ್ಷ**.

ಪೇಷಣ, ಅದರ ಧರ್ಮ ಇವುಗಳೆರಡರ ಬಾಧಕ್ಕಿಂತಲೂ ಕ್ರಮವನ್ನು ಬಾಧಿಸಿ ಪ್ರಾಕೃತಪೇಷಣವನ್ನೇ ಅನುಸರಿಸಬೇಕು. ಆದುದರಿಂದ ಪ್ರಕೃತಿಪ್ರಾಪ್ತವಾದ ದೃಷನ್ಮಂತ್ರಾದಿಗಳು ಇಲ್ಲಿಯೂ ಬರುತ್ತವೆ. ಇದು ಇಲ್ಲಿನ **ಸಿದ್ಧಾಂತ**.

★ ★ ★

## ॥ ಷಷ್ಠೋಽನುವಾಕಃ ॥

**ಪ್ರತಿಪೂರುಷಮೇಕಕಪಾಲಾನ್ನಿರ್ವಪತ್ಯೇಕಮತಿರಿಕ್ತಂ**

**ಯಾವಂತೋ ಗೃಹ್ಯಾಃ ಸ್ಮಸ್ತೇಭ್ಯಃ ಕಮಕರಂ**

---

**ಪ್ರತಿಪೂರುಷಮಿತಿ ಪ್ರತಿ-ಪೂರುಷಮ್ । ಏಕಕಪಾಲಾನಿತ್ಯೇಕ-ಕಪಾಲಾನ್ । ನಿರಿತಿ । ವಪತಿ । ಏಕಮ್ । ಅತಿರಿಕ್ತಮಿತ್ಯತಿ-ರಿಕ್ತಮ್ । ಯಾವಂತಃ । ಗೃಹ್ಯಾಃ । ಸ್ಮಃ । ತೇಭ್ಯಃ । ಕಮ್ । ಅಕರಮ್ ।**

---

ಐದನೆಯ ಅನುವಾಕದಲ್ಲಿ ಪಿತೃಯಜ್ಞವು ಹೇಳಲ್ಪಟ್ಟಿದೆ. ಈ ಆರನೆಯ ಅನುವಾಕದಲ್ಲಿ ಸಾಕಮೇಧಶೇಷವಾದ ತ್ರ್ಯಂಬಕಹೋಮಗಳು ವಿಹಿತವಾಗಿವೆ.

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಪ್ರತಿಪೂರುಷಮ್** | ಮನೆಯಲ್ಲಿ ಎಷ್ಟು ಜನ ಸ್ತ್ರೀ-ಪುರುಷರು ಇದ್ದಾರೆಯೋ ಅಷ್ಟು ಸಂಖ್ಯೆಯ |
| **ಏಕಕಪಾಲಾನ್ ನಿರ್ವಪತಿ** | ಒಂದೇ ಕಪಾಲದಲ್ಲಿ ಸಂಸ್ಕೃತವಾದ ಪುರೋಡಾಶಗಳನ್ನು ಯಾಗ ಮಾಡಬೇಕು. |
| **ಅತಿರಿಕ್ತಮ್ ಏಕಮ್** [ನಿರ್ವಪತಿ] | ಒಂದು ಏಕಕಪಾಲವನ್ನು ಹೆಚ್ಚಾಗಿ ಯಾಗ ಮಾಡಬೇಕು. |

---

| ಮಂತ್ರ | ವಿನಿಯೋಗ |
|---|---|
| **ಯಾವಂತಃ.... ಅಕರಮ್ ।** | ನಿರ್ವಾಪಸಮಯದಲ್ಲಿ ಯಜಮಾನನು ಹೇಳಲು |

---

**'ಪ್ರತಿಪೂರುಷಂ.... ಅತಿರಿಕ್ತಮ್'**

**ತ್ರ್ಯಂಬಕೇಷ್ಟಿಯ ವಿಧಿ.**

---

**ಯಾವಂತಃ ಗೃಹ್ಯಾಃ ಸ್ಮಃ** = ಮನೆಯಲ್ಲಿ ಎಷ್ಟು ಮಂದಿ ಇದ್ದೇವೆಯೋ; **ತೇಭ್ಯಃ ಕಮ್ ಅಕರಮ್** = ಅವರಿಗೆ [ಈ ಹವಿರ್ನಿರ್ವಾಪದಿಂದ] ಸುಖವನ್ನು ಉಂಟು ಮಾಡಿದೆನು/ಸುಖವಾಗಲಿ.

**ಪಶೂನಾಗ್ಂ ಶರ್ಮಾಸಿ ಶರ್ಮ ಯಜಮಾನಸ್ಯ ಶರ್ಮ ಮೇ ಯಚ್ಛೈಕ ಏವ ರುದ್ರೋ ನ ದ್ವಿತೀಯಾಯ ತಸ್ಥೆ**

---

**ಪಶೂನಾಮ್ । ಶರ್ಮ । ಅಸಿ । ಶರ್ಮ । ಯಜಮಾನಸ್ಯ । ಶರ್ಮ । ಮೇ । ಯಚ್ಛ। ಏಕಃ । ಏವ । ರುದ್ರಃ । ನ । ದ್ವಿತೀಯಾಯ । ತಸ್ಥೇ ।**

---

| ಮಂತ್ರ | ವಿನಿಯೋಗ |
|---|---|
| **ಪಶೂನಾಮ್....ಯಚ್ಛ ।** | ಪುರೋಡಾಶಗಳನ್ನು *ಮೂಡೆಯಲ್ಲಿ ತುಂಬಲು |
| **ಏಕ ಏವ... ತಸ್ಥೇ ।** | ದಕ್ಷಿಣಾಗ್ನಿಯ ಒಂದು ಕೊಳ್ಳಿಯನ್ನು ಈಶಾನ್ಯದಿಕ್ಕಿಗೆ ಒಯ್ಯಲು |

---

⁘ [ಎಲೈ! ಮೂಡವೇ! ನೀನು] **ಪಶೂನಾಮ್** = ಹಸುವೇ ಮೊದಲಾದ ಪ್ರಾಣಿಗಳಿಗೆ; **ಶರ್ಮ ಅಸಿ** = ಸುಖಕರನಾಗಿದ್ದೀಯೆ. **ಯಜಮಾನಸ್ಯ ಶರ್ಮ ಯಚ್ಛ** = ಯಜಮಾನನಿಗೆ ಸುಖವನ್ನು ಕೊಡು. **ಮೇ** [ಅಧ್ವರ್ಯುವಾದ] ನನಗೂ; **ಶರ್ಮ ಯಚ್ಛ** = ಸುಖವನ್ನು ಕೊಡು. ⁘ **ಏಕಃ ಏವ** = [ಸರ್ವೇಶ್ವರನಾದವನು] ಒಬ್ಬನೇ; **ರುದ್ರಃ** = ರುದ್ರನು. **ನ ದ್ವಿತೀಯಾಯ ತಸ್ಥೇ** = ಎರಡನೆಯವನಿಲ್ಲ/ಅದ್ವಿತೀಯನು. ಸಹಾಯಕ್ಕಾಗಿ ಮತ್ತೊಬ್ಬನನ್ನು ಅಪೇಕ್ಷಿಸುವುದಿಲ್ಲ.

---

ಈ ಹವಿರ್ನಿರ್ವಾಪದಿಂದ ರುದ್ರನು ಪ್ರಸನ್ನನಾಗುವಂತೆ ಮಾಡಿ ಮನೆಯಲ್ಲಿ ಇರುವವರೆಲ್ಲರಿಗೂ ಸುಖವಾಗುವಂತೆ ಮಾಡಿದೆನು.

[ಪುರೋಡಾಶಶ್ರಪಣಾನಂತರ ಅಭಿಘಾರ ಮಾಡದೇ ಅಥವಾ ಮಾಡಿ ವೇದಿಯ ಒಳಭಾಗದಲ್ಲಿ ಇಟ್ಟು ಈ ಮಂತ್ರದಿಂದ [ಪಶೂನಾಂ.....] ಮೂಡೆಯಲ್ಲಿ ತುಂಬಬೇಕು]

ಎಲೈ! ಮೂಡವೇ! ನೀನು ಧಾನ್ಯವನ್ನು ರಕ್ಷಿಸಿ ಪಶುಗಳಿಗೆ ಸುಖವನ್ನು ಕೊಡುತ್ತೀಯೆ. ನೀನು ಯಜಮಾನನಿಗೂ ಅಧ್ವರ್ಯುವಾದ ನನಗೂ ಸುಖವನ್ನು ಕೊಡು.

---

* ಧಾನ್ಯವನ್ನು ರಕ್ಷಿಸಲು ಬತ್ತದ ಹುಲ್ಲು ಇತ್ಯಾದಿಗಳಿಂದ ನಿರ್ಮಿಸುವ ಸಾಧನ.

## ಆಖುಸ್ತೇ ರುದ್ರ ಪಶುಸ್ತಂ ಜುಷಸ್ವೈಷ ತೇ ರುದ್ರ ಭಾಗ-ಸ್ಸಹ ಸ್ವಸ್ರಾಂಬಿಕಯಾ ತಂ ಜುಷಸ್ವ ಭೇಷಜಂ ಗವೇಽಶ್ವಾಯ ಪುರುಷಾಯ

ಆಖುಃ । ತೇ । ರುದ್ರ । ಪಶುಃ । ತಮ್ । ಜುಷಸ್ವ । ಏಷಃ । ತೇ । ರುದ್ರ । ಭಾಗಃ। ಸಹ । ಸ್ವಸ್ರಾ । ಅಂಬಿಕಯಾ । ತಮ್ । ಜುಷಸ್ವ । ಭೇಷಜಮ್ । ಗವೇ । ಅಶ್ವಾಯ। ಪುರುಷಾಯ ।

| ಮಂತ್ರ | ವಿನಿಯೋಗ |
|---|---|
| ಆಖುಃ... ಜುಷಸ್ವ । | ಒಂದು ಪುರೋಡಾಶವನ್ನು ಇಲಿಯ ಬಿಲದ ಮಣ್ಣಿನಲ್ಲಿ ಹಾಕಲು |
| ಏಷ ತೇ... ಜುಷಸ್ವ । | *ಚತುಷ್ಪಥಹೋಮ ಮಾಡಲು |
| ಭೇಷಜಮ್... ಮೇಷ್ಯೈ । | ಅಗ್ನಿಪರಿಷೇಚನವನ್ನು ಮಾಡಲು [ಭ.ಭಾ.] |

✣ **ರುದ್ರ** = ಎಲೈ! ರುದ್ರದೇವನೇ! **ಆಖುಃ** = ಇಲಿಯೇ; **ತೇ** = ನಿನ್ನದಾದ; **ಪಶುಃ** = ಪಶುವಾಗಿದೆ; **ತಮ್** = ಅದನ್ನು; **ಜುಷಸ್ವ** = ಸೇವಿಸು/ಅದರಿಂದ ಪ್ರೀತನಾಗು; ✣ **ರುದ್ರ** = ರುದ್ರದೇವನೇ! **ಏಷಃ** = ಈ [ಕಪಾಲಗಳ ಅಂಶಸಮೂಹಯುಕ್ತವಾದ] ಹವಿಸ್ಸು; **ತೇ ಭಾಗಃ** = ನಿನ್ನ ಭಾಗವಾಗಿದೆ. **ಸ್ವಸ್ರಾ ಅಂಬಿಕಯಾ ಸಹ** = ಜಗತ್ತಿಗೆ ಅಕ್ಕನಂತೆ ಹಿತಕಾರಿಣಿಯಾದ [ನಿನ್ನ ಅರ್ಧಾಂಗಿಯಾದ] ಪಾರ್ವತೀ ದೇವಿಯೊಡನೆ; **ತಮ್ ಜುಷಸ್ವ** = ಅದನ್ನು ಸೇವಿಸಿ ತೃಪ್ತನಾಗು [*ಸ್ವಾಹಾ = ಇದು ಹುತವಾಗಲಿ.] ✣ [ರುದ್ರ ದೇವನೇ!] **ಗವೇ ಅಶ್ವಾಯ** = ಗೋವು, ಕುದುರೆ ಮುಂತಾದ ಎಲ್ಲಾ ಪ್ರಾಣಿಗಳಿಗೂ; **ಭೇಷಜಮ್**=ರೋಗವಿಲ್ಲದಿರುವಿಕೆಯನ್ನು ಮಾಡು; **ಪುರುಷಾಯ**=ಮನುಷ್ಯರೆಲ್ಲರಿಗೂ;

ಪರಮೇಶ್ವರನಾದ ರುದ್ರನೊಬ್ಬನೇ. ಅವನಿಗಿಂತ ಅಧಿಕರೂ ಇಲ್ಲ. ಅವನ ಸಮಾನರೂ ಇಲ್ಲ. ಆತನು ಸಹಾಯಕರಾಗಿ ಯಾರನ್ನೂ ಅಪೇಕ್ಷಿಸಬೇಕಾಗಿಲ್ಲ.

[ಇಲಿಯ ಬಿಲದ ಮಣ್ಣಿನಲ್ಲಿ ಹಾಕುವಾಗ ದ್ವೇಷಿಯ ಹೆಸರನ್ನು ಹೇಳಬೇಕು. ದ್ವೇಷಿಯು ಇಲ್ಲದಿದ್ದರೆ 'ಆಖುಸ್ತೇ' ಎಂದು ಹೇಳಬೇಕು.]

ಪಶುಪ್ರಿಯನಾದ ರುದ್ರದೇವನೇ! ಈ ಇಲಿಯು ನಿನ್ನ ಪಶುವಾಗಿದೆ. ಅದನ್ನು

* ಭ.ಭಾ. ಭಾಷ್ಯದಲ್ಲಿ ವಿನಿಯೋಗವು ಭಿನ್ನವಾಗಿದೆ.

* ಅಧ್ಯಾಹಾರ.

**ಭೇಷಜಮಥೋ ಅಸ್ಮಭ್ಯಂ ಭೇಷಜಗ್ಂ ಸುಭೇಷಜಂ [ಸುಭೇಷಜಮ್(೧)] ಯಥಾಸತಿ । ಸುಗಂ ಮೇಷಾಯ ಮೇಷ್ಯಾ**

---

ಭೇಷಜಮ್ । ಅಥೋ ಇತಿ । ಅಸ್ಮಭ್ಯಮಿತ್ಯಸ್ಮ-ಭ್ಯಮ್ । ಭೇಷಜಮ್ । ಸುಭೇಷಜಮಿತಿ ಸು-ಭೇಷಜಮ್। ಯಥಾ । ಅಸತಿ ॥ ಸುಗಮಿತಿ ಸು-ಗಮ್ । ಮೇಷಾಯ। ಮೇಷ್ಯೈ।

---

| ಮಂತ್ರ | ವಿನಿಯೋಗ |
|---|---|
| ೧) ಭೇಷಜಮ್... ಭೇಷಜಮ್ । | |
| ೨) ಸುಭೇಷಜಂ... ಮೇಷ್ಯೈ । | ಅಗ್ನಿಪರಿಷೇಚನವನ್ನು ಮಾಡಲು -ಆಪಸ್ತಂಬ |

---

**ಭೇಷಜಮ್** = ಆರೋಗ್ಯವನ್ನು [ಕೊಡು]; **ಅಥೋ** = ಬಳಿಕ/ಮತ್ತು; **ಅಸ್ಮಭ್ಯಮ್** = ನಮಗೂ; **ಭೇಷಜಮ್** = ರೋಗರಾಹಿತ್ಯವನ್ನು [ಉಂಟು ಮಾಡು]; ∻ **ಸುಭೇಷಜಮ್** = ತಾತ್ಕಾಲಿಕರೋಗರಾಹಿತ್ಯವೂ, ಶಾಶ್ವತರೋಗನಿವೃತ್ತಿಯೂ; **ಯಥಾ** = ಹೇಗೆ; **ಅಸತಿ** = ಆಗುತ್ತದೆಯೋ ಹಾಗೆ ಮಾಡು; **ಮೇಷಾಯ ಮೇಷ್ಯೈ** = ಹೆಣ್ಣಾಡು, ಗಂಡಾಡುಗಳಿಗೆ; **ಸುಗಮ್**= ಸುಖವಾಗಿ ಸಂಚರಿಸುವುದಕ್ಕೆ ಅವಕಾಶವಾಗುವಂತೆ ಮಾಡು.

---

ಸೇವಿಸಿ ಪ್ರೀತನಾಗು.

ಚತುಷ್ಪಥದಲ್ಲಿ ದಕ್ಷಿಣಾಗ್ನಿಯ ಕೊಳ್ಳಿಯನ್ನು ಪ್ರತಿಷ್ಠೆಮಾಡಿ, ಪರಿಸ್ತರಣಾದಿಗಳನ್ನು ಹಾಕಿ, ಏಕಕಪಾಲಪುರೋಡಾಶಗಳಿಂದ ಪಲಾಶಪರ್ಣದಲ್ಲಿ ಅವದಾನ ಮಾಡಿ ಹೋಮ ಮಾಡಬೇಕು. [ಇಲ್ಲಿ ಸ್ವಾಹಾಕಾರವನ್ನೂ ಆಪಸ್ತಂಬರು ಹೇಳಿರುತ್ತಾರೆ.]

ಎಲೈ! ರುದ್ರದೇವನೇ! ಈ ಪುರೋಡಾಶಾಂಶಗಳು ನಿನ್ನ ಭಾಗವಾಗಿವೆ. ಇದನ್ನು ಜಗತ್ತಿಗೆ ಅಕ್ಕನಂತೆ ಹಿತಕಾರಿಣಿಯಾದ ಜಗನ್ಮಾತೆಯಾದ ಪಾರ್ವತೀದೇವಿಯೊಡನೆ ನೀನು ಸೇವಿಸಿ ತೃಪ್ತನಾಗು. [ಸ್ವಸೃಶಬ್ದದ ವಿವರಣೆಯಲ್ಲಿ ಭ.ಭಾ. ಭಾಷ್ಯದಲ್ಲಿ ಪಕ್ಷಾಂತರಗಳಿವೆ]

ರುದ್ರದೇವನೇ! ಈ ಹವಿಸ್ಸನ್ನು ಸ್ವೀಕರಿಸಿ ತೃಪ್ತನಾಗು. ಹಸುವೇ ಮೊದಲಾದ ಎಲ್ಲಾ ಪ್ರಾಣಿಗಳಿಗೂ ತಾತ್ಕಾಲಿಕರೋಗನಿವೃತ್ತಿಯೂ, ಶಾಶ್ವತರೋಗಪರಿಹಾರವೂ ಆಗುವಂತೆ ಮಾಡು. ಮನುಷ್ಯರಿಗೂ ರೋಗಪರಿಹಾರವನ್ನುಂಟುಮಾಡು. ನಮಗೂ

ಅವಾಂಬ ರುದ್ರಮದಿಮಹ್ಯವ ದೇವಂ ತ್ರ್ಯಂಬಕಮ್ ।
ಯಥಾ ನಃ ಶ್ರೇಯಸಃ ಕರದ್ಯಥಾ ನೋ ವಸ್ಯಸಃ ಕರದ್ಯಥಾ
ನಃ ಪಶುಮತಃ ಕರದ್ಯಥಾ ನೋ ವ್ಯವಸಾಯಯಾತ್ ॥

---

ಅವೇತಿ । ಅಂಬ । ರುದ್ರಮ್ । ಅದಿಮಹಿ । ಅವೇತಿ । ದೇವಮ್ । ತ್ರ್ಯಂಬಕಮಿತಿ ತ್ರಿ-ಅಂಬಕಮ್ ॥ ಯಥಾ । ನಃ । ಶ್ರೇಯಸಃ । ಕರತ್ । ಯಥಾ । ನಃ । ವಸ್ಯಸಃ । ಕರತ್ । ಯಥಾ । ನಃ । ಪಶುಮತ ಇತಿ ಪಶು-ಮತಃ । ಕರತ್ । ಯಥಾ । ನಃ । ವ್ಯವಸಾಯಯಾದಿತಿ ವಿ-ಅವಸಾಯಯಾತ್ ॥

---

| ಮಂತ್ರ | ವಿನಿಯೋಗ |
|---|---|
| ಅವಾಂಬ.... ವ್ಯವಸಾಯಯಾತ್ । | ಯಜಮಾನನು ಜಪಿಸಲು |

---

✣ ಅಂಬ = ತಾಯಿಯಾದ ಪಾರ್ವತೀದೇವಿಯೇ! ರುದ್ರಮ್ ಅವ ಅದಿಮಹಿ = ರುದ್ರನನ್ನು ಉದ್ದೇಶಿಸಿ ಅವದಾನ ಮಾಡಿ ಯಾಗ ಮಾಡಿದೆವು. ದೇವಮ್ ತ್ರ್ಯಂಬಕಮ್ = ತ್ರಿಣೇತ್ರನಾದ ಪರಮೇಶ್ವರನನ್ನುದ್ದೇಶಿಸಿ; ಅವ ಅದಿಮಹಿ = ಯಾಗ ಮಾಡಿದೆವು; [ಏತಕ್ಕೆಂದರೆ ಈ ದೇವನು] ನಃ = ನಮ್ಮನ್ನು; ಶ್ರೇಯಸಃ = ಅಧ್ಯಯನಾದಿಗಳಿಂದ ಶ್ರೇಷ್ಠರನ್ನಾಗಿ; ಯಥಾ ಕರತ್ = ಹೇಗೆ ಮಾಡುತ್ತಾನೆಯೋ; ನಃ = ನಮ್ಮನ್ನು; ವಸ್ಯಸಃ = ಅತ್ಯಂತ ಧನವಂತರನ್ನಾಗಿ; ಯಥಾ ಕರತ್ = ಹೇಗೆ ಮಾಡುತ್ತಾನೆಯೋ; ನಃ = ನಮ್ಮನ್ನು; ಯಥಾ ಪಶುಮತಃ = ಪಶುಸಮೃದ್ಧಿಯುಳ್ಳವರನ್ನಾಗಿ ಹೇಗೆ; ಕರತ್ = ಮಾಡುತ್ತಾನೆಯೋ; ಯಥಾ = ಹೇಗೆ; ನಃ = ನಮ್ಮನ್ನು; ವ್ಯವಸಾಯಯಾತ್ = ಶಾಸ್ತ್ರಾರ್ಥನಿಶ್ಚಯಜ್ಞಾನವುಳ್ಳವರನ್ನಾಗಿ/ಕರ್ಮಸಮಾಪ್ತಿಯನ್ನು ಹೊಂದುವವರನ್ನಾಗಿ ಮಾಡುತ್ತಾನೆಯೋ [ಅದಕ್ಕಾಗಿ ಹೋಮ ಮಾಡಿ ಸಂತೋಷಪಡಿಸಿದೆವು. ನಿಮ್ಮ ಅನುಗ್ರಹದಿಂದ ನಮಗೆ ಎಲ್ಲವೂ ಲಭಿಸಲಿ]

---

ಆರೋಗ್ಯವು ಹೇಗೆ ಆಗುತ್ತದೆಯೋ ಹಾಗೆ ಮಾಡು. ಆಡು ಮೊದಲಾದವು ತೊಂದರೆಯಿಲ್ಲದೆ ಸಂಚರಿಸುವಂತೆ ಮಾಡು.

ಎಲೈ! ಜಗನ್ಮಾತೆಯಾದ ಪಾರ್ವತಿಯೇ! ತ್ರಿಣೇತ್ರನಾದ ಈ ರುದ್ರದೇವನು ನಮ್ಮನ್ನು ಅಧ್ಯಯನಾದಿಗಳಿಂದ ಶ್ರೇಷ್ಠರನ್ನಾಗಿಯೂ, ಧನವಂತರನ್ನಾಗಿಯೂ, ಗವಾದಿ

## ತ್ರ್ಯಂಬಕಂ ಯಜಾಮಹೇ ಸುಗಂಧಿಂ ಪುಷ್ಟಿವರ್ಧನಮ್ । ಉರ್ವಾರುಕಮಿವ ಬಂಧನಾನ್ಮೃತ್ಯೋರ್ಮುಕ್ಷೀಯ ಮಾಽಮೃತಾತ್ । ಏಷ ತೇ ರುದ್ರ ಭಾಗಸ್ತಂ ಜುಷಸ್ವ

---

ತ್ರ್ಯಂಬಕಮಿತಿ ತ್ರಿ-ಅಂಬಕಮ್ । ಯಜಾಮಹೇ । ಸುಗಂಧಿಮಿತಿ ಸು-ಗಂಧಿಮ್ । ಪುಷ್ಟಿವರ್ಧನಮಿತಿ ಪುಷ್ಟಿ-ವರ್ಧನಮ್ ॥ ಉರ್ವಾರುಕಮ್ । ಇವ । ಬಂಧನಾತ್ । ಮೃತ್ಯೋಃ । ಮುಕ್ಷೀಯ । ಮಾ । ಅಮೃತಾತ್ ॥ ಏಷಃ । ತೇ । ರುದ್ರ । ಭಾಗಃ । ತಮ್। ಜುಷಸ್ವ ।

---

| ಮಂತ್ರ | ವಿನಿಯೋಗ |
|---|---|
| ತ್ರ್ಯಂಬಕಂ.... ಅಮೃತಾತ್ ॥ | ಮೂರು ಸಲ ಅಗ್ನಿಪ್ರದಕ್ಷಿಣೆಯನ್ನು ಮಾಡಲು |
| ಏಷ ತೇ.... ಅತೀಹಿ । | ಪುರೋಡಾಶಭಾಗಗಳನ್ನು ಮೇಲಕ್ಕೆ ಎಸೆದು, ಬಿದ್ದ ಭಾಗಗಳನ್ನು ಮೂಡೆಗಳಲ್ಲಿ ಕಟ್ಟಿ ಮರದಲ್ಲಿ ಕಟ್ಟಲು/ಮೋಟುಮರದಲ್ಲಿ ತೂಗುಹಾಕಲು |

---

✣ **ಸುಗಂಧಿಮ್** = ಪುಣ್ಯರೂಪವಾದ ಸುವಾಸನೆಯಿಂದ ಯುಕ್ತವಾದ; **ಪುಷ್ಟಿವರ್ಧನಮ್** = ಶರೀರ-ಧನಪಶ್ವಾದಿಗಳ ಅಭಿವೃದ್ಧಿಯನ್ನು ಮಾಡುವ; **ತ್ರ್ಯಂಬಕಮ್** = ವೇದತ್ರಯ ಪ್ರತಿಪಾದ್ಯನಾದ/ಮೂರು ಕಣ್ಣುಳ್ಳವನಾದ ಪರಮೇಶ್ವರನನ್ನು; **ಯಜಾಮಹೇ** = ಆರಾಧಿಸುತ್ತೇವೆ. [ರುದ್ರಾನುಗ್ರಹದಿಂದ] **ಬಂಧನಾತ್ ಉರ್ವಾರುಕಮ್ ಇವ** = ತೊಟ್ಟಿನ ಬಂಧನದಿಂದ ಸೌತೆಕಾಯಿಯು [ಕಳಚಿ ಬೀಳುವಂತೆ]; **ಮೃತ್ಯೋಃ ಮುಕ್ಷೀಯ** = ಮೃತ್ಯು ಬಂಧನದಿಂದ ವಿಮುಕ್ತನಾಗುವೆನು; **ಅಮೃತಾತ್ ಮಾ ಮುಕ್ಷೀಯ** = ಅಮರಣರೂಪ ಚಿರಜೀವಿತದಿಂದ ನಾನು ವಿಮುಕ್ತನಾಗದಂತಾಗಲಿ/ ಮೋಕ್ಷವನ್ನು ಹೊಂದುವಂತಾಗಲಿ. ✣ **ರುದ್ರ** = ರುದ್ರದೇವನೇ! **ಏಷಃ ತೇ ಭಾಗಃ** = ಇದು ನಿನ್ನ ಭಾಗವಾಗಿದೆ; **ತಮ್ ಜುಷಸ್ವ** = ಅದನ್ನು ಸ್ವೀಕರಿಸು

---

ಪಶುಸಮೃದ್ಧಿಯುಳ್ಳವರನ್ನಾಗಿಯೂ ಶಾಸ್ತ್ರೀಯಜ್ಞಾನನಿಶ್ಚಯವುಳ್ಳವರನ್ನಾ ಗಿಯೂ, ಈ ಕರ್ಮಸಮಾಪ್ತಿಯನ್ನು ಹೊಂದುವವರನ್ನಾಗಿಯೂ, ಮಾಡಲೆಂದು ಅಪೇಕ್ಷಿಸಿ ಈ ರುದ್ರದೇವನಿಗಾಗಿ ಕಪಾಲಾದಿಹವಿಸ್ಸನ್ನು ಅರ್ಪಿಸಿದೆವು. ನಿಮ್ಮ ಅನುಗ್ರಹದಿಂದ ನಾವು ಬಯಸಿದುದೆಲ್ಲವೂ ನಮಗೆ ಲಭಿಸಲಿ.

ತೇನಾವಸೇನ ಪರೋ ಮೂಜವತೋಽತೀಹ್ಯವತತಧನ್ವಾ ಪಿನಾಕಹಸ್ತಃ ಕೃತ್ತಿವಾಸಾಃ ॥ ೬-11 ॥

[ಸುಭೇಷಜಮಿಹಿ ತ್ರೀಣಿ ಚ ॥]

---

ತೇನ । ಅವಸೇನ । ಪರಃ । ಮೂಜವತ ಇತಿ ಮೂಜ-ವತಃ । ಅತೀತಿ । ಇಹಿ । ಅವತತಧನ್ವೇತ್ಯವತತ-ಧನ್ವಾ । ಪಿನಾಕಹಸ್ತ ಇತಿ ಪಿನಾಕ-ಹಸ್ತಃ । ಕೃತ್ತಿವಾಸಾ ಇತಿ ಕೃತ್ತಿ-ವಾಸಾಃ ॥ ೬ ॥

---

| ಮಂತ್ರ | ವಿನಿಯೋಗ |
|---|---|
| ಅವತತಧನ್ವಾ..ವಾಸಾಃ ॥[ವಾಸೋಮ್] | ಮೂರು ಪ್ರಾಣಾಯಾಮಗಳನ್ನು ಮಾಡಲು. |

---

**ತೇನ ಅವಸೇನ** = ಬುತ್ತಿಯಂತಿರುವ ಆ ಭಾಗದಿಂದ ಕೂಡಿದವನಾಗಿ; **ಮೂಜವತಃ ಪರಃ** = ಮೂಜವತ್ಪರ್ವತದ ಹೊರಭಾಗವನ್ನು ಹೊಂದಿದವನಾಗಿ; **ಅತಿ ಇಹಿ** = ದೂರ ಹೋಗು; + [ಈ ರುದ್ರನು] **ಅವತತಧನ್ವಾ** = [ದುಷ್ಟರನ್ನುದ್ದೇಶಿಸಿ] ಹೆದೆಯೇರಿಸಿದ ಧನುಸ್ಸುಳ್ಳವನೂ; **ಪಿನಾಕಹಸ್ತಃ** = ಪಿನಾಕವೆಂಬ ಬಿಲ್ಲುಳ್ಳವನೂ; **ಕೃತ್ತಿವಾಸಾಃ** = ವ್ಯಾಘ್ರಚರ್ಮಾಂಬರಧಾರಿಯೂ [ಆಗಿರುತ್ತಾನೆ]. [ನಮ್ಮ ವಿಷಯದಲ್ಲಿ ಇಳಿಸಿದ ಹೆದೆಯುಳ್ಳವನು; ಓಮ್ =ಆಗಲಿ.]

---

ವೇದತ್ರಯಪ್ರತಿಪಾದ್ಯನಾದ ತ್ರಿಲೋಚನನಾದ ರುದ್ರದೇವನು ಸರ್ವವಿಧ ಪೋಷಣೆಯನ್ನೂ ಉಂಟುಮಾಡಬಲ್ಲವನು. ಅವನನ್ನು ಪೂಜಿಸುತ್ತೇನೆ. ಅವನ ಅನುಗ್ರಹದಿಂದ ಸೌತೆಕಾಯಿಯು ತೊಟ್ಟು ಕಳಚಿ ಬೀಳುವಂತೆ ಸಂಸಾರವೆಂಬ ಬಂಧನವು ಅಥವಾ ಮೃತ್ಯುರೂಪಬಂಧನವು ಕಳಚಿ ಹೋಗಲಿ. ಅಮೃತತ್ವವು/ಮೋಕ್ಷವು ವಿಮುಕ್ತ ವಾಗದಿರಲಿ.

ರುದ್ರನೇ! ಇದು ನಿನ್ನ ಭಾಗವಾಗಿದೆ. ಅದನ್ನು ಸ್ವೀಕರಿಸು. ಬುತ್ತಿಯನ್ನು ತೆಗೆದುಕೊಂಡು ದೂರ ಪ್ರಯಾಣ ಮಾಡುವಂತೆ ಈ ಭಾಗವನ್ನು ತೆಗೆದುಕೊಂಡು ಮೂಜವತ್ಪರ್ವತವನ್ನೂ ದಾಟಿ ದೂರಕ್ಕೆ ಹೊರಟು ಹೋಗು.

ಈ ರುದ್ರನು ದುಷ್ಟರಿಗಾಗಿ ಹೆದೆಯೇರಿಸಿದ ಬಿಲ್ಲುಳ್ಳವನೂ, ಪಿನಾಕವೆಂಬ ಬಿಲ್ಲುಳ್ಳವನೂ, ವ್ಯಾಘ್ರಚರ್ಮಾಂಬರಧಾರಿಯೂ ಆಗಿರುತ್ತಾನೆ. ನಮ್ಮ ವಿಷಯದಲ್ಲಿ ಇಳಿಸಿದ ಹೆದೆಯುಳ್ಳವನಾಗಲಿ.

## ವಿನಿಯೋಗ ಸಂಗ್ರಹ

ಸ್ವಾಮೀ ಯಾವಂತ[1] ಇತ್ಯಾಹ ಪಶೂ[2]ಮೂತೇ ಸಮಾವಪೇತ್ ।
ಏಕ[3] ಇತ್ಯುಲ್ಮುಕಂ ನೀತ್ವಾಽಽಖಿಸ್ತ[4] ಆಖೂತ್ಕರೇ ಹವಿಃ ॥
ಕ್ಷಿಪೇದೇಷೋ[5]ಽರ್ಧಹೋಮಃ ಸ್ಯಾದ್ಭೇ[6] ಸುಭೇ[7] ಪರಿಷಿಂಚತಿ ।
ಅವಾಂಬೇತಿ[8] ಜಪೇತ್ಸ್ವಾಮೀ ತ್ರ್ಯಂಬಕಂ[9] ಪರಿಯಂತಿ ತೇ ॥
[10]ಏಷೋಽವಸ್ಥಾಪ್ಯ ತಚ್ಛೇಷಾನ್ಮೂತೇ ಬಧ್ನಾತಿ ಶಾಖಿನಿ ।
ಅವತ [11]ಶ್ವಾಸನಿಯಮೋ ಮಂತ್ರಾ ಏಕಾದಶ ಸ್ಮೃತಾಃ ॥

**ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ —11 ಆಪಸ್ತಂಬ**
**-10 ಭ.ಭಾ.**

★ ★ ★

## ॥ ಸಪ್ತಮೋಽನುವಾಕಃ ॥

ಐಂದ್ರಾಗ್ನಂ ದ್ವಾದಶಕಪಾಲಂ ವೈಶ್ವದೇವಂ
ಚರುಮಿಂದ್ರಾಯ ಶುನಾಸೀರಾಯ ಪುರೋಡಾಶಂ
ದ್ವಾದಶಕಪಾಲಂ ವಾಯವ್ಯಂ ಪಯಸ್ಸೌರ್ಯಮೇಕಕಪಾಲಂ

---

ಐಂದ್ರಾಗ್ನಮಿತ್ಯೈಂದ್ರ-ಆಗ್ನಮ್ । ದ್ವಾದಶಕಪಾಲಮಿತಿ ದ್ವಾದಶ-ಕಪಾಲಮ್ । ವೈಶ್ವದೇವಮಿತಿ ವೈಶ್ವ-ದೇವಮ್ । ಚರುಮ್ । ಇಂದ್ರಾಯ । ಶುನಾಸೀರಾಯ । ಪುರೋಡಾಶಮ್। ದ್ವಾದಶಕಪಾಲಮಿತಿ ದ್ವಾದಶ-ಕಪಾಲಮ್ । ವಾಯವ್ಯಮ್ । ಪಯಃ। ಸೌರ್ಯಮ್ । ಏಕಕಪಾಲಮಿತ್ಯೇಕ-ಕಪಾಲಮ್ ।

---

ಆರನೆಯ ಅನುವಾಕದಲ್ಲಿ ಸಾಕಮೇಧಪರ್ವವು ಮುಗಿಯಿತು. ಈ ಏಳನೆಯ ಅನುವಾಕದಲ್ಲಿ ಶುನಾಸೀರೀಯ, ಇಂದ್ರತುರೀಯಗಳೂ, ಪಂಚೇಧ್ಮಹೋಮೀಯ ಮಂತ್ರಗಳೂ, ಅಪಾಮಾರ್ಗಹೋಮಗಳೂ ಉಕ್ತವಾಗಿವೆ.

### ಶುನಾಸೀರೀಯಹವಿಸ್ಸುಗಳು

| | |
|---|---|
| ಐಂದ್ರಾಗ್ನಮ್ ದ್ವಾದಶಕಪಾಲಮ್ [ನಿರ್ವಪತಿ] | ಇಂದ್ರಾಗ್ನಿದೇವತೆಗಳಿಗೆ ಸಂಬಂಧಿಸಿದ ಹನ್ನೆರಡು ಕಪಾಲಗಳಲ್ಲಿ ಸಂಸ್ಕೃತವಾದ ಪುರೋಡಾಶ ಯಾಗವನ್ನು ಮಾಡಬೇಕು. |
| ವೈಶ್ವದೇವಮ್ ಚರುಮ್ [ನಿರ್ವಪತಿ] | ವಿಶ್ವೇದೇವರಿಗೆ ಚರುಯಾಗವನ್ನು ಮಾಡಬೇಕು. |
| ಇಂದ್ರಾಯ ಶುನಾಸೀರಾಯ | ವಾಯುಸೂರ್ಯಯುಕ್ತನಾದ ಶುನಾಸೀರೇಂದ್ರನಿಗೆ |
| ಪುರೋಡಾಶಮ್ ದ್ವಾದಶ ಕಪಾಲಮ್ [ನಿರ್ವಪತಿ] | ದ್ವಾದಶಕಪಾಲಸಂಸ್ಕೃತವಾದ ಪುರೋಡಾಶವನ್ನು ಯಾಗ ಮಾಡಬೇಕು. |
| ವಾಯವ್ಯಮ್ ಪಯಃ [ನಿರ್ವಪತಿ] | ವಾಯುದೇವತಾಕವಾದ ಪಯೋಯಾಗ [ಹಾಲು] ಮಾಡಬೇಕು. |
| ಸೌರ್ಯಮ್ ಏಕಕಪಾಲಮ್ [ನಿರ್ವಪತಿ] | ಸೂರ್ಯನಿಗೆ ಏಕಕಪಾಲಸಂಸ್ಕೃತವಾದ ಪುರೋಡಾಶಯಾಗವನ್ನು ಮಾಡಬೇಕು. |

ದ್ವಾದಶಗವಗ್ಂ ಸೀರಂ ದಕ್ಷಿಣಾಽಽಗ್ನೇಯಮಷ್ಟಾಕಪಾಲಂ ನಿರ್ವಪತಿ ರೌದ್ರಂ ಗಾವೀಧುಕಂ ಚರುಮೈಂದ್ರಂ ದಧಿ

---

ದ್ವಾದಶಗವಮಿತಿ ದ್ವಾದಶ-ಗವಮ್ । ಸೀರಮ್ । ದಕ್ಷಿಣಾ । ಆಗ್ನೇಯಮ್ । ಅಷ್ಟಾ-ಕಪಾಲಮಿತ್ಯಷ್ಟಾ-ಕಪಾಲಮ್ । ನಿರಿತಿ । ವಪತಿ । ರೌದ್ರಮ್ । ಗಾವೀಧುಕಮ್। ಚರುಮ್ । ಐಂದ್ರಮ್ । ದಧಿ ।

---

| | |
|---|---|
| ದ್ವಾದಶಗವಮ್ ಸೀರಮ್ ದಕ್ಷಿಣಾ | ಹನ್ನೆರಡು ಎತ್ತುಗಳನ್ನು ಹೂಡಿರುವ ನೇಗಿಲು ಈ ಯಾಗಗಳ ದಕ್ಷಿಣೆಯಾಗಿದೆ. |

**ಇಂದ್ರತುರೀಯಹವಿಸ್ಸುಗಳು**

| | |
|---|---|
| ಆಗ್ನೇಯಮ್ ಅಷ್ಟಾಕಪಾಲಮ್ ನಿರ್ವಪತಿ | ಅಗ್ನಿದೇವತಾಕವಾದ ಅಷ್ಟಾಕಪಾಲಪುರೋಡಾಶ ಯಾಗವನ್ನು ಮಾಡಬೇಕು. |
| ರೌದ್ರಮ್ ಗಾವೀಧುಕಮ್ ಚರುಮ್ [ನಿರ್ವಪತಿ] | ರುದ್ರದೇವನಿಗೆ [ಕಾಡಿನಲ್ಲಿ ಬೆಳೆಯುವ ಧಾನ್ಯ ವಿಶೇಷವಾದ] ಗವೀಧುಕದ ಚರುಯಾಗವನ್ನು ಮಾಡಬೇಕು. |
| ಐಂದ್ರಮ್ ದಧಿ [ನಿರ್ವಪತಿ] | ಇಂದ್ರದೇವತಾಕವಾದ ದಧಿಯಾಗವನ್ನು ಮಾಡಬೇಕು. |

---

**ವೈಶ್ವದೇವ, ವರುಣಪ್ರಘಾಸ, ಸಾಕಮೇಧಗಳನ್ನು** ನಾಲ್ಕು ನಾಲ್ಕು ತಿಂಗಳು ಮಾಡಿ, ಮತ್ತೊಂದು ಸಂವತ್ಸರಾರಂಭದಲ್ಲಿ ಶುನಾಸೀರೀಯ ಪರ್ವವನ್ನು ಅನುಷ್ಠಿಸಬೇಕು. ಇದರಲ್ಲಿ ಮೊದಲು ಆಗ್ನೇಯಾದಿಪಂಚಸಂಚರಗಳು, ಬಳಿಕ ಐಂದ್ರಾಗ್ನ ದ್ವಾದಶಕಪಾಲ, ವೈಶ್ವದೇವಚರು, ಶುನಾಸೀರೇಂದ್ರನಿಗೆ ದ್ವಾದಶಕಪಾಲ, ವಾಯವ್ಯ ಪಯೋಯಾಗ, ಸೌರ್ಯವಾದ ಏಕಕಪಾಲ—ಈ ಯಾಗಗಳನ್ನು ಮಾಡಬೇಕು. ಇದರಲ್ಲಿ ಹನ್ನೆರಡು ಎತ್ತುಗಳು ಎಳೆಯುವ ನೇಗಿಲು ದಕ್ಷಿಣೆಯಾಗಿದೆ.

## ವಾರುಣಂ ಯವಮಯಂ ಚರುಂ ವಹಿನೀ ಧೇನುರ್ದಕ್ಷಿಣಾ
## ಯೇ ದೇವಾಃ ಪುರಸ್ಸದೋಽಗ್ನಿನೇತ್ರಾ

---

ವಾರುಣಮ್ । ಯವಮಯಮಿತಿ ಯವ-ಮಯಮ್ । ಚರುಮ್ । ವಹಿನೀ । ಧೇನುಃ। ದಕ್ಷಿಣಾ । ಯೇ । ದೇವಾಃ । ಪುರಸ್ಸದ ಇತಿ ಪುರಃ-ಸದಃ । ಅಗ್ನಿನೇತ್ರಾ ಇತ್ಯಗ್ನಿ-ನೇತ್ರಾಃ।

---

| | |
|---|---|
| ವಾರುಣಮ್ ಯವಮಯಮ್ ಚರುಮ್ [ನಿರ್ವಪತಿ] | ವರುಣದೇವತಾಕವಾದ ಯವಧಾನ್ಯದ ಚರು ಯಾಗವನ್ನು ಮಾಡಬೇಕು. |
| ವಹಿನೀ ಧೇನುಃ ದಕ್ಷಿಣಾ | ಬೆನ್ನಿನ ಮೇಲೆ ಹೊರೆಯನ್ನು ಹೊರುವ ಧೇನುವನ್ನು ದಕ್ಷಿಣೆಯನ್ನಾಗಿ ಕೊಡಬೇಕು. |

---

| ಮಂತ್ರ | ವಿನಿಯೋಗ |
|---|---|
| ಯೇ ದೇವಾಃ ಪುರಃಸದಃ ........ಬೃಹಸ್ಪತಿ ನೇತ್ರಾ ರಕ್ಷೋಹಣಃ..... ಸ್ವಾಹಾ ॥ | ಪಂಚೇಧ್ಮೀಯಹೋಮಗಳನ್ನು ಅನುಷ್ಠಿಸಲು |

---

+ **ಯೇ ದೇವಾಃ ಅಗ್ನಿನೇತ್ರಾಃ** = ಯಾವ ದೇವತೆಗಳು ಅಗ್ನಿಯೇ ನಾಯಕನುಳ್ಳವರಾಗಿ; **ಪುರಃಸದಃ** = ಪೂರ್ವದಿಕ್ಕಿನಲ್ಲಿ ಇದ್ದಾರೆಯೋ;

---

ಅಸುರನಾಶಕ್ಕಾಗಿ ಅಗ್ನಿಯು ದೇವತೆಗಳಿಂದ ಪ್ರಾರ್ಥಿತನಾಗಿ ಅಗ್ನಿ, ರುದ್ರ, ವರುಣ ಎಂಬ ಮೂರು ರೂಪಗಳನ್ನು ಧರಿಸಿದನು. ನಾಲ್ಕನೆಯವನು ಯಾರೆಂದು ಕೇಳಿದಾಗ ಇಂದ್ರನು ತಾನು ನಾಲ್ಕನೆಯವನಾಗುವುದಾಗಿ ಒಪ್ಪಿಕೊಂಡನು. ಆದುದರಿಂದ ಈ ಯಾಗಕ್ಕೆ ಇಂದ್ರತುರೀಯವೆಂದು ಹೆಸರು ಬಂದಿತು. ಆಗ್ನೇಯ ಅಷ್ಟಾಕಪಾಲ,

***ದಕ್ಷಿಣಸದೋ ಯಮನೇತ್ರಾಃ *ಪಶ್ಚಾತ್ಸದಸ್ಸವಿತೃನೇತ್ರಾ *ಉತ್ತರಸದೋ ವರುಣನೇತ್ರಾ *ಉಪರಿಷದೋ ಬೃಹಸ್ಪತಿ ನೇತ್ರಾ ರಕ್ಷೋಹಣಸ್ತೇ ನಃ ಪಾಂತು ತೇ ನೋಽವಂತು**

---

ದಕ್ಷಿಣಸದ ಇತಿ ದಕ್ಷಿಣ-ಸದಃ । ಯಮನೇತ್ರಾ ಇತಿ ಯಮ-ನೇತ್ರಾಃ । ಪಶ್ಚಾತ್ಸದ ಇತಿ ಪಶ್ಚಾತ್-ಸದಃ । ಸವಿತೃನೇತ್ರಾ ಇತಿ ಸವಿತೃ-ನೇತ್ರಾಃ । ಉತ್ತರಸದ ಇತ್ಯುತ್ತರ-ಸದಃ । ವರುಣನೇತ್ರಾ ಇತಿ ವರುಣ-ನೇತ್ರಾಃ । ಉಪರಿಷದ ಇತ್ಯುಪರಿ-ಸದಃ । ಬೃಹಸ್ಪತಿನೇತ್ರಾ ಇತಿ ಬೃಹಸ್ಪತಿ-ನೇತ್ರಾಃ । ರಕ್ಷೋಹಣ ಇತಿ ರಕ್ಷಃ-ಹನಃ । ತೇ । ನಃ । ಪಾಂತು । ತೇ । ನಃ । ಅವಂತು ।

---

**ಯಮನೇತ್ರಾಃ** = ಯಮಪ್ರಧಾನರಾದ; **ಯೇ ದೇವಾಃ** = ಯಾವ ದೇವತೆಗಳು; **ದಕ್ಷಿಣಸದಃ** = ದಕ್ಷಿಣದಲ್ಲಿ ಇದ್ದಾರೆಯೋ; **ಯೇ ದೇವಾಃ ಸವಿತೃನೇತ್ರಾಃ** = ಸವಿತೃವೇ ಮುಖ್ಯನಾಗಿರುವ ಯಾವ ದೇವತೆಗಳು; **ಪಶ್ಚಾತ್ಸದಃ** = ಪಶ್ಚಿಮದಿಕ್ಕಿನಲ್ಲಿರುವರೋ; **ವರುಣನೇತ್ರಾಃ** = ವರುಣಪ್ರಧಾನರಾದ; **ಯೇ ದೇವಾಃ** = ಯಾವ ದೇವತೆಗಳು; **ಉತ್ತರಸದಃ** = ಉತ್ತರದಿಕ್ಕಿನಲ್ಲಿ ಇರುವರೋ; **ಬೃಹಸ್ಪತಿನೇತ್ರಾಃ** = ಬೃಹಸ್ಪತಿ ಪ್ರಧಾನರಾದ; **ಯೇ ದೇವಾಃ** = ಯಾವ ದೇವತೆಗಳು; **ಉಪರಿಷದಃ** = ಮೇಲ್ಭಾಗದಲ್ಲಿ ದ್ದಾರೆಯೋ; **ರಕ್ಷೋಹಣಃ** = ರಾಕ್ಷಸನಾಶ ಮಾಡುವ; **ತೇ** = ಅವರು; **ನಃ ಪಾಂತು** = [ರಕ್ಷೋನಿವಾರಣೆ ಮಾಡಿ] ನಮ್ಮನ್ನು ರಕ್ಷಿಸಲಿ. **ತೇ** = ಅವರು; **ನಃ ಅವಂತು** = ಕರ್ಮಾನುಷ್ಠಾನ ಮಾಡಿಸಿ ಕಾಪಾಡಲಿ.

---

ಗಾವೀಧುಕವೆಂಬ ಅರಣ್ಯಧಾನ್ಯದ ಚರು, ಇಂದ್ರದೇವತಾಕವಾದ ಚರು, ವರುಣ ದೇವತಾಕವಾದ ಯವಮಯಚರುಯಾಗಗಳು, ಈ ಯಾಗದ ಹವಿರ್ಭಾಗಗಳಾಗಿವೆ. ಬೆನ್ನಿನ ಮೇಲೆ ಹೊರೆಯನ್ನು ಹೊರಲು ಸಮರ್ಥವಾದ ಧೇನುವು ಈ ಯಾಗದ ದಕ್ಷಿಣೆ.

ರಾಕ್ಷಸರನ್ನು ನಾಶಪಡಿಸುವ ಅಗ್ನಿಪ್ರಮುಖರಾದ ಯಾವ ದೇವತೆಗಳು ಪೂರ್ವ ದಿಕ್ಕಿನಲ್ಲಿದ್ದಾರೆಯೋ, ಯಮಪ್ರಮುಖರಾದ ಯಾವ ದೇವತೆಗಳು ದಕ್ಷಿಣದಿಕ್ಕಿನಲ್ಲಿ ದ್ದಾರೆಯೋ, ಸವಿತೃನಾಯಕರಾಗಿರುವ ಯಾವ ದೇವತೆಗಳು ಪಶ್ಚಿಮದಿಕ್ಕಿನಲ್ಲಿ ದ್ದಾರೆಯೋ, ವರುಣಮುಖ್ಯರಾಗಿರುವ ಯಾವ ದೇವತೆಗಳು ಉತ್ತರದಿಕ್ಕಿನಲ್ಲಿ

**ತೇಭ್ಯೋ[ತೇಭ್ಯಃ [೧]ನಮಸ್ತೇಭ್ಯಃ ಸ್ವಾಹಾ ಸಮೂಢಗ್ಂ ರಕ್ಷಸ್ಸಂದಗ್ಧಗ್ಂ ರಕ್ಷ ಇದಮಹಗ್ಂ ರಕ್ಷೋಽಭಿ ಸಂದಹಾ-ಮ್ಯಗ್ನಯೇ ರಕ್ಷೋಘ್ನೇ ಸ್ವಾಹಾ ಯಮಾಯ**

---

ತೇಭ್ಯಃ (೧) ನಮಃ । ತೇಭ್ಯಃ । ಸ್ವಾಹಾ । ಸಮೂಢಮಿತಿ ಸಮ್-ಊಢಮ್ । ರಕ್ಷಃ । ಸಂದಗ್ಧಮಿತಿ ಸಮ್-ದಗ್ಧಮ್ । ರಕ್ಷಃ । ಇದಮ್ । ಅಹಮ್ । ರಕ್ಷಃ । ಅಭಿ । ಸಮಿತಿ। ದಹಾಮಿ । ಅಗ್ನಯೇ । ರಕ್ಷೋಘ್ನ ಇತಿ ರಕ್ಷಃ-ಘ್ನೇ । ಸ್ವಾಹಾ । ಯಮಾಯ।

---

| ಮಂತ್ರ | ವಿನಿಯೋಗ |
|---|---|
| ಸಮೂಢಗ್ಂ..... ಸಂದಹಾಮಿ । | ಅಂಗಾರಗಳನ್ನು ಒಂದುಗೂಡಿಸಿ ಹೇಳಲು |
| ಅಗ್ನಯೇ.... ದುವಸ್ವತೇ ರಕ್ಷೋಘ್ನೇ ಸ್ವಾಹಾ । | ಹೋಮದಲ್ಲಿ ವಿನಿಯುಕ್ತ. |

---

**ತೇಭ್ಯಃ** = ಆ ದೇವತೆಗಳಿಗೆ; **ನಮಃ ಅಸ್ತು** = ನಮಸ್ಕಾರವಾಗಲಿ; **ತೇಭ್ಯಃ ಸ್ವಾಹಾ** = ಅವರಿಗೆ ಈ ಹವಿಸ್ಸು ಹುತವಾಗಲಿ. ✣ **ಸಮೂಢಮ್ ರಕ್ಷಃ** = [ನಮಗೆ ಪ್ರತಿಕೂಲ ವಾಗಿರುವ] ರಾಕ್ಷಸಸಮೂಹವು ಒಟ್ಟುಗೂಡಿಸಲ್ಪಟ್ಟಿದೆ; **ಸಂದಗ್ಧಮ್ ರಕ್ಷಃ** = ರಾಕ್ಷಸರ ಗುಂಪು ಚೆನ್ನಾಗಿ ಸುಡಲ್ಪಟ್ಟಿದೆ; **ಇದಮ್** = ಇದನ್ನು [ಈಗ] **ಅಹಮ್** = ನಾನು; **ರಕ್ಷಃ** = ರಾಕ್ಷಸಸಮೂಹವನ್ನು; **ಅಭಿಸಂದಹಾಮಿ** = ಸುತ್ತಲೂ ಸುಟ್ಟು ಹಾಕುತ್ತೇನೆ. ✣ **ರಕ್ಷೋಘ್ನೇ** = ರಾಕ್ಷಸನಾಶಕನಾದ; **ಅಗ್ನಯೇ ಸ್ವಾಹಾ** = ಅಗ್ನಿಗೆ ಇದನ್ನು ಕೊಡುತ್ತೇನೆ. [ಇದು ಹುತವಾಗಲಿ]; **ಯಮಾಯ ರಕ್ಷೋಘ್ನೇ ಸ್ವಾಹಾ** = ರಾಕ್ಷಸರನ್ನು ಸಂಹರಿಸುವ ಯಮನಿಗೆ ಕೊಟ್ಟಿರುವ ಈ ಆಜ್ಯದ್ರವ್ಯವು ಹುತವಾಗಲಿ.

---

ಇದ್ದಾರೆಯೋ, ಬೃಹಸ್ಪತಿಯೇ ನಾಯಕನಾಗಿರುವ ಯಾವ ದೇವತೆಗಳು ಮೇಲ್ಭಾಗದಲ್ಲಿ ಇದ್ದಾರೆಯೋ, ರಾಕ್ಷಸನಾಶಕರಾದ ಅವರೆಲ್ಲರಿಗೂ ನಮಸ್ಕಾರ. ಅವರು ರಾಕ್ಷಸನಾಶ ಮಾಡಿ ನಮ್ಮನ್ನು ರಕ್ಷಿಸಲಿ. ಕರ್ಮಾನುಷ್ಠಾನವು ಸರಿಯಾಗಿ ನಡೆಯುವಂತೆ ಮಾಡಿ ನಮ್ಮನ್ನು ಕಾಪಾಡಲಿ. ಅವರನ್ನು ನಮಸ್ಕರಿಸುತ್ತೇವೆ. ಅವರಿಗೆ ಸಮರ್ಪಿಸುವ ಈ ಹವ್ಯವು ಹುತವಾಗಲಿ.

**ಸವಿತ್ರೇ ವರುಣಾಯ ಬೃಹಸ್ಪತಯೇ ದುವಸ್ವತೇ ರಕ್ಷೋಘ್ನೇ ಸ್ವಾಹಾ** ಪ್ರಷ್ಟಿವಾಹೀ ರಥೋ ದಕ್ಷಿಣಾ **ದೇವಸ್ಯ ತ್ವಾ ಸವಿತುಃ ಪ್ರಸವೇಽಶ್ವಿನೋರ್ಬಾಹುಭ್ಯಾಂ ಪೂಷ್ಣೋ ಹಸ್ತಾಭ್ಯಾಗ್‌ಂ**

---

ಸವಿತ್ರೇ। ವರುಣಾಯ । ಬೃಹಸ್ಪತಯೇ । ದುವಸ್ವತೇ । ರಕ್ಷೋಘ್ನ ಇತಿ ರಕ್ಷಃ-ಘ್ನೇ । ಸ್ವಾಹಾ । ಪ್ರಷ್ಟಿವಾಹೀ । ರಥಃ । ದಕ್ಷಿಣಾ । ದೇವಸ್ಯ । ತ್ವಾ । ಸವಿತುಃ । ಪ್ರಸವ ಇತಿ ಪ್ರ-ಸವೇ । ಅಶ್ವಿನೋಃ । ಬಾಹುಭ್ಯಾಮಿತಿ ಬಾಹು-ಭ್ಯಾಮ್ । ಪೂಷ್ಣಃ । ಹಸ್ತಾಭ್ಯಾಮ್।

---

| | |
|---|---|
| ಪ್ರಷ್ಟಿವಾಹೀ ರಥಃ ದಕ್ಷಿಣಾ | ಮೂರು ಕುದುರೆಗಳನ್ನು ಹೂಡಿರುವ ರಥವು [ಈ ಯಾಗದ] ದಕ್ಷಿಣೆ. |
| **ಮಂತ್ರ** | **ವಿನಿಯೋಗ** |
| **ದೇವಸ್ಯ.....ಜುಹೋಮಿ ।** | ಅಪಾಮಾರ್ಗಹೋಮವನ್ನು ಮಾಡಲು |

---

**ಸವಿತ್ರೇ ರಕ್ಷೋಘ್ನೇ ಸ್ವಾಹಾ** = ರಕ್ಷಸ್ಸಂಹಾರ ಮಾಡುವ ಸವಿತೃದೇವನಿಗೆ ಇದು ಹುತವಾಗಲಿ; **ವರುಣಾಯ ರಕ್ಷೋಘ್ನೇ ಸ್ವಾಹಾ** = ರಕ್ಷೋನಾಶಕನಾದ ವರುಣನಿಗೆ ನೀಡಿರುವ ಈ ಹವ್ಯವು ಹುತವಾಗಲಿ. ***ದುವಸ್ವತೇ** = ಪರಿಚರ್ಯೆಗೆ ಅರ್ಹನಾದ; **ಬೃಹಸ್ಪತಯೇ ರಕ್ಷೋಘ್ನೇ ಸ್ವಾಹಾ** = ಬೃಹಸ್ಪತಿಗೆ ಸಮರ್ಪಿತವಾದ ಈ ಹವ್ಯವು ಹುತವಾಗಲಿ. ✣ **ದೇವಸ್ಯ ಸವಿತುಃ** = ಸವಿತೃದೇವನ; **ಪ್ರಸವೇ** (ಸತಿ) = ಅನುಜ್ಞೆಯಾಗ ಲಾಗಿ; **ಅಶ್ವಿನೋಃ ಬಾಹುಭ್ಯಾಮ್** = ಅಶ್ವಿನೀದೇವತೆಗಳ ತೋಳುಗಳಿಂದಲೂ; **ಪೂಷ್ಣಃ ಹಸ್ತಾಭ್ಯಾಮ್** = ಪೂಷದೇವನ ಕೈಗಳಿಂದಲೂ;

---

ನಮಗೆ ಪ್ರತಿಕೂಲವಾಗಿರುವ ರಾಕ್ಷಸಸಮೂಹವು ಒಟ್ಟುಗೂಡಿಸಲ್ಪಟ್ಟಿದೆ. ಚೆನ್ನಾಗಿ ಸುಡಲ್ಪಟ್ಟಿದೆ. ನಾನು ಈಗ ಈ ರಕ್ಷಸ್ಸಮೂಹವನ್ನು ಸುತ್ತಲೂ ಸುಟ್ಟುಬಿಡು ತ್ತೇನೆ. [ಮಂತ್ರಸಾಮರ್ಥ್ಯದಿಂದಲೇ ಇದು ಸಾಧ್ಯವಾಗುತ್ತದೆ.]

ಅಗ್ನಿ, ಯಮ, ಸವಿತೃ, ವರುಣ, ಪರಿಚರ್ಯಾರ್ಹನಾದ ಬೃಹಸ್ಪತಿ-ಇವರು ರಾಕ್ಷಸರನ್ನು ನಾಶ ಮಾಡತಕ್ಕವರು. ಅವರಿಗೆ ಈ ಹವ್ಯವನ್ನು ಸಮರ್ಪಿಸುತ್ತೇನೆ. ಇದು ಹುತವಾಗಲಿ.

---

* ಇದು **ಅಗ್ನಯೇ** ಮುಂತಾದ ಎಲ್ಲ ನಾಲ್ಕು ವಾಕ್ಯಗಳಲ್ಲಿಯೂ ಅನ್ವಯಿಸುತ್ತದೆಯೆಂದು ಕೆಲವರ ಮತ.

# ರಕ್ಷಸೋ ವಧಂ ಜುಹೋಮಿ ಹತಗ್ಂ ರಕ್ಷೋಽವಧಿಷ್ಮ ರಕ್ಷೋ ಯದ್ವಸ್ತೇ ತದ್ದಕ್ಷಿಣಾ ॥ ೭-13 ॥

[ತೇಭ್ಯಃ ಪಂಚಚತ್ವಾರಿಗ್ಂಶಚ್ಚ ।]

---

ರಕ್ಷಸಃ । ವಧಮ್ । ಜುಹೋಮಿ । ಹತಮ್ । ರಕ್ಷಃ । ಅವಧಿಷ್ಮ । ರಕ್ಷಃ । ಯತ್ । ವಸ್ತೇ । ತತ್ । ದಕ್ಷಿಣಾ ॥ ೭ ॥

---

| ಮಂತ್ರ | ವಿನಿಯೋಗ |
|---|---|
| ಹತಗ್ಂ ರಕ್ಷಃ । | ಸ್ರುವವನ್ನು ಅಗ್ನಿಯಲ್ಲಿ ಹಾಕಲು |
| ಅವಧಿಷ್ಮ ರಕ್ಷಃ । | ಉಪಸ್ಥಾನವನ್ನು ಮಾಡಲು |
| ಯತ್ ವಸ್ತೇ ತತ್ ದಕ್ಷಿಣಾ | ಯಾವ ವಸ್ತುವನ್ನು ಧರಿಸಿರುತ್ತಾನೆಯೋ ಆ ವಸ್ತುವೇ ದಕ್ಷಿಣೆಯಾಗಿದೆ. |

---

**ರಕ್ಷಸಃ ವಧಮ್** = ರಾಕ್ಷಸನಾಶವನ್ನು ಉದ್ದೇಶಿಸಿ; **ತ್ವಾ** = ನಿನ್ನನ್ನು [ಅಪಾಮಾರ್ಗಪಿಷ್ಟವನ್ನು]; **ಜುಹೋಮಿ** = ಹೋಮ ಮಾಡುತ್ತೇನೆ. ✢ **ರಕ್ಷಃ ಹತಮ್** = ರಕ್ಷಸ್ಸಂಕುಲವು ನಾಶವಾಗಿ ಹೋಯಿತು. ✢ **ರಕ್ಷಃ ಅವಧಿಷ್ಮ** = ರಕ್ಷಸ್ಸಮೂಹವನ್ನು [ದೇವತೆಗಳ ಅನುಗ್ರಹದಿಂದ] ಕೊಂದು ಹಾಕಿದೆವು.

---

ಬೆಳಗಾದ ಮೇಲೆ ಅಗ್ನಿಹೋತ್ರಕ್ಕೆ ಮೊದಲು ಅಪಾಮಾರ್ಗಸಕ್ತುಹೋಮವನ್ನು ಮಾಡಬೇಕು.

ಸವಿತೃದೇವನ ಅನುಮತಿಯನ್ನು ಪಡೆದು, ಅಶ್ವಿನೀದೇವತೆಗಳ ಬಾಹುಗಳಿಂದಲೂ, ಪೂಷದೇವನ ಹಸ್ತಗಳಿಂದಲೂ ರಾಕ್ಷಸನಾಶವನ್ನು ಉದ್ದೇಶಿಸಿ, ಈ ಅಪಾಮಾರ್ಗಸಕ್ತುಗಳನ್ನು ಹೋಮ ಮಾಡುತ್ತೇನೆ.

ರಾಕ್ಷಸಕುಲವು ಹತವಾಗಿ ಹೋಯಿತು. ರಾಕ್ಷಸಸಮೂಹವನ್ನು ನಾಶ ಮಾಡಿದೆವು.

ಈ ಯಾಗಕಾಲದಲ್ಲಿ ಧರಿಸಿರುವ ಬಟ್ಟೆಯನ್ನು ದಕ್ಷಿಣೆಯಾಗಿ ಅಧ್ವರ್ಯುವಿಗೆ ಕೊಡಬೇಕು.

# ವಿನಿಯೋಗ ಸಂಗ್ರಹ

ಪಂಚೇಧ್ಮವಹ್ನೌ ಜುಹುಯಾದ್ಯೇ ದೇವಾ[1-5] ಇತಿ ಪಂಚಭಿಃ ।
ಸಮೂಹಂತೀಧ್ಮಾನ್ ಸಮಿತಿ[6] ಪಂಚಹೋಮಸ್ತಥಾಗ್ನಯೇ[7-11] ॥
ನಿಶಿ ಹುತ್ವಾ ಸಕ್ತುಹೋಮಃ ಪ್ರಾತರ್ದೇವೇತಿ[12] ಮಂತ್ರತಃ ।
[13]ಹತಂ ಸ್ರುವಪ್ರಹರಣಮವಧಿಷ್ಮೇತಿ[14] ಚೋತ್ಥಿತಿಃ ॥
ಅನುವಾಕೇ ಸಪ್ತಮೇಽಸ್ಮಿನ್ನುಕ್ತಾ ಮಂತ್ರಾಶ್ಚತುರ್ದಶ ॥

**ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ-14**
**ಉಳಿದುದು ಬ್ರಾಹ್ಮಣಭಾಗ.**

★ ★ ★

## ॥ ಅಷ್ಟಮೋಽನುವಾಕಃ ॥

ಧಾತ್ರೇ ಪುರೋಡಾಶಂ ದ್ವಾದಶಕಪಾಲಂ ನಿರ್ವಪತ್ಯನುಮತ್ಯೈ ಚರುಗ್ಂ ರಾಕಾಯೈ ಚರುಗ್ಂ ಸಿನೀವಾಲ್ಯೈ ಚರುಂ ಕುಹ್ವೈ ಚರುಂ ಮಿಥುನೌ ಗಾವೌ ದಕ್ಷಿಣಾಽಽಗ್ನಾವೈಷ್ಣವ—

---

**ಧಾತ್ರೇ । ಪುರೋಡಾಶಮ್ । ದ್ವಾದಶಕಪಾಲಮಿತಿ ದ್ವಾದಶ-ಕಪಾಲಮ್ । ನಿರಿತಿ । ವಪತಿ । ಅನುಮತ್ಯಾ ಇತ್ಯನು-ಮತ್ಯೈ । ಚರುಮ್ । ರಾಕಾಯೈ । ಚರುಮ್ । ಸಿನೀವಾಲ್ಯೈ । ಚರುಮ್ । ಕುಹ್ವೈ । ಚರುಮ್ । ಮಿಥುನೌ । ಗಾವೌ । ದಕ್ಷಿಣಾ । ಆಗ್ನಾವೈಷ್ಣವ-**

---

ಏಳನೆಯ ಅನುವಾಕದಲ್ಲಿ ಶುನಾಸೀರೀಯದ ಕರ್ಮಚತುಷ್ಟಯವು ಹೇಳಲ್ಪಟ್ಟಿತು. ಈ ಎಂಟನೆಯ ಅನುವಾಕದಲ್ಲಿ ಒಂದು ದಿನದಲ್ಲಿ ಮಾಡುವ ದೇವಿಕಾ ಮೊದಲಾದ ಆರು ಕರ್ಮಗಳು ಹೇಳಲ್ಪಟ್ಟಿವೆ.

---

**ದೇವಿಕಾಹವಿಸ್ಸುಗಳು**

| | |
|---|---|
| **೧) ಧಾತ್ರೇ ಪುರೋಡಾಶಮ್ ದ್ವಾದಶಕಪಾಲಮ್ ನಿರ್ವಪತಿ** | ಧಾತೃದೇವನಿಗೆ ದ್ವಾದಶಕಪಾಲಸಂಸ್ಕೃತವಾದ ಪುರೋಡಾಶವನ್ನು ಯಾಗ ಮಾಡಬೇಕು. |
| **ಅನುಮತ್ಯೈ ಚರುಮ್ [ನಿರ್ವಪತಿ]** | ಅನುಮತಿದೇವತೆಗೆ ಚರುಯಾಗ ಮಾಡಬೇಕು. |
| **ರಾಕಾಯೈ ಚರುಮ್ [ನಿರ್ವಪತಿ]** | ರಾಕಾದೇವತೆಗೆ ಚರುಯಾಗವನ್ನು ಮಾಡಬೇಕು. |
| **ಸಿನೀವಾಲ್ಯೈ ಚರುಮ್ [ನಿರ್ವಪತಿ]** | ಸಿನೀವಾಲಿದೇವತೆಗೆ ಚರುಯಾಗ ಮಾಡಬೇಕು. |
| **ಕುಹ್ವೈ ಚರುಮ್ [ನಿರ್ವಪತಿ]** | ಕುಹೂದೇವತೆಗೆ ಚರುಯಾಗವನ್ನು ಮಾಡಬೇಕು. |
| **ಮಿಥುನೌ ಗಾವೌ ದಕ್ಷಿಣಾ** | ಹಸು-ಹೋರಿ ಇವುಗಳ ಜೋಡಿಯು [ಈ ಕರ್ಮದಲ್ಲಿ] ದಕ್ಷಿಣೆಯಾಗಿದೆ. |

---

೧) ಧಾತೃದೇವತೆಗೆ ದ್ವಾದಶಕಪಾಲಪುರೋಡಾಶ, ಅನುಮತಿಗೆ ಚರು, ರಾಕಾದೇವತೆಗೆ ಚರು, ಸಿನೀವಾಲಿದೇವತೆಗೆ ಚರು; ಕುಹೂ ದೇವತೆಗೆ ಚರು; ಎಂದು ಹವಿರ್ನಿರ್ವಾಪ ಮಾಡಿ ಯಾಗ ಮಾಡಬೇಕು. ಈ ಯಾಗದಲ್ಲಿ ಹಸು-ಹೋರಿ ಇವುಗಳ ಜೋಡಿಯು

ಮೇಕಾದಶಕಪಾಲಂ ನಿರ್ವಪತ್ಯೈಂದ್ರಾವೈಷ್ಣವಮೇಕಾದಶ-
ಕಪಾಲಂ ವೈಷ್ಣವಂ ತ್ರಿಕಪಾಲಂ ವಾಮನೋ ವಹೀ ದಕ್ಷಿಣಾ

---

**ಮಿತ್ಯಾಗ್ನಾ-ವೈಷ್ಣವಮ್।** ಏಕಾದಶಕಪಾಲಮಿತ್ಯೇಕಾದಶ-ಕಪಾಲಮ್ । ನಿರಿತಿ । ವಪತಿ।
ಐಂದ್ರಾವೈಷ್ಣವಮಿತ್ಯೈಂದ್ರಾ-ವೈಷ್ಣವಮ್। ಏಕಾದಶಕಪಾಲಮಿತ್ಯೇಕಾದಶ-ಕಪಾಲಮ್।
ವೈಷ್ಣವಮ್ । ತ್ರಿಕಪಾಲಮಿತಿ ತ್ರಿ-ಕಪಾಲಮ್ । ವಾಮನಃ । ವಹೀ। ದಕ್ಷಿಣಾ ।

---

**ತ್ರಿಹವಿಷ್ಕವಾದ ಮೂರು ಕರ್ಮಗಳು, ಏಕಹವಿಷ್ಕವಾದ ಎರಡು ಕರ್ಮಗಳು ಮತ್ತು ಅವುಗಳ ದಕ್ಷಿಣೆಗಳು**

| | |
|---|---|
| ೨) ಆಗ್ನಾವೈಷ್ಣವಮ್ ಏಕಾದಶ ಕಪಾಲಮ್ ನಿರ್ವಪತಿ | ಅಗ್ನಾವಿಷ್ಣುದೇವತಾಕವಾಗಿ ಏಕಾದಶಕಪಾಲ ಸಂಸ್ಕೃತವಾದ ಪುರೋಡಾಶವನ್ನು ಯಾಗ ಮಾಡ ಬೇಕು. |
| ಐಂದ್ರಾವೈಷ್ಣವಮ್ ಏಕಾದಶ ಕಪಾಲಮ್ [ನಿರ್ವಪತಿ] | ಇಂದ್ರಾವಿಷ್ಣುಗಳಿಗಾಗಿ ಏಕಾದಶಕಪಾಲಪುರೋ ಡಾಶವನ್ನು ಯಾಗ ಮಾಡಬೇಕು. |
| ವೈಷ್ಣವಮ್ ತ್ರಿಕಪಾಲಮ್ [ನಿರ್ವಪತಿ] | ವಿಷ್ಣುದೇವತೆಗಾಗಿ ಮೂರು ಕಪಾಲಗಳಲ್ಲಿ ಸಂಸ್ಕೃತವಾದ ಪುರೋಡಾಶವನ್ನು ಯಾಗ ಮಾಡ ಬೇಕು |
| ವಾಮನಃ ವಹೀ ದಕ್ಷಿಣಾ | ಗಿಡ್ಡವಾಗಿರುವ, ಹೊರೆಯನ್ನು ಹೊರುವ *ಎತ್ತು ಈ ಯಾಗದ ದಕ್ಷಿಣೆಯಾಗಿದೆ. |

---

**ದಕ್ಷಿಣೆಯಾಗಿದೆ.** [ಧಾತೃದೇವತೆಯು ಸಂವತ್ಸರ ದೇವತೆ. ಒಂದು ಕಲೆಯು ಹೀನವಾಗಿರುವ ಚಂದ್ರನುಳ್ಳ ಹುಣ್ಣಿಮೆ ಅನುಮತಿ; ಪೂರ್ಣಚಂದ್ರನುಳ್ಳ ಹುಣ್ಣಿಮೆ ರಾಕಾ; ಒಂದು ಕಲೆಯ ಚಂದ್ರನುಳ್ಳ ಅಮಾವಾಸ್ಯೆ ಸಿನೀವಾಲೀ. ಚಂದ್ರನೇ ಕಾಣದಿರುವ ಅಮಾವಾಸ್ಯೆ ಕುಹೂ; ಇವು ಇಲ್ಲಿಯ ದೇವತೆಗಳು. ಈ ದೇವತೆಗಳು ಪ್ರಜೋತ್ಪತ್ತ್ಯಾದಿ ಸಾಧನಗಳು]

---

* 'ವಾಮನ ಋಷಭೋ ವಹೀ ದಕ್ಷಿಣಾ' [ತೈ.ಬ್ರಾ. 1.7.2] ಎಂಬಲ್ಲಿ ಋಷಭಶಬ್ದ ಇದೆ.

ಗ್ನೀಷೋಮೀಯಮೇಕಾದಶಕಪಾಲಂ ನಿರ್ವಪತೀಂದ್ರಾ-
ಸೋಮೀಯಮೇಕಾದಶಕಪಾಲಗ್ಂ ಸೌಮ್ಯಂ ಚರುಂ
ಬಭ್ರುರ್ದಕ್ಷಿಣಾ

---

ಅಗ್ನೀಷೋಮೀಯಮಿತ್ಯಗ್ನೀ-ಸೋಮೀಯಮ್ । ಏಕಾದಶಕಪಾಲಮಿತ್ಯೇಕಾದಶ-ಕಪಾ-
ಲಮ್।ನಿರಿತಿ । ವಪತಿ । ಇಂದ್ರಾಸೋಮೀಯಮಿತೀಂದ್ರಾ-ಸೋಮೀಯಮ್ । ಏಕಾದಶ-
ಕಪಾಲಮಿತ್ಯೇಕಾದಶ-ಕಪಾಲಮ್ । ಸೌಮ್ಯಮ್ । ಚರುಮ್ । ಬಭ್ರುಃ । ದಕ್ಷಿಣಾ ।

---

| | |
|---|---|
| ೩) ಅಗ್ನೀಷೋಮೀಯಮ್ ಏಕಾದಶಕಪಾಲಮ್. ನಿರ್ವಪತಿ | ಅಗ್ನೀಷೋಮದೇವತೆಗಳಿಗಾಗಿ ಏಕಾದಶಕಪಾಲ ಸಂಸ್ಕೃತವಾದ ಪುರೋಡಾಶವನ್ನು ಯಾಗ ಮಾಡಬೇಕು. |
| ಇಂದ್ರಾಸೋಮೀಯಮ್ ಏಕಾದಶಕಪಾಲಮ್ [ನಿರ್ವಪತಿ] | ಇಂದ್ರಾಸೋಮದೇವತೆಗಳಿಗಾಗಿ ಹನ್ನೊಂದು ಕಪಾಲಗಳಲ್ಲಿ ಪಕ್ವವಾದ ಪುರೋಡಾಶವನ್ನು ಯಾಗ ಮಾಡಬೇಕು. |
| ಸೌಮ್ಯಮ್ ಚರುಮ್ [ನಿರ್ವಪತಿ] | ಸೋಮದೇವತೆಗಾಗಿ ಚರುವನ್ನು ಯಾಗ ಮಾಡಬೇಕು. |
| ಬಭ್ರುಃ ದಕ್ಷಿಣಾ | [ಈ ಯಾಗದಲ್ಲಿ] ಕಪಿಲವರ್ಣದ ಗೋವು ದಕ್ಷಿಣೆಯಾಗಿದೆ. |

---

೨) ಆಗ್ನಾವೈಷ್ಣವವಾದ ಏಕಾದಶಕಪಾಲಯಾಗ, ಐಂದ್ರಾವೈಷ್ಣವವಾದ ಏಕಾದಶ ಕಪಾಲಯಾಗ, ವಿಷ್ಣುದೇವತಾಕವಾದ ತ್ರಿಕಪಾಲಪುರೋಡಾಶಯಾಗ—ಇವುಗಳನ್ನು ಮಾಡಬೇಕು. ಈ ಯಾಗಕ್ಕೆ ಭಾರವನ್ನು ಹೊರಬಲ್ಲ ಗಿಡ್ಡವಾದ ಹೋರಿಯು ದಕ್ಷಿಣೆ ಯಾಗಿದೆ.

೩) ಅಗ್ನೀಷೋಮೀಯವಾದ ಏಕಾದಶಕಪಾಲಯಾಗ, ಇಂದ್ರಾಸೋಮೀಯ ವಾದ ಏಕಾದಶಕಪಾಲಯಾಗ, ಸೋಮದೇವತಾಕವಾದ ಚರುಯಾಗ-ಇವುಗಳನ್ನು ಮಾಡಬೇಕು. ಇದಕ್ಕೆ ಕಪಿಲವರ್ಣದ ಗೋವು ದಕ್ಷಿಣೆಯಾಗಿದೆ.

ಸೋಮಾಪೌಷ್ಣಂ ಚರುಂ ನಿರ್ವಪತ್ಯೈಂದ್ರಾಪೌಷ್ಣಂ ಚರುಂ ಪೌಷ್ಣಂ ಚರುಗ್ಂ ಶ್ಯಾಮೋ ದಕ್ಷಿಣಾ ವೈಶ್ವಾನರಂ ದ್ವಾದಶಕಪಾಲಂ ನಿರ್ವಪತಿ ಹಿರಣ್ಯಂ ದಕ್ಷಿಣಾ

---

ಸೋಮಾಪೌಷ್ಣಮಿತಿ ಸೋಮಾ-ಪೌಷ್ಣಮ್ । ಚರುಮ್ । ನಿರಿತಿ । ವಪತಿ । ಐಂದ್ರಾ-ಪೌಷ್ಣಮಿತ್ಯೈಂದ್ರಾ-ಪೌಷ್ಣಮ್ । ಚರುಮ್ । ಪೌಷ್ಣಮ್ । ಚರುಮ್ । ಶ್ಯಾಮಃ। ದಕ್ಷಿಣಾ । ವೈಶ್ವಾನರಮ್ । ದ್ವಾದಶಕಪಾಲಮಿತಿ ದ್ವಾದಶ-ಕಪಾಲಮ್ । ನಿರಿತಿ । ವಪತಿ। ಹಿರಣ್ಯಮ್ । ದಕ್ಷಿಣಾ ।

---

| | |
|---|---|
| ೪) ಸೋಮಾಪೌಷ್ಣಮ್ ಚರುಮ್ ನಿರ್ವಪತಿ | ಸೋಮಾಪೂಷದೇವತೆಗಳಿಗಾಗಿ ಚರುಯಾಗವನ್ನು ಮಾಡಬೇಕು. |
| ಐಂದ್ರಾಪೌಷ್ಣಮ್ ಚರುಮ್ [ನಿರ್ವಪತಿ] | ಇಂದ್ರಾಪೂಷದೇವತೆಗಳಿಗಾಗಿ ಚರುಯಾಗವನ್ನು ಮಾಡಬೇಕು. |
| ಪೌಷ್ಣಮ್ ಚರುಮ್ [ನಿರ್ವಪತಿ] | *ಪೂಷದೇವತೆಗಾಗಿ ಚರುಯಾಗವನ್ನು ಮಾಡಬೇಕು. |
| ಶ್ಯಾಮಃ ದಕ್ಷಿಣಾ | ಶ್ಯಾಮಲವರ್ಣದ [ಕಪ್ಪುಬಣ್ಣದ] ಎತ್ತು ದಕ್ಷಿಣೆಯಾಗಿದೆ. |
| ೫) ವೈಶ್ವಾನರಮ್ ದ್ವಾದಶಕಪಾಲಮ್ ನಿರ್ವಪತಿ | ವೈಶ್ವಾನರ [ವಿಶ್ವಾನರ] ದೇವನಿಗಾಗಿ ದ್ವಾದಶಕಪಾಲಪುರೋಡಾಶವನ್ನು ಯಾಗ ಮಾಡಬೇಕು. |
| ಹಿರಣ್ಯಮ್ ದಕ್ಷಿಣಾ | ಚಿನ್ನವು ಈ ಯಾಗದ ದಕ್ಷಿಣೆ. |

---

೪) ಸೋಮಾಪೂಷದೇವತಾಕವಾದ ಚರುಯಾಗ, ಐಂದ್ರಾಪೌಷ್ಣವಾದ ಚರುಯಾಗ, ಪೂಷದೇವತಾಕವಾದ ಚರುಯಾಗ–ಇವುಗಳನ್ನು ಮಾಡಬೇಕು. ಇದಕ್ಕೆ ಶ್ಯಾಮಲ [ಕಪ್ಪು] ವರ್ಣದ ಎತ್ತು ದಕ್ಷಿಣೆಯಾಗಿದೆ.

೫) ವೈಶ್ವಾನರದೇವತಾಕವಾದ ದ್ವಾದಶಕಪಾಲಯಾಗವನ್ನು ಮಾಡಬೇಕು. ಇದಕ್ಕೆ ಚಿನ್ನವು ದಕ್ಷಿಣೆ.

---

* ಪೂಷಾ = ಭೂಮಿ.

## ವಾರುಣಂ ಯವಮಯಂ ಚರುಮಶ್ವೋ ದಕ್ಷಿಣಾ ||೮-14||

**[ವೈಶ್ವಾನರಂ ದ್ವಾದಶಕಪಾಲಂ ನಿರಪ್ಯಾ ಚ ।]**

---

**ವಾರುಣಮ್। ಯವಮಯಮಿತಿ ಯವ-ಮಯಮ್। ಚರುಮ್। ಅಶ್ವಃ । ದಕ್ಷಿಣಾ ||೮||**

---

| | |
|---|---|
| ೬) ವಾರುಣಮ್ ಯವಮಯಮ್ ಚರುಮ್ [ನಿರ್ವಪತಿ] | ವರುಣದೇವನಿಗಾಗಿ ಯವಧಾನ್ಯದ ಚರುವನ್ನು ಯಾಗ ಮಾಡಬೇಕು. |
| ಅಶ್ವಃ ದಕ್ಷಿಣಾ | ಕುದುರೆಯು ಈ ಯಾಗದ ದಕ್ಷಿಣೆಯಾಗಿದೆ. |

---

೬) ವರುಣದೇವತಾಕವಾದ ಯವಧಾನ್ಯದ ಚರುಯಾಗವನ್ನು ಮಾಡಬೇಕು. ಇದಕ್ಕೆ ಕುದುರೆಯು ದಕ್ಷಿಣೆ.

ಇವು ದೇವಿಕಾದಿಯಾದ ಆರು ಹವಿಸ್ಸುಗಳು. ಒಂದು ದಿನ ಮಾಡಬೇಕಾದವು.

### ಅನುವಾಕದ ವಿಶೇಷ ವಿಷಯಗಳು

### ಅ) ಮೀಮಾಂಸಾ

**೧) ರಾಜಸೂಯಾಂಗವಾದ ಯಾಗಗಳ ಅನುಷ್ಠಾನ ಹೇಗೆ? [ಜೈ.ಸೂ. 11.3.]**

ರಾಜಸೂಯದ ಅಂಗಗಳಾದ ಯಾಗಗಳಿಗೆ ಸೋಮಾಪೌಷ್ಣ ಏಕಾದಶಕಪಾಲ ಯಾಗ ಮುಂತಾದವುಗಳು ಅಂಗವಾಗಿವೆ. ಹೀಗಿರುವಾಗ ಅವುಗಳ ಅನುಷ್ಠಾನವು ಬೇರೆ ಬೇರೆಯೇ? ಅಥವಾ ಒಟ್ಟಾಗಿ ಅಂಗಾನುಷ್ಠಾನವೇ? ಎಂದು **ಸಂಶಯ.**

ಅನುಷ್ಠಾನದಲ್ಲಿ ಕಾಲೈಕ್ಯವಿರುವುದರಿಂದ ಒಟ್ಟಿಗೇ ಅನುಷ್ಠಾನವೆಂದು ಇಲ್ಲಿನ **ಪೂರ್ವಪಕ್ಷ.**

ಇಲ್ಲಿ ದಕ್ಷಿಣಾಭೇದವಿರುವುದರಿಂದ ಕರ್ತೃಭೇದವಿದೆ. ಆದರಿಂದ ಅಂಗಗಳನ್ನು ಬೇರೆ ಬೇರೆಯಾಗಿ ಅನುಷ್ಠಿಸಬೇಕು. ಇದು ಇಲ್ಲಿನ **ಸಿದ್ಧಾಂತ.**

★ ★ ★

# ॥ ನವಮೋಽನುವಾಕಃ ॥

ಬಾರ್ಹಸ್ಪತ್ಯಂ ಚರುಂ ನಿರ್ವಪತಿ ಬ್ರಹ್ಮಣೋ ಗೃಹೇ ಶಿತಿಪೃಷ್ಠೋ ದಕ್ಷಿಣೈಂದ್ರಮೇಕಾದಶಕಪಾಲಗ್ಂ ರಾಜನ್ಯಸ್ಯ ಗೃಹ ಋಷಭೋ ದಕ್ಷಿಣಾಽದಿತ್ಯಂ ಚರುಂ ಮಹಿಷ್ಯೈ ಗೃಹೇ

---

ಬಾರ್ಹಸ್ಪತ್ಯಮ್ । ಚರುಮ್ । ನಿರಿತಿ । ವಪತಿ । ಬ್ರಹ್ಮಣಃ । ಗೃಹೇ । ಶಿತಿಪೃಷ್ಠ ಇತಿ ಶಿತಿ-ಪೃಷ್ಠಃ । ದಕ್ಷಿಣಾ । ಐಂದ್ರಮ್ । ಏಕಾದಶಕಪಾಲಮಿತ್ಯೇಕಾದಶ-ಕಪಾಲಮ್। ರಾಜನ್ಯಸ್ಯ । ಗೃಹೇ। ಋಷಭಃ। ದಕ್ಷಿಣಾ । ಆದಿತ್ಯಮ್। ಚರುಮ್। ಮಹಿಷ್ಯೈ । ಗೃಹೇ।

---

ಈ ಒಂಬತ್ತನೆಯ ಅನುವಾಕದಲ್ಲಿ ಮೊದಲಿಗೆ ಪ್ರತಿದಿನ ಪ್ರತ್ಯೇಕವಾಗಿ ಮಾಡಬೇಕಾದ ರತ್ನಿಹವಿಸ್ಸುಗಳನ್ನು ಹೇಳಲಾಗಿದೆ. ಇವು ಹನ್ನೊಂದು.

| | |
|---|---|
| ೧) ಬ್ರಹ್ಮಣಃ ಗೃಹೇ ಬಾರ್ಹಸ್ಪತ್ಯಮ್ ಚರುಮ್ ನಿರ್ವಪತಿ ಶಿತಿಪೃಷ್ಠಃ ದಕ್ಷಿಣಾ | ಋತ್ವಿಜನಾದ ಬ್ರಹ್ಮನ ಮನೆಯಲ್ಲಿ ಬೃಹಸ್ಪತಿ ದೇವತಾಕವಾದ ಚರುಯಾಗವನ್ನು ಮಾಡಬೇಕು. ಬಿಳಿಯ ಬಣ್ಣದ ಬೆನ್ನಿನ ಭಾಗವುಳ್ಳ ಗೋವು ಇದರ ದಕ್ಷಿಣೆ. |
| ೨) ರಾಜನ್ಯಸ್ಯ ಗೃಹೇ | ರಾಜನ/ಕ್ಷತ್ರಿಯನ ಮನೆಯಲ್ಲಿ |
| ಐಂದ್ರಮ್ ಏಕಾದಶಕಪಾಲಮ್ [ನಿರ್ವಪತಿ] | ಇಂದ್ರದೇವತಾಕವಾದ ಏಕಾದಶಕಪಾಲಪುರೋಡಾಶಯಾಗವನ್ನು ಮಾಡಬೇಕು. |
| ಋಷಭಃ ದಕ್ಷಿಣಾ | ಈ ಯಾಗಕ್ಕೆ ಹೋರಿಯು ದಕ್ಷಿಣೆ. |
| ೩) ಆದಿತ್ಯಮ್ ಚರುಮ್ ಮಹಿಷ್ಯೈ ಗೃಹೇ [ನಿರ್ವಪತಿ] | ಅದಿತಿದೇವತಾಕವಾದ ಚರುಯಾಗವನ್ನು ಪಟ್ಟದ ರಾಣಿಯ ಮನೆಯಲ್ಲಿ ಮಾಡಬೇಕು. |

---

ಈ ರತ್ನಿನಾಮಕಯಾಗಗಳನ್ನು ದಿನಕ್ಕೆ ಒಂದರಂತೆ ಕ್ರಮವಾಗಿ ಮಾಡಬೇಕು. ಅನುಬ್ರಾಹ್ಮಣದಲ್ಲಿ 'ಭಗಾಯ ಚರುಂ ವಾವಾತಾಯೈ ಗೃಹೇ । ವಿಚಿತ್ತಗರ್ಭಾ ಪಷ್ಠೌಹೀ ದಕ್ಷಿಣಾ ಸಮೃದ್ಧ್ಯೈ'। ಎಂದು ಹೇಳಿದೆ. [ತೈ.ಬ್ರಾ. 1.7.3] ಅದರಂತೆ

ಧೇನುರ್ದಕ್ಷಿಣಾ ನೈರ್‌ಋತಂ ಚರುಂ ಪರಿವೃಕ್ತ್ಯೈ ಗೃಹೇ ಕೃಷ್ಣಾನಾಂ ವ್ರೀಹೀಣಾಂ ನಖನಿರ್ಭಿನ್ನಂ ಕೃಷ್ಣಾ ಕೂಟಾ ದಕ್ಷಿಣಾSSಗ್ನೇಯಮಷ್ಟಾಕಪಾಲಗ್‌ಂ ಸೇನಾನ್ಯೋ ಗೃಹೇ ಹಿರಣ್ಯಂ ದಕ್ಷಿಣಾ

---

ಧೇನುಃ । ದಕ್ಷಿಣಾ । ನೈರ್‌ಋತಮಿತಿ ನೈಃ-ಋತಮ್ । ಚರುಮ್ । ಪರಿವೃಕ್ತ್ಯಾ ಇತಿ ಪರಿ-ವೃಕ್ತ್ಯೈ । ಗೃಹೇ । ಕೃಷ್ಣಾನಾಮ್ । ವ್ರೀಹೀಣಾಮ್ । ನಖನಿರ್ಭಿನ್ನಮಿತಿ ನಖ ನಿರ್ಭಿನ್ನಮ್। ಕೃಷ್ಣಾ। ಕೂಟಾ। ದಕ್ಷಿಣಾ। ಆಗ್ನೇಯಮ್। ಅಷ್ಟಾಕಪಾಲಮಿತ್ಯಷ್ಟಾ-ಕಪಾಲಮ್ । ಸೇನಾನ್ಯ ಇತಿ ಸೇನಾ-ನ್ಯಃ । ಗೃಹೇ । ಹಿರಣ್ಯಮ್ । ದಕ್ಷಿಣಾ ।

---

| | |
|---|---|
| ಧೇನುಃ ದಕ್ಷಿಣಾ | ಕರೆಯುತ್ತಿರುವ ಹಸುವು ಇದರ ದಕ್ಷಿಣೆ. |
| ೪) ಪರಿವೃಕ್ತ್ಯೈ ಗೃಹೇ | ರಾಜನ ಪ್ರೀತಿಯಿಲ್ಲದ ರಾಣಿಯ ಮನೆಯಲ್ಲಿ |
| ಕೃಷ್ಣಾನಾಮ್ ವ್ರೀಹೀಣಾಮ್ | ಕಪ್ಪು ಬತ್ತದ |
| ನಖನಿರ್ಭಿನ್ನಮ್ ನೈರ್‌ಋತಮ್ ಚರುಂ [ನಿರ್ವಪತಿ] | ಅಕ್ಕಿಯ [ಆ ರಾಣಿಯ ಉಗುರುಗಳಿಂದ ಹೊಟ್ಟನ್ನು ತೆಗೆದ] ಚರುವನ್ನು ಯಾಗ ಮಾಡಬೇಕು. |
| ಕೃಷ್ಣಾ ಕೂಟಾ ದಕ್ಷಿಣಾ | ಕೊಂಬು ಮುರಿದಿರುವ ಕಪ್ಪು ಹಸುವು ಈ ಯಾಗದ ದಕ್ಷಿಣೆ. |
| ೫) ಸೇನಾನ್ಯಃ ಗೃಹೇ | ಸೇನಾಪತಿಯ ಮನೆಯಲ್ಲಿ |
| ಆಗ್ನೇಯಮ್ ಅಷ್ಟಾಕಪಾಲಮ್ [ನಿರ್ವಪತಿ] | ಅಗ್ನಿದೇವತಾಕವಾದ ಅಷ್ಟಾಕಪಾಲಪುರೋಡಾಶವನ್ನು ಯಾಗ ಮಾಡಬೇಕು. |
| ಹಿರಣ್ಯಮ್ ದಕ್ಷಿಣಾ | ಈ ಇಷ್ಟಿಗೆ ಚಿನ್ನವು ದಕ್ಷಿಣೆ. |

---

ಆದಿತ್ಯಚರುವಿನ ಅನಂತರ ನೈರ್‌ಋತಯಾಗಕ್ಕೆ ಮೊದಲು 'ವಾವಾತಾ'ಳ ಮನೆಯಲ್ಲಿ [ರಾಜನ ರಾಣಿಯರಲ್ಲಿ ಮಧ್ಯಮಳಾದವಳು] ಭಗದೇವತಾಕವಾದ ಚರುಯಾಗವನ್ನು ಮಾಡಬೇಕು. ವ್ಯಕ್ತವಾದ ಗರ್ಭವುಳ್ಳ ಎಳೆಯ ಹಸು ಇದರ ದಕ್ಷಿಣೆ.

ವಾರುಣಂ ದಶಕಪಾಲಗ್ಂ ಸೂತಸ್ಯ ಗೃಹೇ ಮಹಾನಿರಷ್ಟೋ ದಕ್ಷಿಣಾ ಮಾರುತಗ್ಂ ಸಪ್ತಕಪಾಲಂ ಗ್ರಾಮಣ್ಯೋ ಗೃಹೇ ಪೃಶ್ನಿರ್ದಕ್ಷಿಣಾ ಸಾವಿತ್ರಂ ದ್ವಾದಶಕಪಾಲಂ [೧] ಕ್ಷತ್ತುರ್ಗೃಹ

---

ವಾರುಣಮ್ । ದಶಕಪಾಲಮಿತಿ ದಶ-ಕಪಾಲಮ್ । ಸೂತಸ್ಯ । ಗೃಹೇ । ಮಹಾನಿರಷ್ಟ ಇತಿ ಮಹಾ-ನಿರಷ್ಟಃ । ದಕ್ಷಿಣಾ । ಮಾರುತಮ್ । ಸಪ್ತಕಪಾಲಮಿತಿ ಸಪ್ತ-ಕಪಾಲಮ್। ಗ್ರಾಮಣ್ಯ ಇತಿ ಗ್ರಾಮ-ನ್ಯಃ । ಗೃಹೇ । ಪೃಶ್ನಿಃ । ದಕ್ಷಿಣಾ । ಸಾವಿತ್ರಮ್ । ದ್ವಾದಶ-ಕಪಾಲಮಿತಿ ದ್ವಾದಶ-ಕಪಾಲಮ್ [೧] ಕ್ಷತ್ತುಃ । ಗೃಹೇ ।

---

| | |
|---|---|
| ೬) ಸೂತಸ್ಯ ಗೃಹೇ ವಾರುಣಮ್ ದಶಕಪಾಲಮ್ [ನಿರ್ವಪತಿ] | ಸಾರಥಿಯ ಮನೆಯಲ್ಲಿ ವರುಣದೇವತಾಕವಾದ ದಶಕಪಾಲಪುರೋಡಾಶಯಾಗವನ್ನು ಮಾಡಬೇಕು. |
| ಮಹಾನಿರಷ್ಟಃ ದಕ್ಷಿಣಾ | ಬೀಜವನ್ನು ಒಡೆದಿರುವ ಎತ್ತು ಈ ಯಾಗದ ದಕ್ಷಿಣೆ. |
| ೭) ಗ್ರಾಮಣ್ಯಃ ಗೃಹೇ ಮಾರುತಮ್ ಸಪ್ತಕಪಾಲಮ್ [ನಿರ್ವಪತಿ] | ಗ್ರಾಮದ ಯಜಮಾನನ ಮನೆಯಲ್ಲಿ ಮರುದ್ದೇವತಾಕವಾದ ಸಪ್ತಕಪಾಲಪುರೋಡಾಶಯಾಗವನ್ನು ಮಾಡಬೇಕು. |
| ಪೃಶ್ನಿಃ ದಕ್ಷಿಣಾ | ಬಿಳಿಯ ಬಣ್ಣದ ಗೋವು ಈ ಯಾಗದ ದಕ್ಷಿಣೆ. |
| ೮) ಕ್ಷತ್ತುಃ ಗೃಹೇ | ಅಂತಃಪುರಾಧ್ಯಕ್ಷನ ಮನೆಯಲ್ಲಿ |
| ಸಾವಿತ್ರಮ್ ದ್ವಾದಶಕಪಾಲಮ್ [ನಿರ್ವಪತಿ] | ಸವಿತೃದೇವತಾಕವಾದ ದ್ವಾದಶಕಪಾಲಪುರೋಡಾಶವನ್ನು ಯಾಗ ಮಾಡಬೇಕು. |

---

ಅನುಬ್ರಾಹ್ಮಣದಲ್ಲಿ ವಿಹಿತವಾದ ಈ ಯಾಗವೂ ಸೇರಿ ಹನ್ನೆರಡು ಯಾಗಗಳು. 'ದ್ವಾದಶ ಭವಂತಿ' ಎಂದು ಪ್ರಶಂಸೆ ಮಾಡಲಾಗಿದೆ. [ಇಲ್ಲಿ ಕೆಲವು ಶಬ್ದಗಳಿಗೆ ಅರ್ಥಾಂತರ

ಉಪಧ್ವಸ್ತೋ ದಕ್ಷಿಣಾಽಽಶ್ವಿನಂ ದ್ವಿಕಪಾಲಗ್ಂ ಸಂಗ್ರಹೀ-ತುರ್ಗೃಹೇ ಸವಾತ್ಯೌ ದಕ್ಷಿಣಾ ಪೌಷ್ಣಂ ಚರುಂ ಭಾಗದುಘಸ್ಯ ಗೃಹೇ ಶ್ಯಾಮೋ ದಕ್ಷಿಣಾ ರೌದ್ರಂ ಗಾವೀಧುಕಂ ಚರುಮಕ್ಷಾ-ವಾಪಸ್ಯ ಗೃಹೇ

---

ಉಪಧ್ವಸ್ತ ಇತ್ಯುಪ-ಧ್ವಸ್ತಃ । ದಕ್ಷಿಣಾ । ಆಶ್ವಿನಮ್ । ದ್ವಿಕಪಾಲಮಿತಿ ದ್ವಿ-ಕಪಾಲಮ್। ಸಂಗ್ರಹೀತುರಿತಿ ಸಮ್-ಗ್ರಹೀತುಃ । ಗೃಹೇ । ಸವಾತ್ಯಾವಿತಿ ಸ-ವಾತ್ಯೌ । ದಕ್ಷಿಣಾ । ಪೌಷ್ಣಮ್। ಚರುಮ್। ಭಾಗದುಘಸ್ಯೇತಿ ಭಾಗ-ದುಘಸ್ಯ। ಗೃಹೇ। ಶ್ಯಾಮಃ। ದಕ್ಷಿಣಾ। ರೌದ್ರಮ್। ಗಾವೀಧುಕಮ್ । ಚರುಮ್ । ಅಕ್ಷಾವಾಪಸ್ಯೇತ್ಯಕ್ಷ-ಆವಾಪಸ್ಯ । ಗೃಹೇ ।

---

| | |
|---|---|
| ಉಪಧ್ವಸ್ತಃ ದಕ್ಷಿಣಾ | ಬೆರೆತಿರುವ ಬಣ್ಣಗಳುಳ್ಳ ಗೋವು ಇದರ ದಕ್ಷಿಣೆ. |
| ೯) ಸಂಗ್ರಹೀತುಃ ಗೃಹೇ ಆಶ್ವಿನಮ್ ದ್ವಿಕಪಾಲಮ್ [ನಿರ್ವಪತಿ] | ಕೋಶಾಧ್ಯಕ್ಷನ ಮನೆಯಲ್ಲಿ ಅಶ್ವಿನೀದೇವತಾಕವಾದ ದ್ವಿಕಪಾಲಪುರೋಡಾಶಯಾಗವನ್ನು ಮಾಡಬೇಕು. |
| ಸವಾತ್ಯೌ ದಕ್ಷಿಣಾ | ಒಂದೇ ತಾಯಿಯ ಹೊಟ್ಟೆಯಲ್ಲಿ ಜನಿಸಿದ ಎರಡು ಕರುಗಳು ಈ ಯಾಗದ ದಕ್ಷಿಣೆ. |
| ೧೦) ಭಾಗದುಘಸ್ಯ ಗೃಹೇ | ರಾಜನಿಗಾಗಿ ಕಂದಾಯ[ಷಡ್ಭಾಗ]ವನ್ನು ತೆಗೆದುಕೊಳ್ಳುವ ಅಧಿಕಾರಿಯ ಮನೆಯಲ್ಲಿ |
| ಪೌಷ್ಣಮ್ ಚರುಮ್ [ನಿರ್ವಪತಿ] | ಪೂಷದೇವತಾಕವಾದ ಚರುಯಾಗವನ್ನು ಮಾಡಬೇಕು. |
| ಶ್ಯಾಮಃ ದಕ್ಷಿಣಾ | ಶ್ಯಾಮಲ[ಕಪ್ಪು]ವರ್ಣದ ಗೋವು ಇದರ ದಕ್ಷಿಣೆ. |
| ೧೧) ಅಕ್ಷಾವಾಪಸ್ಯ ಗೃಹೇ ರೌದ್ರಮ್ ಗಾವೀಧುಕಮ್ ಚರುಮ್ [ನಿರ್ವಪತಿ] | ದಾಳಗಳನ್ನು ಹಾಕುವ ಜೂಜುಗಾರನ ಮನೆಯಲ್ಲಿ ರುದ್ರದೇವತಾಕವಾದ ಕಾಡಿನ ಗೋಧಿಯ ಚರುವಿನ ಯಾಗವನ್ನು ಮಾಡಬೇಕು. |

---

ವನ್ನೂ ಭಾಷ್ಯದಲ್ಲಿ ಹೇಳಿರುತ್ತಾರೆ. ಪೃಶ್ನಿ = ಅಲ್ಪತನು; ಉಪಧ್ವಸ್ತ = ಸಂಕೀರ್ಣವರ್ಣ; ಕ್ಷತ್ತಾ = ಮಂತ್ರಿ; ಸಂಗ್ರಹೀತಾ = ರಥದ ಹಗ್ಗಗಳನ್ನು ಹಿಡಿಯುವ ವನು; ಸೂತ = ಕ್ಷತ್ರಿಯನಿಂದ ಬ್ರಾಹ್ಮಣಸ್ತ್ರೀಯಲ್ಲಿ ಜನಿಸಿದವನು]

ಶಬಲ ಉದ್ವಾರೋ ದಕ್ಷಿಣೇಂದ್ರಾಯ ಸುತ್ರಾಮ್ಣೇ ಪುರೋಡಾಶಮೇಕಾದಶಕಪಾಲಂ ಪ್ರತಿ ನಿರ್ವಪತೀಂದ್ರಾ-ಯಾಗ್ಂಹೋಮುಚೇಽಯಂ ನೋ ರಾಜಾ

---

ಶಬಲಃ। ಉದ್ವಾರ ಇತ್ಯುತ್-ವಾರಃ। ದಕ್ಷಿಣಾ। ಇಂದ್ರಾಯ। ಸುತ್ರಾಮ್ಣ ಇತಿ ಸು-ತ್ರಾಮ್ಣೇ। ಪುರೋಡಾಶಮ್। ಏಕಾದಶಕಪಾಲಮಿತ್ಯೇಕಾದಶ-ಕಪಾಲಮ್। ಪ್ರತಿ। ನಿರಿತಿ। ವಪತಿ। ಇಂದ್ರಾಯ। ಅಗ್ಂಹೋಮುಚ ಇತ್ಯಗ್ಂಹಃ-ಮುಚೇ। ಅಯಮ್। ನಃ। ರಾಜಾ।

---

| | |
|---|---|
| ಶಬಲಃ ಉದ್ವಾರಃ ದಕ್ಷಿಣಾ | ಚಿತ್ರವರ್ಣದಿಂದ ಕೂಡಿದ, ಎತ್ತಿದ ಮತ್ತು ಉದ್ದವಾದ ಬಾಲವುಳ್ಳ ಗೋವು ಇದರ ದಕ್ಷಿಣೆಯಾಗಿದೆ. |

**ರತ್ನಿಯಾಗದ ನಂತರ ಯಜಮಾನಗೃಹದಲ್ಲಿನ ಇಷ್ಟಿಗಳು***

| | |
|---|---|
| ಇಂದ್ರಾಯ ಸುತ್ರಾಮ್ಣೇ | ಚೆನ್ನಾಗಿ ರಕ್ಷಿಸುವ ಸುತ್ರಾಮನಾಮಕನಾದ ಇಂದ್ರನಿಗೆ |
| ಪುರೋಡಾಶಮ್ ಏಕಾದಶ ಕಪಾಲಮ್ ಪ್ರತಿ ನಿರ್ವಪತಿ | ಏಕಾದಶಕಪಾಲಪುರೋಡಾಶಯಾಗವನ್ನು ಪ್ರತ್ಯೇಕ ಸ್ವಗೃಹದಲ್ಲಿ ಮಾಡಬೇಕು. |
| ಇಂದ್ರಾಯ ಅಗ್ಂಹೋಮುಚೇ [ಪುರೋಡಾಶಮ್ ಏಕಾದಶ-ಕಪಾಲಮ್ ಪ್ರತಿ ನಿರ್ವಪತಿ] | ಪಾಪಪರಿಹಾರಕನಾದ 'ಅಗ್ಂಹೋಮುಕ್' ನಾಮಕನಾದ ಇಂದ್ರನಿಗೆ ಏಕಾದಶಕಪಾಲ ಪುರೋಡಾಶಯಾಗವನ್ನು ಮಾಡಬೇಕು. |

---

| **ಮಂತ್ರ** | **ವಿನಿಯೋಗ** |
|---|---|
| ಅಯಂ....ವರ್ಧ್ಯಾತ್ ॥ | ಸ್ವಿಷ್ಟಕೃದ್ಯಾಗಕ್ಕೆ ಮೊದಲು ಅಧ್ವರ್ಯುವು ಜಪಿಸಲು |

---

+ ಅಯಮ್ ನಃ ರಾಜಾ = ✻ರಾಜಸೂಯಕರ್ತೃನಾದ] ಈ ನಮ್ಮ ರಾಜನು; ಓ

---

* ಇವು ರತ್ನಿಗಳಿಗೆ ಸಂಬಂಧಿಸಿದವುಗಳು. ಆದುದರಿಂದ ಪ್ರತ್ಯೇಕವಾಗಿ ದಕ್ಷಿಣೆಯನ್ನು ಹೇಳಿಲ್ಲ. ಋಷಭವು ದಕ್ಷಿಣೆಯೆಂದು ಕೆಲವರ ಮತ. [ಭ.ಭಾ.ಭಾ.]

**ವೃತ್ರಹಾ ರಾಜಾ ಭೂತ್ವಾ ವೃತ್ರಂ ವಧ್ಯಾನ್ಮೈತ್ರಾ**
**ಬಾರ್ಹಸ್ಪತ್ಯಂ ಭವತಿ ಶ್ವೇತಾಯ್ಯೈ ಶ್ವೇತವತ್ಸಾಯ್ಯೈ ದುಗ್ಧೇ**

---

ವೃತ್ರಹೇತಿ ವೃತ್ರ-ಹಾ । ರಾಜಾ । ಭೂತ್ವಾ । ವೃತ್ರಮ್ । ವಧ್ಯಾತ್ । ಮೈತ್ರಾ-ಬಾರ್ಹಸ್ಪತ್ಯಮಿತಿ ಮೈತ್ರಾ-ಬಾರ್ಹಸ್ಪತ್ಯಮ್ । ಭವತಿ । ಶ್ವೇತಾಯ್ಯೈ । ಶ್ವೇತವತ್ಸಾಯಾ ಇತಿ ಶ್ವೇತ-ವತ್ಸಾಯ್ಯೈ। ದುಗ್ಧೇ।

---

ವೃತ್ರಹಾ ರಾಜಾ ಭೂತ್ವಾ = ಶತ್ರುಗಳನ್ನು ಕೊಲ್ಲಲು ಸಮರ್ಥನಾದ ರಾಜನಾಗಿ;
ವೃತ್ರಮ್ ವಧ್ಯಾತ್ = ವೃತ್ರನಂತೆ ಪ್ರಬಲನಾದ ಶತ್ರುರಾಜನನ್ನು ಕೊಲ್ಲಲಿ.

---

**ಮೈತ್ರಾಬಾರ್ಹಸ್ಪತ್ಯಯಾಗ; ಅದರ ವಿಶೇಷಧರ್ಮಗಳು;**
**ದಕ್ಷಿಣಾ-ಇವುಗಳ ವಿಧಿ**

| | |
|---|---|
| ಮೈತ್ರಾಬಾರ್ಹಸ್ಪತ್ಯಮ್ ಭವತಿ | [ಅಭಿಷೇಚನೀಯಸೋಮಯಾಗದ ದೀಕ್ಷಣೀಯೇಷ್ಟಿಯ ಸ್ಥಾನದಲ್ಲಿ] ಮೈತ್ರಾಬಾರ್ಹಸ್ಪತ್ಯ ಹವಿರ್ಯಾಗವನ್ನು ಮಾಡಬೇಕು. |
| ಸ್ವಯಮ್ ಅವಪನ್ನಾಯ್ಯೈ ಶಾಖಾಯ್ಯೈ | ತಾನಾಗಿಯೇ ಬಿದ್ದುಹೋಗಿರುವ [ಕೊಂಬೆಯಿಂದಾದ] |
| ಅಶ್ವತ್ಥೇ ಚತುಸ್ಸ್ರಕ್ತೌ ಪಾತ್ರೇ | ಅಶ್ವತ್ಥವೃಕ್ಷದ ಚತುಷ್ಕೋಣಾಕಾರದ ಪಾತ್ರೆಯಲ್ಲಿ |
| ಶ್ವೇತಾಯ್ಯೈ ಶ್ವೇತವತ್ಸಾಯ್ಯೈ ದುಗ್ಧೇ | ಬಿಳಿಯ ಬಣ್ಣದ ಕರುವುಳ್ಳ ಬಿಳಿಯ ಹಸುವಿನ ಹಾಲಿನಲ್ಲಿ [ಬಾರ್ಹಸ್ಪತ್ಯಚರುವನ್ನು ಹಾಕಬೇಕು.] |

---

ಈ ನಮ್ಮ ರಾಜನು ಶತ್ರುವನ್ನು ನಿಗ್ರಹಿಸಲು ಸಮರ್ಥನಾಗಿ ವೃತ್ರನಂತೆ ಪ್ರಬಲನಾದ ಶತ್ರುರಾಜನನ್ನು ಕೊಲ್ಲಲಿ.

ರತ್ನಿಹವಿಸ್ಸುಗಳ ಅನಂತರದಲ್ಲಿ ಅಭಿಷೇಚನೀಯವೆಂಬ ಹೆಸರಿನ ಸೋಮಯಾಗವು ವಿಹಿತವಾಗಿದೆ. ಇದರ ದೀಕ್ಷಣೀಯೇಷ್ಟಿಯ ಸ್ಥಾನದಲ್ಲಿ ಮೈತ್ರಾಬಾರ್ಹ-ಸ್ಪತ್ಯೇಷ್ಟಿಯು ವಿಹಿತವಾಗಿದೆ. ಮೈತ್ರಾಬಾರ್ಹಸ್ಪತ್ಯಯಾಗದ ಹವಿಸ್ಸುಗಳು ಹೀಗೆ ಹೇಳಲ್ಪಟ್ಟಿವೆ. ಬಿಳಿಯ ಕರುವುಳ್ಳ, ಬಿಳಿಯ ಹಸುವಿನ ಹಾಲಿನಲ್ಲಿ ಬೇಯಿಸಿದ ಬಾರ್ಹಸ್ಪತ್ಯಚರು. ಆ ಹಸುವಿನ ಹಾಲಿನಿಂದಾದ ಸ್ವಯಂಸಿದ್ಧವಾದ ಆಜ್ಯದಲ್ಲಿ ಸಿದ್ಧವಾದದ್ದು

ಸ್ವಯಂಮೂರ್ತೇ ಸ್ವಯಂಮಥಿತ ಆಜ್ಯ ಆಶ್ವತ್ಥೇ[೨]ಪಾತ್ರೇ
ಚತುಸ್ರಕ್ತೌ ಸ್ವಯಮವಪನ್ನಾಯೈ ಶಾಖಾಯೈ
ಕರ್ಣಾಗ್ಂಶ್ಚಾಕರ್ಣಾಗ್ಂಶ್ಚ ತಂಡುಲಾನ್, ವಿಚಿನುಯಾದ್ಯೇ

---

ಸ್ವಯಂಮೂರ್ತ ಇತಿ ಸ್ವಯಂ-ಮೂರ್ತೇ । ಸ್ವಯಂಮಥಿತ ಇತಿ ಸ್ವಯಂ-ಮಥಿತೇ। ಆಜ್ಯೇ । ಆಶ್ವತ್ಥೇ [೨]। ಪಾತ್ರೇ । ಚತುಸ್ರಕ್ತಾವಿತಿ ಚತುಃ-ಸ್ರಕ್ತೌ । ಸ್ವಯಮವಪನ್ನಾಯಾ ಇತಿ ಸ್ವಯಂ-ಅವಪನ್ನಾಯೈ । ಶಾಖಾಯೈ । ಕರ್ಣಾನ್ । ಚ । ಅಕರ್ಣಾನ್ । ಚ । ತಂಡುಲಾನ್ । ವೀತಿ । ಚಿನುಯಾತ್ । ಯೇ ।

---

| | |
|---|---|
| ಸ್ವಯಂಮೂರ್ತೇ ಸ್ವಯಂ ಮಥಿತೇ ಆಜ್ಯೇ | ಆ ಹಾಲಿನಿಂದಾದ *ಸ್ವಯಂಮೂರ್ತ-*ಸ್ವಯಂ ಮಥಿತ ಆಜ್ಯದಲ್ಲಿ [ಮೈತ್ರಚರುವನ್ನು ಹಾಕಬೇಕು. |
| ಕರ್ಣಾನ್ ಚ ಅಕರ್ಣಾನ್ ಚ ತಂಡುಲಾನ್ ವಿಚಿನುಯಾತ್ | ನುಚ್ಚಾಗಿರುವ ಮತ್ತು ನುಚ್ಚಾಗದೆ ಇರುವ ಅಕ್ಕಿಯನ್ನು ಆರಿಸಿ ಬೇರ್ಪಡಿಸಬೇಕು. |
| ಯೇ | ಯಾವ |

---

ಮೈತ್ರ ಚರು, ಈ ಆಜ್ಯವು ಸ್ವಯಂ ಮೂರ್ತ-ಸ್ವಯಂಮಥಿತವಾಗಿರಬೇಕು. ಅದು ಸಿದ್ಧವಾಗುವ ರೀತಿಯನ್ನು ಹೀಗೆ ವಿವರಿಸಿರುತ್ತಾರೆ; ಹಾಲನ್ನು ಮಾವಿನ ಫಲಪುಷ್ಪರಸದಿಂದ ಲೇಪಿತವಾದ ದೃತಿ [ಚರ್ಮಚೀಲ]ಯಲ್ಲಿ ಕರೆಯಬೇಕು. ಹೆಪ್ಪು ಹಾಕದೆಯೇ ಅದು ಮೊಸರಾಗುತ್ತದೆ. ಇದು ಸ್ವಯಂಮೂರ್ತ ಮೊಸರು. ಇಂತಹ ಮೊಸರನ್ನು ಬದರಫಲಾದಿಗಳನ್ನು ಹಾಕಿ ಅಲುಗಾಡಿಸಿದರೆ ಅದು ಬೆಣ್ಣೆಯಾಗುತ್ತದೆ. ಇದು ಸ್ವಯಂಮಥಿತ. ಇಂತಹ ಬೆಣ್ಣೆಯನ್ನು ಬಿಸಿಲಿನಲ್ಲಿಟ್ಟು ಕರಗಿಸಿದರೆ ತುಪ್ಪವಾಗುತ್ತದೆ. ಹಾಲಿನಲ್ಲಿನ ಬಾರ್ಹಸ್ಪತ್ಯಚರು, ತುಪ್ಪದಲ್ಲಿನ ಮೈತ್ರಚರುಗಳ ಮಿಶ್ರಣವನ್ನು ಮಿತ್ರಾಬೃಹಸ್ಪತಿಗಳಿಗೆ ಸಮರ್ಪಿಸಬೇಕು.

---

* ಸ್ವಯಂಮೂರ್ತ-ಸ್ವಯಂಮಥಿತಗಳ ವಿವರಣೆ ಯನ್ನು ತಾತ್ಪರ್ಯದಲ್ಲಿ ನೀಡಿದೆ.

ಕರ್ಣಾಃ ಸ ಪಯಸಿ ಬಾರ್ಹಸ್ಪತ್ಯೋ ಯೇಽಕರ್ಣಾಃ ಸ ಆಜ್ಯೇ ಮೈತ್ರಃ ಸ್ವಯಂಕೃತಾ ವೇದಿರ್ಭವತಿ ಸ್ವಯಂದಿನಂ ಬರ್ಹಿಃ ಸ್ವಯಂಕೃತ ಇಧ್ಮಃ

---

ಕರ್ಣಾಃ । ಸಃ । ಪಯಸಿ । ಬಾರ್ಹಸ್ಪತ್ಯಃ । ಯೇ । ಅಕರ್ಣಾಃ । ಸಃ । ಆಜ್ಯೇ । ಮೈತ್ರಃ। ಸ್ವಯಂಕೃತೇತಿ ಸ್ವಯಂ– ಕೃತಾ । ವೇದಿಃ । ಭವತಿ । ಸ್ವಯಂದಿನಮಿತಿ ಸ್ವಯಂ-ದಿನಮ್। ಬರ್ಹಿಃ । ಸ್ವಯಂಕೃತ ಇತಿ ಸ್ವಯಂ-ಕೃತಃ । ಇಧ್ಮಃ ।

---

| | |
|---|---|
| ಕರ್ಣಾಃ ಸಃ ಪಯಸಿ ಬಾರ್ಹಸ್ಪತ್ಯಃ | ನುಚ್ಚಾದ ಅಕ್ಕಿಯುಂಟೋ [ಆ ಅಕ್ಕಿಯಿಂದ] ಹಾಲಿನಲ್ಲಿ ಬಾರ್ಹಸ್ಪತ್ಯಚರುವಾಗುತ್ತದೆ. |
| ಯೇ ಅಕರ್ಣಾಃ | ನುಚ್ಚಾಗದಿರುವ ಯಾವ ಅಕ್ಕಿಯುಂಟೋ |
| ಸಃ ಆಜ್ಯೇ ಮೈತ್ರಃ | ಅದು ತುಪ್ಪದಲ್ಲಿ ಪಕ್ವವಾಗಿ ಮೈತ್ರಚರುವಾಗುತ್ತದೆ. |
| ಸ್ವಯಂಕೃತಾ ವೇದಿಃ ಭವತಿ | [ಈ ಯಾಗದಲ್ಲಿ ಮಂತ್ರಗಳಿಂದ ಸಿದ್ಧಪಡಿಸದಿರುವ] ಸ್ವಯಂಸಿದ್ಧವಾದ ಭೂಪ್ರದೇಶವೇ ವೇದಿಯಾಗುತ್ತದೆ. |
| ಸ್ವಯಂದಿನಂ ಬರ್ಹಿಃ | ತಾನೇ ತುಂಡಾಗಿ ಬಿದ್ದಿರುವ ದರ್ಭೆಯೇ ಬರ್ಹಿಸ್ಸಾಗುತ್ತದೆ. |
| ಸ್ವಯಂಕೃತಃ ಇಧ್ಮಃ | ತಾನಾಗಿಯೇ ಬಿದ್ದಿರುವ ಸಮಿತ್ತುಗಳೇ ಇಧ್ಮವಾಗುತ್ತವೆ. |

---

ಮೈತ್ರಚರುವನ್ನು ಸಿದ್ಧಪಡಿಸುವ ರೀತಿ ಹೀಗಿದೆ; ತಾನಾಗಿಯೇ ಮುರಿದು ಬಿದ್ದಿರುವ ಅಶ್ವತ್ಥವೃಕ್ಷದ ಕೊನೆಯಿಂದ ಮಾಡಿದ ಚತುಷ್ಕೋಣಾಕಾರದ ಪಾತ್ರೆಯಲ್ಲಿ ತುಪ್ಪವನ್ನು ಹಾಕಿ ಚರುವನ್ನು ಮಾಡಬೇಕು. ನುಚ್ಚಾಗಿರುವ ಅಕ್ಕಿಯನ್ನು ಆರಿಸಿ ಅದರಿಂದ ಬಾರ್ಹಸ್ಪತ್ಯಚರುವನ್ನು ಮಾಡಬೇಕು. ತುಂಡಾಗದಿರುವ ಅಕ್ಕಿಯನ್ನು ಆರಿಸಿ ಅದರಿಂದ ಮೈತ್ರಚರುವನ್ನು ಸಿದ್ಧಪಡಿಸಬೇಕು. ಈ ಯಾಗಕ್ಕೆ ಸ್ವಯಂಸಿದ್ಧವಾದ ಭೂಭಾಗವೇ ವೇದಿ. ತಾನಾಗಿಯೇ ಮುರಿದು ಬಿದ್ದಿರುವ ದರ್ಭೆಯೇ ಬರ್ಹಿಸ್ಸು. ಮರದಿಂದ ತಾನಾಗಿ ಬಿದ್ದಿರುವ ಸಮಿತ್ತುಗಳೇ ಇಧ್ಮವಾಗುತ್ತವೆ. ಯಾವ ಬಿಳಿಯ ಹಸುವಿನ ಹಾಲಿನಿಂದ

ಸೈವ ಶ್ವೇತಾ ಶ್ವೇತವತ್ಸಾ ದಕ್ಷಿಣಾ ॥ ೯-17 ॥

[ಸಾವಿತ್ರಂ ದ್ವಾದಶಕಪಾಲಮಾಶ್ವತ್ಥೇ ತ್ರಯಸ್ತ್ರಿಗ್ಂಶಚ್ಚ । ]

---

ಸಾ । ಏವ । ಶ್ವೇತಾ । ಶ್ವೇತವತ್ಸೇತಿ ಶ್ವೇತ-ವತ್ಸಾ । ದಕ್ಷಿಣಾ ॥ ೯ ॥

---

ಸಾ ಏವ ಶ್ವೇತಾ ಶ್ವೇತವತ್ಸಾ ದಕ್ಷಿಣಾ — [ಯಾವ ಬಿಳಿಯ ಕರುವುಳ್ಳ ಬಿಳಿಯ ಹಸುವಿನಿಂದ ಸ್ವಯಂಮೂರ್ತಾದಿಗಳು ಸಿದ್ಧವಾಗುತ್ತವೆಯೋ] ಅದೇ ಹಸುವನ್ನು ಈ ಯಾಗದಲ್ಲಿ ದಕ್ಷಿಣೆಯನ್ನಾಗಿ ಕೊಡಬೇಕು.

---

ಹಾಲು-ತುಪ್ಪಗಳು ಸಿದ್ಧವಾಗುತ್ತವೆಯೋ ಆ ಹಸುವೇ ಈ ಯಾಗದ ದಕ್ಷಿಣೆ. [ಇಲ್ಲಿ ಮರದ ಪಾತ್ರೆಯಲ್ಲಿ ಚರುವನ್ನು ಮಾಡಲು ಸಾಧ್ಯವಿಲ್ಲವಾದುದರಿಂದ ಬೇರೆಯ ಪಾತ್ರೆಯಲ್ಲಿ ಮಾಡಿದ ಚರುವನ್ನು ಅದರಲ್ಲಿ ಹಾಕಬೇಕೆಂದು ತೋರುತ್ತದೆ.]

## ವಿನಿಯೋಗಸಂಗ್ರಹ

ಪುರಾ ಸ್ವಿಷ್ಟಕೃತೋಽಧ್ವರ್ಯುರ್ಗರಯಂ ನ ಇತಿ ಸಂಜಪೇತ್ ॥

**ಅನುವಾಕದಲ್ಲಿರುವ ಮಂತ್ರ ಸಂಖ್ಯೆ-1**

**ಉಳಿದುದು ಬ್ರಾಹ್ಮಣಭಾಗ.**

# ಅನುವಾಕದ ವಿಶೇಷ ವಿಷಯಗಳು

## ಅ) ಮೀಮಾಂಸಾ

**೧) ಸ್ವಯಂಕೃತಾ....' ಇತ್ಯಾದಿಗಳಲ್ಲಿ ಅತಿದೇಶವಿದೆಯೇ? [ಜೈ.ಸೂ.10-1]**

ಮೈತ್ರಾಬಾರ್‌ಹಸ್ಪತ್ಯಯಾಗದಲ್ಲಿ 'ಸ್ವಯಂಕೃತಾ ವೇದಿಃ' 'ಸ್ವಯಂದಿನಂ ಬರ್‌ಹಿಃ' ಎಂದು ಮೊದಲಾಗಿ ಹೇಳಿರುತ್ತಾರೆ. ಇಲ್ಲಿ ಅತಿದೇಶದಿಂದ ಬರುವ ವೇದಿಕರಣಾದಿ ಮಂತ್ರಗಳನ್ನು ಹೇಳಬೇಕೇ? ಬೇಡವೇ? ಇದು ಇಲ್ಲಿನ **ಸಂಶಯ.**

ಅತಿದೇಶವು ಒಂದೇ ಆದುದರಿಂದ, ಬೇರೆಯ ಅಂಗಗಳಿಗಾಗಿ ಅತಿದೇಶವು ಆವಶ್ಯಕವಾದುದರಿಂದ ಪ್ರಕೃತಿಯ ಮಂತ್ರಗಳನ್ನೂ ಹೇಳಬೇಕೆಂದು ಇಲ್ಲಿನ **ಪೂರ್ವಪಕ್ಷ.**

ಹವಿರಾಸಾದನಾದಿಗಳಿಗಾಗಿ ವೇದಿಕರಣವು ಬೇಕು. ಅದೇ ಸಿದ್ಧವಾದರೆ ಅದಕ್ಕಾಗಿ ಅದೃಷ್ಟಾರ್ಥಕ್ಕಾಗಿರುವ ಮಂತ್ರಗಳನ್ನು ಹೇಳಬೇಕಾಗಿಲ್ಲ. ಅಂತಹ ಕರ್ಮಗಳಿಗೆ ವಿಕೃತಿಯಲ್ಲಿ ಬಾಧವೇ. ಇದು ಇಲ್ಲಿನ **ಸಿದ್ಧಾಂತ.**

★★★

# ॥ ದಶಮೋಽನುವಾಕಃ ॥

ಅಗ್ನಯೇ ಗೃಹಪತಯೇ ಪುರೋಡಾಶಮಷ್ಟಾಕಪಾಲಂ
ನಿರ್ವಪತಿ ಕೃಷ್ಣಾನಾಂ ವ್ರೀಹೀಣಾಗ್ಂ ಸೋಮಾಯ
ವನಸ್ಪತಯೇ ಶ್ಯಾಮಾಕಂ ಚರುಗ್ಂ

---

**ಅಗ್ನಯೇ । ಗೃಹಪತಯ ಇತಿ ಗೃಹ-ಪತಯೇ । ಪುರೋಡಾಶಮ್ । ಅಷ್ಟಾಕಪಾಲ-ಮಿತ್ಯಷ್ಟಾ- ಕಪಾಲಮ್ । ನಿರಿತಿ । ವಪತಿ । ಕೃಷ್ಣಾನಾಮ್ । ವ್ರೀಹೀಣಾಮ್ । ಸೋಮಾಯ । ವನಸ್ಪತಯೇ । ಶ್ಯಾಮಾಕಮ್ । ಚರುಮ್ ।**

---

ಹಿಂದಿನ ಒಂಬತ್ತನೆಯ ಅನುವಾಕದಲ್ಲಿ ರತ್ನಿಹವಿಸ್ಸುಗಳೂ, ಅನಂತರ ಅಭಿಷೇಚನೀಯ ಸೋಮಯಾಗದ ಇಷ್ಟಿಗಳೂ ಉಕ್ತವಾಗಿವೆ. ಈ ಹತ್ತನೆಯ ಅನುವಾಕದಲ್ಲಿ **'ದೇವಸೂಹವಿಸ್ಸುಗಳು'** ಹೇಳಲ್ಪಟ್ಟಿವೆ.

---

**ಗೃಹಪತ್ಯಾದಿ ಎಂಟು ಹವಿರ್ಯಾಗಗಳ ವಿಧಿ**

| | |
|---|---|
| ೧) **ಅಗ್ನಯೇ ಗೃಹಪತಯೇ** | ಗೃಹಪತಿ ಅಗ್ನಿದೇವನಿಗಾಗಿ |
| **ಕೃಷ್ಣಾನಾಂ ವ್ರೀಹೀಣಾಮ್** | ಕಪ್ಪು ಬತ್ತದ ಅಕ್ಕಿಯ [ಹಿಟ್ಟಿನಿಂದಾದ] |
| **ಅಷ್ಟಾಕಪಾಲಂ ಪುರೋಡಾಶಮ್ ನಿರ್ವಪತಿ** | ಅಷ್ಟಾಕಪಾಲಪುರೋಡಾಶವನ್ನು ಯಾಗ ಮಾಡಬೇಕು. |
| ೨) **ವನಸ್ಪತಯೇ ಸೋಮಾಯ** | ವನಸ್ಪತಿ[ಕಾಡಿನ ಸಸ್ಯಗಳ ಒಡೆಯ]ಯಾದ ಸೋಮದೇವನಿಗಾಗಿ |

**ಶ್ಯಾಮಾಕಮ್ ಚರುಮ್** [ನಿರ್ವಪತಿ] ಸಾಮೆ ಅಕ್ಕಿಯ ಚರುವನ್ನು ಯಾಗ ಮಾಡಬೇಕು.

---

**'ದೇವಸೂ'** ಎಂಬ ಹೆಸರುಳ್ಳ, ಗೃಹಪತಿಯಾದ ಅಗ್ನಿಯೇ ಮೊದಲಾದ ದೇವತೆಗಳಿಗಾಗಿ ಅಭಿಷೇಚನೀಯಸೋಮಯಾಗದ ಪಶುಪುರೋಡಾಶಯಾಗಾನಂತರ ಆಯಾ ಯಾಗಕ್ಕೆ ವಿಹಿತವಾದ ಪುರೋಡಾಶ-ಚರುಗಳನ್ನು ಯಾಗ ಮಾಡಬೇಕು.

ಸವಿತ್ರೇ ಸತ್ಯಪ್ರಸವಾಯ ಪುರೋಡಾಶಂ ದ್ವಾದಶಕಪಾಲ-
ಮಾಶೂನಾಂ ವ್ರೀಹೀಣಾಗ್ಂ ರುದ್ರಾಯ ಪಶುಪತಯೇ
ಗಾವೀಧುಕಂ ಚರುಂ ಬೃಹಸ್ಪತಯೇ ವಾಚಸ್ಪತಯೇ
ನೈವಾರಂ ಚರು-

---

ಸವಿತ್ರೇ । ಸತ್ಯಪ್ರಸವಾಯೇತಿ ಸತ್ಯ-ಪ್ರಸವಾಯ । ಪುರೋಡಾಶಮ್ । ದ್ವಾದಶಕಪಾಲಮಿತಿ ದ್ವಾದಶ-ಕಪಾಲಮ್ । ಆಶೂನಾಮ್ । ವ್ರೀಹೀಣಾಮ್ । ರುದ್ರಾಯ । ಪಶುಪತಯ ಇತಿ ಪಶು-ಪತಯೇ । ಗಾವೀಧುಕಮ್ । ಚರುಮ್ । ಬೃಹಸ್ಪತಯೇ । ವಾಚಃ । ಪತಯೇ । ನೈವಾರಮ್ । ಚರುಮ್ ।

---

| | |
|---|---|
| ೩) ಸತ್ಯಪ್ರಸವಾಯ ಸವಿತ್ರೇ | ಸತ್ಯವಾದ ಅಭ್ಯನುಜ್ಞೆಯುಳ್ಳ ಸವಿತೃದೇವನಿಗಾಗಿ |
| ಆಶೂನಾಮ್ ವ್ರೀಹೀಣಾಮ್ ದ್ವಾದಶಕಪಾಲಂ ಪುರೋಡಾಶಮ್ [ನಿರ್ವಪತಿ] | ಅರವತ್ತು ದಿನಗಳಲ್ಲಿಯೇ ಕೊಯ್ಲಿಗೆ ಬರುವ ಬತ್ತದ ಅಕ್ಕಿಯಿಂದ ಸಿದ್ಧವಾದ ದ್ವಾದಶಕಪಾಲಪುರೋಡಾಶವನ್ನು ಯಾಗ ಮಾಡಬೇಕು. |
| ೪) ಪಶುಪತಯೇ ರುದ್ರಾಯ ಗಾವೀಧುಕಮ್ ಚರುಮ್ [ನಿರ್ವಪತಿ] | ಪಶುಗಳಿಗೆ ಒಡೆಯನಾದ ರುದ್ರದೇವನಿಗೆ ಕಾಡಿನ ಗೋಧಿಯ ಚರುವನ್ನು ಯಾಗ ಮಾಡಬೇಕು. |
| ೫) ವಾಚಸ್ಪತಯೇ ಬೃಹಸ್ಪತಯೇ | ಮಾತಿನ ಒಡೆಯನಾದ ಬೃಹಸ್ಪತಿದೇವನಿಗೆ |
| ನೈವಾರಮ್ ಚರುಮ್ [ನಿರ್ವಪತಿ] | [ಒಣಗಿದ ಕೆರೆಯಲ್ಲಿ ತಾನಾಗಿ ಬೆಳೆದ] ತೃಣಧಾನ್ಯವಿಶೇಷದ ಚರುವನ್ನು ಯಾಗ ಮಾಡಬೇಕು. |

ಮಿಂದ್ರಾಯ ಜ್ಯೇಷ್ಠಾಯ ಪುರೋಡಾಶಮೇಕಾದಶಕಪಾಲಂ ಮಹಾವ್ರೀಹೀಣಾಂ ಮಿತ್ರಾಯ ಸತ್ಯಾಯಾಂಽಽಬಾನಾಂ ಚರುಂ ವರುಣಾಯ ಧರ್ಮಪತಯೇ ಯವಮಯಂ ಚರುಗ್ಂ

---

ಇಂದ್ರಾಯ । ಜ್ಯೇಷ್ಠಾಯ । ಪುರೋಡಾಶಮ್ । ಏಕಾದಶಕಪಾಲಮಿತ್ಯೇಕಾದಶ-ಕಪಾಲಮ್ । ಮಹಾವ್ರೀಹೀಣಾಮಿತಿ ಮಹಾ-ವ್ರೀಹೀಣಾಮ್ । ಮಿತ್ರಾಯ । ಸತ್ಯಾಯ। ಆಂಬಾನಾಮ್ । ಚರುಮ್ । ವರುಣಾಯ । ಧರ್ಮಪತಯ ಇತಿ ಧರ್ಮ-ಪತಯೇ । ಯವಮಯಮಿತಿ ಯವ-ಮಯಮ್ । ಚರುಮ್ ।

---

| | |
|---|---|
| ೧) ಜ್ಯೇಷ್ಠಾಯ ಇಂದ್ರಾಯ | ದೇವತೆಗಳಲ್ಲಿ ಜ್ಯೇಷ್ಠನಾದ ಇಂದ್ರನಿಗಾಗಿ |
| ಮಹಾವ್ರೀಹೀಣಾಮ್ | [ತಾನಾಗಿಯೇ ಗದ್ದೆಯಲ್ಲಿ ಬಿದ್ದು ಬೆಳೆದಿರುವ] ದಪ್ಪ ಬತ್ತದ |
| ಏಕಾದಶಕಪಾಲಂ ಪುರೋಡಾಶಮ್ [ನಿರ್ವಪತಿ] | ಹನ್ನೊಂದು ಕಪಾಲಗಳಲ್ಲಿ ಪಕ್ವವಾದ ಪುರೋಡಾಶದ ಯಾಗವನ್ನು ಮಾಡಬೇಕು. |
| ೨) ಸತ್ಯಾಯ ಮಿತ್ರಾಯ ಆಂಬಾನಾಂ ಚರುಮ್ [ನಿರ್ವಪತಿ] | ಸತ್ಯಸ್ವರೂಪನಾದ ಮಿತ್ರದೇವನಿಗೆ ಧಾನ್ಯ ವಿಶೇಷದ ಚರುವನ್ನು ಯಾಗ ಮಾಡಬೇಕು. |
| ೩) ಧರ್ಮಪತಯೇ ವರುಣಾಯ ಯವಮಯಂ ಚರುಮ್ [ನಿರ್ವಪತಿ] | ಧರ್ಮಕ್ಕೆ ಒಡೆಯನಾದ ವರುಣದೇವನಿಗೆ ಯವಗಳಿಂದ ಸಿದ್ಧವಾದ ಚರುವನ್ನು ಯಾಗ ಮಾಡಬೇಕು. |

---

'ಆಂಬ' ಮೊದಲಾದವು ಧಾನ್ಯವಿಶೇಷಗಳ ಹೆಸರುಗಳಾಗಿವೆ.

ಸವಿತಾ ತ್ವಾ ಪ್ರಸವಾನಾಗ್ಂ ಸುವತಾಮಗ್ನಿರ್ಗೃಹಪತೀ-
ನಾಗ್ಂ ಸೋಮೋ ವನಸ್ಪತೀನಾಗ್ಂ ರುದ್ರಃ ಪಶೂನಾಂ [೧]
ಬೃಹಸ್ಪತಿರ್ವಾಚಾಮಿಂದ್ರೋ ಜ್ಯೇಷ್ಠಾನಾಂ ಮಿತ್ರ-
ಸ್ಸತ್ಯಾನಾಂ ವರುಣೋ ಧರ್ಮಪತೀನಾಂ

---

ಸವಿತಾ । ತ್ವಾ । ಪ್ರಸವಾನಾಮಿತಿ ಪ್ರ-ಸವಾನಾಮ್ । ಸುವತಾಮ್ । ಅಗ್ನಿಃ । ಗೃಹಪತೀ-ನಾಮಿತಿ ಗೃಹ-ಪತೀನಾಮ್ । ಸೋಮಃ । ವನಸ್ಪತೀನಾಮ್ । ರುದ್ರಃ । ಪಶೂನಾಮ್[೧]। ಬೃಹಸ್ಪತಿಃ । ವಾಚಾಮ್ । ಇಂದ್ರಃ । ಜ್ಯೇಷ್ಠಾನಾಮ್ । ಮಿತ್ರಃ । ಸತ್ಯಾನಾಮ್ । ವರುಣಃ । ಧರ್ಮಪತೀನಾಮಿತಿ ಧರ್ಮ-ಪತೀನಾಮ್ ।

---

| ಮಂತ್ರ | ವಿನಿಯೋಗ |
|---|---|
| ಸವಿತಾ ತ್ವಾ... ಜಾನರಾಜ್ಯಾಯ । | ಬ್ರಹ್ಮನು ಯಜಮಾನನ ಹಸ್ತಗ್ರಹಣ ಮಾಡಲು |

---

✣ [ಎಲೈ! ಯಜಮಾನನೇ!] **ಸವಿತಾ** = [ಅನುಜ್ಞೆ ಕೊಡುವುದರಲ್ಲಿ ಪ್ರಮುಖನಾದ] ಸವಿತೃದೇವನು; **ತ್ವಾ** = ನಿನ್ನನ್ನು; **ಪ್ರಸವಾನಾಮ್** = ಸ್ವಭೃತ್ಯರಾದವರಲ್ಲಿ [ಸ್ವಾಮಿಯಾಗುವುದಕ್ಕೆ] **ಸುವತಾಮ್** = ಅನುಜ್ಞೆ ನೀಡಲಿ. **ಅಗ್ನಿಃ** = [ಗೃಹಪತಿಯಾದ] ಅಗ್ನಿದೇವನು; **ಗೃಹಪತೀನಾಮ್** = ಗೃಹಪತಿಗಳ[ಯಜಮಾನರ] [ಮುಖ್ಯನಾಗಿರುವಂತೆ]; **ಸುವತಾಮ್** = ಅನುಮತಿಸಲಿ. **ಸೋಮಃ** = ಸೋಮದೇವನು; **ವನಸ್ಪತೀನಾಮ್**= ವನಸ್ಪತಿಗಳ [ಒಡೆಯನಾಗಿರುವಂತೆ] **ಸುವತಾಮ್** = ಅನುಗ್ರಹಿಸಲಿ. **ರುದ್ರಃ** = [ಪಶುಪತಿಯಾದ] ರುದ್ರನು; **ಪಶೂನಾಮ್** = ಪಶುಗಳಿಗೆ [ಒಡೆಯನಾಗುವಿಕೆಯನ್ನು]; **ಸುವತಾಮ್** = ಅನುಮತಿಸಲಿ. **ಬೃಹಸ್ಪತಿಃ** = [ವಾಕ್ಪತಿಯಾದ] ಬೃಹಸ್ಪತಿಯು; **ವಾಚಾಮ್** = ಮಾತುಗಳಿಗೆ [ಒಡೆಯನಾಗುವುದಕ್ಕೆ] **ಸುವತಾಮ್** = ಅನುಮತಿಸಲಿ. **ಇಂದ್ರಃ** = [ಸರ್ವಜ್ಯೇಷ್ಠನಾದ] ಇಂದ್ರನು; **ಜ್ಯೇಷ್ಠಾನಾಮ್** = ಸರ್ವಜ್ಯೇಷ್ಠತೆಯನ್ನು; **ಸುವತಾಮ್** = ಅನುಗ್ರಹಿಸಲಿ. **ಮಿತ್ರಃ** = ಸತ್ಯಾಧಿಪತಿಯಾದ ಮಿತ್ರದೇವನು; **ಸತ್ಯಾನಾಮ್** = ಸತ್ಯಗಳಿಗೆ [ಸ್ವಾಮಿಯಾಗುವಂತೆ]; **ಸುವತಾಮ್** = ಅನುಮತಿಸಲಿ. **ವರುಣಃ**= [ಧರ್ಮಕ್ಕೆ ಒಡೆಯನಾದ] ವರುಣದೇವನು; **ಧರ್ಮಪತೀನಾಮ್** = ಧರ್ಮಕ್ಕೆ ಒಡೆಯರಲ್ಲಿ[ಸ್ವಾಮಿಯನ್ನಾಗಿ]; **ಸುವತಾಮ್** = ಅನುಮತಿಸಲಿ.

**ಯೇ ದೇವಾ ದೇವಸುವಃ ಸ್ಥ ತ ಇಮಮಾಮುಷ್ಯಾಯಣಮನ-ಮಿತ್ರಾಯ ಸುವಧ್ವಂ ಮಹತೇ ಕ್ಷತ್ರಾಯ ಮಹತ ಆಧಿ-ಪತ್ಯಾಯ ಮಹತೇ ಜಾನರಾಜ್ಯಾಯೈಷ ವೋ ಭರತಾ ರಾಜಾ**

---

ಯೇ । ದೇವಾಃ । ದೇವಸುವ ಇತಿ ದೇವ-ಸುವಃ । ಸ್ಥ । ತೇ । ಇಮಮ್ । ಆಮುಷ್ಯಾಯ-ಣಮ್ । ಅನಮಿತ್ರಾಯ । ಸುವಧ್ವಮ್ । ಮಹತೇ । ಕ್ಷತ್ರಾಯ । ಮಹತೇ। ಆಧಿಪತ್ಯಾಯೇತ್ಯಾಧಿ-ಪತ್ಯಾಯ । ಮಹತೇ । ಜಾನರಾಜ್ಯಾಯೇತಿ ಜಾನ-ರಾಜ್ಯಾಯ । ಏಷಃ । ವಃ । ಭರತಾಃ । ರಾಜಾ ।

---

| ಮಂತ್ರ | ವಿನಿಯೋಗ |
|---|---|
| ಏಷ ವೋ ಭರತಾ ರಾಜಾ । | ಕ್ಷತ್ರಿಯ, ವೈಶ್ಯಾದಿಪ್ರಜೆಗಳನ್ನು ಕುರಿತು ರಾಜನೆಂದು ಘೋಷಿಸಲು |

---

**ದೇವಾಃ** = ದೇವತೆಗಳೇ! **ಯೇ** = ಯಾವ ನೀವು; **ದೇವಸುವಃ ಸ್ಥ** = ಯಜಮಾನ ಪ್ರೇರಕರಾಗಿದ್ದೀರೋ; **ತೇ** = ಆ ನೀವು; **ಇಮಮ್ ಆಮುಷ್ಯಾಯಣಮ್** = [ದೇವ ದತ್ತನ] ಪೌತ್ರನಾದ [ಯಜ್ಞದತ್ತನ] ಪುತ್ರನಾದ ಈ ಯಜಮಾನನನ್ನು [ಇಂತಹ ಹೆಸರಿನ ವನನ್ನು]; **ಅನಮಿತ್ರಾಯ ಸುವಧ್ವಮ್** = ಶತ್ರುರಹಿತನಾಗುವುದಕ್ಕೆ ಅನುಮತಿಸಿರಿ. **ಮಹತೇ ಕ್ಷತ್ರಾಯ** = ಶ್ರೇಷ್ಠ ಕ್ಷತ್ರಿಯನಾಗುವುದಕ್ಕಾಗಿ; **ಸುವಧ್ವಮ್** = ಅನುಮತಿಸಿರಿ. **ಮಹತೇ ಆಧಿಪತ್ಯಾಯ** = ತಡೆಯಿಲ್ಲದ ಆಧಿಪತ್ಯಕ್ಕಾಗಿ; **ಸುವಧ್ವಮ್** = ಅನುಮತಿಸಿರಿ. **ಮಹತೇ ಜಾನರಾಜ್ಯಾಯ** = ಸಾಗರಪರ್ಯಂತವಾದ ಭೂಮಿಯ ಒಡೆತನಕ್ಕಾಗಿ; **ಸುವಧ್ವಮ್** = ಅನುಗ್ರಹಿಸಿರಿ. ✣ **ಭರತಾಃ** = ಭಾರತದೇಶದಲ್ಲಿರುವ ಕ್ಷತ್ರಿಯಾದಿ ಪ್ರಜೆಗಳೇ! **ಏಷಃ** = ಈ ರಾಜಸೂಯಕರ್ತನಾದ ಯಜಮಾನನು; **ವಃ ರಾಜಾ** = ನಿಮಗೆ ರಾಜನಾಗಿದ್ದಾನೆ. [ಇವನನ್ನು ಸೇವಿಸಿರಿ]

---

ಈ ಯಾಗದೇವತೆಗಳಾದ ಅಗ್ನ್ಯಾದಿಗಳು ಈ ಯಜಮಾನನಿಗೆ ಎಲ್ಲ ಕ್ಷೇತ್ರಗಳಲ್ಲಿಯೂ ಒಡೆತನವನ್ನು ಅನುಗ್ರಹಿಸಲಿ. ದೇವತಾನುಗ್ರಹದಿಂದ ಈ ರಾಜನು ಶತ್ರುರಹಿತನೂ, ಎದುರಿಲ್ಲದ ಶ್ರೇಷ್ಠಕ್ಷತ್ರಿಯನೂ, ಸರ್ವಾಧಿಪತಿಯೂ, ಸಮುದ್ರಪರ್ಯಂತವಾದ ಭೂಮಿಗೆ ಚಕ್ರವರ್ತಿಯೂ ಆಗಲಿ.

ಸೋಮೋಽಸ್ಮಾಕಂ ಬ್ರಾಹ್ಮಣಾನಾಗ್ಂ ರಾಜಾ ಪ್ರತಿ ತ್ಯನ್ನಾಮ ರಾಜ್ಯಮಧಾಯಿ ಸ್ವಾಂ ತನುವಂ ವರುಣೋ ಅಶಿಶ್ರೇಚ್ಛುಚೇರ್ಮಿತ್ರಸ್ಯ

---

ಸೋಮಃ । ಅಸ್ಮಾಕಮ್ । ಬ್ರಾಹ್ಮಣಾನಾಮ್ । ರಾಜಾ । ಪ್ರತೀತಿ । ತ್ಯತ್ । ನಾಮ । ರಾಜ್ಯಮ್ । ಅಧಾಯಿ । ಸ್ವಾಮ್ । ತನುವಮ್ । ವರುಣಃ । ಅಶಿಶ್ರೇತ್ । ಶುಚೇಃ । ಮಿತ್ರಸ್ಯ ।

---

| ಮಂತ್ರ | ವಿನಿಯೋಗ |
|---|---|
| ಸೋಮಃ.... ರಾಜಾ । | ಬ್ರಹ್ಮನು ಹೇಳಲು |
| ಪ್ರತಿ ತ್ಯತ್...ಋತಸ್ಯ ನಾಮ । | ಯಜಮಾನನು ಮುಖವನ್ನು ತೊಳೆದುಕೊಳ್ಳಲು |

---

+ ಅಸ್ಮಾಕಮ್ ಬ್ರಾಹ್ಮಣಾನಾಮ್ = ಬ್ರಾಹ್ಮಣರಾದ ನಮಗೆ; ಸೋಮಃ = ಉತ್ತಮನಾದ ಸೋಮದೇವನೇ; ರಾಜಾ = ರಾಜನಾಗಿದ್ದಾನೆ. + ತ್ಯತ್ = ಆ [ವರುಣಾದಿದೇವತೆಗಳು ಯಜಮಾನನಲ್ಲಿ ಸ್ಥಿರವಾಗಿರುವಂತೆ ಅನುಗ್ರಹಿಸಿದ]; ರಾಜ್ಯಮ್ = ರಾಜ್ಯವು; ನಾಮ = ಯಜಮಾನನಿಗೆ ಅಧೀನವಾಗಿರುವಂತೆ; ಪ್ರತಿ ಅಧಾಯಿ = ವರುಣಾದಿಗಳಿಂದ ಯಜಮಾನನಲ್ಲಿ ಪ್ರತಿಷ್ಠಾಪಿತವಾಯಿತು. ವರುಣಃ = ವರುಣನು; [ಇತರ ಅಗ್ನ್ಯಾದಿ ದೇವತೆಗಳು]; ಸ್ವಾಮ್ ತನುವಮ್ = ತಮ್ಮ ತಮ್ಮ ಧರ್ಮಪತಿಯೇ ಮೊದಲಾದ ಶರೀರವನ್ನು; ಅಶಿಶ್ರೇತ್ = ಆಶ್ರಯಿಸಿ ಯಜಮಾನನಿಗೆ ಧರ್ಮಪತಿತ್ವಾದಿಗಳು ಉಂಟಾಗುವಂತೆ ಅನುಗ್ರಹಿಸಿದರು. ಶುಚೇಃ ಮಿತ್ರಸ್ಯ = ನಾವೂ ಶುಚಿಯಾದ ಮಿತ್ರನೇ ಮೊದಲಾದ ದೇವತೆಗಳ;

---

ಭಾರತದೇಶದಲ್ಲಿರುವ ಕ್ಷತ್ರಿಯಾದಿಪ್ರಜೆಗಳೇ! ಈ ರಾಜಸೂಯಕರ್ತನಾದ ಯಜಮಾನನು ನಿಮಗೆ ರಾಜನಾಗಿದ್ದಾನೆ. ಇವನನ್ನು ಸೇವಿಸಿರಿ. [ಭಾರತದ ರಾಜನಾಗಿದ್ದರೆ ಮಾತ್ರ ಈ ಮಂತ್ರವನ್ನು ಹೇಳಬೇಕು. ಬೇರೆ ದೇಶದ ದೊರೆಯಾಗಿದ್ದರೆ ಯಾವ ದೇಶವೋ ಅದನ್ನು ನಿರ್ದೇಶಿಸಬೇಕೆಂದು ಕೆಲವರು ಹೇಳುತ್ತಾರೆ. [ಭ.ಭಾ.ಭಾ.]

**ವ್ರತ್ಯಾ ಅಭೂಮಾಮನ್ಮಹಿ ಮಹತ ಋತಸ್ಯ ನಾಮ ಸರ್ವೇ ವ್ರಾತಾ ವರುಣಸ್ಯಾಭೂವನ್ವಿ ಮಿತ್ರ ಏವೈರರಾತಿಮತಾರೀದ-ಸೂಷುದಂತ ಯಜ್ಞಿಯಾ ಋತೇನ ವ್ಯು ತ್ರಿತೋ ಜರಿಮಾಣಂ ನ**

---

ವ್ರತ್ಯಾಃ । ಅಭೂಮ । ಅಮನ್ಮಹಿ । ಮಹತಃ । ಋತಸ್ಯ । ನಾಮ । ಸರ್ವೇ । ವ್ರಾತಾಃ। ವರುಣಸ್ಯ । ಅಭೂವನ್ । ವೀತಿ। ಮಿತ್ರಃ । ಏವೈಃ । ಅರಾತಿಮ್ । ಅತಾರೀತ್ । ಅಸೂಷುದಂತ। ಯಜ್ಞಿಯಾಃ । ಋತೇನ। ವೀತಿ । ಉ । ತ್ರಿತಃ । ಜರಿಮಾಣಮ್ । ನಃ।

---

| ಮಂತ್ರ | ವಿನಿಯೋಗ |
|---|---|
| ಸರ್ವೇ.... ಅನಟ್ । | ಯಜಮಾನನು ಮುಖವನ್ನು ತೊಳೆಯಲು |

---

**ವ್ರತ್ಯಾಃ ಅಭೂಮ** = ಅನುಗ್ರಹದಿಂದ ಶುಚೀಭೂತರಾಗಿ ಕರ್ಮಯೋಗ್ಯರಾದೆವು; **ಮಹತಃ ಋತಸ್ಯ ನಾಮ** = ಮಹಾಯಾಗವಾದ ರಾಜಸೂಯಯಾಗದ ಕರ್ತೃಗಳೆಂಬ ಹೆಸರನ್ನು; **ಅಮನ್ಮಹಿ** = ಯಾವಾಗಲೂ ಶ್ರೇಷ್ಠವೆಂದು ತಿಳಿದಿದ್ದೇವೆ. ∻ **ಸರ್ವೇ** = ಋತ್ವಿಜರೆಲ್ಲರೂ; **ವರುಣಸ್ಯ** = ವರುಣನ/ಅಗ್ನ್ಯಾದಿದೇವತೆಗಳ [ಅನುಗ್ರಹದಿಂದ]; **ವ್ರಾತಾಃ ಅಭೂವನ್** = ಯಜ್ಞಯೋಗ್ಯರಾದರು. **ಮಿತ್ರಃ** = ಮಿತ್ರದೇವನು/ಬೇರೆಯ ದೇವತೆಗಳೊಡನೆ; **ಏವೈಃ** = [ನಮ್ಮನ್ನು ರಕ್ಷಿಸುವ ಉದ್ದೇಶದ] ಆಗಮನಗಳಿಂದ; **ಅರಾತಿಮ್** = ಶತ್ರುವನ್ನು; **ವಿ ಅತಾರೀತ್** = ಅತಿಕ್ರಮಿಸಲು ಸಮರ್ಥರನ್ನಾಗಿ ಮಾಡಿದನು; **ಯಜ್ಞಿಯಾಃ** = ಯಜ್ಞಕ್ಕೆ ಸಂಬಂಧಿಸಿದ ಋತ್ವಿಜರು; **ಋತೇನ** = ಈ ಮಹಾಯಜ್ಞದಿಂದ; **ಅಸೂಷುದಂತ** = [ನಮ್ಮನ್ನು] ರಕ್ಷಿಸಿದರು. **ತ್ರಿತಃ** = [ಬ್ರಾಹ್ಮಣಾದಿವರ್ಣತ್ರಯದಿಂದ ಆರಾಧಿಸಲ್ಪಡುವ] ತ್ರೇತಾಗ್ನಿಯು; **ನಃ** = ನಮ್ಮ; **ಜರಿಮಾಣಮ್**= ಮುಪ್ಪಿನಿಂದಾಗುವ ದೇಹಶೈಥಿಲ್ಯವನ್ನು; **ವ್ಯು** = ವಿಶೇಷವಾಗಿ ತೆಗೆದುಹಾಕಿ;

---

ಬ್ರಾಹ್ಮಣರಾದ ನಮಗೆ ಉತ್ತಮನಾದ ಸೋಮದೇವನೇ ಉತ್ತಮರಾಜನಾಗಿದ್ದಾನೆ. ಬೇರೆ ಸಾಮಾನ್ಯರು ನಮಗೆ ರಾಜರಲ್ಲ. ಈಗ ರಾಜಸೂಯಕರ್ತನೂ ನಮಗೆ ರಾಜನಾಗಿದ್ದಾನೆ [ಭ.ಭಾ.ಭಾ.]

ಎರಡು ವಾರುಣಮಂತ್ರಗಳಿಂದ ಮುಖವನ್ನು ತೊಳೆದುಕೊಳ್ಳಬೇಕು. ವರುಣಾದಿಗಳು ಧರ್ಮವೇ ಮೊದಲಾದವುಗಳಿಗೆ ಒಡೆಯರು. ಅವರು ತಮ್ಮ ಶಕ್ತಿಯನ್ನು ಯಜಮಾನನಿಗೆ ಕೊಡಲಿ. ಆತನು ಎಲ್ಲರಿಗೂ ಒಡೆಯನಾಗುವಂತೆ ಅನುಗ್ರಹಿಸಲಿ. ಆ ದೇವತೆಗಳ ಅನುಗ್ರಹದಿಂದ ನಾವು ಯಾಗವನ್ನು ಮಾಡಲು ಅರ್ಹರಾದೆವು. ಎಲ್ಲಾ

ಆನಡ್ವಿಷ್ಣೋಃ ಕ್ರಮೋಽಸಿ ವಿಷ್ಣೋಃ ಕ್ರಾಂತಮಸಿ ವಿಷ್ಣೋರ್ವಿಕ್ರಾಂತಮಸಿ ॥ ೧೦-19 ॥

[ಪಶೂನಾಂ ವ್ರಾತಾಃ ಪಂಚವಿಗ್‌ಂಶತಿಶ್ಚ ।]

---

ಆನಟ್ । ವಿಷ್ಣೋಃ । ಕ್ರಮಃ । ಅಸಿ । ವಿಷ್ಣೋಃ । ಕ್ರಾಂತಮ್ । ಅಸಿ । ವಿಷ್ಣೋಃ । ವಿಕ್ರಾಂತಮಿತಿ ವಿ-ಕ್ರಾಂತಮ್ । ಅಸಿ ॥ ೧೦ ॥

---

| ಮಂತ್ರ | ವಿನಿಯೋಗ |
|---|---|
| ವಿಷ್ಣೋಃ ಕ್ರಮಃ....ಕ್ರಾಂತಂ ....ವಿಕ್ರಾಂತಮಸಿ । | ಯಜಮಾನನು ವಿಷ್ಣುಕ್ರಮವೆಂಬ ಮೂರು ಮಂತ್ರಗಳಿಂದ ಮೂರು ಹೆಜ್ಜೆಗಳನ್ನಿಡಲು |

---

ಆನಟ್ = ದೀರ್ಘಾಯುಷ್ಯವನ್ನು ಸ್ಥಾಪಿಸಿದನು. ✣ ವಿಷ್ಣೋಃ ಕ್ರಮಃ ಅಸಿ = [ಎಲೈ ಪ್ರಥಮಪದನ್ಯಾಸವೇ! ನೀನು ತ್ರಿವಿಕ್ರಮಾವತಾರದಲ್ಲಿ ಒಂದು ಹೆಜ್ಜೆಯಿಂದ ಭೂಮಿಯನ್ನು ಅಳೆದ] ವಿಷ್ಣುವಿನ ಪಾದನ್ಯಾಸವಾಗಿದ್ದೀಯೆ. ✣ ವಿಷ್ಣೋಃ ಕ್ರಾಂತಮ್ ಅಸಿ = [ಎಲೈ! ದ್ವಿತೀಯಪದನ್ಯಾಸವೇ! ನೀನು ಅಂತರಿಕ್ಷವನ್ನು ಆಕ್ರಮಿಸಿದ] ವಿಷ್ಣುವಿನ ಎರಡನೆಯ ಪಾದನ್ಯಾಸವಾಗಿದ್ದೀಯೆ. ✣ ವಿಷ್ಣೋಃ ವಿಕ್ರಾಂತಮ್ ಅಸಿ = [ಎಲೈ! ತೃತೀಯಪಾದನ್ಯಾಸವೇ! ನೀನು ಪರಾಕ್ರಮದಿಂದ ದ್ಯುಲೋಕವನ್ನು ಅಳೆದ] ವಿಷ್ಣುವಿನ ಮೂರನೆಯ ಹೆಜ್ಜೆಯಾಗಿದ್ದೀಯೆ.

---

ಋತ್ವಿಜರೂ ಯಜ್ಞಾರ್ಹರಾದರು. ಮಿತ್ರಾದಿಗಳು ನಮ್ಮನ್ನು ಶುಚಿಗಳನ್ನಾಗಿ ಮಾಡಿದರು. ಶತ್ರುಗಳನ್ನು ಅತಿಕ್ರಮಿಸುವಂತೆ ಅನುಗ್ರಹಿಸಿದರು. ಬ್ರಾಹ್ಮಣಾದಿವರ್ಣತ್ರಯದಿಂದ ಆರಾಧಿಸಲ್ಪಡುವ ಅಗ್ನಿದೇವನು ನಮ್ಮ ಮುಪ್ಪನ್ನು ಹೋಗಲಾಡಿಸಿ, ದೀರ್ಘಾಯುಸ್ಸನ್ನು ಕೊಡಲಿ.

ಎಲೈ! ಪ್ರಥಮಪದನ್ಯಾಸವೇ! ಭೂಮಿಯನ್ನು ಅಳೆದ ತ್ರಿವಿಕ್ರಮಾವ ತಾರದ ವಿಷ್ಣುವಿನ ಪಾದನ್ಯಾಸವಾಗಿರುವೆ.

ಎಲೈ! ದ್ವಿತೀಯಪದನ್ಯಾಸವೇ! ಅಂತರಿಕ್ಷವನ್ನು ಆಕ್ರಮಿಸಿದ ವಿಷ್ಣುವಿನ ಹೆಜ್ಜೆಯ ನ್ಯಾಸವಾಗಿರುವೆ.

ಎಲೈ! ತೃತೀಯಪದನ್ಯಾಸವೇ! ನೀನು ದ್ಯುಲೋಕವನ್ನು ಅಳೆದ ವಿಷ್ಣುವಿನ ಮೂರನೆಯ ಹೆಜ್ಜೆಯಾಗಿರುವೆ.

## ವಿನಿಯೋಗ ಸಂಗ್ರಹ

[1]ಸವಿತೇತಿ ಸ್ವಾಮಿಹಸ್ತಂ ಬ್ರಹ್ಮಾ ಗೃಹ್ಣೀತ [2]ಏಷ ವಃ ।
ರತ್ನಿಭ್ಯಃ ಸ್ವಾಮಿನಂ ಬ್ರೂಯಾತ್ [3]ಸೋಮೇತಿ ಬ್ರಹ್ಮಣೋ ಜಪಃ ।
[4-5]ಪ್ರತಿ ದ್ವಾಭ್ಯಾಂ ಮುಖಂ ಸ್ವಾಮೀ ಮಾರ್ಷ್ಟಿ [6-8]ವಿಷ್ಣೋಸ್ತ್ರಿಭಿಃ ಕ್ರಮಃ ।
ದಶಮೇ ಹ್ಯನುವಾಕೇಽಸ್ಮಿನ್ನಷ್ಟೌ ಮಂತ್ರಾ ಉದೀರಿತಾಃ ।

**ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ—8**

ಉಳಿದುದು ಬ್ರಾಹ್ಮಣಭಾಗ.

## ಅನುವಾಕದ ವಿಶೇಷ ವಿಷಯಗಳು

### ಅ) ಮೀಮಾಂಸಾ

**೧) ಹವಿಷ್ಕೃದಾಹ್ವಾನದಲ್ಲಿ ವಾಗ್ವಿಸರ್ಗ ಹೇಗೆ? [ಜೈ.ಸೂ. 11.3]**

ರಾಜಸೂಯದಲ್ಲಿ ನಾನಾ ಬೀಜಗಳ ಇಷ್ಟಿಗಳಿವೆ. ಅಂತೆಯೇ ಅನೇಕ ಹವಿಷ್ಕೃದಾಹ್ವಾನಗಳು ಉಂಟಾಗುತ್ತವೆ. ಪ್ರಕೃತಿಯಲ್ಲಿ ಹವಿಷ್ಕೃದಾಹ್ವಾನದ ಸಮಯದಲ್ಲಿ ವಾಗ್ವಿಸರ್ಗವನ್ನು ಹೇಳಿರುತ್ತಾರೆ. ಇಲ್ಲಿ ಅನೇಕ ಬಾರಿ ಹವಿಷ್ಕೃದಾಹ್ವಾನ ವಿರುವುದರಿಂದ ವಾಗ್ವಿಸರ್ಗವು ಎಷ್ಟು ಬಾರಿ? ಇದು ಇಲ್ಲಿನ ಸಂಶಯ.

ಪ್ರತಿಯೊಂದು ಹವಿಷ್ಕೃದಾಹ್ವಾನದಲ್ಲಿಯೂ ವಾಗ್ವಿಸರ್ಗವನ್ನು ಮಾಡಬೇಕು ಅಥವಾ ಕಡೆಯ ಹವಿಷ್ಕೃದಾಹ್ವಾನದಲ್ಲಿ ಮಾಡಬೇಕೆಂಬುದು ಇಲ್ಲಿನ ಪೂರ್ವಪಕ್ಷ.

ವಿಹಿತವಾದ ವಾಗ್ಯಮಕ್ಕೆ ಅವಧಿಯಾಗಿ ವಾಗ್ವಿಸರ್ಗವು ರಾಗಪ್ರಾಪ್ತ. ಆದರ ಅನುವಾದವನ್ನು ಮಾತ್ರ ಪ್ರಕೃತಿಯಲ್ಲಿ ಹೇಳಿದೆ. ವಾಗ್ವಿಸರ್ಗವು ವಿಹಿತವಲ್ಲವಾದು ದರಿಂದ ಕೊನೆಯಲ್ಲಿ ಮಾಡಬೇಕು. ಇದು ಇಲ್ಲಿನ ಸಿದ್ಧಾಂತ.

**೨) ಅವಹನನವು ಎಷ್ಟು ಬಾರಿ? [ಜೈ.ಸೂ. 10.4]**

ನಾನಾಬೀಜೇಷ್ಟಿಯಲ್ಲಿ ಅವಹನನದ ಆವೃತ್ತಿ ಇದೆಯೇ? ಇದು ಸಂಶಯ. ಒಮ್ಮೆ ಅನುಷ್ಠಿಸಿದರೆ ಸಾಕೆಂಬುದು ಪೂರ್ವಪಕ್ಷ.

ಅವಹನನಭೇದದಿಂದ ಆದರ ಮಂತ್ರಗಳೂ, ಅವಹನನವೂ ಬೇರೆ ಬೇರೆಯಾ ಗಿಯೇ ಆಚರಿಸಲ್ಪಡಬೇಕು. ಇದು ಸಿದ್ಧಾಂತ.

★ ★ ★

# ॥ ಏಕಾದಶೋಽನುವಾಕಃ ॥

## ಅರ್ಥೇತಃ ಸ್ಥಾಪಾಂ ಪತಿರಸಿ

---

**ಅರ್ಥೇತ ಇತ್ಯರ್ಥ-ಇತಃ । ಸ್ಥ । ಅಪಾಮ್ । ಪತಿಃ । ಅಸಿ ।**

---

ಹತ್ತನೆಯ ಅನುವಾಕದಲ್ಲಿ ದೇವಸೂಹವಿಸ್ಸುಗಳು ಉಕ್ತವಾಗಿವೆ. ಈ ಹನ್ನೊಂದನೆಯ ಅನುವಾಕದಲ್ಲಿ ಅಭಿಷೇಕಕ್ಕಾಗಿ ತರುವ ನೀರಿನ ವಿಷಯವಾದ ಮಂತ್ರಗಳು ಹೇಳಲ್ಪಟ್ಟಿವೆ. ಈ ಅನುವಾಕದಲ್ಲಿ ಹದಿನಾರು [16] ಮಂತ್ರಗಳು ಪಠಿತವಾಗಿವೆ. ಶಾಖಾಂತರದ ಒಂದು ಮಂತ್ರವೂ ಸೇರಿ ಹದಿನೇಳು [17] ಮಂತ್ರಗಳಾಗುತ್ತವೆ. ಹದಿನಾರು ಹೋಮಗಳು, ಹದಿನಾರು ಗ್ರಹಣಗಳು. ಹೋಮಮಂತ್ರಗಳಲ್ಲಿಯೂ, ಗ್ರಹಣ ಮಂತ್ರಗಳಲ್ಲಿಯೂ 'ಅಪೋ ದೇವೀಃ... ಅರಾತೀಃ' ಎಂಬ ಋಕ್ಕಿನ ಅನುಷಂಗವಿದೆ. ಅನುಷಂಗದ ನಂತರ 'ರಾಷ್ಟ್ರದಾಃ ಸ್ಥ...ಸ್ವಾಹಾ' ಎಂಬುದು ಹೋಮಮಂತ್ರ. 'ರಾಷ್ಟ್ರದಾಃ ಸ್ಥ...ದತ್ತ ।' ಇದು ಗ್ರಹಣಮಂತ್ರವಾಗಿದೆ. ಯಾವ ನೀರಿನಲ್ಲಿ ಹೋಮವೋ ಅದೇ ನೀರನ್ನು ಗ್ರಹಣ ಮಾಡಬೇಕು.

---

| ಮಂತ್ರ | ವಿನಿಯೋಗ |
|---|---|
| 1. ೧)* ಅರ್ಥೇತಃ ಸ್ಥಾಪೋ.... ಅರಾತೀಃ । ರಾಷ್ಟ್ರದಾಃ ಸ್ಥ.... ಸ್ವಾಹಾ ॥ | ಹೋಮದಲ್ಲಿ |
| ೨) ಅರ್ಥೇತಸ್ಸ್ಥಾಪೋ...... ಅರಾತೀಃ । ರಾಷ್ಟ್ರದಾಃ ಸ್ಥ..... ಅಮುಷ್ಮೈ ದತ್ತ ।* | ಜಲಗ್ರಹಣಕ್ಕಾಗಿ |

---

* – *ಮೊದಲನೆಯ ಮಂತ್ರದಲ್ಲಿ ಅನುಷಂಗವನ್ನು ಮಾಡಿದ ನಂತರದ ಮಂತ್ರಸ್ವರೂಪವನ್ನು ತಿಳಿಸಿದೆ. ಉಳಿದ ಮಂತ್ರಗಳಲ್ಲಿಯೂ ಹೀಗೆಯೇ.

# ವೃಷಾಸ್ಯೂರ್ಮಿರ್ವೃಷಸೇನೋಽಸಿ ವ್ರಜಕ್ಷಿತಃ ಸ್ಥ

---

ವೃಷಾ । ಅಸಿ । ಊರ್ಮಿಃ । ವೃಷಸೇನ ಇತಿ ವೃಷ-ಸೇನಃ । ಅಸಿ । ವ್ರಜಕ್ಷಿತ ಇತಿ ವ್ರಜ-ಕ್ಷಿತಃ । ಸ್ಥ ।

---

| ಮಂತ್ರ | ವಿನಿಯೋಗ |
|---|---|
| 2. ಅಪಾಂ ಪತಿರಸ್ಯಪೋ......ದತ್ತ । | ಹೋಮ ಮತ್ತು ಗ್ರಹಣ. |
| 3. ವೃಷಾಸ್ಯೂರ್ಮಿರಪೋ..... ದತ್ತ । | ಹೋಮ–ಗ್ರಹಣ |
| 4. ವೃಷಸೇನೋಽಸ್ಯಪೋ.... ದತ್ತ । | ಹೋಮ–ಗ್ರಹಣ |
| 5. ವ್ರಜಕ್ಷಿತಃ ಸ್ಥಾಪೋ.... ದತ್ತ । | ಹೋಮ–ಗ್ರಹಣ |

---

✣ **ಅರ್ಥೇತಃ ಸ್ಥ** = [ಎಲೈ! ಸರಸ್ವತೀನದಿಯ ಜಲಗಳೇ! ನೀವು ಸರಸ್ವತೀನದಿಯಿಂದ ಯಜ್ಞರೂಪ] ಪ್ರಯೋಜನಕ್ಕಾಗಿ[ಯಾಗಶಾಲೆಗೆ] ಬರುವವರಾಗಿದ್ದೀರಿ. ✣ **ಅಪಾಮ್ ಪತಿಃ ಅಸಿ** = [ಎಲೈ! ಸಮುದ್ರವೇ! ಅಥವಾ *ಪುನ್ನದವೇ! ನೀನು] ನೀರಿನ ಒಡೆಯನಾಗಿದ್ದೀಯೆ. ✣ **ವೃಷಾ ಅಸಿ** = [ಯಾವುದಾದರೂ ತಡೆಯು ಬಂದಾಗ ಮೇಲಕ್ಕೆ ಹರಿಯುವ ಜಲವೇ!] ನೀನು ಸೇಚನಸಮರ್ಥನಾಗಿದ್ದೀಯೆ. ✣ **ವೃಷಸೇನಃ ಅಸಿ*** = [ತಡೆ ಬಂದಾಗ ಕೆಳಕ್ಕೆ ಹರಿಯುವ ನೀರೇ!] ನೀನು ತೋಯಿಸಲು ಸಮರ್ಥನಾದ ಜಲರಾಶಿಯಾಗಿದ್ದೀಯೆ. ✣ **ವ್ರಜಕ್ಷಿತಃ ಸ್ಥ** = [ಎಲೈ! ಸೇದುವ ಬಾವಿಯ ಜಲವೇ!] ನೀನು ಹಸುಗಳ ವಾಸಸ್ಥಾನವಾದ ಕೊಟ್ಟಿಗೆಯಂತೆ ನೀರುಗಳ ವಾಸಸ್ಥಾನವಾಗಿದ್ದೀಯೆ.

---

* ಪೂರ್ವಕ್ಕೆ ಹರಿಯುವ ಪ್ರವಾಹಗಳು ನದಿಗಳು. ಪಶ್ಚಿಮಕ್ಕೆ ಹರಿಯುವ ಪ್ರವಾಹಗಳು ನದಗಳು. ನದಶಬ್ದವು ಪುಲ್ಲಿಂಗ. ಆದುದರಿಂದ ''ಪತಿಃ'' ಎಂಬ ಪುಲ್ಲಿಂಗವು ಹೊಂದುತ್ತದೆ.

* ಇಲ್ಲಿ 'ಅಸಿ' ಎಂಬ ಏಕವಚನವು 'ನೀರಿನ ರಾಶಿ' ಎಂಬುದನ್ನು ಇಟ್ಟುಕೊಂಡೂ, 'ಸ್ಥ' ಎಂಬ ಬಹುವಚನವು 'ನೀರುಗಳು' ಎಂಬುದನ್ನು ಇಟ್ಟುಕೊಂಡೂ ಬಂದಿದೆ.

# ಮರುತಾಮೋಜಃ ಸ್ಥ ಸೂರ್ಯವರ್ಚಸಃ ಸ್ಥ ಸೂರ್ಯತ್ವಚಸಃ ಸ್ಥ ಮಾಂದಾಃ ಸ್ಥ ವಾಶಾಃ ಸ್ಥ

---

ಮರುತಾಮ್ । ಓಜಃ । ಸ್ಥ । ಸೂರ್ಯವರ್ಚಸ ಇತಿ ಸೂರ್ಯ-ವರ್ಚಸಃ । ಸ್ಥ । ಸೂರ್ಯತ್ವಚಸ ಇತಿ ಸೂರ್ಯ-ತ್ವಚಸಃ । ಸ್ಥ । ಮಾಂದಾಃ । ಸ್ಥ । ವಾಶಾಃ । ಸ್ಥ ।

---

| ಮಂತ್ರ | ವಿನಿಯೋಗ |
|---|---|
| 6. ಮರುತಾಮೋಜಃ ಸ್ಥಾಪೋ....ದತ್ತ । | ಹೋಮ-ಗ್ರಹಣ |
| 7. ಸೂರ್ಯವರ್ಚಸಃ ಸ್ಥಾಪೋ...ದತ್ತ । | ಹೋಮ-ಗ್ರಹಣ |
| 8. ಸೂರ್ಯತ್ವಚಸಃ ಸ್ಥಾಪೋ...ದತ್ತ । | ಹೋಮ-ಗ್ರಹಣ |
| 9. ಮಾಂದಾಃ ಸ್ಥಾಪೋ... ದತ್ತ । | ಹೋಮ-ಗ್ರಹಣ |
| 10. ವಾಶಾಃ ಸ್ಥಾಪೋ....ದತ್ತ । | ಹೋಮ-ಗ್ರಹಣ |

---

✣ **ಮರುತಾಮ್ ಓಜಃ ಸ್ಥ** = [ಸುಳಿಗಳಲ್ಲಿ ಮೇಲಕ್ಕೆ ಹೋಗುವ ನೀರುಗಳೇ! ನೀವು] ಗಾಳಿಯ ಬಲರೂಪರಾಗಿದ್ದೀರಿ. ✣ **ಸೂರ್ಯವರ್ಚಸಃ ಸ್ಥ** = [ಬಿಸಿಲಿರುವಾಗ ಸುರಿಯುವ ಮಳೆಯ ನೀರುಗಳೇ!] ನೀವು ಸೂರ್ಯನ ತೇಜಸ್ಸನ್ನು ಹೊಂದಿದವರಾಗಿರುತ್ತೀರಿ. ✣ **ಸೂರ್ಯತ್ವಚಸಃ ಸ್ಥ** = [ಎಲೈ! ಸೂರ್ಯಚಂದ್ರಾದಿಗಳನ್ನು ಪ್ರತಿಬಿಂಬಿಸುವ ನೀರುಗಳೇ!] ನೀವು ಸೂರ್ಯಾದಿಗಳ ಪ್ರತಿಬಿಂಬರೂಪಶರೀರವನ್ನು ಧಾರಣೆ ಮಾಡಿದವರಾಗಿರುತ್ತೀರಿ. ✣ **ಮಾಂದಾಃ ಸ್ಥ** = [ಎಲೈ! ನಿಂತಿರುವ ನೀರುಳ್ಳ ಕೆರೆ ಮೊದಲಾದವುಗಳ ನೀರುಗಳೇ!] ನೀವು ಮಂದಸ್ವಭಾವದವರಾಗಿರುತ್ತೀರಿ. ✣ **ವಾಶಾಃ ಸ್ಥ** = [ಎಲೈ! ಮಂಜಿನ ಹನಿಗಳ ನೀರುಗಳೇ!] [ನೀವು ಮನುಷ್ಯಸಂಚಾರಕ್ಕೆ ಅಡ್ಡಿ ಪಡಿಸದೆ] ವಶವಾಗಿರುತ್ತೀರಿ.

## ಶಕ್ವರೀಃ ಸ್ಥ ವಿಶ್ವಭೃತಃ ಸ್ಥ ಜನಭೃತಃ ಸ್ಥಾಗ್ನೇಸ್ತೇಜಸ್ಯಾಃ ಸ್ಥಾಪಾಮೋಷಧೀನಾಗ್ಂ ರಸಃ ಸ್ಥಾಪೋ

---

ಶಕ್ವರೀಃ । ಸ್ಥ । ವಿಶ್ವಭೃತ ಇತಿ-ವಿಶ್ವ-ಭೃತಃ । ಸ್ಥ । ಜನಭೃತ ಇತಿ ಜನ-ಭೃತಃ । ಸ್ಥ। ಅಗ್ನೇಃ । ತೇಜಸ್ಯಾಃ । ಸ್ಥ । ಅಪಾಮ್ । ಓಷಧೀನಾಮ್ । ರಸಃ । ಸ್ಥ । ಅಪಃ ।

---

| ಮಂತ್ರ | ವಿನಿಯೋಗ |
|---|---|
| 11.ಶಕ್ವರೀಃ ಸ್ಥಾಪೋ....ದತ್ತ । | ಹೋಮ-ಗ್ರಹಣ |
| 12.ವಿಶ್ವಭೃತಃ ಸ್ಥಾಪೋ....ದತ್ತ । | ಹೋಮ-ಗ್ರಹಣ |
| 13.ಜನಭೃತಃ ಸ್ಥಾಪೋ....ದತ್ತ । | ಹೋಮ-ಗ್ರಹಣ |
| 14.ಅಗ್ನೇಸ್ತೇಜಸ್ಯಾಃ ಸ್ಥಾಪೋ....ದತ್ತ । | ಹೋಮ-ಗ್ರಹಣ |
| 15.ಅಪಾಮೋಷಧೀನಾಗ್ಂ ರಸಃ ಸ್ಥಾಪೋ....ದತ್ತ । | ಹೋಮ-ಗ್ರಹಣ |

---

✢ **ಶಕ್ವರೀಃ ಸ್ಥ** = [ಎಲೈ! ಗರ್ಭಕೋಶದಲ್ಲಿರುವ ನೀರುಗಳೇ!] ನೀವು ಗರ್ಭರಕ್ಷಣಸಮರ್ಥರಾಗಿರುತ್ತೀರಿ. ✢ **ವಿಶ್ವಭೃತಃ ಸ್ಥ** = [ಎಲೈ! ಹಾಲಿನಲ್ಲಿ ಇರುವ ನೀರುಗಳೇ!] ನೀವು ವಿಶ್ವವನ್ನು ಪೋಷಿಸುವವರಾಗಿದ್ದೀರಿ. ✢ **ಜನಭೃತಃ ಸ್ಥ** = [ಎಲೈ! ಮೊಸರಿನಲ್ಲಿ ಇರುವ ನೀರುಗಳೇ!] ನೀವು ಜನರನ್ನು ಪೋಷಿಸುವವರಾಗಿದ್ದೀರಿ. ✢ **ಅಗ್ನೇಃ ತೇಜಸ್ಯಾಃ ಸ್ಥ**= [ಎಲೈ! ತುಪ್ಪದಲ್ಲಿ ಇರುವ ರಸಾಂಶಗಳೇ!] ನೀವು ಅಗ್ನಿಯ ತೇಜಸ್ಸಿನಿಂದ ಜನಿಸಿದವರಾಗಿರುತ್ತೀರಿ. ✢ **ಅಪಾಮ್ ಓಷಧೀನಾಮ್ ರಸಃ ಸ್ಥ** = [ಎಲೈ! ಜೇನಿನಲ್ಲಿರುವ ರಸಗಳೇ!] ನೀವು ನೀರಿನ ಮತ್ತು ಓಷಧಿಗಳ ರಸರೂಪರಾಗಿರುತ್ತೀರಿ.

**ದೇವೀರ್ಮಧುಮತೀರಗೃಹ್ಣನ್ನೂರ್ಜಸ್ವತೀ ರಾಜಸೂಯಾಯ ಚಿತಾನಾಃ । ಯಾಭಿರ್ಮಿತ್ರಾವರುಣಾವಭ್ಯಷಿಂಚನ್, ಯಾಭಿರಿಂದ್ರಮನಯನ್ನತ್ಯರಾತೀಃ ।**

---

ದೇವೀಃ । ಮಧುಮತೀಃ । ಅಗೃಹ್ಣನ್ನ್ । ಊರ್ಜಸ್ವತೀಃ । ರಾಜಸೂಯಾಯೇತಿ ರಾಜ-ಸೂಯಾಯ। ಚಿತಾನಾಃ ॥ ಯಾಭಿಃ । ಮಿತ್ರಾವರುಣಾವಿತಿ ಮಿತ್ರಾ-ವರುಣೌ । ಅಭ್ಯಷಿಂಚ-ನ್ನಿತ್ಯಭಿ-ಅಸಿಂಚನ್ನ್ । ಯಾಭಿಃ । ಇಂದ್ರಮ್ । ಅನಯನ್ನ್ । ಅತೀತಿ । ಅರಾತೀಃ ॥

---

**ಶಾಖಾಂತರದ ಮಂತ್ರಗಳು**

**16. [ಪ್ರಭಾವರೀಃ ಸ್ಥಾ]ಪೋ...ದತ್ತ।** ಹೋಮ-ಗ್ರಹಣ

**17. [ಪರಿವಾಹಿಣೀಃ ಸ್ಥಾ]ಪೋ....ದತ್ತ।** ಹೋಮ-ಗ್ರಹಣ

---

[ಪ್ರಭಾವರೀಃ=ಮೇಲಕ್ಕೆ ಹಾರಿ ಕೆಳಕ್ಕೆ ಬೀಳುವ ನೀರುಗಳು]; [ಪರಿವಾಹಿಣೀಃ = ಉಪನದಿಗಳ ನೀರುಗಳು] [ಈ ಮಂತ್ರಗಳಿಗೂ ಅನುಷಂಗದ ಮಂತ್ರಗಳನ್ನು ಸೇರಿಸಬೇಕು.]

❖ **ರಾಜಸೂಯಾಯ ಚಿತಾನಾಃ** = ರಾಜಸೂಯಯಾಗಕ್ಕಾಗಿ ಚಿಂತಿಸುತ್ತಿರುವ; [ಋತ್ವಿಜರು] **ದೇವೀಃ** = ಪ್ರಕಾಶಮಾನವಾದ; **ಮಧುಮತೀಃ** = ಮಧುರವಾಗಿರುವ; **ಊರ್ಜಸ್ವತೀಃ** = ಬಲವೃದ್ಧಿಕರವಾದ; **ಅಪಃ** = ನೀರುಗಳನ್ನು; **ಅಗೃಹ್ಣನ್ನ್** = ಗ್ರಹಣ ಮಾಡಿದರು. **ಯಾಭಿಃ** = ಯಾವ ನೀರುಗಳಿಂದ; [ದೇವತೆಗಳು ಪೂರ್ವದಲ್ಲಿ] **ಮಿತ್ರಾವರುಣೌ** = ಮಿತ್ರಾವರುಣದೇವತೆಗಳನ್ನು; **ಅಭ್ಯಷಿಂಚನ್ನ್** = ಅಭಿಷೇಕಿಸಿದರೋ; [ಮತ್ತು] **ಯಾಭಿಃ** = ಯಾವ ನೀರುಗಳಿಂದ; **ಇಂದ್ರಮ್** = ಇಂದ್ರದೇವನನ್ನು; **ಅರಾತೀಃ ಅತಿ ಅನಯನ್ನ್** = ಶತ್ರುಗಳನ್ನು ಮೀರಿಸಿ ಶ್ರೇಷ್ಠನಾಗುವಂತೆ ಮಾಡಿದರೋ [ಅಂತಹ ನೀರುಗಳನ್ನು ಗ್ರಹಿಸಿದರು]

---

**[ಹೋಮ-ಗ್ರಹಣದ ಮಂತ್ರಗಳ ಅನ್ವಯಾರ್ಥದಿಂದಲೇ ತಾತ್ಪರ್ಯವು ಸುಗಮವಿರುವುದರಿಂದ ತಾತ್ಪರ್ಯವನ್ನು ಪ್ರತ್ಯೇಕ ನೀಡಿಲ್ಲ.]**

ರಾಷ್ಟ್ರದಾಃ ಸ್ಥ ರಾಷ್ಟ್ರಂ ದತ್ತ ಸ್ವಾಹಾ ರಾಷ್ಟ್ರದಾಃ ಸ್ಥ ರಾಷ್ಟ್ರಮಮುಷ್ಮೈ ದತ್ತ ॥ ೧೧-20 ॥

[ಅತ್ಯೇಕಾದಶ ಚ ।]

---

ರಾಷ್ಟ್ರದಾ ಇತಿ ರಾಷ್ಟ್ರ-ದಾಃ । ಸ್ಥ । ರಾಷ್ಟ್ರಮ್ । ದತ್ತ । ಸ್ವಾಹಾ । ರಾಷ್ಟ್ರದಾ ಇತಿ ರಾಷ್ಟ್ರ-ದಾಃ । ಸ್ಥ । ರಾಷ್ಟ್ರಮ್ । ಅಮುಷ್ಮೈ । ದತ್ತ ॥ ೧೧ ॥

---

✢[ಎಲೈ ನೀರುಗಳೇ! ನೀವು] ರಾಷ್ಟ್ರದಾಃ ಸ್ಥ = ರಾಷ್ಟ್ರವನ್ನು ಕೊಡುವವರಾಗಿದ್ದೀರಿ; [ನೀವು] ರಾಷ್ಟ್ರಮ್ ದತ್ತ = [ಈ ಯಜಮಾನನಿಗೆ] ರಾಷ್ಟ್ರವನ್ನು ಕೊಡಿರಿ; ಸ್ವಾಹಾ = ಈ ಆಹುತಿಯು ನಿಮಗೆ ಹುತವಾಗಲಿ. ✢ ರಾಷ್ಟ್ರದಾಃ ಸ್ಥ = ರಾಷ್ಟ್ರದಾತೃಗಳು ನೀವು; ರಾಷ್ಟ್ರಮ್ ಅಮುಷ್ಮೈ ದತ್ತ = [ಇಂತಹ ಹೆಸರಿನವನಾದ] ಇವನಿಗೆ [ಸಿಂಹವರ್ಮನೆಂಬ ರಾಜನಿಗೆ] ರಾಷ್ಟ್ರವನ್ನು ಕೊಡಿರಿ.

---

## ವಿನಿಯೋಗ ಸಂಗ್ರಹ

ಸಾರಸ್ವತಿ ಜಲೇಽರ್ಥೇತಿ[1] ಹೋಮಃ ಸಾಮುದ್ರಿಕೇ ತ್ವಪಾಮ್[2] ।
ವೃಷಾಸೀತಿ[3] ಪ್ರತೀಪೋರ್ಮಾವನ್ವೀಪೋರ್ಮೌ ಪುನರ್ವೃಷ[4] ॥
[5]ವ್ರಜ ಕೂಪ್ಯಾಸು ಮರುತಾಂ[6] ವಾಯುಪ್ರತಿಹತಾಸ್ವಥ ।
[7] ಸೂರ್ಯಸ್ವಾತಪವೃಷ್ಟಾಸು [8] ಸೂರ್ಯ ಬಿಂಬಯುತಾಸು ಚ ॥
[9]ಮಾಂದಾಃ ಸ್ಥಿರಾಸು ವಾಶಾಃ[10] ಸ್ಥ ನೀಹಾರಸ್ಥಾಸು ಶಕ್ವರೀಃ[11] ।
ಗವೋಲ್ಬಸ್ಥಾಸು ವಿಶ್ವೇತಿ[12] ಕ್ಷೀರಗಾಸು ಜನೇತಿ[13] ತು ॥
ದಧಿಗಾಸು ಘೃತಸ್ಥಾಸು ತ್ವಗ್ನೇ[14]ರ್ಮಧುಗತಾಸು ತು ।
[15]ಅಪಾಮಪಃ[16] ಸರ್ವಶೇಷ ಋಗೇಷಾ ರಾಷ್ಟ್ರದಾ[16] ಇತಿ ।
ಸ್ವಾಹಾಂತೋ ಹೋಮಗೋಽನ್ಯಸ್ತು ಗ್ರಹಣೇ ದಶ ಪಂಚ ಚ ॥

**ಅನುವಾಕದಲ್ಲಿರುವ ಮಂತ್ರಸಂಖ್ಯೆ—16**

★ ★ ★

# ॥ ದ್ವಾದಶೋಽನುವಾಕಃ ॥

**ದೇವೀರಾಪಸ್ಸಂ ಮಧುಮತೀರ್ಮಧುಮತೀಭಿಃ ಸೃಜ್ಯಧ್ವಂ**
**ಮಹಿ ವರ್ಚಃ ಕ್ಷತ್ರಿಯಾಯ ವನ್ವಾನಾ**

---

**ದೇವೀಃ । ಆಪಃ । ಸಮಿತಿ । ಮಧುಮತೀರಿತಿ ಮಧು-ಮತೀಃ । ಮಧುಮತೀಭಿರಿತಿ ಮಧು-ಮತೀಭಿಃ । ಸೃಜ್ಯಧ್ವಮ್ । ಮಹಿ । ವರ್ಚಃ । ಕ್ಷತ್ರಿಯಾಯ । ವನ್ವಾನಾಃ ।**

---

ಹನ್ನೊಂದನೆಯ ಅನುವಾಕದಲ್ಲಿ ಅಭಿಷೇಕಜಲಮಂತ್ರಗಳು ಹೇಳಲ್ಪಟ್ಟಿವೆ. ಈ ಹನ್ನೆರಡನೆಯ ಅನುವಾಕದಲ್ಲಿ ಆ ಜಲಸಂಸ್ಕಾರಮಂತ್ರಗಳು ಹೇಳಲ್ಪಟ್ಟಿವೆ.

---

| ಮಂತ್ರ | ವಿನಿಯೋಗ |
|---|---|
| ದೇವೀರಾಪಃ.....ವನ್ವಾನಾಃ । | ವಾಯವ್ಯಮಂತ್ರಗಳಿಂದ ಹಿಡಿದಿಟ್ಟಿರುವ ನೀರನ್ನು ವೇತಸಪಾತ್ರದಲ್ಲಿ ಸೇರಿಸಲು |

---

**ದೇವೀಃ ಆಪಃ** = [ನಾನಾಪಾತ್ರೆಗಳಲ್ಲಿ ಗೃಹೀತರಾಗಿರುವ] ಅಬ್ದೇವಿಯರೇ! **ಮಧುಮತೀಃ** = ಮಧುರರಸವುಳ್ಳ ನೀವು; **ಕ್ಷತ್ರಿಯಾಯ** = ಕ್ಷತ್ರಿಯನಾದ ಈ ಯಜಮಾನನಿಗೆ; **ಮಹಿ ವರ್ಚಃ ವನ್ವಾನಾಃ** = ಹೆಚ್ಚಾದ ವರ್ಚಸ್ಸನ್ನು ಕೊಡುವವರಾಗಿ; **ಮಧುಮತೀಭಿಃ** = ಸಿಹಿಯಾದ ರಸವುಳ್ಳ ಬೇರೆಯ ನೀರುಗಳೊಡನೆ; **ಸಮ್ ಸೃಜ್ಯಧ್ವಂ** = ಚೆನ್ನಾಗಿ ಸೇರಿಕೊಳ್ಳಿರಿ.

---

**ತಾತ್ಪರ್ಯ—** ಎಲೈ! ಜಲದೇವತೆಗಳೇ! ನಾನಾಪಾತ್ರಗಳಲ್ಲಿರುವ ನೀವು ಮಧುರವಾದ ರಸವುಳ್ಳವರು. ಕ್ಷತ್ರಿಯನಾದ ಈ ಯಜಮಾನನಿಗೆ ಅಭಿಷೇಕದಿಂದ ವಿಶೇಷವಾದ

**ಅನಾಧೃಷ್ಟಾಸ್ಸೀದತೋರ್ಜಸ್ವತೀರ್ಮಹಿ ವರ್ಚಃ**
**ಕ್ಷತ್ರಿಯಾಯ ದಧತೀರನಿಭೃಷ್ಟಮಸಿ ವಾಚೋ**
**ಬಂಧುಸ್ತಪೋಜಾಸ್ಸೋಮಸ್ಯ ದಾತ್ರಮಸಿ**

---

ಅನಾಧೃಷ್ಟಾ ಇತ್ಯನಾ-ಧೃಷ್ಟಾಃ। ಸೀದತ । ಊರ್ಜಸ್ವತೀಃ । ಮಹಿ । ವರ್ಚಃ । ಕ್ಷತ್ರಿಯಾಯ। ದಧತೀಃ । ಅನಿಭೃಷ್ಟಮಿತ್ಯನಿ-ಭೃಷ್ಟಮ್ । ಅಸಿ । ವಾಚಃ । ಬಂಧುಃ । ತಪೋಜಾ ಇತಿ ತಪಃ-ಜಾಃ । ಸೋಮಸ್ಯ । ದಾತ್ರಮ್ । ಅಸಿ ।

---

| ಮಂತ್ರ | ವಿನಿಯೋಗ |
|---|---|
| ಅನಾಧೃಷ್ಟಾಃ.....ದಧತೀಃ । | ಹೋತೃ-ಬ್ರಾಹ್ಮಣಾಚ್ಛಂಸಿ-ಇವರ ಧಿಷ್ಣ್ಯಗಳ ಮಧ್ಯದಲ್ಲಿ ಜಲಪಾತ್ರವನ್ನು ಸ್ಥಾಪಿಸಲು |
| ಅನಿಭೃಷ್ಟಮಸಿ....ದಾತ್ರಮಸಿ । | ನೂರು ಮಾನ[ಒಂದು ತೂಕ]ಗಳ ಚಿನ್ನವನ್ನು ಜಲಪಾತ್ರದಲ್ಲಿ ಹಾಕಲು |

---

✢ [ಎಲೈ! ನೀರಿನ ದೇವತೆಗಳೇ! ನೀವು] **ಅನಾಧೃಷ್ಟಾಃ** = [ಯಾರಿಂದಲೂ] ತಿರಸ್ಕರಿಸಲು ಸಾಧ್ಯವಿಲ್ಲದವರು. **ಊರ್ಜಸ್ವತೀಃ**= ಬಲವನ್ನು ಕೊಡತಕ್ಕವರು; **ಕ್ಷತ್ರಿಯಾಯ** = ಕ್ಷತ್ರಿಯನಾದ ಈ ಯಜಮಾನನಿಗೆ; **ಮಹಿ ವರ್ಚಃ ದಧತೀಃ** = ಹೆಚ್ಚಿನ ವರ್ಚಸ್ಸನ್ನು ಕೊಡುವವರಾಗಿ/ಧರಿಸಿದವರಾಗಿ; **ಸೀದತ** = ಈ ಸ್ಥಾನದಲ್ಲಿರಿ. ✢ [ಎಲೈ! ಹಿರಣ್ಯವೇ! ನೀನು] **ಅನಿಭೃಷ್ಟಮ್ ಅಸಿ** = ಸುಟ್ಟುಹೋಗತಕ್ಕವನಲ್ಲ; **ವಾಚಃ ಬಂಧುಃ** = ಮಾತಿಗೆ ಬಂಧುವಾಗಿದ್ದೀಯೆ*. **ತಪೋಜಾಃ** = ತಾಪವನ್ನುಂಟುಮಾಡುವ ಅಗ್ನಿಯಿಂದ ಹುಟ್ಟಿದವನು ನೀನು; **ಸೋಮಸ್ಯ ದಾತ್ರಮ್ ಅಸಿ** = ಸೋಮಕ್ರಯದಲ್ಲಿ ಸೋಮವಿಕ್ರಯಿಗೆ ಕೊಡಲ್ಪಡತಕ್ಕವನೂ/ದಕ್ಷಿಣೆಯಾಗಿ ಕೊಡಲ್ಪಡತಕ್ಕವನೂ ಆಗಿದ್ದೀಯೆ.

---

ವರ್ಚಸ್ಸನ್ನು ಕೊಡತಕ್ಕವರು. ನೀವು ಮಧುರರಸವುಳ್ಳ ಬೇರೆಯ ನೀರುಗಳೊಡನೆ ಚೆನ್ನಾಗಿ ಸೇರಿಕೊಳ್ಳಿರಿ.

[ವೇತಸಪಾತ್ರೆಯಲ್ಲಿ ಹಾಕಿದ ಆ ನೀರನ್ನು ಹೋತೃ-ಬ್ರಾಹ್ಮಣಾಚ್ಛಂಸಿಗಳ ಸ್ಥಾನಗಳ ಮಧ್ಯದಲ್ಲಿಡಬೇಕು.]

---

* ಧನವಂತನ ಮಾತು ಸರ್ವಮಾನ್ಯ.

# ಶುಕ್ರಾ ವಃ ಶುಕ್ರೇಣೋತ್ಪುನಾಮಿ ಚಂದ್ರಾಶ್ಚಂದ್ರೇಣಾಮೃತಾ ಅಮೃತೇನ ಸ್ವಾಹಾ ರಾಜಸೂಯಾಯ ಚಿತಾನಾಃ ।

ಶುಕ್ರಾಃ । ವಃ । ಶುಕ್ರೇಣ । ಉದಿತಿ । ಪುನಾಮಿ । ಚಂದ್ರಾಃ । ಚಂದ್ರೇಣ । ಅಮೃತಾಃ। ಅಮೃತೇನ । ಸ್ವಾಹಾ । ರಾಜಸೂಯಾಯೇತಿ ರಾಜ-ಸೂಯಾಯ । ಚಿತಾನಾಃ ॥

| ಮಂತ್ರ | ವಿನಿಯೋಗ |
|---|---|
| ಶುಕ್ರಾ ವಃ....ಚಿತಾನಾಃ । | ಹಿರಣ್ಯದಿಂದ ನೀರನ್ನು ಉತ್ಪವನ ಮಾಡಲು |

+[ಎಲೈ! ಜಲದೇವತೆಗಳೇ!] ಶುಕ್ರಾಃ ವಃ = ಪ್ರಕಾಶವುಳ್ಳ ನಿಮ್ಮನ್ನು; ಶುಕ್ರೇಣ = ಪ್ರಕಾಶಯುಕ್ತವಾದ ಹಿರಣ್ಯದಿಂದ; ಚಂದ್ರಾಃ = ಚಂದ್ರನಂತೆ ಆಹ್ಲಾದವನ್ನುಂಟು ಮಾಡುವ ನಿಮ್ಮನ್ನು; ಚಂದ್ರೇಣ = ಆಹ್ಲಾದಕಾರಣವಾದ ಚಿನ್ನದಿಂದ; ಅಮೃತಾಃ = ಜೀವನಹೇತುಗಳಾದ ನಿಮ್ಮನ್ನು; ಅಮೃತೇನ = ಜೀವನಸಾಧನವಾದ ಬಂಗಾರದಿಂದ; ಉತ್ಪುನಾಮಿ = ಮೇಲಕ್ಕೆ, ಕೆಳಕ್ಕೆ ಚಾಲನೆ ಮಾಡಿ ಶುದ್ಧಿಗೊಳಿಸುತ್ತೇನೆ. ಸ್ವಾಹಾ = ಸ್ವಾಹಾಕಾರಪೂರ್ವಕವಾಗಿ ಹೋಮ ಮಾಡಿ; ರಾಜಸೂಯಾಯ = ರಾಜಸೂಯಕ್ಕಾಗಿ; ಚಿತಾನಾಃ=ಸಂಪಾದಿಸಿರುವ ನಿಮ್ಮನ್ನು [ಯಜಮಾನಾಭಿಷೇಕಕ್ಕಾಗಿ ಶುದ್ಧಿಗೊಳಿಸುತ್ತೇನೆ]*

ಎಲೈ! ಜಲದೇವಿಯರೇ! ನೀವು ಯಾರಿಂದಲೂ ತಿರಸ್ಕರಿಸಲು ಅಸಾಧ್ಯರಾದವರು. ಬಲವನ್ನು ಕೊಡತಕ್ಕವರು. ಕ್ಷತ್ರಿಯನಾದ ಈ ಯಜಮಾನನಿಗೆ ಅಧಿಕವಾದ ವರ್ಚಸ್ಸನ್ನುಂಟುಮಾಡತಕ್ಕವರು. ನೀವು ಈ ಪ್ರದೇಶದಲ್ಲಿರಿ.

[ಆ ನೀರಿನ ಪಾತ್ರೆಯಲ್ಲಿ ನೂರು ಮಾನಗಳ ತೂಕದ ಹಿರಣ್ಯವನ್ನು ಹಾಕಿ ಹಿರಣ್ಯವನ್ನು ಸ್ತುತಿಸುತ್ತಾರೆ]

ಎಲೈ! ಹಿರಣ್ಯವೇ! ನೀನು ಎಷ್ಟು ಕಾಯಿಸಿದರೂ ಸುಟ್ಟು ಹೋಗುವವನಲ್ಲ/ ರಾಕ್ಷಸರೂ ನಿನ್ನನ್ನು ಏನೂ ಮಾಡಲಾರರು. ಧನವಂತರಾದ ರಾಜಾದಿಗಳ ಮಾತನ್ನು ಎಲ್ಲರೂ ಗೌರವಿಸುವುದರಿಂದ ಮಾತಿನ ಬಂಧುವೂ ಆಗಿರುವೆ. ತೇಜಸ್ಸನ್ನು ಕೊಡುವ ಅಗ್ನಿಯಿಂದಲೇ ಹುಟ್ಟಿದವನು ನೀನು. ಸೋಮಕ್ರಯ ಮಾಡುವುದರಲ್ಲಿಯೂ, ಸೋಮಯಾಗದ ದಕ್ಷಿಣೆಯಲ್ಲಿಯೂ ಉಪಯೋಗಿಸಲ್ಪಡತಕ್ಕವನು ನೀನು. ನಿನ್ನನ್ನು ಈ ನೀರಿನಲ್ಲಿ ಹಾಕುತ್ತೇನೆ.

ಎಲೈ! ನೀರುಗಳೇ! ನೀನು ರಾಜಸೂಯಯಾಗದಲ್ಲಿ ರಾಜಾಭಿಷೇಕಕ್ಕಾಗಿ ಹೋಮಮಾಡಿ ತರಲ್ಪಟ್ಟಿದ್ದೀರಿ. ನೀವು ಪ್ರಕಾಶವುಳ್ಳವರು. ಸಂತೋಷವನ್ನುಂಟು ಮಾಡತಕ್ಕವರು. ಜೀವನಕ್ಕೆ ಕಾರಣರಾದವರು. ಚಿನ್ನವೂ ಪ್ರಕಾಶಮಾನ; ಸಂತೋಷಜನಕ.

* ಇಲ್ಲಿ 'ಶುಕ್ರಾಃ ಉತ್ಪುನಾಮಿ, ಚಂದ್ರಾಃ ಉತ್ಪುನಾಮಿ, ಅಮೃತಾಃ ಉತ್ಪುನಾಮಿ' ಎಂದು ಮೂರು ಮಂತ್ರಗಳೆಂದು ಕೆಲವರ ಅಭಿಪ್ರಾಯ.

ಸಧಮಾದೋ ದ್ಯುಮ್ನಿನೀರೂರ್ಜ ಏತಾ ಅನಿಭೃಷ್ಟಾ ಅಪಸ್ಯುವೋ ವಸಾನಃ । ಪಸ್ತ್ಯಾಸು ಚಕ್ರೇ ವರುಣಃ ಸಧಸ್ಥಮಪಾಗ್ಂ ಶಿಶು[ಶಿಶುಃ (೧)ಮಾತೃ]ರ್ಮಾತೃತಮಾಸ್ವಂತಃ ।

---

ಸಧಮಾದ ಇತಿ ಸಧ-ಮಾದಃ । ದ್ಯುಮ್ನಿನೀಃ । ಊರ್ಜಃ । ಏತಾಃ । ಅನಿಭೃಷ್ಟಾ ಇತ್ಯನಿ-ಭೃಷ್ಟಾಃ । ಅಪಸ್ಯುವಃ । ವಸಾನಃ ॥ ಪಸ್ತ್ಯಾಸು । ಚಕ್ರೇ । ವರುಣಃ । ಸಧಸ್ಥಮಿತಿ ಸಧ-ಸ್ಥಮ್। ಅಪಾಮ್ । ಶಿಶುಃ(೧) । ಮಾತೃತಮಾಸ್ವಿತಿ ಮಾತೃ-ತಮಾಸು । ಅಂತಃ ॥

---

| ಮಂತ್ರ | ವಿನಿಯೋಗ |
|---|---|
| ಸಧಮಾದಃ....ಮಾತೃತಮಾಸ್ವಂತಃ । | ಮುತ್ತುಗ, ಅತ್ತಿ, ಅಶ್ವತ್ಥ ಮತ್ತು ಆಲ-ಈ ಮರಗಳ ಪಾತ್ರೆಯಲ್ಲಿ ನೀರು ಹಾಕಲು |

---

✣ ವರುಣಃ = ವರುಣದೇವನು; ಅಪಾಮ್ ಶಿಶುಃ = ನೀರುಗಳ ಶಿಶುವಿನಂತೆ ಇದ್ದಾನೆ; [ಆತನು] ಸಧಮಾದಃ = ಜೊತೆಯಲ್ಲಿದ್ದು ಸಂತೋಷಪಡುವ/ಸಂತೋಷಪಡಿಸುವ; ದ್ಯುಮ್ನಿನೀಃ = ಪ್ರಕಾಶಯುಕ್ತವಾದ/ಧನಯುಕ್ತವಾದ; ಊರ್ಜಃ = ಬಲಕಾರಣವಾದ; ಅನಿಭೃಷ್ಟಾಃ = ಹುರಿಯಲಾಗದ; ಅಪಸ್ಯುವಃ = ರಾಜಸೂಯಾದಿಕರ್ಮಗಳಲ್ಲಿ ಆಸಕ್ತಿಯುಳ್ಳ; ಏತಾಃ = ಈ ನೀರುಗಳನ್ನು; ವಸಾನಃ = ವಸ್ತ್ರದಂತೆ ಆಚ್ಛಾದಿಸಿಕೊಂಡಿದ್ದಾನೆ; [ಇಂತಹ ವರುಣನು] ಪಸ್ತ್ಯಾಸು = ಮನೆಯಂತಿರುವ; ಮಾತೃತಮಾಸು = ತಾಯಿಯಂತೆ ಅತಿಸ್ನೇಹಯುಕ್ತವಾದ; ಅಪಾಮ್ ಅಂತಃ = ನೀರುಗಳ ಒಳಗಡೆ; ಸದಸ್ಥಮ್ = ಜೊತೆಯಲ್ಲಿ ಇರುವಿಕೆಯನ್ನು; ಚಕ್ರೇ = ಮಾಡಿದನು.

---

ಜೀವನ ನಿರ್ವಾಹ ಸಾಧನ. ಇಂತಹ ಹಿರಣ್ಯದಿಂದ ನಿಮ್ಮನ್ನು ಶುದ್ಧಿ ಗೊಳಿಸುತ್ತೇನೆ.

'ಅಪ್ಸು ವೈ ವರುಣಃ' ಎಂದು ಹೇಳಿರುವಂತೆ ವರುಣನು ನೀರಿನ ಮಗುವಿನಂತೆ ಇದ್ದಾನೆ. ಅತಿಶಯ ಸ್ನೇಹಯುಕ್ತರಾದ ತಾಯಿಯರಂತಿರುವ ನೀರಿನ ಒಳಗಡೆ ನೀರನ್ನೇ ವಸ್ತ್ರದಂತೆ ಆಚ್ಛಾದಿಸಿ ಕೊಂಡಿರುತ್ತಾನೆ. ಈ ನೀರುಗಳು ಜೊತೆಯಲ್ಲಿದ್ದು ತಾಯಿಯಂತೆ ಸಂತೋಷಪಡಿಸತಕ್ಕವು.

ಕ್ಷತ್ರಸ್ಯೋಲ್ಬಮಸಿ ಕ್ಷತ್ರಸ್ಯ ಯೋನಿರಸ್ಯಾವಿನ್ನೋ ಅಗ್ನಿರ್ಗೃಹಪತಿರಾವಿನ್ನ ಇಂದ್ರೋ ವೃದ್ಧಶ್ರವಾ

ಕ್ಷತ್ರಸ್ಯ । ಉಲ್ಬಮ್ । ಅಸಿ । ಕ್ಷತ್ರಸ್ಯ । ಯೋನಿಃ । ಅಸಿ । ಆವಿನ್ನಃ । ಅಗ್ನಿಃ । ಗೃಹಪತಿರಿತಿ ಗೃಹ-ಪತಿಃ। ಆವಿನ್ನಃ । ಇಂದ್ರಃ। ವೃದ್ಧಶ್ರವಾ ಇತಿ ವೃದ್ಧ-ಶ್ರವಾಃ ।

| ಮಂತ್ರ | ವಿನಿಯೋಗ |
|---|---|
| ಕ್ಷತ್ರಸ್ಯ....ಯೋನಿರಸಿ । | ವಸ್ತ್ರಧಾರಣವನ್ನು ಮಾಡಲು |
| ಆವಿನ್ನೋ ಅಗ್ನಿಃ ...ಜಾನರಾಜ್ಯಾಯ । | [ಇದರಲ್ಲಿ 7 ಆವಿನ್ನಮಂತ್ರಗಳಿವೆ]ಅವುಗಳನ್ನು ಯಜಮಾನನಿಂದ ಹೇಳಿಸಿ, ಆಗ್ನೀಧ್ರೀಯ ಮಂಟಪದಿಂದ ಹೊರಕ್ಕೆ ಕರೆತರಲು |

✣ [ಎಲೈ! ಘೃತಾಕ್ತವಸ್ತ್ರವೇ] [ನೀನು] ಕ್ಷತ್ರಸ್ಯ ಉಲ್ಬಮ್ ಅಸಿ = ಕ್ಷತ್ರಿಯನಾದ ರಾಜನ ಆವರಣವಾಗಿದ್ದೀಯೆ. ಕ್ಷತ್ರಸ್ಯ=[ಎಲೈ! ಉಷ್ಣೀಷವೇ! ನೀನು] ಕ್ಷತ್ರಿಯ ಯಜಮಾನನು; ಯೋನಿಃ ಅಸಿ = ಶೀತನಿವಾರಕವಾದ ರಾಜಚಿಹ್ನವಾದ ಶಿರೋಭೂಷಣವಾಗಿರುವೆ. ✣ಅಗ್ನಿಃ = ಅಗ್ನಿದೇವನು; ಗೃಹಪತಿಃ ಆವಿನ್ನಃ = ಈ ಕರ್ಮದಿಂದ ಗೃಹಪತಿತ್ವವನ್ನು ಹೊಂದಿದನು. ಇಂದ್ರಃ = ಇಂದ್ರದೇವನು; ವೃದ್ಧಶ್ರವಾಃ ಆವಿನ್ನಃ = ವೃದ್ಧಿಯನ್ನು ಹೊಂದಿದ ಕೀರ್ತಿಯನ್ನು ಪಡೆದವನಾದವನು.

ಪ್ರಕಾಶಯುಕ್ತ ವಾದವು. ಬಲವನ್ನು ಕೊಡತಕ್ಕವು. ನಾಶರಹಿತವಾದವು. ಯಾಗಾದಿ ಕರ್ಮೋಪಯುಕ್ತ ವಾದವು. ಇಂತಹ ಗೃಹದಂತೆ ಇರುವ ನೀರಿನಲ್ಲಿ ವರುಣನು ಜೊತೆ ಯಲ್ಲಿದ್ದು ಸಂತೋಷ ಪಡಿಸುತ್ತಾನೆ. ಇಂತಹ ವರುಣನು ಈ ಅಭಿಷೇಕಕರ್ಮವು ಚೆನ್ನಾಗಿ ಜರುಗುವಂತೆ ಮಾಡಲಿ.

ಎಲೈ! ಘೃತಾಕ್ತವಸ್ತ್ರವೇ! ನೀನು ಕ್ಷತ್ರಿಯನಾದ ರಾಜನ ಆವರಣವಾಗಿರುವೆ. [ಇದರಿಂದ ಯಜಮಾನನು ವಸ್ತ್ರವನ್ನು ಧರಿಸಬೇಕು.]

ಎಲೈ! ಉಷ್ಣೀಷವೇ! ನೀನು ರಾಜಚಿಹ್ನವಾದ ಶಿರೋಭೂಷಣವಾಗಿ ಶೀತ ನಿವಾರಕನಾಗಿರುವೆ. [ಇದರಿಂದ ಯಜಮಾನನು ತಲೆಗೆ ಆಚ್ಛಾದಕವಾದ ಬಿಳಿಯ ಬಟ್ಟೆಯನ್ನು ಧರಿಸಬೇಕು.]

**ಆವಿನ್ನಃ ಪೂಷಾ ವಿಶ್ವವೇದಾ ಆವಿನ್ನೌ ಮಿತ್ರಾವರುಣಾ-ವೃತಾವೃಧಾವಾವಿನ್ನೇ ದ್ಯಾವಾಪೃಥಿವೀ ಧೃತವ್ರತೇ ಆವಿನ್ನಾ ದೇವ್ಯದಿತಿರ್ವಿಶ್ವರೂಪ್ಯಾವಿನ್ನೋಽಯಮಸಾವಾಮುಷ್ಯಾ ಯಣೋಽಸ್ಯಾಂ**

---

ಆವಿನ್ನಃ । ಪೂಷಾ । ವಿಶ್ವವೇದಾ ಇತಿ ವಿಶ್ವ-ವೇದಾಃ । ಆವಿನ್ನೌ । ಮಿತ್ರಾವರುಣಾವಿತಿ ಮಿತ್ರಾ-ವರುಣೌ । ಋತಾವೃಧಾವಿತ್ಯೃತ-ವೃಧೌ । ಆವಿನ್ನೇ ಇತಿ । ದ್ಯಾವಾಪೃಥಿವೀ ಇತಿ ದ್ಯಾವಾ-ಪೃಥಿವೀ । ಧೃತವ್ರತೇ ಇತಿ ಧೃತ-ವ್ರತೇ । ಆವಿನ್ನಾ । ದೇವೀ । ಅದಿತಿಃ । ವಿಶ್ವ-ರೂಪೀತಿ ವಿಶ್ವ-ರೂಪೀ । ಆವಿನ್ನಃ । ಅಯಮ್। ಅಸೌ । ಆಮುಷ್ಯಾಯಣಃ । ಅಸ್ಯಾಮ್।

---

**ಪೂಷಾ** = ಪೂಷದೇವನು; **ವಿಶ್ವವೇದಾಃ ಆವಿನ್ನಃ** = ಸಮಸ್ತಜ್ಞಾನವನ್ನು ಪಡೆದವನಾದನು; **ಮಿತ್ರಾವರುಣೌ** = ಮಿತ್ರಾವರುಣದೇವತೆಗಳು; **ಋತಾವೃಧೌ ಆವಿನ್ನೌ** = ಯಜ್ಞದ ಅಥವಾ ಸತ್ಯದ ವೃದ್ಧಿಯನ್ನು ಹೊಂದಿದವರಾದರು. **ದ್ಯಾವಾಪೃಥಿವೀ** = ಭೂಮ್ಯಂತ-ರಿಕ್ಷದೇವತೆಗಳು; **ಧೃತವ್ರತೇ ಆವಿನ್ನೇ** = ತಪ್ಪದೇ ತಮ್ಮ ಕಾರ್ಯವನ್ನು ನಿರ್ವಹಿಸುವ ವ್ರತಧಾರಣೆಯನ್ನು ಹೊಂದಿದವರಾದರು. **ದೇವೀ ಅದಿತಿಃ** = ದೇವಮಾತೆಯಾದ ಅದಿತಿ ದೇವಿಯು; **ವಿಶ್ವರೂಪೀ ಆವಿನ್ನಾ** = ಬಹುಪುತ್ರರುಳ್ಳವಳಾಗಿ ಪರಿಣಮಿಸಿದಳು/ ಭೂಮಿಯು ಸರ್ವಮಾತೆಯಾದಳು; **ಅಯಮ್** = ಎದುರಿನಲ್ಲಿರುವ; **ಅಸೌ ಆಮುಷ್ಯಾಯಣಃ** = ಇಂತಹ ರಾಜನ ಪುತ್ರನೂ, ಇಂತಹ ರಾಜನ ಪೌತ್ರನೂ ಆದ [ನರಸಿಂಹ ವರ್ಮನು] **ಅಸ್ಯಾಮ್** = ಈ;

---

ಈ ಆವಿನ್ನಮಂತ್ರಗಳನ್ನು ಯಜಮಾನನಿಂದ ಹೇಳಿಸಬೇಕು. ಅಗ್ನ್ಯಾದಿದೇವತೆಗಳು ತಮ್ಮ ತಮ್ಮ ವಿಶೇಷಗುಣಗಳನ್ನು ಯಜಮಾನನಿಗೆ ಕೊಟ್ಟು ತಮ್ಮ ಹೆಸರನ್ನು ಸಾರ್ಥಕ ಪಡಿಸಿಕೊಂಡರು. ಅಗ್ನಿಯು ಒಳ್ಳೆಯ ಗೃಹಪತಿತ್ವವನ್ನೂ, ಇಂದ್ರನು ಹೆಚ್ಚಾದ ಕೀರ್ತಿಯನ್ನೂ, ಪೂಷದೇವನು ವಿಜ್ಞಾನವನ್ನೂ, ಮಿತ್ರಾವರುಣರು ಸತ್ಯ ಮತ್ತು ಯಜ್ಞ ಗಳನ್ನೂ, ದ್ಯಾವಾಪೃಥಿವಿಗಳು ತಮ್ಮ ಕಾರ್ಯತತ್ಪರತೆಯನ್ನೂ, ಅದಿತಿಯು ಬಹುಪುತ್ರತೆ ಯನ್ನೂ ಅನುಗ್ರಹಿಸಿದರು. ಇಂತಹ ರಾಜನ ಪೌತ್ರನೂ, ಇಂತಹ ರಾಜನ ಪುತ್ರನೂ ಆಗಿರುವ [ನರಸಿಂಹವರ್ಮನು]

## ವಿಶ್ಯಸ್ಮಿನ್ರಾಷ್ಟ್ರೇ ಮಹತೇ ಕ್ಷತ್ರಾಯ ಮಹತ ಆಧಿಪತ್ಯಾಯ ಮಹತೇ ಜಾನರಾಜ್ಯಾಯೈಷ ವೋ ಭರತಾ ರಾಜಾ

---

ವಿಶಿ । ಅಸ್ಮಿನ್ನ್ । ರಾಷ್ಟ್ರೇ । ಮಹತೇ । ಕ್ಷತ್ರಾಯ । ಮಹತೇ । ಆಧಿಪತ್ಯಾಯೇತ್ಯಾಧಿ-ಪತ್ಯಾಯ । ಮಹತೇ । ಜಾನರಾಜ್ಯಾಯೇತಿ ಜಾನ-ರಾಜ್ಯಾಯ । ಏಷಃ । ವಃ । ಭರತಾಃ। ರಾಜಾ ।

---

| ಮಂತ್ರ | ವಿನಿಯೋಗ |
|---|---|
| ಏಷಃ..............ರಾಜಾ । | ರತ್ನಿಗಳನ್ನು ಕುರಿತು ಹೇಳಲು |

---

ವಿಶಿ = ಪ್ರಜಾಸಮೂಹದಲ್ಲಿ; ಅಸ್ಮಿನ್ ರಾಷ್ಟ್ರೇ = ಈ ರಾಜ್ಯದಲ್ಲಿ; ಮಹತೇ ಕ್ಷತ್ರಾಯ = ಮಹತ್ತಾದ ಕ್ಷತ್ರಿಯಕುಲಕ್ಕೂ; ಮಹತೇ ಆಧಿಪತ್ಯಾಯ = ಮಹತ್ತಾದ ಅಧಿಕಾರಕ್ಕೂ; ಮಹತೇ ಜಾನರಾಜ್ಯಾಯ = ಮಹತ್ತಾದ ಸಾರ್ವಭೌಮತ್ವಕ್ಕೂ ತಕ್ಕವನಾಗಿ; ಆವಿನ್ನಃ = [ಆ ಗುಣಗಳನ್ನು] ಹೊಂದಿದನು. ✢ ಭರತಾಃ = ಭರತದೇಶದಲ್ಲಿ ಹುಟ್ಟಿದವರೇ! ಏಷಃ ವಃ ರಾಜಾ = ಈತನು ನಿಮಗೆ ರಾಜನಾಗಿದ್ದಾನೆ.

---

ಈ ಪ್ರಜೆಗಳಲ್ಲಿ, ಈ ರಾಷ್ಟ್ರದಲ್ಲಿ ಪ್ರತಿಷ್ಠಿತನಾಗಲಿ. ಉತ್ತಮ ಕ್ಷತ್ರಿಯನೂ, ಉತ್ತಮನಾದ ಅಧಿಪತಿಯೂ, ಉತ್ತಮನಾದ ಸಾರ್ವಭೌಮನೂ ಆಗಲಿ/ಆಗುವಂತೆ ಅನುಗ್ರಹಿಸಿ.

ಅನುಬ್ರಾಹ್ಮಣದಲ್ಲಿ 'ಅಗ್ನಿಯು ಉತ್ತಮ ಗೃಹಪತಿತ್ವವನ್ನು ಕೊಟ್ಟು ಅನುಗ್ರಹಿಸಲಿ. ಇಂದ್ರನು ಇಂದ್ರಿಯಶಕ್ತಿಯನ್ನೂ, ಪೂಷನು ಪಶುಗಳನ್ನೂ, ಮಿತ್ರಾವರುಣರು ಪ್ರಾಣಾಪಾನಗಳನ್ನೂ ಕೊಟ್ಟು ಕಾಪಾಡಲಿ. ದ್ಯಾವಾಭೂಮಿಗಳು ಶತ್ರುನಿಗ್ರಹಕ್ಕೆ ಅನುಮತಿಸಲಿ. ಅದಿತಿಯು ಈ ಲೋಕದಲ್ಲಿ ಪ್ರತಿಷ್ಠೆಯನ್ನು ಕೊಟ್ಟು ಕಾಪಾಡಲಿ' ಎಂದು ವಿವರಿಸಲಾಗಿದೆ.

ಭರತದೇಶದಲ್ಲಿ ಜನಿಸಿದವರೇ! ಈತನು ನಿಮಗೆ ರಾಜನಾಗಿದ್ದಾನೆ.

**ಸೋಮೋಽಸ್ಮಾಕಂ ಬ್ರಾಹ್ಮಣಾನಾಗ್‌ಂ ರಾಜೇಂದ್ರಸ್ಯ [ರಾಜೇಂದ್ರಸ್ಯ (೨)ವಜ್ರೋಽಸಿ] ವಜ್ರೋಽಸಿ ವಾರ್ತ್ರಘ್ನಸ್ತ್ವಯಾಽಯಂ ವೃತ್ರಂ ವಧ್ಯಾಚ್ಛತ್ರುಬಾಧನಾಃ ಸ್ಥ**

---

**ಸೋಮಃ । ಅಸ್ಮಾಕಮ್ । ಬ್ರಾಹ್ಮಣಾನಾಮ್ । ರಾಜಾ । ಇಂದ್ರಸ್ಯ । ವಜ್ರಃ । ಅಸಿ । ವಾರ್ತ್ರಘ್ನ ಇತಿ ವಾರ್ತ್ರ-ಘ್ನಃ । ತ್ವಯಾ । ಅಯಮ್ । ವೃತ್ರಮ್ । ವಧ್ಯಾತ್ । ಶತ್ರುಬಾಧನಾ ಇತಿ ಶತ್ರು-ಬಾಧನಾಃ । ಸ್ಥ ।**

---

| ಮಂತ್ರ | ವಿನಿಯೋಗ |
|---|---|
| **ಸೋಮಃ.....ರಾಜಾ ।** | ಬ್ರಹ್ಮನು ಜಪಿಸಲು |
| **ಇಂದ್ರಸ್ಯ......ವಧ್ಯಾತ್ ।** | ಯಜಮಾನನಿಗೆ ಧನುಸ್ಸನ್ನು ಕೊಡಲು |
| **ಶತ್ರುಬಾಧನಾಃ ಸ್ಥ ।** | ಮೂರು ಬಾಣಗಳನ್ನು ಯಜಮಾನನಿಗೆ ಕೊಡಲು |

---

∻ **ಅಸ್ಮಾಕಮ್ ಬ್ರಾಹ್ಮಣಾನಾಮ್** = ಬ್ರಾಹ್ಮಣರಾದ ನಮಗೆ; **ಸೋಮಃ ರಾಜಾ** = ಸೋಮದೇವನೇ ರಾಜನು. ∻ **ಇಂದ್ರಸ್ಯ ವಾರ್ತ್ರಘ್ನಃ ವಜ್ರಃ ಅಸಿ** = [ಎಲೈ ಧನುಸ್ಸೇ!] ನೀನು ವೃತ್ರನಾಶಕನಾದ ಇಂದ್ರನ ವಜ್ರಾಯುಧವೇ ಆಗಿರುವೆ. **ಅಯಮ್** = ಈ ರಾಜನು; **ತ್ವಯಾ** = ನಿನ್ನಿಂದ; **ವೃತ್ರಮ್ ವಧ್ಯಾತ್** = ವೃತ್ರಾಸುರನಂತೆ ಪ್ರಬಲನಾಗಿರುವ ಶತ್ರುವನ್ನು ನಿಗ್ರಹಿಸಲಿ. ∻ [ಎಲೈ ಬಾಣಗಳೇ! ನೀವು] **ಶತ್ರುಬಾಧನಾಃ ಸ್ಥ** = ಶತ್ರುಸಂಹಾರಕರಾಗಿದ್ದೀರಿ.

---

ಬ್ರಾಹ್ಮಣರಾದ ನಮಗೆ ಸೋಮದೇವನೇ ರಾಜನು.

ಎಲೈ! ಧನುಸ್ಸೇ! ನೀನು ಶತ್ರುನಾಶಕವಾಗಿರುವ ಇಂದ್ರನ ವಜ್ರಾಯುಧದಂತೆ ಶತ್ರುನಾಶಕನಾಗಿರುವೆ. ನಿನ್ನಿಂದ ಈ ರಾಜನು ವೃತ್ರಾಸುರನಂತೆ ಪ್ರಬಲನಾಗಿರುವ ಶತ್ರುವನ್ನು ನಿಗ್ರಹಿಸಲಿ.

ಎಲೈ! ಬಾಣಗಳೇ! ನೀವು ಶತ್ರುಸಂಹಾರಕರಾಗಿದ್ದೀರಿ.

**ಪಾತ ಮಾ ಪ್ರತ್ಯಂಚಂ ಪಾತ ಮಾ ತಿರ್ಯಂಚಮನ್ವಂಚಂ ಮಾ ಪಾತ ದಿಗ್ಭ್ಯೋ ಮಾ ಪಾತ ವಿಶ್ವಾಭ್ಯೋ ಮಾ ನಾಷ್ಟ್ರಾಭ್ಯಃ ಪಾತ ಹಿರಣ್ಯವರ್ಣಾವುಷಸಾಂ**

---

ಪಾತ। ಮಾ। ಪ್ರತ್ಯಂಚಮ್ । ಪಾತ । ಮಾ । ತಿರ್ಯಂಚಮ್ । ಅನ್ವಂಚಮ್। ಮಾ। ಪಾತ। ದಿಗ್ಭ್ಯ ಇತಿ ದಿಕ್-ಭ್ಯಃ । ಮಾ । ಪಾತ । ವಿಶ್ವಾಭ್ಯಃ । ಮಾ। ನಾಷ್ಟ್ರಾಭ್ಯಃ। ಪಾತ। ಹಿರಣ್ಯವರ್ಣಾವಿತಿ ಹಿರಣ್ಯ-ವರ್ಣೌ । ಉಷಸಾಮ್ ।

---

| ಮಂತ್ರ | ವಿನಿಯೋಗ |
|---|---|
| ಪಾತ....ನಾಷ್ಟ್ರಾಭ್ಯಃ ಪಾತ । | ಯಜಮಾನನಿಗೆ ಕೊಡುವ ಬಾಣಗಳನ್ನು ಅಭಿಮಂತ್ರಿಸಲು |
| ಹಿರಣ್ಯವರ್ಣಾವುಷಸಾಂ..ದಿತಿಂ ಚ। | ಮೇಲಕ್ಕೆ ಏತ್ತಿರುವ ಯಜಮಾನನ ಬಾಹುಗಳನ್ನು ಅಭಿಮಂತ್ರಿಸಲು<br>ಯಜಮಾನನು ಬಾಹುಗಳನ್ನು ಮೇಲಕ್ಕೆತ್ತಲು —ಬೌಧಾ. |

---

∻ [ಎಲೈ ಬಾಣಗಳೇ!] ಪ್ರತ್ಯಂಚಮ್ ಮಾ = [ಎದುರಿನಿಂದ ಬಾಣ ಬಿಡುವಾಗ] ಹಿಂದಿರುವ ನನ್ನನ್ನು; ಪಾತ = ರಕ್ಷಿಸಿ. ತಿರ್ಯಂಚಮ್ ಮಾ ಪಾತ = [ಪಕ್ಕದಿಂದ ಬಾಣ ಬಿಡುವಾಗ] ಅಡ್ಡಲಾಗಿರುವ ನನ್ನನ್ನು ರಕ್ಷಿಸಿ. ಅನ್ವಂಚಮ್ ಮಾ ಪಾತ= [ಹಿಂದಿನಿಂದ ಬಾಣ ಬಿಡುವಾಗ ತಪ್ಪಿಸಿಕೊಳ್ಳಲು] ಹಿಂದಕ್ಕೆ ಹೋಗುವ ನನ್ನನ್ನು ರಕ್ಷಿಸಿ. ದಿಗ್ಭ್ಯಃ = ಎಲ್ಲದಿಕ್ಕುಗಳಿಂದಲೂ ಬರುವ [ಶತ್ರುಗಳ ಆಯುಧಗಳಿಂದಲೂ] ಮಾ ಪಾತ = ನನ್ನನ್ನು ರಕ್ಷಿಸಿ; ವಿಶ್ವಾಭ್ಯಃ ನಾಷ್ಟ್ರಾಭ್ಯಃ = ಶತ್ರುಗಳಿಂದ ಉಂಟಾಗುವ ಎಲ್ಲಾ ಪೀಡೆಗಳಿಂದಲೂ; ಮಾ ಪಾತ = ನನ್ನನ್ನು ರಕ್ಷಿಸಿ;

---

ಎಲೈ! ಬಾಣಗಳೇ! ನೀವು ಎದುರುಗಡೆಯಿಂದಲೂ, ಪಕ್ಕಗಳಿಂದಲೂ, ಹಿಂಭಾಗದಿಂದಲೂ ಬರುವ ಶತ್ರುಗಳ ಆಯುಧಗಳಿಂದ ನನ್ನನ್ನು ರಕ್ಷಿಸಿ. ಎಲ್ಲ ದಿಕ್ಕುಗಳಿಂದಲೂ ಬರುವ ಬಾಣಾದಿಗಳಿಂದಲೂ ನನ್ನನ್ನು ರಕ್ಷಿಸಿ. ಶತ್ರುಗಳಿಂದ

**ವಿರೋಕೇಽಯಃಸ್ಥೂಣಾವುದಿತೌ ಸೂರ್ಯಸ್ಯಾಽಽರೋ-**
**ಹತಂ ವರುಣ ಮಿತ್ರಗರ್ತಂ ತತಶ್ಚಕ್ಷಾಥಾಮದಿತಿಂ**
**ದಿತಿಂ ಚ ॥ ೧೨-23 ॥**

**[ಶಿಶುರಿಂದ್ರಸ್ಯೈಕಚತ್ವಾರಿಗ್‌ಂಶಚ್ಚ।]**

---

ವಿರೋಕ ಇತಿ ವಿ-ರೋಕೇ। ಅಯಃಸ್ಥೂಣಾವಿತ್ಯಯಃ-ಸ್ಥೂಣೌ । ಉದಿತಾವಿತ್ಯುತ್-ಇತೌ। ಸೂರ್ಯಸ್ಯ । ಏತಿ । ರೋಹತಮ್ । ವರುಣ । ಮಿತ್ರ । ಗರ್ತಮ್ । ತತಃ । ಚಕ್ಷಾಥಾಮ್ । ಅದಿತಿಮ್ । ದಿತಿಮ್ । ಚ ॥ ೧೨ ॥

---

✢ ವರುಣ = ಎಲೈ ಶತ್ರುಗಳನ್ನು ನಿವಾರಿಸುವ/ವರುಣದೇವತಾಕವಾದ ಎಡಗೈಯೇ! ಮಿತ್ರ = ಶತ್ರುಮಾರಕವಾದ/ಮಿತ್ರದೇವತಾಕವಾದ ಬಲಗೈಯೇ! ಹಿರಣ್ಯವರ್ಣೌ = ಚಿನ್ನದ ಕವಚಾದಿಗಳನ್ನು ಧರಿಸಿ ಚಿನ್ನದಂತೆ ಹೊಳೆಯುವ; ಅಯಃಸ್ಥೂಣೌ = ಉಕ್ಕಿನ ಕಂಬಗಳಂತೆ ಗಟ್ಟಿಯಾಗಿರುವ ನೀವು; ಉಷಸಾಮ್ ವಿರೋಕೇ = ಉಷಃಕಾಲದ ಪ್ರಕಾಶವು ವ್ಯಾಪಿಸಿರಲಾಗಿ; ಸೂರ್ಯಸ್ಯ ಉದಿತೌ = ಸೂರ್ಯನ ಉದಯವಾಗಲಾಗಿ; ಗರ್ತಮ್ = ಚರ್ಮಾದಿಗಳಿಂದ ಸುರಕ್ಷಿತವಾದ ರಥದ ಮೇಲ್ಭಾಗವನ್ನು; ಆರೋಹತಮ್ = ಏರಿರಿ/ನಮ್ಮನ್ನು ಶತ್ರುಗಳಿಂದ ರಕ್ಷಿಸಿರಿ. ತತಃ= ಅನಂತರ; ಅದಿತಿಮ್ = ಅಖಂಡಿತವಾದ ನಮ್ಮ ಸೈನ್ಯವನ್ನೂ; ಚ = ಮತ್ತು; ದಿತಿಮ್ = ಖಂಡಿತವಾದ ಶತ್ರುಸೈನ್ಯವನ್ನೂ; ಚಕ್ಷಾಥಾಮ್ = [ಅನುಗ್ರಹದೃಷ್ಟಿ ಹಾಗೂ ನಿಗ್ರಹದೃಷ್ಟಿಗಳಿಂದ] ನೋಡಿರಿ.

---

ಸಂಭವಿಸುವ ಎಲ್ಲ ಪೀಡೆಗಳಿಂದಲೂ ನನ್ನನ್ನು ಕಾಪಾಡಿರಿ.

ಎಲೈ! ಶತ್ರುನಿವಾರಕ ಮತ್ತು ಶತ್ರುನಾಶಕವಾದ ಎಡ—ಬಲಗೈಗಳೇ! ನೀವು ಸುವರ್ಣಕವಚಾಲಂಕೃತರಾಗಿ ಚಿನ್ನದಂತೆ ಹೊಳೆಯುತ್ತೀರಿ. ಉಕ್ಕಿನ ಕಂಬಗಳಂತೆ ಗಟ್ಟಿಯಾಗಿದ್ದೀರಿ. ನೀವು ಚರ್ಮಾದಿಗಳಿಂದ ರಕ್ಷಿತವಾದ ರಥದ ಮೇಲ್ಭಾಗವನ್ನು ಹತ್ತಿರಿ. ಅಖಂಡಿತವಾದ ನಮ್ಮ ಸೈನ್ಯವನ್ನು ಅನುಗ್ರಹದೃಷ್ಟಿಯಿಂದಲೂ, ಖಂಡಿತವಾದ ಶತ್ರುಸೈನ್ಯವನ್ನು ನಿಗ್ರಹದೃಷ್ಟಿಯಿಂದಲೂ ನೋಡಿರಿ. [ಕೈಗಳನ್ನು ಮಿತ್ರಾವರುಣ ದೇವತಾಕಗಳೆಂದೂ ವರ್ಣಿಸಬಹುದು.]

## ವಿನಿಯೋಗ ಸಂಗ್ರಹ

[1]ದೇವೀತಿ ವೈತಸೇ ಪಾತ್ರೇ ಸರ್ವಾ ಅಪಿ ನಯೇದಪಃ ।
[2]ಅನೇತಿ ಸಾದಯೇನ್ಮಧ್ಯೇ ಹೋತುರ್ಬ್ರಹ್ಮಾಖ್ಯಧಿಷ್ಣ್ಯಯೋಃ ।
[3]ಅನಿಭೃಷ್ಟೇತಿ ತಾಸ್ವಂತಃ ಶತಸ್ವರ್ಣಂ ವಿನಿಕ್ಷಿಪೇತ್ ।
ಸ್ವರ್ಣೇನೋತ್ಪವನಂ ಶುಕ್ರಾಃ[4] ಪಾತ್ರೇಷು ವ್ಯಾನಯೇತ್ ಸಧ[5] ।
[6-7]ಕ್ಷತ್ರೇತಿ ಧಾರಯೇತ್ಸ್ವಾಮೀ ತಾಪ್ರ್ಯೋಽಪ್ಷ್ಟೀಷದ್ವಯಂ ಕ್ರಮಾತ್ ।
ಸ್ವಾಮಿನಂ ವಾಚಯೇದಾವಿ[8-14] ಸಪ್ತ ಮಂತ್ರಾನ್ ವಿನಿರ್ಗತಾ ।
[15]ಏಷ ವಃ ಸ್ವಾಮಿನಂ ದದ್ಯಾತ್ [16]ಸೋಮೋಽಸ್ಮಾ ಬ್ರಹ್ಮಣೋ ಜಪಃ ।
[17]ಇಂದ್ರ ದದ್ಯಾತ್ಸ್ವಾಮಿನೋಽನ್ಯೋ ಧನುಃ ಶತ್ರಿಸ್ತ್ವತಿ[18]ಸಾಯಕಾನ್ ।
[19]ಪಾತೇಷೂನ್ಮಂತ್ರಯೇತ್ಸ್ವಾಮೀ [20]ಹಿರ ಬಾಹೂ ತಥೋದ್ಯತಾ ।
ಅನುವಾಕೇ ದ್ವಾದಶೇಽಸ್ಮಿನ್ ಮಂತ್ರಾ ವಿಂಶತಿರೀರಿತಾಃ ॥

**ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ-20**

★★★

## ॥ ತ್ರಯೋದಶೋಽನುವಾಕಃ ॥

ಸಮಿಧ್ದಮಾ ತಿಷ್ಠ ಗಾಯತ್ರೀ ತ್ವಾ ಛಂದಸಾಮವತು ತ್ರಿವೃತ್ ಸ್ತೋಮೋ ರಥಂತರಗ್ಂ ಸಾಮಾಗ್ನಿರ್ದೇವತಾ ಬ್ರಹ್ಮ ದ್ರವಿಣ-

---

ಸಮಿಧ್ದಮಿತಿ ಸಮ್-ಇಧ್ದಮ್ । ಏತಿ । ತಿಷ್ಠ । ಗಾಯತ್ರೀ । ತ್ವಾ । ಛಂದಸಾಮ್ । ಅವತು । ತ್ರಿವೃದಿತಿ ತ್ರಿ-ವೃತ್ । ಸ್ತೋಮಃ । ರಥಂತರಮಿತಿ ರಥಮ್-ತರಮ್ । ಸಾಮ। ಅಗ್ನಿಃ । ದೇವತಾ । ಬ್ರಹ್ಮ । ದ್ರವಿಣಮ್ ।

---

ಹನ್ನೆರಡನೆಯ ಅನುವಾಕದಲ್ಲಿ ಜಲಸಂಸ್ಕಾರದ ಮಂತ್ರಗಳು ಹೇಳಲ್ಪಟ್ಟಿವೆ. ಈ ಹದಿಮೂರನೆಯ ಅನುವಾಕದಲ್ಲಿ ದಿಗ್ವ್ಯಾಸ್ಥಾಪನಮಂತ್ರಗಳು ಹೇಳಲ್ಪಟ್ಟಿವೆ. ವ್ಯಾಸ್ಥಾಪನವೆಂದರೆ ವಿಜಯಕ್ಕಾಗಿ ಕಳುಹಿಸಿಕೊಡುವುದು ಎಂದು ಅರ್ಥ.

---

| ಮಂತ್ರ | ವಿನಿಯೋಗ |
|---|---|
| ಸಮಿಧ್ದಮ್....ಬ್ರಹ್ಮ ದ್ರವಿಣಮ್ । | ದಿಗ್ವ್ಯಾಸ್ಥಾಪನದ ಮೊದಲನೆಯ ಮಂತ್ರ. |

---

[ಎಲೈ! ಯಜಮಾನನೇ] **ಸಮಿಧ್ದಮ್** = ಸೂರ್ಯನು ಜ್ವಲಿಸುವ ಪೂರ್ವ ದಿಕ್ಕನ್ನು; **ಆ ತಿಷ್ಠ** = ಆಕ್ರಮಿಸಿ ನಿಲ್ಲು. **ಛಂದಸಾಮ್** = ಛಂದಸ್ಸುಗಳ ಪೈಕಿ; **ಗಾಯತ್ರೀ** = ಗಾಯತ್ರೀ ಛಂದಸ್ಸು; **ತ್ವಾ ಅವತು** = ನಿನ್ನನ್ನು ರಕ್ಷಿಸಲಿ. **ತ್ರಿವೃತ್ ಸ್ತೋಮಃ** = [ಸ್ತೋಮಗಳಲ್ಲಿ] *ತ್ರಿವೃತ್ ಸ್ತೋಮವೂ; **ರಥಂತರಮ್ ಸಾಮ** = [ಸಾಮಗಳಲ್ಲಿ] ರಥಂತರಸಾಮವೂ; **ಅಗ್ನಿಃ ದೇವತಾ** = [ದೇವತೆಗಳಲ್ಲಿ] ಅಗ್ನಿಯೂ; [ನಿನ್ನನ್ನು ರಕ್ಷಿಸಲಿ]. **ಬ್ರಹ್ಮ** = ಬ್ರಾಹ್ಮಣನು; **ದ್ರವಿಣಮ್ ಅವತು** = [ನಿನ್ನ] ಧನವನ್ನು ಕಾಪಾಡಲಿ.

---

ಎಲೈ! ರಾಜನೇ! ನೀನು ಮೊದಲು ಪೂರ್ವದಿಕ್ಕನ್ನು ಆಕ್ರಮಿಸು. ಛಂದಸ್ಸುಗಳಲ್ಲಿ

---

* ಸ್ತೋಮಗಳ ವಿವರಣೆಯನ್ನೂ, ರಥಂತರ ಮುಂತಾದ ಸಂಜ್ಞೆಗಳ ವಿವರವನ್ನೂ ಅನುವಾಕದ ವಿಶೇಷವಿಷಯದಲ್ಲಿ ನೀಡಲಾಗಿದೆ.

**ಮುಗ್ರಾಮಾ ತಿಷ್ಠ ತ್ರಿಷ್ಟುಪ್ತ್ವಾ ಛಂದಸಾಮವತು ಪಂಚದಶಃ ಸ್ತೋಮೋ ಬೃಹತ್ಸಾಮೇಂದ್ರೋ ದೇವತಾ ಕ್ಷತ್ರಂ ದ್ರವಿಣಂ ವಿರಾಜಮಾ ತಿಷ್ಠ ಜಗತೀ ತ್ವಾ ಛಂದಸಾಮವತು**

---

ಉಗ್ರಾಮ್ । ಏತಿ । ತಿಷ್ಠ । ತ್ರಿಷ್ಟುಪ್ । ತ್ವಾ । ಛಂದಸಾಮ್ । ಅವತು । ಪಂಚದಶ ಇತಿ ಪಂಚ-ದಶಃ । ಸ್ತೋಮಃ । ಬೃಹತ್ । ಸಾಮ । ಇಂದ್ರಃ । ದೇವತಾ । ಕ್ಷತ್ರಮ್ । ದ್ರವಿಣಮ್ । ವಿರಾಜಮಿತಿ ವಿ-ರಾಜಮ್ । ಏತಿ । ತಿಷ್ಠ । ಜಗತೀ । ತ್ವಾ । ಛಂದಸಾಮ್ । ಅವತು ।

---

| ಮಂತ್ರ | ವಿನಿಯೋಗ |
|---|---|
| ಉಗ್ರಾಮ್....ಕ್ಷತ್ರಂ ದ್ರವಿಣಮ್ । | ದಕ್ಷಿಣದಿಕ್ಕಿಗೆ ಕಳುಹಿಸಲು |
| ವಿರಾಜಮ್.... ವಿಡ್ದ್ರವಿಣಮ್ । | ಪಶ್ಚಿಮದಿಕ್ಕಿಗೆ ಕಳುಹಿಸಲು |

---

✣ [ಎಲೈ! ಯಜಮಾನನೇ!] **ಉಗ್ರಾಮ್** = [ಯಮನಿಗೆ/ಪಿತೃಗಳಿಗೆ ಸಂಬಂಧಿಸಿರುವುದರಿಂದ] ಉಗ್ರವಾದ ದಕ್ಷಿಣ ದಿಕ್ಕನ್ನು; **ಆ ತಿಷ್ಠ** = ಆಕ್ರಮಿಸು; **ಛಂದಸಾಮ್ ತ್ರಿಷ್ಟುಪ್ ತ್ವಾ ಅವತು** = ಛಂದಸ್ಸುಗಳಲ್ಲಿ ತ್ರಿಷ್ಟುಪ್ ನಿನ್ನನ್ನು ರಕ್ಷಿಸಲಿ. **ಪಂಚದಶಃ ಸ್ತೋಮಃ** = ಸ್ತೋಮಗಳಲ್ಲಿ ಪಂಚದಶಸ್ತೋಮವೂ; **ಬೃಹತ್ ಸಾಮ** = ಸಾಮಗಳಲ್ಲಿ ಬೃಹತ್ ಸಾಮವೂ; **ಇಂದ್ರಃ ದೇವತಾ** = ದೇವತೆಗಳಲ್ಲಿ ಇಂದ್ರನೂ. [ನಿನ್ನನ್ನು ಕಾಪಾಡಲಿ] **ಕ್ಷತ್ರಮ್** = ಕ್ಷತ್ರಿಯನು; **ದ್ರವಿಣಮ್** = ನಿನ್ನ ಧನವನ್ನು [ಅವತು = ರಕ್ಷಿಸಲಿ] ✣ [ಎಲೈ! ರಾಜನೇ!] **ವಿರಾಜಮ್ ಆ ತಿಷ್ಠ** = [ಜಲಾಧಿಪತಿಯಾದ ವರುಣನಿಂದ ಪಾಲಿತವಾಗಿ ಸಸ್ಯಾದಿಗಳಿಂದ ಪ್ರಕಾಶಿಸುವ] ಪಶ್ಚಿಮದಿಕ್ಕನ್ನು ಆಕ್ರಮಿಸು; **ಜಗತೀ ತ್ವಾ ಛಂದಸಾಮ್ ಅವತು** = ಛಂದಸ್ಸುಗಳಲ್ಲಿ ಜಗತಿಯು ನಿನ್ನನ್ನು ಪೊರೆಯಲಿ.

---

ಗಾಯತ್ರಿಯೂ, ಸ್ತೋಮಗಳಲ್ಲಿ ತ್ರಿವೃತ್ ಸ್ತೋಮವೂ, ಸಾಮಗಳಲ್ಲಿ ರಥಂತರವೂ, ದೇವತೆಗಳಲ್ಲಿ ಅಗ್ನಿಯೂ ನಿನ್ನನ್ನು ರಕ್ಷಿಸಲಿ. ಬ್ರಾಹ್ಮಣನು ನಿನ್ನ ಧನವನ್ನು ರಕ್ಷಿಸಲಿ.

ಎಲೈ! ರಾಜನೇ ! ನೀನು ಉಗ್ರವಾದ ದಕ್ಷಿಣದಿಕ್ಕಿಗೆ ಹೋಗು. ಛಂದಸ್ಸುಗಳಲ್ಲಿ ತ್ರಿಷ್ಟುಪ್ ಛಂದಸ್ಸೂ, ಸ್ತೋಮಗಳಲ್ಲಿ ಪಂಚದಶಸ್ತೋಮವೂ, ಸಾಮಗಳಲ್ಲಿ ಬೃಹತ್ಸಾಮವೂ, ದೇವತೆಗಳಲ್ಲಿ ಇಂದ್ರನೂ ನಿನ್ನನ್ನು ರಕ್ಷಿಸಲಿ. ಕ್ಷತ್ರಿಯನು ನಿನ್ನ ಧನವನ್ನು

**ಸಪ್ತದಶಃ ಸ್ತೋಮೋ ವೈರೂಪಗ್ಂ ಸಾಮ ಮರುತೋ ದೇವತಾ ವಿಡ್ದ್ರವಿಣಮುದೀಚೀಮಾ ತಿಷ್ಠಾನುಷ್ಟುಪ್ತ್ವಾ [..ನುಷ್ಟುಪ್ತ್ವಾ(೧)] ಛಂದಸಾಮವತ್ವೇಕವಿಗ್ಂಶಃಸ್ತೋಮೋ ವೈರಾಜಗ್ಂ ಸಾಮ ಮಿತ್ರಾವರುಣೌ ದೇವತಾ ಬಲಂ ದ್ರವಿಣ-**

---

ಸಪ್ತದಶ ಇತಿ ಸಪ್ತ-ದಶಃ । ಸ್ತೋಮಃ । ವೈರೂಪಮ್ । ಸಾಮ । ಮರುತಃ । ದೇವತಾ। ವಿಟ್ । ದ್ರವಿಣಮ್ । ಉದೀಚೀಮ್ । ಏತಿ । ತಿಷ್ಠ । ಅನುಷ್ಟುಬಿತ್ಯನು-ಸ್ತುಪ್ (೧)। ತ್ವಾ। ಛಂದಸಾಮ್। ಅವತು । ಏಕವಿಗ್ಂಶ ಇತ್ಯೇಕ-ವಿಗ್ಂಶಃ। ಸ್ತೋಮಃ। ವೈರಾಜಮ್। ಸಾಮ । ಮಿತ್ರಾವರುಣಾವಿತಿ ಮಿತ್ರಾ-ವರುಣೌ । ದೇವತಾ । ಬಲಮ್ । ದ್ರವಿಣಮ್।

---

| ಮಂತ್ರ | ವಿನಿಯೋಗ |
|---|---|
| ಉದೀಚಿಮ್.... ಬಲಂ ದ್ರವಿಣಮ್ । | ಉತ್ತರದಿಕ್ಕಿಗೆ ಅಭಿಮುಖನಾಗಿ ಹೇಳಲು |

---

**ಸಪ್ತದಶಃ ಸ್ತೋಮಃ** = [ಸ್ತೋಮಗಳಲ್ಲಿ] ಸಪ್ತದಶಸ್ತೋಮವೂ; **ವೈರೂಪಮ್ ಸಾಮ** = [ಸಾಮಗಳಲ್ಲಿ] ವೈರೂಪವೂ; **ಮರುತಃ ದೇವತಾ** = [ದೇವತೆಗಳಲ್ಲಿ] ಮರುತ್ತುಗಳೂ [ನಿನ್ನನ್ನು ರಕ್ಷಿಸಲಿ]. **ವಿಟ್** = ವೈಶ್ಯನು/ಪ್ರಜೆಯು; **ದ್ರವಿಣಮ್** = [ನಿನ್ನ ಧನವನ್ನು] **ಅವತು** = ರಕ್ಷಿಸಲಿ; ✣ [ಎಲೈ! ಯಜಮಾನನೇ] **ಉದೀಚೀಮ್ ಆ ತಿಷ್ಠ** = ಉತ್ತರದಿಕ್ಕನ್ನು ಆಕ್ರಮಿಸು; **ಅನುಷ್ಟುಪ್ ತ್ವಾ ಛಂದಸಾಮ್ ಅವತು** = ಛಂದಸ್ಸುಗಳಲ್ಲಿ ಅನುಷ್ಟುಪ್ ನಿನ್ನನ್ನು ರಕ್ಷಿಸಲಿ. **ಏಕವಿಗ್ಂಶಃ ಸ್ತೋಮಃ** = [ಸ್ತೋಮಗಳಲ್ಲಿ] ಏಕವಿಂಶ ಸ್ತೋಮವು; **ವೈರಾಜಮ್ ಸಾಮ** = [ಸಾಮಗಳಲ್ಲಿ] ವೈರಾಜಸಾಮವೂ; **ಮಿತ್ರಾವರುಣೌ ದೇವತಾ** = [ದೇವತೆಗಳಲ್ಲಿ] ಮಿತ್ರಾವರುಣರು [ನಿನ್ನನ್ನು ರಕ್ಷಿಸಲಿ]; **ಬಲಮ್** = ಬಲವು; **ದ್ರವಿಣಮ್ ಅವತು** = [ನಿನ್ನ] ಧನವನ್ನು ರಕ್ಷಿಸಲಿ.

---

ಕಾಪಾಡಲಿ.

ಓ! ಯಜಮಾನನೇ ! ನೀನು ಪಶ್ಚಿಮದಿಕ್ಕನ್ನು ಜಯಿಸು. ಛಂದಸ್ಸುಗಳಲ್ಲಿ ಜಗತಿಯೂ, ಸ್ತೋಮಗಳಲ್ಲಿ ಸಪ್ತದಶವೂ, ಸಾಮಗಳಲ್ಲಿ ವೈರೂಪವೂ, ದೇವತೆಗಳಲ್ಲಿ ಮರುತ್ತುಗಳೂ ನಿನ್ನನ್ನು ರಕ್ಷಿಸಲಿ. ವೈಶ್ಯನೂ/ಪ್ರಜೆಯೂ ನಿನ್ನ ಧನವನ್ನು ರಕ್ಷಿಸಲಿ.

ಮೂರ್ಧ್ವಾರ್ಮಾ ತಿಷ್ಠ ಪಂಕ್ತಿಸ್ತ್ವಾ ಛಂದಸಾಮವತು ತ್ರಿಣವ ತ್ರಯಸ್ತ್ರಿಗ್ಂಶೌ ಸ್ತೋಮೌ ಶಾಕ್ವರರೈವತೇ ಸಾಮನೀ ಬೃಹಸ್ಪತಿರ್ದೇವತಾ ವರ್ಚೋ ದ್ರವಿಣ-

---

ಊರ್ಧ್ವಾರ್ಮ್ । ಏತಿ । ತಿಷ್ಠ । ಪಂಕ್ತಿಃ । ತ್ವಾ । ಛಂದಸಾಮ್ । ಅವತು । ತ್ರಿಣವ ತ್ರಯಸ್ತ್ರಿಗ್ಂಶಾವಿತಿ ತ್ರಿಣವ-ತ್ರಯಸ್ತ್ರಿಗ್ಂಶೌ । ಸ್ತೋಮೌ । ಶಾಕ್ವರರೈವತೇ ಇತಿ ಶಾಕ್ವರ-ರೈವತೇ। ಸಾಮನೀ ಇತಿ । ಬೃಹಸ್ಪತಿಃ। ದೇವತಾ। ವರ್ಚಃ । ದ್ರವಿಣಮ್।

---

| ಮಂತ್ರ | ವಿನಿಯೋಗ |
|---|---|
| ಊರ್ಧ್ವಾರ್ಮ್..ವರ್ಚೋ ದ್ರವಿಣಮ್ । | ಊರ್ಧ್ವದಿಕ್ಕಿನ[ಪರ್ವತಾದಿಗಳ] ಜಯಕ್ಕಾಗಿ ಹೇಳುವ ಮಂತ್ರ. |

---

+ [ಎಲೈ! ಯಜಮಾನನೇ! [ನೀನು] **ಊರ್ಧ್ವಾರ್ಮ್ ಆ ತಿಷ್ಠ** = ಊರ್ಧ್ವದಿಕ್ಕನ್ನು ಜಯಿಸು; **ಪಂಕ್ತಿಃ ತ್ವಾ ಛಂದಸಾಮ್ ಅವತು** = ಛಂದಸ್ಸುಗಳಲ್ಲಿ ಪಂಕ್ತಿಯು ನಿನ್ನನ್ನು ರಕ್ಷಿಸಲಿ; **ತ್ರಿಣವತ್ರಯಸ್ತ್ರಿಗ್ಂಶೌ ಸ್ತೋಮೌ**=[ಸ್ತೋಮಗಳಲ್ಲಿ] ತ್ರಿಣವ ಮತ್ತುತ್ರಯ ಸ್ತ್ರಿಗ್ಂಶಗಳೂ; **ಶಾಕ್ವರರೈವತೇ ಸಾಮನೀ** =[ಸಾಮಗಳಲ್ಲಿ] ಶಾಕ್ವರ ಮತ್ತು ರೈವತಗಳೂ; **ಬೃಹಸ್ಪತಿಃ ದೇವತಾ** = [ದೇವತೆಗಳಲ್ಲಿ] ಬೃಹಸ್ಪತಿಯೂ [ನಿನ್ನನ್ನು ರಕ್ಷಿಸಲಿ]; **ವರ್ಚಃ ದ್ರವಿಣಮ್ ಅವತು** = ಪ್ರಕಾಶವು [ನಿನ್ನ] ದ್ರವ್ಯವನ್ನು ರಕ್ಷಿಸಲಿ.

---

[ಉತ್ತರದಿಕ್ಕಿನ ಜಯಕ್ಕಾಗಿ ಯಜಮಾನನಿಗೆ ಹೇಳುವ ಮಂತ್ರ] ಎಲೈ! ರಾಜನೇ! ನೀನು ಉತ್ತರದಿಕ್ಕನ್ನು ಜಯಿಸು. ಛಂದಸ್ಸುಗಳಲ್ಲಿ ಅನುಷ್ಟುಪ್, ಸ್ತೋಮಗಳಲ್ಲಿ ಏಕವಿಂಶವೂ, ಸಾಮಗಳಲ್ಲಿ ವೈರಾಜವೂ, ದೇವತೆಗಳಲ್ಲಿ ಮಿತ್ರಾವರುಣರೂ ನಿನ್ನನ್ನು ಕಾಪಾಡಲಿ. ಬಲವು ನಿನ್ನ ಧನವನ್ನು ರಕ್ಷಿಸಲಿ.

ಎಲೈ! ರಾಜನೇ ! ನೀನು ಮೇಲ್ಭಾಗದ ಪರ್ವತಾದಿಪ್ರದೇಶಗಳನ್ನು ಜಯಿಸು. ಸ್ವರ್ಗವನ್ನು ಜಯಿಸು. ಛಂದಸ್ಸುಗಳಲ್ಲಿ ಪಂಕ್ತಿಯೂ, ಸ್ತೋಮಗಳಲ್ಲಿ ತ್ರಿಣವ-ತ್ರಯ ಸ್ತ್ರಿಗ್ಂಶಗಳೂ, ಸಾಮಗಳಲ್ಲಿ ಶಾಕ್ವರ-ರೈವತಗಳೂ, ದೇವತೆಗಳಲ್ಲಿ ಬೃಹಸ್ಪತಿಯೂ ನಿನ್ನನ್ನು ರಕ್ಷಿಸಲಿ. ನಿನ್ನ ವರ್ಚಸ್ಸು ನಿನ್ನ ಧನವನ್ನು ಕಾಯಲಿ.

## ಮೀದೃಙ್ಚಾನ್ಯಾದೃಙ್ಚೈತಾದೃಙ್ಚ ಪ್ರತಿದೃಙ್ಚ ಮಿತಶ್ಚ ಸಮ್ಮಿತಶ್ಚ ಸಭರಾಃ । ಶುಕ್ರಜ್ಯೋತಿಶ್ಚ ಚಿತ್ರಜ್ಯೋತಿಶ್ಚ ಸತ್ಯಜ್ಯೋತಿಶ್ಚ ಜ್ಯೋತಿಷ್ಮಾಗ್‌ಂಶ್ಚ

---

ಈದೃಙ್। ಚ । ಅನ್ಯಾದೃಙ್ । ಚ । ಏತಾದೃಙ್ । ಚ । ಪ್ರತಿದೃಙ್ಙಿತಿ ಪ್ರತಿ-ದೃಙ್। ಚ । ಮಿತಃ । ಚ । ಸಮ್ಮಿತ ಇತಿ ಸಮ್-ಮಿತಃ । ಚ ಸಭರಾ ಇತಿ ಸ-ಭರಾಃ ॥ ಶುಕ್ರಜ್ಯೋತಿರಿತಿ ಶುಕ್ರ-ಜ್ಯೋತಿಃ । ಚ । ಚಿತ್ರಜ್ಯೋತಿರಿತಿ ಚಿತ್ರ-ಜ್ಯೋತಿಃ । ಚ । ಸತ್ಯಜ್ಯೋತಿರಿತಿ ಸತ್ಯ-ಜ್ಯೋತಿಃ । ಚ । ಜ್ಯೋತಿಷ್ಮಾನ್ । ಚ ।

---

ಇಲ್ಲಿ ಮರುದ್ದೇವತಾಕವಾದ ಏಕವಿಂಶತಿಕಪಾಲಪುರೋಡಾಶಯಾಗವು ವಿಹಿತವಾಗಿದೆ. ವೈಶ್ವದೇವ್ಯಾಮಿಕ್ಷಾಯಾಗವೂ ವಿಹಿತವಾಗಿದೆ. ಅದರಲ್ಲಿನ ಮಾರುತಯಾಗದಲ್ಲಿ ಕಪಾಲೋಪಧಾನಮಂತ್ರಗಳಿವು.

| ಮಂತ್ರ | ವಿನಿಯೋಗ |
|---|---|
| *ಈದೃಙ್.... ಅತ್ಯಗ್‌ಂಹಾಃ । | ಮಾರುತಯಾಗದ ಕಪಾಲೋಪಧಾನದಲ್ಲಿ |

---

### ಕಪಾಲೋಪಧಾನ

ಮರುದ್ದೇವತಾಕವಾದ ಕಪಾಲೋಪಧಾನಮಂತ್ರಗಳಿರುವ ಈ ಅನುವಾಕದಲ್ಲಿ ಮೂರರಲ್ಲಿ ಎರಡು ಮರುದ್ಗಣಗಳು ಮಾತ್ರ ಪಠಿತವಾಗಿವೆ. ಇನ್ನೊಂದು ಗಣವು ಆರಣ್ಯಕದಲ್ಲಿ ಪಠಿತವಾಗಿದೆ. ಆ ಗಣದ ಮಂತ್ರಗಳನ್ನು ಎರಡು ಗಣಗಳ ಮಧ್ಯದಲ್ಲಿ ಹೇಳಬೇಕು.

ಆ ಮಂತ್ರಗಳು ಹೀಗಿವೆ; ಧುನಿಶ್ಚ ಧ್ವಾಂತಶ್ಚ ಧ್ವನಶ್ಚ ಧ್ವನಯಗ್‌ಂಶ್ಚ । ನಿಲಿಂಪಶ್ಚ ವಿಲಿಂಪಶ್ಚ ವಿಕ್ಷಿಪಃ । [ತೈ.ಆ.4.24.] ಇಲ್ಲಿ ಪಠಿತವಾದ ಮಂತ್ರಗಳೂ ಸೇರಿ 21 ಮಂತ್ರಗಳಾಗುತ್ತವೆ. ಮರುದ್ದೇವತೆಗಳ ಆ ನಾಮಧೇಯಗಳಿಂದ ಉಪಧಾನ ಮಾಡಬೇಕು. ಆ ನಾಮಧೇಯಗಳು ಇವು—

---

* **'ಈದೃಙ್'** ಮೊದಲಾದ ಪದಗಳ ವ್ಯುತ್ಪತ್ತಿಯನ್ನು ಭಟ್ಟಭಾಸ್ಕರರು ಕೊಟ್ಟಿರುತ್ತಾರೆ. ಇವು ನಾಮಧೇಯಗಳಾದುದರಿಂದ ವ್ಯುತ್ಪತ್ತಿಯು ಆವಶ್ಯಕವಿಲ್ಲವೆಂದು ಸಾಯಣಾಚಾರ್ಯರ ಅಭಿಪ್ರಾಯ.

**ಸತ್ಯಶ್ಚರ್ತಪಾಶ್ಚಾ[...ಶ್ಚರ್ತಪಾಶ್ಚ(೨)ಅತ್ಯಗ್ಂಹಾಃ]ತ್ಯಗ್ಂಹಾಃ । ಅಗ್ನಯೇ ಸ್ವಾಹಾ ಸೋಮಾಯ ಸ್ವಾಹಾ ಸವಿತ್ರೇ ಸ್ವಾಹಾ ಸರಸ್ವತ್ಯೈ ಸ್ವಾಹಾ ಪೂಷ್ಣೇ ಸ್ವಾಹಾ**

---

ಸತ್ಯಃ । ಚ । ಋತಪಾ ಇತ್ಯೃತ-ಪಾಃ । ಚ (೨)। ಅತ್ಯಗ್ಂಹಾ ಇತ್ಯತಿ-ಅಗ್ಂಹಾಃ ॥ ಅಗ್ನಯೇ । ಸ್ವಾಹಾ । ಸೋಮಾಯ । ಸ್ವಾಹಾ । ಸವಿತ್ರೇ । ಸ್ವಾಹಾ । ಸರಸ್ವತ್ಯೈ । ಸ್ವಾಹಾ । ಪೂಷ್ಣೇ । ಸ್ವಾಹಾ ।

---

| ಮಂತ್ರ | ವಿನಿಯೋಗ |
|---|---|
| ಅಗ್ನಯೇ ಸ್ವಾಹಾ...ಬೃಹಸ್ಪತಯೇ ಸ್ವಾಹಾ ॥ | ಅಭಿಷೇಕಕ್ಕೆ ಮೊದಲು ಮಾಡುವ ಆರು ಪಾರ್ಥಹೋಮಗಳು |

---

| ಗಣ -೧ | (ಆರಣ್ಯಕ)ಗಣ-೨ | ಗಣ-೩ |
|---|---|---|
| ೧) ಈದೃಙ್ | ೮) ಧುನಿ | ೧೫) ಶುಕ್ರಜ್ಯೋತಿ |
| ೨) ಅನ್ಯಾದೃಙ್ | ೯) ಧ್ವಾಂತ | ೧೬) ಚಿತ್ರಜ್ಯೋತಿ |
| ೩) ಏತಾದೃಙ್ | ೧೦) ಧ್ವನ | ೧೭) ಸತ್ಯಜ್ಯೋತಿ |
| ೪) ಪ್ರತಿದೃಙ್ | ೧೧) ಧ್ವನಯನ್ | ೧೮) ಜ್ಯೋತಿಷ್ಮಾನ್ |
| ೫) ಮಿತ | ೧೨) ನಿಲಿಂಪ | ೧೯ ) ಸತ್ಯ |
| ೬) ಸಮ್ಮಿತ | ೧೩) ವಿಲಿಂಪ | ೨೦) ಋತಪ |
| ೭) ಸಭರಸ್ | ೧೪) ವಿಕ್ಷಿಪ | ೨೧) ಅತ್ಯಗ್ಂಹಸ್ |

**ಪಾರ್ಥಹೋಮಗಳು-ಅವೇಷ್ಟಿಹೋಮಗಳು**

ಈ ಅನುವಾಕದಲ್ಲಿ ಪಾರ್ಥಹೋಮಗಳು ಮತ್ತು ಅವೇಷ್ಟಿಹೋಮಗಳು ಹೇಳಲ್ಪಟ್ಟಿವೆ. ಹನ್ನೆರಡು ಪಾರ್ಥಹೋಮಗಳು, ಹನ್ನೆರಡು ಅವೇಷ್ಟಿಹೋಮಗಳು. ಆರು ಪಾರ್ಥಹೋಮಗಳನ್ನೂ, ಆರು ಅವೇಷ್ಟಿಹೋಮಗಳನ್ನೂ, ಅಭಿಷೇಕಕ್ಕೆ ಮೊದಲು ಮಾಡಬೇಕು. ಉಳಿದ ಆರು ಪಾರ್ಥಹೋಮಗಳನ್ನೂ, ಆರು ಅವೇಷ್ಟಿ ಹೋಮಗಳನ್ನೂ ಅಭಿಷೇಕದ ಅನಂತರ ಮಾಡಬೇಕು. ಪಾರ್ಥಹೋಮಗಳಿಂದ ರಾಷ್ಟ್ರವೇ ಆಗುತ್ತಾನೆ. ಅವೇಷ್ಟಿಹೋಮಗಳಿಂದ ಮೃತ್ಯುಪರಿಹಾರವಾಗಿ ಆಯುಷ್ಮಂತನಾಗುತ್ತಾನೆ.

**ಬೃಹಸ್ಪತಯೇ ಸ್ವಾಹೇಂದ್ರಾಯ ಸ್ವಾಹಾ ಘೋಷಾಯ ಸ್ವಾಹಾ ಶ್ಲೋಕಾಯ ಸ್ವಾಹಾಽಗ್ಂಶಾಯ ಸ್ವಾಹಾ ಭಗಾಯ ಸ್ವಾಹಾ ಕ್ಷೇತ್ರಸ್ಯ ಪತಯೇ ಸ್ವಾಹಾ ಪೃಥಿವ್ಯೈ ಸ್ವಾಹಾಂತರಿಕ್ಷಾಯ ಸ್ವಾಹಾ**

---

ಬೃಹಸ್ಪತಯೇ । ಸ್ವಾಹಾ । ಇಂದ್ರಾಯ । ಸ್ವಾಹಾ । ಘೋಷಾಯ । ಸ್ವಾಹಾ । ಶ್ಲೋಕಾಯ। ಸ್ವಾಹಾ। ಅಗ್ಂಶಾಯ। ಸ್ವಾಹಾ । ಭಗಾಯ । ಸ್ವಾಹಾ । ಕ್ಷೇತ್ರಸ್ಯ। ಪತಯೇ । ಸ್ವಾಹಾ। ಪೃಥಿವ್ಯೈ । ಸ್ವಾಹಾ । ಅಂತರಿಕ್ಷಾಯ । ಸ್ವಾಹಾ ।

---

| ಮಂತ್ರ | ವಿನಿಯೋಗ |
|---|---|
| ಇಂದ್ರಾಯ ಸ್ವಾಹಾ....ಪತಯೇ ಸ್ವಾಹಾ ॥ | ಅಭಿಷೇಕದ ಅನಂತರ ಮಾಡುವ ಆರು ಪಾರ್ಥಹೋಮಗಳು |
| ಪೃಥಿವ್ಯೈ ಸ್ವಾಹಾ...ನಕ್ಷತ್ರೇಭ್ಯಃ ಸ್ವಾಹಾ ॥ | ಅಭಿಷೇಕಕ್ಕೆ ಮೊದಲು ಮಾಡುವ ಆರು ಭೂತಾನಾಮವೇಷ್ಟಿಹೋಮಗಳು. |

---

[ಇಲ್ಲಿ ಹೇಳಿರುವ ಮಂತ್ರಗಳಲ್ಲಿ ಅಗ್ನ್ಯಾದಿಗಳೇ ದೇವತೆಗಳು] ಅಗ್ನಯೇ ಸ್ವಾಹಾ = ಅಗ್ನಿದೇವನಿಗೆ ಇದು ಹುತವಾಗಲಿ. ಸೋಮಾಯ ಸ್ವಾಹಾ = ಸೋಮದೇವನಿಗೆ ಇದು ಹುತವಾಗಲಿ. ಸವಿತ್ರೇ ಸ್ವಾಹಾ = ಸವಿತೃದೇವನಿಗೆ ಇದು ಹುತವಾಗಲಿ. ಸರಸ್ವತ್ಯೈ ಸ್ವಾಹಾ = ಸರಸ್ವತೀದೇವತೆಗೆ ಇದು ಹುತವಾಗಲಿ. ಪೂಷ್ಣೇ ಸ್ವಾಹಾ = ಪೂಷದೇವನಿಗೆ ಇದು ಹುತವಾಗಲಿ. ಬೃಹಸ್ಪತಯೇ ಸ್ವಾಹಾ = ಬೃಹಸ್ಪತಿಗೆ ಈ ಹವಿಸ್ಸು ಹುತವಾಗಲಿ. + ಇಂದ್ರಾಯ ಸ್ವಾಹಾ = ಇಂದ್ರನಿಗೆ ಇದು ಹುತವಾಗಲಿ; ಘೋಷಾಯ ಸ್ವಾಹಾ = ಘೋಷದೇವನಿಗೆ ಇದು ಹುತವಾಗಲಿ; ಶ್ಲೋಕಾಯ ಸ್ವಾಹಾ = ಶ್ಲೋಕದೇವನಿಗೆ ಇದು ಹುತವಾಗಲಿ; ಅಗ್ಂಶಾಯ ಸ್ವಾಹಾ = ಅಂಶದೇವನಿಗೆ ಈ ಹವ್ಯವು ಹುತವಾಗಲಿ; ಭಗಾಯ ಸ್ವಾಹಾ = ಭಗದೇವನಿಗೆ ಇದು ಹುತವಾಗಲಿ; ಕ್ಷೇತ್ರಸ್ಯ ಪತಯೇ ಸ್ವಾಹಾ = ಕ್ಷೇತ್ರಪತಿದೇವನಿಗೆ ಇದು ಹುತವಾಗಲಿ. + ಪೃಥಿವ್ಯೈ ಸ್ವಾಹಾ = ಪೃಥಿವೀದೇವಿಗೆ ಇದು ಹುತವಾಗಲಿ; ಅಂತರಿಕ್ಷಾಯ ಸ್ವಾಹಾ = ಅಂತರಿಕ್ಷದೇವನಿಗೆ ಇದು ಹುತವಾಗಲಿ.

**ದಿವೇ ಸ್ವಾಹಾ ಸೂರ್ಯಾಯ ಸ್ವಾಹಾ ಚಂದ್ರಮಸೇ ಸ್ವಾಹಾ ನಕ್ಷತ್ರೇಭ್ಯಃ ಸ್ವಾಹಾಽದ್ಭ್ಯಃ ಸ್ವಾಹೌಷಧೀಭ್ಯಃ ಸ್ವಾಹಾ ವನಸ್ಪತಿಭ್ಯಃ ಸ್ವಾಹಾ ಚರಾಚರೇಭ್ಯಃ ಸ್ವಾಹಾ ಪರಿಪ್ಲವೇಭ್ಯಃ ಸ್ವಾಹಾ ಸರೀಸೃಪೇಭ್ಯಃ ಸ್ವಾಹಾ ॥ ೧೩ - 26 ॥**

**[ಅನುಷ್ಟುಪ್ಪ್ರತ್ಯರ್ಧಪಾಶ್ಚ ಸರೀಸೃಪೇಭ್ಯಃ ಸ್ವಾಹಾ ॥]**

---

ದಿವೇ । ಸ್ವಾಹಾ । ಸೂರ್ಯಾಯ । ಸ್ವಾಹಾ । ಚಂದ್ರಮಸೇ । ಸ್ವಾಹಾ । ನಕ್ಷತ್ರೇಭ್ಯಃ। ಸ್ವಾಹಾ । ಅದ್ಭ್ಯ ಇತ್ಯತ್-ಭ್ಯಃ । ಸ್ವಾಹಾ । ಓಷಧೀಭ್ಯ ಇತ್ಯೋಷಧಿ-ಭ್ಯಃ । ಸ್ವಾಹಾ । ವನಸ್ಪತಿಭ್ಯ ಇತಿ ವನಸ್ಪತಿ-ಭ್ಯಃ । ಸ್ವಾಹಾ । ಚರಾಚರೇಭ್ಯಃ । ಸ್ವಾಹಾ । ಪರಿಪ್ಲವೇಭ್ಯ ಇತಿ ಪರಿ-ಪ್ಲವೇಭ್ಯಃ । ಸ್ವಾಹಾ । ಸರೀಸೃಪೇಭ್ಯಃ । ಸ್ವಾಹಾ ॥ ೧೩ ॥

---

| ಮಂತ್ರ | ವಿನಿಯೋಗ |
|---|---|
| ಅದ್ಭ್ಯಃ ಸ್ವಾಹಾ...ಸರೀಸೃಪೇಭ್ಯಃ ಸ್ವಾಹಾ ॥ | ಅಭಿಷೇಕಾನಂತರದ ಅವೇಷ್ಟಿಹೋಮಗಳು. |

---

ದಿವೇ ಸ್ವಾಹಾ = ದ್ಯುದೇವತೆಗೆ ಇದು ಹುತವಾಗಲಿ; ಸೂರ್ಯಾಯ ಸ್ವಾಹಾ = ಸೂರ್ಯದೇವನಿಗೆ ಇದು ಹುತವಾಗಲಿ; ಚಂದ್ರಮಸೇ ಸ್ವಾಹಾ = ಚಂದ್ರಮೋದೇವನಿಗೆ ಇದು ಹುತವಾಗಲಿ; ನಕ್ಷತ್ರೇಭ್ಯಃ ಸ್ವಾಹಾ = ನಕ್ಷತ್ರದೇವತೆಗಳಿಗೆ ಇದು ಹುತವಾಗಲಿ. + ಅದ್ಭ್ಯಃ ಸ್ವಾಹಾ = ಅಬ್ದೇವತೆಗಳಿಗೆ ಇದು ಹುತವಾಗಲಿ; ಓಷಧೀಭ್ಯಃ ಸ್ವಾಹಾ = ಓಷಧಿದೇವತೆಗಳಿಗೆ ಇದು ಹುತವಾಗಲಿ; ವನಸ್ಪತಿಭ್ಯಃ ಸ್ವಾಹಾ = ವನಸ್ಪತಿದೇವತೆಗಳಿಗೆ ಇದು ಹುತವಾಗಲಿ; ಪರಿಪ್ಲವೇಭ್ಯಃ ಸ್ವಾಹಾ = ಪರಿಪ್ಲವದೇವತೆಗಳಿಗೆ ಇದು ಹುತವಾಗಲಿ; ಸರೀಸೃಪೇಭ್ಯಃ ಸ್ವಾಹಾ = ಸರೀಸೃಪದೇವತೆಗಳಿಗೆ ಇದು ಹುತವಾಗಲಿ.

## ವಿನಿಯೋಗ ಸಂಗ್ರಹ

ದಿಶೋ ವ್ಯಾಸ್ಥಾಪಯೇದ್ಭೂಪಮಧ್ವರ್ಯುಃ ಸಮಿ[1-5]ಪಂಚಭಿಃ ।
ಮಾರುತಸ್ಯ ಕಪಾಲಾನಿ ದಧ್ಯಾದೀದೃಙ್[6-19] ಚತುರ್ದಶ ॥
[20-31]ಅಗ್ನ್ಯಾಭಿಷೇಕತಃ ಪೂರ್ವಂ ಷಟ್ ಪಾರ್ಥಾನ್ಯುತ್ತರಾಣಿ ಷಟ್ ।
[32-43]ಪೃಥಿ ಷಟ್ಕದ್ವಯಂ ತದ್ವತ್ಸ್ಯುರ್ಭೂತಾನಾಮವೇಷ್ಟ್ಯಯಃ ।
ತ್ರಯೋದಶೇಽನುವಾಕೇಽಸ್ಮಿಂಸ್ತ್ರಿಚತ್ವಾರಿಂಶದೀರಿತಾಃ ॥

**ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ- 43**

## ಅನುವಾಕದ ವಿಶೇಷ ವಿಷಯಗಳು

### ಸ್ತೋಮಗಳು

ಸ್ತೋಮವೆಂದರೆ ಸಾಮಗಾನ ಮಾಡುವ ಋಕ್ಕುಗಳ ಸಂಖ್ಯೆ. ಮೂರು ಋಕ್ ಗಳನ್ನೊಳಗೊಂಡಿರುವ ಸೂಕ್ತವನ್ನು 'ತೃಚ'ವೆನ್ನುವರು. ಒಂದೊಂದು ಸೂಕ್ತದಲ್ಲಿಯೂ ಮೂರು ಋಕ್‌ಗಳಿರುವಂತಹ ಮೂರು ಸೂಕ್ತಗಳಲ್ಲಿ ಗಾನ ಮಾಡಬೇಕು.

### ೧) ತ್ರಿವೃತ್‌ಸ್ತೋಮ
### ಗಾನಪ್ರಕಾರ

ಮೂರು ಸೂಕ್ತಗಳಲ್ಲಿಯೂ ಮೊದಲನೆಯ ಋಕ್ ಅನ್ನು ಗಾನ ಮಾಡಿ ಹಿಂಕಾರ ಮಾಡಬೇಕು. ಇದು ಪ್ರಥಮಪರ್ಯಾಯ.

ಮೂರು ಸೂಕ್ತಗಳಲ್ಲಿಯೂ ಮಧ್ಯಮ ಋಕ್ ಅನ್ನು ಗಾನ ಮಾಡಿ ಹಿಂಕಾರ ಮಾಡಬೇಕು. ಇದು ದ್ವಿತೀಯಪರ್ಯಾಯ.

ಮೂರು ಸೂಕ್ತಗಳಲ್ಲಿಯೂ ಕೊನೆಯ ಋಕ್ ಅನ್ನು ಗಾನ ಮಾಡಿ ಹಿಂಕಾರ ಮಾಡಬೇಕು. ಇದು ತೃತೀಯಪರ್ಯಾಯ.

ಇದು ಒಂಬತ್ತು ಸಂಖ್ಯೆಯ ಋಕ್‌ಗಳ ಗಾನವಾದುದರಿಂದ 'ತ್ರಿವೃತ್ ಸ್ತೋಮ'ವೆನಿಸುತ್ತದೆ. ಈ ಸ್ತುತಿಗೆ 'ಉದ್ಯತೀ' ಎಂದು ಹೆಸರು.

### ರಥಂತರಸಾಮ

'ಅಭಿ ತ್ವಾ ಶೂರ' [ಋ.ಸಂ. 7.32.22.] ಎಂಬ ಋಕ್ಕಿನಲ್ಲಿ ಉತ್ಪನ್ನವಾದ ಸಾಮ.

### ೨) ಪಂಚದಶಸ್ತೋಮ

ತ್ರಿವೃತ್‌ಸ್ತೋಮದಲ್ಲಿ ಮಾತ್ರ ಮೂರು ತೃಚಗಳು. ಉಳಿದ ಸ್ತೋಮಗಳಲ್ಲಿ ಒಂದೇ ತೃಚ. ಅಂದರೆ ಮೂರು ಋಕ್‌ಗಳನ್ನು ಹೊಂದಿರುವ ಒಂದು ಸೂಕ್ತ. ಅಲ್ಲಿಯ ಋಕ್‌ಗಳ ಆವೃತ್ತಿಯಿಂದಲೇ ಸಂಖ್ಯೆಯನ್ನು ಪೂರ್ತಿಗೊಳಿಸಬೇಕು.

ಒಂದೇ ತೃಚಸೂಕ್ತದಲ್ಲಿರುವ ಮೊದಲನೆಯ ಋಕ್ ಅನ್ನು ಮೂರು ಬಾರಿ ಗಾನ ಮಾಡಬೇಕು. ಉಳಿದೆರಡು ಋಕ್‌ಗಳನ್ನು ಒಂದೊಂದು ಬಾರಿ ಗಾನ ಮಾಡಬೇಕು. **[3-1-1]** ಅನಂತರ ಹಿಂಕಾರ. ಇದು **ಪ್ರಥಮಪರ್ಯಾಯ.**

ಮೊದಲನೆಯ ಋಕ್ ಅನ್ನು ಒಂದು ಬಾರಿ. ಮಧ್ಯಮ ಋಕ್ ಅನ್ನು ಮೂರು ಬಾರಿ. ಕಡೆಯ ಋಕ್ ಅನ್ನು ಒಂದು ಬಾರಿ.**[1-3-1]** ಅನಂತರ ಹಿಂಕಾರ. ಇದು **ದ್ವಿತೀಯಪರ್ಯಾಯ.**

ಮೊದಲನೆಯ ಋಕ್ ಅನ್ನು ಒಂದು ಬಾರಿ. ಮಧ್ಯಮ ಋಕ್ ಅನ್ನು ಒಂದು ಬಾರಿ. ಕಡೆಯ ಋಕ್ ಅನ್ನು ಮೂರು ಬಾರಿ.**[1-1-3]** ಅನಂತರ ಹಿಂಕಾರ. ಇದು **ತೃತೀಯಪರ್ಯಾಯ.** ಹೀಗೆ **[5+5+5]** **'ಪಂಚದಶಸ್ತೋಮ'**ವೆನಿಸುತ್ತದೆ. ಈ ಸ್ತುತಿಗೆ **'ಪಂಚಪಂಚಿನೀ'** ಎಂದು ಹೆಸರು.

### ಬೃಹತ್ ಸಾಮ

'ತ್ವಾಮಿದ್ಧಿ ಹವಾಮಹೇ' [ಋ.ಸಂ. 6.46.1] ಎಂಬ ಋಕ್ಕಿನಲ್ಲಿ ಜನಿಸಿದ ಸಾಮ.

### ೩) ಸಪ್ತದಶಸ್ತೋಮ

ಒಂದೇ ತೃಚಸೂಕ್ತದಲ್ಲಿರುವ ಮೊದಲನೆಯ ಋಕ್ಕನ್ನು ಮೂರು ಬಾರಿ ಗಾನ ಮಾಡಬೇಕು. ಉಳಿದೆರಡು ಋಕ್‌ಗಳನ್ನು ಒಂದೊಂದು ಬಾರಿ ಗಾನ ಮಾಡಬೇಕು. **[3-1-1]** ಅನಂತರ ಹಿಂಕಾರ. ಇದು **ಪ್ರಥಮಪರ್ಯಾಯ.**

ಮೊದಲನೆಯ ಋಕ್ ಅನ್ನು ಒಮ್ಮೆ ಗಾನ ಮಾಡಬೇಕು. ಮಧ್ಯದ ಋಕ್ ಅನ್ನು ಮೂರು ಬಾರಿ ಗಾನ ಮಾಡಬೇಕು. ಕಡೆಯ ಋಕ್ ಅನ್ನು ಒಮ್ಮೆ ಗಾನ ಮಾಡಬೇಕು **[1-3-1]**. ಅನಂತರ ಹಿಂಕಾರ. ಇದು **ಎರಡನೆಯ ಪರ್ಯಾಯ.**

ಮೊದಲನೆಯ ಋಕ್ ಅನ್ನು ಒಮ್ಮೆಗಾನ ಮಾಡಬೇಕು. ಮಧ್ಯದ ಋಕ್ ಅನ್ನು ಮೂರು ಬಾರಿ ಗಾನ ಮಾಡಬೇಕು. ಅಂತ್ಯದ ಋಕ್ಕನ್ನೂ ಮೂರು ಬಾರಿ ಗಾನ ಮಾಡಬೇಕು. **[1-3-3]** ಅನಂತರ ಹಿಂಕಾರ. ಇದು ತೃತೀಯಪರ್ಯಾಯ.

ಹೀಗೆ **[5+5+7]** 'ಸಪ್ತದಶಸ್ತೋಮ'ವೆನಿಸುವುದು. ಈ ಸ್ತುತಿಗೆ 'ದಶಸಪ್ತಾ' ಎಂದು ಹೆಸರು.

## ವೈರೂಪಸಾಮ

'ಯದ್ದ್ಯಾವ ಇಂದ್ರ ತೇ' [ಋ.ಸಂ. 8.70.5] ಎಂಬ ಋಕ್ಕಿನಲ್ಲಿ ಉತ್ಪನ್ನವಾದ ಸಾಮ.

## ೪) ಏಕವಿಂಶಸ್ತೋಮ

ಒಂದೇ ತೃಚಸೂಕ್ತದಲ್ಲಿರುವ ಮೊದಲನೆಯ ಋಕ್ಕನ್ನು ಮೂರು ಬಾರಿ ಗಾನ ಮಾಡಬೇಕು. ಎರಡನೆಯ ಋಕ್ಕನ್ನೂ ಮೂರು ಬಾರಿ ಗಾನ ಮಾಡಬೇಕು. ಕಡೆಯ ಋಕ್ ಅನ್ನು ಒಮ್ಮೆ ಗಾನ ಮಾಡಬೇಕು. **[3-3-1]** ಅನಂತರ ಹಿಂಕಾರ. ಇದು ಪ್ರಥಮಪರ್ಯಾಯ.

ಮೊದಲನೆಯ ಋಕ್ ಅನ್ನು ಒಮ್ಮೆ ಗಾನ ಮಾಡಬೇಕು. ಎರಡನೆಯ ಋಕ್ ಅನ್ನು ಮೂರು ಬಾರಿ, ಅಂತ್ಯದ ಋಕ್ ಅನ್ನೂ ಮೂರು ಬಾರಿ ಗಾನ ಮಾಡಬೇಕು. **[1-3-3]** ಅನಂತರ ಹಿಂಕಾರ. ಇದು ದ್ವಿತೀಯಪರ್ಯಾಯ.

ಮೊದಲನೆಯ ಋಕ್ ಅನ್ನು ಮೂರು ಬಾರಿ ಗಾನ ಮಾಡಬೇಕು. ಮಧ್ಯದ ಋಕ್ಕನ್ನು ಒಮ್ಮೆ ಗಾನ ಮಾಡಬೇಕು. ಕಡೆಯ ಋಕ್ ಅನ್ನು ಮೂರು ಬಾರಿ ಗಾನ ಮಾಡಬೇಕು. **[3-1-3]** ಅನಂತರ ಹಿಂಕಾರ. ಇದು ತೃತೀಯಪರ್ಯಾಯ.

ಹೀಗೆ **[7+7+7]** 'ಏಕವಿಂಶಸ್ತೋಮ'ವೆನಿಸಿಕೊಳ್ಳುತ್ತದೆ. ಈ ಸ್ತುತಿಗೆ 'ಸಪ್ತ ಸಪ್ತಿನೀ' ಎಂದು ಹೆಸರು.

## ವೈರಾಜಸಾಮ

'ಪಿಬಾ ಸೋಮಮಿಂದ್ರ' [ತೈ.ಸಂ. 2.4.14] ಎಂಬ ಋಕ್ಕಿನಲ್ಲಿ ಹುಟ್ಟಿದ ಸಾಮ.

## ೫) ತ್ರಿಣವ-ತ್ರಯಸ್ತ್ರಿಗ್ಂಶ ಸ್ತೋಮಗಳು

ಒಂದೇ ತೃಚಸೂಕ್ತದಲ್ಲಿರುವ ಮೊದಲ ಋಕ್ ಅನ್ನು ಮೂರು ಬಾರಿ ಗಾನ ಮಾಡಬೇಕು. ಮಧ್ಯದ ಋಕ್ ಅನ್ನು ಐದು ಬಾರಿ ಗಾನ ಮಾಡಬೇಕು. ಕಡೆಯ ಋಕ್ ಅನ್ನು ಒಮ್ಮೆ ಗಾನ ಮಾಡಬೇಕು. **[3-5-1]** ಅನಂತರ ಹಿಂಕಾರ. ಇದು ಪ್ರಥಮ ಪರ್ಯಾಯ.

ಮೊದಲನೆಯ ಋಕ್ ಅನ್ನು ಒಮ್ಮೆ ಗಾನ ಮಾಡಬೇಕು. ಎರಡನೆಯ ಋಕ್ ಅನ್ನು ಮೂರು ಬಾರಿ ಗಾನ ಮಾಡಬೇಕು. ಅಂತ್ಯದ ಋಕ್ ಅನ್ನು ಐದು ಬಾರಿ ಗಾನ ಮಾಡಬೇಕು. [1-3-5] ಅನಂತರ ಹಿಂಕಾರ. ಇದು ದ್ವಿತೀಯಪರ್ಯಾಯ.

ಮೊದಲನೆಯ ಋಕ್ ಅನ್ನು ಐದು ಬಾರಿ ಗಾನ ಮಾಡಬೇಕು. ಎರಡನೆಯ ಋಕ್ ಅನ್ನು ಒಮ್ಮೆ ಗಾನ ಮಾಡಬೇಕು. ಅಂತ್ಯದ ಋಕ್ ಅನ್ನು ಮೂರು ಬಾರಿ ಗಾನ ಮಾಡಬೇಕು. [5-1-3] ಅನಂತರ ಹಿಂಕಾರ. ಇದು ತೃತೀಯಪರ್ಯಾಯ.

ಹೀಗೆ [9-9-9] ಆವೃತ್ತ ನವಸಂಖ್ಯೆಯಿರುವುದರಿಂದ 'ತ್ರಿಣವ' ಎನ್ನಿಸಿಕೊಂಡಿದೆ.

## ತ್ರಯಸ್ತ್ರಿಗ್ಂಶಸ್ತೋಮ

ಒಂದೇ ತೃಚಸೂಕ್ತದಲ್ಲಿರುವ ಮೊದಲನೆಯ ಋಕ್ ಅನ್ನು ಮೂರು ಬಾರಿ ಗಾನ ಮಾಡಬೇಕು. ಎರಡನೆಯ ಋಕ್ಕನ್ನು ಏಳು ಬಾರಿ ಗಾನ ಮಾಡಬೇಕು. ಕಡೆಯ ಋಕ್ ಅನ್ನು ಒಮ್ಮೆ ಗಾನ ಮಾಡಬೇಕು. [3-7-1] ಅನಂತರ ಹಿಂಕಾರ. ಇದು ಪ್ರಥಮಪರ್ಯಾಯ.

ಮೊದಲನೆಯ ಋಕ್ ಅನ್ನು ಒಮ್ಮೆ ಗಾನಮಾಡಬೇಕು. ಎರಡನೆಯ ಋಕ್ ಅನ್ನು ಮೂರು ಬಾರಿ ಗಾನ ಮಾಡಬೇಕು. ಅಂತ್ಯದ ಋಕ್ ಅನ್ನು ಏಳು ಬಾರಿ ಗಾನ ಮಾಡಬೇಕು. [1-3-7] ಅನಂತರ ಹಿಂಕಾರ. ಇದು ದ್ವಿತೀಯಪರ್ಯಾಯ.

ಮೊದಲನೆಯ ಋಕ್ ಅನ್ನು ಏಳು ಬಾರಿ ಗಾನ ಮಾಡಬೇಕು. ಎರಡನೆಯ ಋಕ್ ಅನ್ನು ಒಮ್ಮೆ ಗಾನ ಮಾಡಬೇಕು. ಅಂತ್ಯದ ಋಕ್ ಅನ್ನು ಮೂರು ಬಾರಿ ಗಾನ ಮಾಡಬೇಕು [7-1-3] ಅನಂತರ ಹಿಂಕಾರ. ಇದು ತೃತೀಯಪರ್ಯಾಯ.

ಹೀಗೆ [11+11+11] 'ತ್ರಯಸ್ತ್ರಿಂಶಸ್ತೋಮ' ಎನಿಸಿಕೊಂಡಿದೆ. ಇದು ಸ್ತೋಮಗಳಲ್ಲಿ ಕೊನೆಯದು.

## ಶಾಕ್ವರ-ರೈವತ ಸಾಮಗಳು

*'ಪ್ರೋಷ್ವಸ್ಮೈ ಪುರೋರಥಮ್' [ತೈ.ಸಂ. 1-7-13] ಎಂಬ ಋಕ್ಕಿನಲ್ಲಿ ಉತ್ಪನ್ನವಾದ ಸಾಮ **'ಶಾಕ್ವರ ಸಾಮ'**.

* 'ರೇವತೀರ್ನಸ್ಸಧಮಾದಃ' [ತೈ.ಸಂ. 1.7.13] ಎಂಬ ಋಕ್ಕಿನಲ್ಲಿ ಹುಟ್ಟಿದ ಸಾಮ **'ರೈವತಸಾಮ'**.

ಸ್ತೋಮಗಳ ವಿಷಯದಲ್ಲಿ ಹೆಚ್ಚಿನ ವಿವರಣೆಯನ್ನು ಸಾಮವೇದದಿಂದ ಪಡೆಯಬಹುದು.

★ ★ ★

## ॥ ಚತುರ್ದಶೋಽನುವಾಕಃ ॥

**ಸೋಮಸ್ಯ ತ್ವಿಷಿರಸಿ ತವೇವ ಮೇ ತ್ವಿಷಿರ್ಭೂಯಾದಮೃತ-ಮಸಿ ಮೃತ್ಯೋರ್ಮಾ ಪಾಹಿ**

---

**ಸೋಮಸ್ಯ । ತ್ವಿಷಿಃ । ಅಸಿ । ತವ । ಇವ । ಮೇ । ತ್ವಿಷಿಃ । ಭೂಯಾತ್ । ಅಮೃತಮ್। ಅಸಿ । ಮೃತ್ಯೋಃ । ಮಾ । ಪಾಹಿ ।**

---

ಹದಿಮೂರನೆಯ ಅನುವಾಕದಲ್ಲಿ ದಿಗ್ವ್ಯಾಸ್ಥಾಪನಾದಿಮಂತ್ರಗಳು ಹೇಳಲ್ಪಟ್ಟವು. ಹದಿನಾಲ್ಕನೆಯ ಈ ಅನುವಾಕದಲ್ಲಿ ಅಭಿಷೇಕವು ಹೇಳಲ್ಪಟ್ಟಿದೆ.

---

| ಮಂತ್ರ | ವಿನಿಯೋಗ |
|---|---|
| **ಸೋಮಸ್ಯ.....ಭೂಯಾತ್ ।** | ಕುರ್ಚಿಯ ಮೇಲೆ ಹುಲಿಯ ಚರ್ಮವನ್ನು ಹಾಸಲು |
| **ಅಮೃತಮ್....ಪಾಹಿ ।** | ಹುಲಿಯ ಚರ್ಮದ ಮೇಲೆ ಚಿನ್ನವನ್ನಿಡಲು ಚರ್ಮದ ಕೆಳಗಡೆ ಬೆಳ್ಳಿಯನ್ನು ಹಾಕಲು [ಭ.ಭಾ.] |

---

[ಎಲೈ! ಹುಲಿಯ ಚರ್ಮವೇ! ನೀನು] **ಸೋಮಸ್ಯ ತ್ವಿಷಿಃ ಅಸಿ** = ಸೋಮದೇವನ/ಲತೆಯ ಪ್ರಕಾಶವೇ ಆಗಿದ್ದೀಯೆ. **ಮೇ** = ನನಗೂ; **ತವ ಇವ** = ನಿನ್ನಂತೆಯೇ; **ತ್ವಿಷಿಃ ಭೂಯಾತ್** = ಪ್ರಕಾಶವು ಆಗಲಿ/ಶಾಂತವಾದ, ವ್ಯಾಪಿಯಾದ ಪ್ರಕಾಶವೇ ನನಗೂ ಆಗಲಿ. ✣ [ಓ ಸುವರ್ಣವೇ! ರಜತವೇ! [ನೀನು] **ಅಮೃತಮ್ ಅಸಿ** = ನಾಶರಹಿತನಾಗಿದ್ದೀಯೆ; **ಮಾ** = ನನ್ನನ್ನು; **ಮೃತ್ಯೋಃ ಪಾಹಿ** = ಮೃತ್ಯುವಿನ ದೆಸೆಯಿಂದ ಕಾಪಾಡು.

---

[ಪ್ರಶಾಸ್ತೃವಿನ ಧಿಷ್ಣಿಯ(ಸ್ಥಾನ)ದ ಮುಂಭಾಗದಲ್ಲಿ ಕಗ್ಗಲೀ ಮರದ ಅಥವಾ ಅತ್ತಿಯ ಮರದ ಕುರ್ಚಿಯನ್ನಿಟ್ಟು ಆದರ ಮೇಲೆ ಹುಲಿಯ ಚರ್ಮವನ್ನು ಹಾಸಬೇಕು.]

ಎಲೈ! ಶಾರ್ದೂಲಚರ್ಮವೇ! ನೀನು ಸೋಮನಂತೆ ಪ್ರಕಾಶಮಾನನಾಗಿದ್ದೀಯೆ. ನಿನ್ನಂತೆಯೇ ನನಗೂ ಪ್ರಕಾಶವುಂಟಾಗಲಿ. [ಈ ಮಂತ್ರಪ್ರಭಾವದಿಂದ ಹುಲಿಯ ಮತ್ತು

# ದಿದ್ಯೋನ್ಮಾ ಪಾಹ್ಯವೇಷ್ಟಾ ದಂದಶೂಕಾ ನಿರಸ್ತಂ ನಮುಚೇಶ್ಶಿರಃ ।

ದಿದ್ಯೋತ್ । ಮಾ । ಪಾಹಿ । ಅವೇಷ್ಟಾ ಇತ್ಯವ-ಇಷ್ಟಾಃ । ದಂದಶೂಕಾಃ । ನಿರಸ್ತಮಿತಿ ನಿಃ-ಅಸ್ತಮ್ । ನಮುಚೇಃ । ಶಿರಃ ॥

| ಮಂತ್ರ | ವಿನಿಯೋಗ |
|---|---|
| ದಿದ್ಯೋನ್ಮಾ ಪಾಹಿ । | ಯಜಮಾನನ ತಲೆಯ ಮೇಲೆ ಪಾತ್ರವನ್ನಿಡಲು |
| ಅವೇಷ್ಟಾ ದಂದಶೂಕಾಃ । | ನಪುಂಸಕನ ಮೇಲೆ ಸೀಸವನ್ನೆಸೆಯಲು |
| ನಿರಸ್ತಂ ನಮುಚೇಶ್ಶಿರಃ । | ತಾಮ್ರವನ್ನು ನಾಪಿತನ ಮೇಲೆ ಎಸೆಯಲು |

✣ **ದಿದ್ಯೋತ್** = ಪ್ರಕಾಶಮಾನವಾದ ಹಿರಣ್ಯವೇ! **ಮಾ ಪಾಹಿ** = ನನ್ನನ್ನು ರಕ್ಷಿಸು. [ಆಯುಧದಿಂದ ನನ್ನನ್ನು ರಕ್ಷಿಸು]; ✣ **ಅವೇಷ್ಟಾಃ ದಂದಶೂಕಾಃ** = [ಈ ಸೀಸವನ್ನು ಎಸೆಯುವುದರಿಂದ] ಸರ್ಪಾದಿಗಳನ್ನು ದೂರ ಮಾಡಿದಂತಾಯಿತು; ✣ **ನಮುಚೇಃ ಶಿರಃ ನಿರಸ್ತಮ್** = ನಮುಚಿರಾಕ್ಷಸನ ತಲೆಯಂತಿರುವುದು [ಈ ತಾಮ್ರವು] ಎಸೆಯಲ್ಪಟ್ಟಿತು.

ಸೋಮನ ಪ್ರಕಾಶವುಂಟಾಗುತ್ತದೆ.]

[ಶಾರ್ದೂಲಚರ್ಮದ ಮೇಲೆ ನೂರು ಮಾನಗಳ ಪರಿಮಾಣದ ಚಿನ್ನವನ್ನಿಡಬೇಕು/ಚರ್ಮದ ಕೆಳಗಡೆ ಬೆಳ್ಳಿಯನ್ನು ಹಾಕಬೇಕು.] ಓ! ಸುವರ್ಣವೇ/ರಜತವೇ! ನೀನು ನಾಶರಹಿತನು. ನನ್ನನ್ನೂ ಮೃತ್ಯುವಿನಿಂದ ರಕ್ಷಿಸು.

[ಯಜಮಾನನ ತಲೆಯ ಮೇಲೆ ಶತಚ್ಛಿದ್ರವುಳ್ಳ, ನೂರು ಸುವರ್ಣವ್ರೀಹಿಗಳುಳ್ಳ ಪಾತ್ರವನ್ನಿಡಬೇಕು.] ಓ! ಪ್ರಕಾಶಮಾನವಾದ ಹಿರಣ್ಯವೇ! ಮೇಲೆ ಕೆಳಗೆ ಎರಡೂ ಕಡೆಗಳಲ್ಲಿ ಇರುವ ನೀನು ನನ್ನನ್ನು ರಕ್ಷಿಸು[ಸುವರ್ಣವೇ! ಆಯುಧದ ದೆಸೆಯಿಂದ ನನ್ನನ್ನು ಕಾಪಾಡು.]

ಸರ್ಪದಂತಿರುವ ಈ ಸೀಸವನ್ನು ಬಲಗಾಲಿನಿಂದ ನಪುಂಸಕನ ಮೇಲೆ ಎಸೆಯುವುದರಿಂದ ಸರ್ಪಾದಿಗಳನ್ನು ದೂರ ಮಾಡಿದಂತಾಯಿತು. ಸರ್ಪಾದಿಬಾಧೆಯನ್ನು ನಾಶಪಡಿಸಿದಂತಾಯಿತು.

**ಸೋಮೋ ರಾಜಾ ವರುಣೋ ದೇವಾ ಧರ್ಮಸುವಶ್ಚ ಯೇ।**
**ತೇ ತೇ ವಾಚಗ್ಂ ಸುವಂತಾಂ ತೇ ತೇ ಪ್ರಾಣಗ್ಂ ಸುವಂತಾಂ**
**ತೇ ತೇ ಚಕ್ಷುಸ್ಸುವಂತಾಂ ತೇ ತೇ ಶ್ರೋತ್ರಗ್ಂ ಸುವಂತಾಗ್ಂ**

---

**ಸೋಮಃ ।** ರಾಜಾ । ವರುಣಃ । ದೇವಾಃ । ಧರ್ಮಸುವ ಇತಿ ಧರ್ಮ-ಸುವಃ । ಚ । ಯೇ ॥ ತೇ । ತೇ । ವಾಚಮ್ । ಸುವಂತಾಮ್ । ತೇ । ತೇ । ಪ್ರಾಣಮಿತಿ ಪ್ರ-ಅನಮ್। ಸುವಂತಾಮ್ । ತೇ । ತೇ । ಚಕ್ಷುಃ । ಸುವಂತಾಮ್ । ತೇ । ತೇ । ಶ್ರೋತ್ರಮ್ । ಸುವಂತಾಮ್ ।

---

| ಮಂತ್ರ | ವಿನಿಯೋಗ |
|---|---|
| **ಸೋಮೋ ರಾಜಾ...ಶ್ರೋತ್ರಗ್ಂ ಸುವಂತಾಮ್ ।** | ಯಜಮಾನನ ಅಭಿಮಂತ್ರಣದಲ್ಲಿ |

---

✣ **ಸೋಮಃ ರಾಜಾ** = ರಾಜನಾದ ಸೋಮನೂ; **ವರುಣಃ ರಾಜಾ** = ರಾಜನಾದ ವರುಣನೂ; **ಯೇ ಚ ದೇವಾಃ ಧರ್ಮಸುವಃ**= ಧರ್ಮವನ್ನು ಅನುಮತಿಸುವ ಯಾವ ದೇವತೆಗಳಿದ್ದಾರೆಯೋ; **ತೇ** = ಅವರು; **ತೇ** = ನಿನ್ನ; **ವಾಚಮ್ ಸುವಂತಾಮ್** = ಮಾತನ್ನು ಪ್ರೇರಿಸಲಿ/ತಿಳಿಯಲಿ; **ತೇ** = ಅವರು; **ತೇ** = ನಿನ್ನ; **ಪ್ರಾಣಮ್ ಸುವಂತಾಮ್** = ಪ್ರಾಣವನ್ನು ಪ್ರೇರಿಸಲಿ/ಅನುಮತಿಸಲಿ; **ತೇ** = ಅವರು; **ತೇ**= ನಿನ್ನ; **ಚಕ್ಷುಃ ಸುವಂತಾಮ್**= [ಒಳ್ಳೆಯದನ್ನು ನೋಡುವಂತೆ] ಕಣ್ಣನ್ನು ಅನುಗ್ರಹಿಸಲಿ/ಪ್ರೇರಿಸಲಿ; **ತೇ** = ಅವರು; **ತೇ ಶ್ರೋತ್ರಮ್ ಸುವಂತಾಮ್** = ನಿನ್ನ ಕಿವಿಯನ್ನು [ಒಳ್ಳೆಯದನ್ನು ಕೇಳುವಂತೆ] ಪ್ರೇರಿಸಲಿ/ಅನುಮತಿಸಲಿ.

---

[ಆಸನವನ್ನೇರುವಾಗ ಯಜಮಾನನು ಎಡಗಾಲಿನಿಂದ ತಾಮ್ರವನ್ನು ನಾಪಿತನ ಮೇಲೆ ಎಸೆಯಬೇಕು.] ಇದರಿಂದ ಇಂದ್ರನನ್ನು ಬೆನ್ನಟ್ಟಿ ಬಂದ ನಮುಚಿರಾಕ್ಷಸನ ತಲೆಯಂತಿರುವ ತಾಮ್ರವನ್ನು ಎಸೆದಂತಾಯಿತು. ಇದರಿಂದ ಪಾಪವನ್ನೂ, ಅಧರ್ಮವನ್ನೂ ದೂರ ಮಾಡಿದಂತಾಯಿತು.

[ಈ ಮಂತ್ರದಿಂದ ಅಭಿಮಂತ್ರಣವನ್ನು ಮಾಡುವಾಗ ಯಜಮಾನನು ಕೈಗಳನ್ನು ಮೇಲಕ್ಕೆತ್ತಿ ಆಸನದಲ್ಲಿ ನಿಂತಿರುತ್ತಾನೆ. ಈ ಅಭಿಮಂತ್ರಣದಿಂದ ಯಜಮಾನನ ಪ್ರಾಣಾದಿಗಳ ಅಭಿಷೇಕವಾದಂತಾಗುತ್ತದೆ.]

**ಸೋಮಸ್ಯ ತ್ವಾ ದ್ಯುಮ್ನೇನಾಭಿಷಿಂಚಾ[...ಷಿಂಚಾಮ್ಯಗ್ನೇಃ (೧) ತೇಜಸಾ]ಮ್ಯಗ್ನೇಸ್ತೇಜಸಾ ಸೂರ್ಯಸ್ಯ ವರ್ಚಸೇಂದ್ರ-ಸ್ಯೇಂದ್ರಿಯೇಣ ಮಿತ್ರಾವರುಣಯೋರ್ವೀರ್ಯೇಣ ಮರುತಾಮೋಜಸಾ ಕ್ಷತ್ರಾಣಾಂ ಕ್ಷತ್ರಪತಿರಸ್ಯತಿ ದಿವಸ್ಪಾಹಿ**

---

**ಸೋಮಸ್ಯ** । ತ್ವಾ । ದ್ಯುಮ್ನೇನ । ಅಭೀತಿ । ಸಿಂಚಾಮಿ (೧) । ಅಗ್ನೇಃ । ತೇಜಸಾ । ಸೂರ್ಯಸ್ಯ। ವರ್ಚಸಾ । ಇಂದ್ರಸ್ಯ । ಇಂದ್ರಿಯೇಣ । ಮಿತ್ರಾವರುಣಯೋರಿತಿ ಮಿತ್ರಾ-ವರುಣಯೋಃ । ವೀರ್ಯೇಣ । ಮರುತಾಮ್ । ಓಜಸಾ । ಕ್ಷತ್ರಾಣಾಮ್ । ಕ್ಷತ್ರಪತಿರಿತಿ ಕ್ಷತ್ರ-ಪತಿಃ । ಅಸಿ । ಅತೀತಿ । ದಿವಃ । ಪಾಹಿ ।

---

| ಮಂತ್ರ | ವಿನಿಯೋಗ |
|---|---|
| **ಸೋಮಸ್ಯ....ಓಜಸಾ ।** | ರಾಜಾಭಿಷೇಕವನ್ನು ಮಾಡಲು |
| **ಕ್ಷತ್ರಾಣಾಂ.....ಅಸಿ ।** | ಅಭಿಷೇಕವಾಗುವಾಗ ರಾಜಾಭಿಮಂತ್ರಣ ಮಾಡಲು |
| **ಅತಿ.....ಪಾಹಿ ।** | ಜಲಲಿಪ್ತವಾದ ವಸ್ತ್ರವನ್ನು ಉತ್ಕರದಲ್ಲಿ ಹಾಕಲು |

---

✢ [ಎಲೈ! ರಾಜನೇ] **ತ್ವಾ** = ನಿನ್ನನ್ನು; **ಸೋಮಸ್ಯ ದ್ಯುಮ್ನೇನ** = ಸೋಮರಾಜನ ದೀಪ್ತಿಯಿಂದ; **ಅಭಿಷಿಂಚಾಮಿ** = ಅಭಿಷೇಕ ಮಾಡುತ್ತೇನೆ; **ಅಗ್ನೇಃ ತೇಜಸಾ** = ಅಗ್ನಿದೇವನ ತೇಜಸ್ಸಿನಿಂದಲೂ; **ಸೂರ್ಯಸ್ಯ ವರ್ಚಸಾ** = ಸೂರ್ಯನ ಪ್ರಕಾಶದಿಂದಲೂ; **ಇಂದ್ರಸ್ಯ ಇಂದ್ರಿಯೇಣ** = ಇಂದ್ರನ ವೀರ್ಯ/ಬಲದಿಂದಲೂ; **ಮಿತ್ರಾವರುಣಯೋಃ ವೀರ್ಯೇಣ** = ಮಿತ್ರಾವರುಣದೇವತೆಗಳ ವೀರ್ಯದಿಂದಲೂ; **ಮರುತಾಮ್ ಓಜಸಾ**= ಮರುದ್ದೇವತೆಗಳ ಓಜಸ್ಸಿನಿಂದಲೂ; **ಅಭಿಷಿಂಚಾಮಿ**= ಅಭಿಷೇಕ ಮಾಡುತ್ತೇನೆ. ✢ [ಎಲೈ ರಾಜನೇ] ✢ [ನೀನು] **ಕ್ಷತ್ರಾಣಾಮ್ ಕ್ಷತ್ರಪತಿಃ ಅಸಿ** = ಎಲ್ಲಾ ಕ್ಷತ್ರಿಯರಿಗೂ ಅಧಿಪತಿಯಾಗಿದ್ದೀಯೆ. ✢ **ಅತಿ ದಿವಃ ಪಾಹಿ** = ಪ್ರಕಾಶಿಸುತ್ತಿರುವ [ಎಲ್ಲ ರಾಜರನ್ನೂ] ಮೀರಿ ಸಾರ್ವಭೌಮನಾಗಿ [ಈ ಭೂಮಿಯೆಲ್ಲವನ್ನೂ] ಪಾಲಿಸು.

---

ಓ! ಯಜಮಾನನೇ1 ಸೋಮರಾಜನೂ, ವರುಣರಾಜನೂ, ಧರ್ಮಕಾರ್ಯಕ್ಕೆ ಪ್ರೇರಿಸುವ ಇತರ ದೇವತೆಗಳೂ, ಅನುಮತಿಯನ್ನು ನೀಡುವ ದೇವತೆಗಳೂ ನಿನ್ನ ಮಾತನ್ನೂ, ಪ್ರಾಣವನ್ನೂ, ಕಣ್ಣನ್ನೂ, ಕಿವಿಯನ್ನೂ ಒಳ್ಳೆಯ ಕಾರ್ಯಗಳಿಗಾಗಿ ಪ್ರೇರಿಸಲಿ. ಒಳ್ಳೆಯದನ್ನು ಮಾಡಲು ಅನುಮತಿಸಲಿ.

## ಸಮಾವವೃತ್ರನ್ನಧರಾಗುದೀಚೀರಹಿಂ ಬುಧ್ನಿಯಮನು ಸಂಚರಂತೀಸ್ತಾಃ ಪರ್ವತಸ್ಯ ವೃಷಭಸ್ಯ ಪೃಷ್ಠೇ

---

ಸಮಾವವೃತ್ರನ್ನಿತಿ ಸಮ್-ಆವವೃತ್ರನ್ನ್ । ಅಧರಾಕ್ । ಉದೀಚೀಃ । ಅಹಿಮ್ । ಬುಧ್ನಿಯಮ್ । ಅನ್ವಿತಿ । ಸಂಚರಂತೀರಿತಿ ಸಮ್-ಚರಂತೀಃ । ತಾಃ । ಪರ್ವತಸ್ಯ । ವೃಷಭಸ್ಯ । ಪೃಷ್ಠೇ ।

---

| ಮಂತ್ರ | ವಿನಿಯೋಗ |
|---|---|
| ಸಮಾವವೃತ್ರನ್ನ್.....ಇಯಾನಾಃ । | ಸುತ್ತಲೂ ಬೀಳುವ ನೀರನ್ನು ಪಾತ್ರಗಳಲ್ಲಿ ಸಂಗ್ರಹಿಸಲು. |

---

✣ [ನೀನು] **ಕ್ಷತ್ರಾಣಾಮ್ ಕ್ಷತ್ರಪತಿಃ ಅಸಿ** = ಎಲ್ಲಾ ಕ್ಷತ್ರಿಯರಿಗೂ ಅಧಿಪತಿಯಾಗಿದ್ದೀಯೆ. ✣ **ಅತಿ ದಿವಃ ಪಾಹಿ** = ಪ್ರಕಾಶಿಸುತ್ತಿರುವ [ಎಲ್ಲ ರಾಜರನ್ನೂ] ಮೀರಿ ಸಾರ್ವಭೌಮನಾಗಿ [ಈ ಭೂಮಿಯೆಲ್ಲವನ್ನೂ] ಪಾಲಿಸು. ✣ [ಯಾವ ನೀರುಗಳು] **ಅಧರಾಕ್** = ಕೆಳಕ್ಕೂ; **ಉದೀಚೀಃ** = ಮೇಲಕ್ಕೂ [ಹಾರುತ್ತಾ] [ಸುರಿಯುತ್ತಾ] **ಸಮಾವವೃತ್ರನ್ನ್** = ಎಲ್ಲವನ್ನೂ ವ್ಯಾಪಿಸಿದೆಯೋ; **ಅಹಿಮ್ ಬುಧ್ನಿಯಮ್** = ತಲೆಯಿಂದ ಪಾದಾಗ್ರದವರೆಗೂ; **ಅನುಸಂಚರಂತೀಃ** = ಅನುಕ್ರಮವಾಗಿ ಸಂಚರಿಸುತ್ತಾ ಇವೆಯೋ; **ತಾಃ** = ಆ ನೀರುಗಳು; **ಪರ್ವತಸ್ಯ ವೃಷಭಸ್ಯ ಪೃಷ್ಠೇ** = ನೀರನ್ನು ಸುರಿಸುವ ಮೇಘದ ಮೇಲುಗಡೆಯಲ್ಲಿ;

---

[ತಾತ್ಪರ್ಯ ಸುಗಮವಿದೆ. ಇಲ್ಲಿ 'ದ್ಯುಮ್ನ' 'ತೇಜಸ್ಸು' ಮುಂತಾದ ಶಬ್ದಗಳು ಆಯಾ ದೇವತೆಗಳ ವಿಶೇಷಶಕ್ತಿಗಳು. ಈ ಮಂತ್ರಗಳಿಂದ ಅಭಿಷೇಕ ಮಾಡುವುದರಿಂದ ಆಯಾ ದೇವತೆಗಳ ಅನುಗ್ರಹದಿಂದ ಯಜಮಾನನು ಅವುಗಳನ್ನು ಹೊಂದುತ್ತಾನೆ.]

ಮಾಹೇಂದ್ರಸ್ತೋತ್ರವಾಗುತ್ತಿದ್ದಾಗ ಪೂರ್ವದಲ್ಲಿ ಅಧ್ವರ್ಯುವು ಮುತ್ತುಗದ ಪಾತ್ರೆಯಿಂದಲೂ, ದಕ್ಷಿಣದಲ್ಲಿ ಬ್ರಹ್ಮನು ಅತ್ತಿಯ ಪಾತ್ರೆಯಿಂದಲೂ, ಪಶ್ಚಿಮದಲ್ಲಿ ವೈಶ್ಯನು ಅಶ್ವತ್ಥಪಾತ್ರೆಯಿಂದಲೂ ಉತ್ತರದಲ್ಲಿ ಮಿತ್ರನು ಆಲದ ಪಾತ್ರೆಯಿಂದಲೂ ಅಭಿಷೇಕ ಮಾಡಬೇಕು.

ಎಲೈ! ರಾಜನೇ! ಈ ರಾಜಸೂಯಾಭಿಷೇಕದಿಂದ ನೀನು ಕೆಲವರು ಕ್ಷತ್ರಿಯರಿಗೆ ಮಾತ್ರವಲ್ಲ, ಎಲ್ಲ ಕ್ಷತ್ರಿಯರಿಗೂ ಅಧಿಪತಿಯಾಗಿರುತ್ತೀಯೆ. [ಈ ಅಭಿಪ್ರಾಯದಿಂದಲೂ ಕ್ಷತ್ರಶಬ್ದವು 'ಕ್ಷತ್ರಾಣಾಂ ಕ್ಷತ್ರಪತಿಃ' ಎಂಬಲ್ಲಿ ದ್ವಿರುಕ್ತವಾಗಿದೆ. ಹೀಗೆಯೇ **'ಗಣಾನಾಂ ತ್ವಾ ಗಣಪತಿಮ್, ಗವಾಮಸಿ ಗೋಪತಿಃ, ಗೋಪತಿಗ್ಂ ಶೂರಗೋನಾಮ್'** ಮುಂತಾದ ಪ್ರಯೋಗಗಳಿವೆ.]

**ನಾವಶ್ಚರಂತಿ ಸ್ವಸಿಚ ಇಯಾನಾಃ । ರುದ್ರ ಯತ್ತೇ ಕ್ರಯೀ ಪರಂ ನಾಮ ತಸ್ಮೈ ಹುತಮಸಿ ಯಮೇಷ್ಟಮಸಿ ।**

---

ನಾವಃ । ಚರಂತಿ । ಸ್ವಸಿಚ ಇತಿ ಸ್ವ-ಸಿಚಃ । ಇಯಾನಾಃ ॥ ರುದ್ರ । ಯತ್ । ತೇ । ಕ್ರಯಿ । ಪರಮ್ । ನಾಮ । ತಸ್ಮೈ । ಹುತಮ್ । ಅಸಿ । ಯಮೇಷ್ಟಮಿತಿ ಯಮ-ಇಷ್ಟಮ್। ಅಸಿ ॥

---

| ಮಂತ್ರ | ವಿನಿಯೋಗ |
|---|---|
| ರುದ್ರ.....ಅಸಿ । | ಅಭಿಷೇಕಶೇಷಜಲವನ್ನು ರುದ್ರನಿಗಾಗಿ ಹೋಮ ಮಾಡಲು |

---

**ನಾವಃ** = ನೌಕೆಗಳಂತೆ/ನಾವೆಗಳು ಸಂಚರಿಸಲು ಯೋಗ್ಯವಾದ, ತುಂಬ ನೀರುಳ್ಳ ನದಿಗಳಂತೆ; **ಚರಂತಿ** = ಸಂಚರಿಸುತ್ತವೆ; [ಅವುಗಳು] **ಸ್ವಸಿಚಃ** = ಯಜಮಾನನ ಎಲ್ಲ ಭೂಮಿಯನ್ನೂ ಸೇಚಿಸುತ್ತಾ; **ಇಯಾನಾಃ** = ವ್ಯಾಪಿಸುತ್ತಾ [ಬರಲಿ] ∵ **ರುದ್ರ**= ಎಲೈ ರುದ್ರ ದೇವನೇ! **ತೇ** = ನಿನ್ನ; **ಯತ್** = ಯಾವ; **ಪರಮ್** = ಶ್ರೇಷ್ಠವಾದ; **ಕ್ರಯಿ** = [ಭಕ್ತರಿಗೆ ಇಷ್ಟವನ್ನು ಕೊಡುವುದರಿಂದ] ವಶಪಡಿಸಿಕೊಳ್ಳುವ; **ನಾಮ** = ಶರ್ವ, ಶಿವ ಮೊದಲಾದ ಶ್ರುತಿಪ್ರಸಿದ್ಧವಾದ ಹೆಸರುಂಟೋ; **ತಸ್ಮೈ ಹುತಮ್ ಅಸಿ** = ಆ ಹೆಸರಿಗೆ [ಈ ಅಭಿಷೇಕಶೇಷಜಲವು] ಹುತವಾಗಲಿ. [ಅದು] **ಯಮೇಷ್ಟಮ್ ಅಸಿ*** = ಯಮನಿಗೆ ಪ್ರಿಯವಾದುದಾಗಲಿ.

---

ಎಲೈ! ರಾಜನೇ! ಪ್ರಕಾಶಿಸುತ್ತಿರುವ ಎಲ್ಲ ರಾಜರನ್ನೂ ಮೀರಿ ಸಾರ್ವಭೌಮನಾಗಿ ಈ ಭೂಮಿಯನ್ನು ಪಾಲಿಸು.

[ಅಭಿಷೇಕಕಾಲದಲ್ಲಿ ಸುತ್ತಲೂ ಬೀಳುತ್ತಿರುವ ನೀರನ್ನು ಪಾತ್ರೆಗಳಲ್ಲಿ ಸಂಗ್ರಹಿಸಬೇಕು. ಹಿಂದೆ ಹೇಳಿದ ವಸ್ತ್ರತ್ಯಾಗವನ್ನು ಅನಂತರ ಮಾಡಬೇಕು.]

ಅಭಿಷೇಕವಾಗುವಾಗ ನೀರುಗಳು ಕೆಳಗೂ ಮೇಲೆ ಹಾರುತ್ತವೆ. ತಲೆಯಿಂದ ಕಾಲಿನವರೆಗೂ ಸುರಿಯುತ್ತಾ ಎಲ್ಲ ಪ್ರದೇಶವನ್ನೂ ಆವರಿಸುತ್ತವೆ. ಅವುಗಳು ಮಳೆಯನ್ನು ಸುರಿಸುವ ಮೇಘಗಳ ಮೇಲೆ-ನದಿಗಳಲ್ಲಿ ಚಲಿಸುವ ನಾವೆಗಳಂತೆ/ನೌಕೆಗಳು ಸಂಚರಿಸಲು ಯೋಗ್ಯವಾದ ತುಂಬ ನೀರಿರುವ ನದಿಗಳಂತೆ ಇವೆ. ಆ ನೀರು ಸಸ್ಯವೃದ್ಧಿಗಾಗಿ ಯಜಮಾನನ ಭೂಮಿಯ ಮೇಲೆ ಬೀಳಲಿ. ಭೂಮಿಯೆಲ್ಲವನ್ನೂ ವ್ಯಾಪಿಸಿ, ಸುಭಿಕ್ಷವನ್ನುಂಟುಮಾಡಲಿ. [ಇಲ್ಲಿ ಪರ್ವತ, ವೃಷಭ, ಅಹಿ, ಬುಧ್ನಿಯ-ಈ ಪದಗಳಿಗೆ ಪ್ರಸಿದ್ಧವಾದ ಅರ್ಥವನ್ನು ಬಿಟ್ಟು, ಯೌಗಿಕಾರ್ಥವನ್ನು ಕೊಟ್ಟಿದ್ದಾರೆ.]

---

* ಅಸ್ತು ಎಂಬ ಲೋಟ್‌ಲಕಾರದ ಅರ್ಥದಲ್ಲಿ ಲಟ್, 'ಅಸಿ'.

ಪ್ರಜಾಪತೇ ನ ತ್ವದೇತಾನ್ಯನ್ಯೋ ವಿಶ್ವಾ ಜಾತಾನಿ ಪರಿ ತಾ ಬಭೂವ । ಯತ್ಕಾಮಾಸ್ತೇ ಜುಹುಮಸ್ತನ್ನೋ ಅಸ್ತು ವಯಗ್ಂ ಸ್ಯಾಮ ಪತಯೋ ರಯೀಣಾಮ್ ॥೧೪-28॥

[ಅಗ್ನೇಸ್ಸೈಕಾದಶ ಚ]

---

ಪ್ರಜಾಪತ ಇತಿ ಪ್ರಜಾ-ಪತೇ । ನ । ತ್ವತ್ । ಏತಾನಿ । ಅನ್ಯಃ । ವಿಶ್ವಾ । ಜಾತಾನಿ । ಪರೀತಿ । ತಾ । ಬಭೂವ ॥ ಯತ್ಕಾಮಾ ಇತಿ ಯತ್-ಕಾಮಾಃ । ತೇ । ಜುಹುಮಃ । ತತ್ । ನಃ । ಅಸ್ತು । ವಯಮ್ । ಸ್ಯಾಮ । ಪತಯಃ । ರಯೀಣಾಮ್ ॥ ೧೪॥

---

| ಮಂತ್ರ | ವಿನಿಯೋಗ |
|---|---|
| ಪ್ರಜಾಪತೇ....ರಯೀಣಾಮ್ ॥ | ಪ್ರಿಯಪುತ್ರನ ಮನೆಯಲ್ಲಿ ಹೋಮ ಮಾಡಲು |

---

✣ **ಪ್ರಜಾಪತೇ** = ಎಲೈ! ಪ್ರಜಾಪತಿದೇವನೇ! **ತ್ವತ್ ಅನ್ಯಃ** = ನಿನ್ನಿಂದ ಹೊರತಾಗಿ ಬೇರೆ ಯಾವನೂ; **ವಿಶ್ವಾ ತಾ ಜಾತಾನಿ** = ಹುಟ್ಟಿರುವ ಆ ಎಲ್ಲಾ ಜಗತ್ತನ್ನೂ; **ನ ಪರಿಬಭೂವ** = [ಅಧೀನದಲ್ಲಿಟ್ಟುಕೊಳ್ಳಲು] [ಸೃಷ್ಟಿಸಲೂ] ಸಮರ್ಥನಾಗಲಿಲ್ಲ. **ವಯಮ್**= ನಾವು; **ಯತ್ಕಾಮಾಃ** = ಯಾವುದನ್ನು ಇಚ್ಛಿಸಿದವರಾಗಿ; **ತೇ ಜುಹುಮಃ** = ನಿನಗೆ ಹೋಮ ಮಾಡುತ್ತೇವೆಯೋ; **ತತ್ ನಃ ಅಸ್ತು**= ಅದು ನಮಗೆ ಲಭಿಸಲಿ. **ವಯಮ್** = ನಾವು; **ರಯೀಣಾಮ್ ಪತಯಃ** = ಧನಗಳಿಗೆ ಒಡೆಯರಾಗಿ; **ಸ್ಯಾಮ** = ಆಗೋಣ.

---

ಪರಮೇಶ್ವರನಿಗೆ ಶಿವ, ಶರ್ವ ಮೊದಲಾದ ಶ್ರುತಿಪ್ರಸಿದ್ಧವಾದ ನಾಮಗಳಿವೆ. ಭಕ್ತಿಯಿಂದ ಅವುಗಳನ್ನು ಕೀರ್ತಿಸಿದರೆ ರುದ್ರನು ಪ್ರಸನ್ನನಾಗಿ ಇಷ್ಟಾರ್ಥವನ್ನು ಕೊಡುವನು. ಜಗತ್ತನ್ನೇ ವಶದಲ್ಲಿ ಇಟ್ಟುಕೊಳ್ಳುವ ಇಂತಹ ಆ ನಾಮಕ್ಕೆ ಈ ಅಭಿಷೇಕ ಶೇಷಜಲವು ಹುತವಾಗಲಿ. ಇದು ಯಮನಿಗೂ ಇಷ್ಟವಾದುದರಿಂದ ಪ್ರಸನ್ನನಾದ ಯಮನು ಅಪಮೃತ್ಯುವನ್ನು ಪರಿಹರಿಸಲಿ.

ಎಲೈ! ಪ್ರಜಾಪತಿದೇವನೇ! ನಿನ್ನ ಹೊರತಾಗಿ ಬೇರೆ ಯಾವನೂ ಹುಟ್ಟಿರುವ ಈ ಎಲ್ಲ ಜಗತ್ತನ್ನೂ ವಶಪಡಿಸಿಕೊಳ್ಳಲು, ಅಧೀನದಲ್ಲಿಟ್ಟುಕೊಳ್ಳಲು ಸಮರ್ಥನಲ್ಲ. ನೀನೇ ಸೃಷ್ಟಿ-ಸಂಹಾರಗಳಿಗೆ ಸಮರ್ಥನು. ನಾವು ಯಾವ ಕಾಮನೆಯಿಂದ ಹೋಮ ಮಾಡುತ್ತೇವೆಯೋ, ಅದು ನಿನ್ನ ಅನುಗ್ರಹದಿಂದ ಸಿದ್ಧಿಸಲಿ. ನಿನ್ನ ಅನುಗ್ರಹದಿಂದ ನಾವು ಧನಾಧಿಪತಿಗಳಾಗೋಣವೆಂದು ನಿನ್ನನ್ನು ಪ್ರಾರ್ಥಿಸುತ್ತೇವೆ.

# ವಿನಿಯೋಗ ಸಂಗ್ರಹ

[1]ಸೋಮಾಸಂದ್ಯಾಂ ವ್ಯಾಘ್ರಚರ್ಮಾಽಽಸ್ತೀರ್ಯಾಮ್ಯ[2]ಸ್ವರ್ಣಕಂ ಕ್ಷಿಪೇತ್ ।
[3]ದಿದ್ಯೋದ್ರಾಜಾ ಸ್ವರ್ಣಪಾತ್ರಂ ದಧ್ಯಾನ್ಮೂರ್ಧ್ನಿ ಶತಕ್ಷರಮ್ ॥

[4]ಅವೇ ರೋಹನ್ನಿಹಾಽಽಸಂದೀಂ ಕ್ಲೀಬಂ ಸೀಸೇನ ವಿಧ್ಯತಿ ।
[5]ನಿರಸ್ತಂ ಕೇಶವಾಪಾಯ ನಿರಸ್ಯೇಲ್ಲೋಹಿತಾಯಸಮ್ ॥

[6]ಸೋಮೋಽಧ್ವರ್ಯುರ್ಮಂತ್ರಯೇತ [7]ಸೋಮಸ್ಯೇತ್ಯಭಿಷಿಂಚತಿ ।
[8]ಕ್ಷತ್ರಾಭಿಷಿಕ್ತಂ ಸಂಮಂತ್ರ್ಯ ತ್ಯಜೇದ್ವಸ್ತ್ರಮತೀ[9]ತ್ಯತಃ ॥

[10]ಸಮಾ ಲೇಪೋನ್ಮಾರ್ಜನಂ ಸ್ಯಾದ್ರುದ್ರ[11]ಶೇಷಂ ಜುಹೋತಿ ಹಿ ।
[12]ಪ್ರಜಾಪತೇ ಕಾಮ್ಯಹೋಮಃ ಮಂತ್ರಾ ದ್ವಾದಶ ವರ್ಣಿತಾಃ ॥

**ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ-12**

★★★

# ॥ ಪಂಚದಶೋಽನುವಾಕಃ ॥

ಇಂದ್ರಸ್ಯ ವಜ್ರೋಽಸಿ ವಾರ್ತ್ರಘ್ನಸ್ತ್ವಯಾಽಯಂ ವೃತ್ರಂ
ವಧ್ಯಾನ್ಮಿತ್ರಾವರುಣಯೋಸ್ತ್ವಾ ಪ್ರಶಾಸ್ತ್ರೋಃ

---

ಇಂದ್ರಸ್ಯ । ವಜ್ರಃ । ಅಸಿ । ವಾರ್ತ್ರಘ್ನ ಇತಿ ವಾರ್ತ್ರ-ಘ್ನಃ । ತ್ವಯಾ । ಅಯಮ್। ವೃತ್ರಮ್ । ವಧ್ಯಾತ್ । ಮಿತ್ರಾವರುಣಯೋರಿತಿ ಮಿತ್ರಾ-ವರುಣಯೋಃ । ತ್ವಾ । ಪ್ರಶಾಸ್ತ್ರೋರಿತಿ ಪ್ರ-ಶಾಸ್ತ್ರೋಃ ।

---

ಹದಿನಾಲ್ಕನೆಯ ಅನುವಾಕದಲ್ಲಿ ಅಭಿಷೇಕವು ಹೇಳಲ್ಪಟ್ಟಿತು. ಈ ಹದಿನೈದನೆಯ ಅನುವಾಕದಲ್ಲಿ ರಥವಿಜಯವು ಹೇಳಲ್ಪಟ್ಟಿದೆ.

| ಮಂತ್ರ | ವಿನಿಯೋಗ |
|---|---|
| ಇಂದ್ರಸ್ಯ......ವಧ್ಯಾತ್ । | ರಥವನ್ನು ತರಲು |
| ಮಿತ್ರಾವರುಣಯೋಃ ... ಯೋಗೇನ । | ರಥದ ಬಲಗಡೆಯ ಕುದುರೆಯನ್ನು ರಥಕ್ಕೆ ಕಟ್ಟಲು. |

---

[ಎಲೈ! ರಥವೇ! ನೀನು] ವಾರ್ತ್ರಘ್ನಃ = ಶತ್ರುಸಂಹಾರಕವಾದ; ಇಂದ್ರಸ್ಯ ವಜ್ರಃ ಅಸಿ = ಇಂದ್ರನ ವಜ್ರಾಯುಧದಂತೆ ವಿಜಯಸಾಧನವಾಗಿದ್ದೀಯೆ. ಅಯಮ್ = ಈ ರಾಜನು; ತ್ವಯಾ = ನಿನ್ನಿಂದ; ವೃತ್ರಮ್ ವಧ್ಯಾತ್ = ವೃತ್ರಾಸುರನಂತೆ[ಪ್ರಬಲನಾದ] ಶತ್ರುವನ್ನು ಕೊಲ್ಲಲಿ/ಜಯಿಸಲಿ; + [ಎಲೈ ಕುದುರೆಯೇ!] ತ್ವಾ = ನಿನ್ನನ್ನು; ಪ್ರಶಾಸ್ತ್ರೋಃ = ಆಜ್ಞೆ ಮಾಡುವವರಾದ; ಮಿತ್ರಾವರುಣಯೋಃ = ಮಿತ್ರಾವರುಣದೇವತೆಗಳ;

---

ಎಲೈ ರಥವೇ! ನೀನು ಶತ್ರುವನ್ನು ಸಂಹರಿಸುವ ಇಂದ್ರನ ವಜ್ರಾಯುಧದಂತೆ ವಿಜಯಸಾಧನವಾಗಿದ್ದೀಯೆ. ನಿನ್ನಿಂದ ಈ ರಾಜನು ವೃತ್ರಾಸುರನಂತೆ ಪ್ರಬಲನಾದ ಶತ್ರುವನ್ನು ಕೊಲ್ಲಲಿ/ಜಯಿಸಲಿ.

ಪ್ರಶಿಷಾ ಯುನಜ್ಮಿ ಯಜ್ಞಸ್ಯ ಯೋಗೇನ ವಿಷ್ಣೋಃ ಕ್ರಮೋಽಸಿ ವಿಷ್ಣೋಃ ಕ್ರಾಂತಮಸಿ ವಿಷ್ಣೋರ್ವಿಕ್ರಾಂತಮಸಿ ಮರುತಾಂ ಪ್ರಸವೇ ಜೇಷ-

---

ಪ್ರಶಿಷೇತಿ ಪ್ರ-ಶಿಷಾ । ಯುನಜ್ಮಿ । ಯಜ್ಞಸ್ಯ । ಯೋಗೇನ । ವಿಷ್ಣೋಃ । ಕ್ರಮಃ । ಅಸಿ । ವಿಷ್ಣೋಃ । ಕ್ರಾಂತಮ್ । ಅಸಿ । ವಿಷ್ಣೋಃ । ವಿಕ್ರಾಂತಮಿತಿ ವಿ-ಕ್ರಾಂತಮ್ । ಅಸಿ । ಮರುತಾಮ್ । ಪ್ರಸವ ಇತಿ ಪ್ರ-ಸವೇ । ಜೇಷಮ್ ।

---

| ಮಂತ್ರ | ವಿನಿಯೋಗ |
|---|---|
| ವಿಷ್ಣೋಃ ...ವಿಕ್ರಾಂತಮಸಿ । | (ಮೂರು ಮಂತ್ರಗಳು) ಯಜಮಾನನು ರಥದ ಕಡೆಗೆ ಹೆಜ್ಜೆಯಿಡಲು |
| ಮರುತಾಂ .... ಜೇಷಮ್ । | ರಥದಲ್ಲಿ ಏರಿ ಮುಂದೆ ಹೋಗಲು |

---

**ಪ್ರಶಿಷಾ** = ಅಪ್ಪಣೆಯಿಂದ; **ಯಜ್ಞಸ್ಯ ಯೋಗೇನ** = ಯಜ್ಞಸಂಬಂಧನಿಮಿತ್ತವಾಗಿ; **ಯುನಜ್ಮಿ** = [ರಥಕ್ಕೆ] ಕಟ್ಟುತ್ತೇನೆ. ✣ [ಎಲೈ! ಮೊದಲನೆಯ ಹೆಜ್ಜೆಯೇ! ನೀನು] **ವಿಷ್ಣೋಃ ಕ್ರಮಃ ಅಸಿ** = [ಭೂಮಿಯನ್ನು ಆಕ್ರಮಿಸಿದ]; ವಿಷ್ಣುವಿನ ಹೆಜ್ಜೆಯಾಗಿದ್ದೀಯೆ. ✣ **ವಿಷ್ಣೋಃ ಕ್ರಾಂತಮ್ ಅಸಿ** = [ಎಲೈ! ದ್ವಿತೀಯಪದನ್ಯಾಸವೇ! ನೀನು] [ಅಂತರಿಕ್ಷವನ್ನು ಅಳೆದ] ವಿಷ್ಣುವಿನ ಹೆಜ್ಜೆಯಾಗಿರುವೆ. ✣ [ಎಲೈ! ಮೂರನೆಯ ಪಾದನ್ಯಾಸವೇ! ನೀನು] **ವಿಷ್ಣೋಃ ವಿಕ್ರಾಂತಮ್ ಅಸಿ** = [ದ್ಯುಲೋಕವನ್ನು ಆಕ್ರಮಿಸಿದ] ವಿಷ್ಣುವಿನ ಹೆಜ್ಜೆಯಾಗಿದ್ದೀಯೆ. ✣ **ಮರುತಾಂ ಪ್ರಸವೇ** = ಮರುದ್ದೇವತೆಗಳ ಅನುಜ್ಞೆಯಾಗಲಾಗಿ; **ಜೇಷಮ್** = [ನಾನು] ಗೆಲ್ಲುವೆನು.

---

ಎಲೈ! ದಕ್ಷಿಣಾಶ್ವವೇ! ಮಿತ್ರಾವರುಣರು ಆಜ್ಞಾಪಿಸತಕ್ಕವರು. ಅವರ ಅಪ್ಪಣೆಯಿಂದ ಯಜ್ಞಕ್ಕೆ ಸಂಬಂಧಿಸಿದ ರಥವಿಜಯಕ್ಕಾಗಿ ನಿನ್ನನ್ನು ರಥಕ್ಕೆ ಹೂಡುತ್ತೇನೆ. [ಇನ್ನೆರಡು ಕುದುರೆಗಳನ್ನು ಹಾಗೆಯೇ ಕಟ್ಟಬೇಕು]

ಎಲೈ! ಪ್ರಥಮಪದನ್ಯಾಸವೇ! ನೀನು ಭೂಮಿಯನ್ನು ಆಕ್ರಮಿಸಿದ ವಿಷ್ಣುವಿನ ಹೆಜ್ಜೆಯಾಗಿದ್ದೀಯೆ.

ಎಲೈ! ದ್ವಿತೀಯಪದನ್ಯಾಸವೇ! ನೀನು ಅಂತರಿಕ್ಷವನ್ನಳೆದ ವಿಷ್ಣುವಿನ ಹೆಜ್ಜೆಯಾಗಿರುವೆ.

# ಮಾಪ್ತಂ ಮನಸ್ಸಮಹಮಿಂದ್ರಿಯೇಣ ವೀರ್ಯೇಣ ಪಶೂ-ನಾಂ ಮನ್ಯುರಸಿ ತವೇವ ಮೇ ಮನ್ಯುರ್ಭೂಯಾ

---

ಆಪ್ತಮ್ । ಮನಃ । ಸಮಿತಿ । ಅಹಮ್ । ಇಂದ್ರಿಯೇಣ । ವೀರ್ಯೇಣ । ಪಶೂನಾಮ್। ಮನ್ಯುಃ । ಅಸಿ । ತವ । ಇವ । ಮೇ । ಮನ್ಯುಃ । ಭೂಯಾತ್ ।

---

| ಮಂತ್ರ | ವಿನಿಯೋಗ |
|---|---|
| ಆಪ್ತಂ ಮನಃ । | ಎದುರಿನಲ್ಲಿ ಅಥವಾ ಉತ್ತರದಲ್ಲಿರುವ ಸಧನುಷ್ಕನಾದ ರಾಜನ ಮೇಲೆ ಬಾಣವನ್ನು ಬಿಡಲು |
| ಸಮಹಂ...ವೀರ್ಯೇಣ । | ರಾಜನನ್ನು ಗೆದ್ದು ಪ್ರದಕ್ಷಿಣವಾಗಿ ತಿರುಗಲು |
| ಪಶೂನಾಂ... ಭೂಯಾತ್ । | ಹಂದಿಯ ಚರ್ಮದ ಪಾದುಕೆಗಳನ್ನು ಮೆಟ್ಟಲು |

---

✢ ಆಪ್ತಂ ಮನಃ = ಮನಸ್ಸಿನಿಂದ ಅಪೇಕ್ಷಿಸಿದ [ಶತ್ರುಜಯವನ್ನು] ಹೊಂದಿದೆನು. ✢ ಅಹಮ್ = ನಾನು; ಇಂದ್ರಿಯೇಣ = ಇಂದ್ರಿಯಗಳ ಸಾಮರ್ಥ್ಯದಿಂದಲೂ; ವೀರ್ಯೇಣ = ಬಲದಿಂದಲೂ; ಸಮ್ ಗಚ್ಛೇಯಮ್ = ಕೂಡಿಕೊಂಡವನಾಗುವೆನು. ✢ [ಎಲೈ! ಪಾದುಕೆಯೇ! ನೀನು] ಪಶೂನಾಂ ಮನ್ಯುಃ ಅಸಿ = ಪ್ರಾಣಿಗಳಲ್ಲಿ ಆವೇಶಸ್ವಭಾವವುಳ್ಳ ಹಂದಿಯ ಚರ್ಮದಿಂದ ನಿರ್ಮಿತವಾಗಿರುವೆ; ಮೇ = ನನಗೆ; ತವ ಇವ = ನಿನ್ನಂತೆಯೇ; ಮನ್ಯುಃ ಭೂಯಾತ್ = [ಶತ್ರುಗಳಲ್ಲಿ] ಕೋಪವುಂಟಾಗಲಿ.

---

ಎಲೈ! ಮೂರನೆಯ ಹೆಜ್ಜೆಯೇ! ನೀನು ದ್ಯುಲೋಕವನ್ನಳೆದ ವಿಷ್ಣುವಿನ ಹೆಜ್ಜೆಯಾಗಿರುತ್ತೀಯೆ.

'ಮರುತಾಂ....' ಎಂಬ ಈ ಮಂತ್ರವನ್ನು ಹೇಳುವುದರಿಂದ ಮರುದ್ದೇವತೆಗಳ ಅನುಮತಿಯುಂಟಾಗಿ ಯಜಮಾನನು ಗೆಲ್ಲುತ್ತಾನೆ.

ನಾನು ಮನಸ್ಸಿನಿಂದ ಬಯಸಿದ ಶತ್ರುಜಯವನ್ನು ಪಡೆದೆನು.

ರಾಜನನ್ನು ಗೆಲ್ಲುವುದರಿಂದ ಇಂದ್ರಿಯಬಲ ಮತ್ತು ವೀರ್ಯದ ಹಾನಿಯಾಗುತ್ತದೆ. ಈ ಮಂತ್ರವನ್ನು [ಸಮಹಂ.... ವೀರ್ಯೇಣ] ಹೇಳುವುದರಿಂದ ರಾಜನು ಇಂದ್ರಿಯ ವೀರ್ಯಸಾಮರ್ಥ್ಯವನ್ನು ಪುನಃ ಪಡೆಯುತ್ತಾನೆ.

# ನ್ನಮೋ ಮಾತ್ರೇ ಪೃಥಿವ್ಯೈ ಮಾಽಹಂ ಮಾತರಂ ಪೃಥಿವೀಗ್ಂ ಹಿಗ್ಂಸಿಷಂ ಮಾ[೧] ಮಾಂ ಮಾತಾ ಪೃಥಿವೀ ಹಿಗ್ಂಸೀದಿಯದಸ್ಯಾಯುರಸ್ಯಾಯುರ್ಮೇ ಧೇಹ್ಯೂ-

---

ನಮಃ । ಮಾತ್ರೇ । ಪೃಥಿವ್ಯೈ । ಮಾ । ಅಹಮ್ । ಮಾತರಮ್ । ಪೃಥಿವೀಮ್ । ಹಿಗ್ಂಸಿಷಮ್। ಮಾ (೧) । ಮಾಮ್। ಮಾತಾ । ಪೃಥಿವೀ । ಹಿಗ್ಂಸೀತ್ । ಇಯತ್। ಅಸಿ । ಆಯುಃ । ಅಸಿ । ಆಯುಃ । ಮೇ । ಧೇಹಿ ।

---

| ಮಂತ್ರ | ವಿನಿಯೋಗ |
|---|---|
| ನಮೋ ಮಾತ್ರೇ... ಹಿಗ್ಂಸೀತ್ । | ರಥದಿಂದ ಇಳಿಯುವಾಗ ಭೂಮಿಯನ್ನು ಪ್ರಾರ್ಥಿಸಲು |
| ಇಯತ್....ಮಯಿ ಧೇಹಿ । | ಬೆಳ್ಳಿಯ ತಾಮ್ರದ ಮತ್ತು ಚಿನ್ನದ ಮಣಿಗಳನ್ನು ಧರಿಸಲು |

---

✣ **ಮಾತ್ರೇ** = ತಾಯಿಯಾಗಿರುವ; **ಪೃಥಿವ್ಯೈ** = ಭೂದೇವಿಗೆ; **ನಮಃ** = ನಮಸ್ಕಾರ ಮಾಡುತ್ತೇನೆ. **ಅಹಮ್** = ನಾನು; **ಮಾತರಂ ಪೃಥಿವೀಮ್** = ತಾಯಿಯಾದ ಪೃಥಿವೀ ದೇವಿಯನ್ನು; **ಮಾ ಹಿಗ್ಂಸಿಷಮ್** = ಹಿಂಸೆ ಮಾಡುವುದಿಲ್ಲ; **ಮಾತಾ ಪೃಥಿವೀ** = ತಾಯಿಯಾದ ಭೂಮಿಯು; **ಮಾಮ್** = ನನ್ನನ್ನು; **ಮಾ ಹಿಗ್ಂಸೀತ್** = ಹಿಂಸಿಸದಿರಲಿ.
✣ [ಎಲೈ! ರಾಜತಮಣಿಯೇ! ನೀನು] **ಇಯತ್ ಅಸಿ** = ಇಷ್ಟು ಪರಿಮಾಣವುಳ್ಳದ್ದಾಗಿದ್ದೀಯೆ; **ಆಯುಃ ಅಸಿ** = ಆಯುಃಸ್ವರೂಪವಾಗಿದ್ದೀಯೆ; **ಆಯುಃ ಮೇ ಧೇಹಿ** = ನನಗೆ ಆಯುಸ್ಸನ್ನು ನೀಡು.

---

ಪ್ರಾಣಿಗಳಲ್ಲಿ ವರಾಹವು ಅತಿಕೋಪಸ್ವಭಾವವುಳ್ಳ ಪ್ರಾಣಿ. ಅದರ ಚರ್ಮದಿಂದ ನಿರ್ಮಿತವಾದ ಪಾದುಕೆಯೇ! ನಿನ್ನನ್ನು ಧರಿಸುವುದರಿಂದ ನನಗೂ ಶತ್ರುಗಳಲ್ಲಿ ಕೋಪವುಂಟಾಗಲಿ. [ಈ ಮಂತ್ರಗಳನ್ನು ಹೇಳಿ ಪಾದುಕೆಗಳನ್ನು ಧರಿಸುವುದರಿಂದ ಭೂಮಿಯನ್ನು ತುಳಿದಂತಾಗುವುದಿಲ್ಲ. ಇದರಿಂದ ಯಜಮಾನನ ಇಂದ್ರಿಯ-ವೀರ್ಯಗಳ ಹಾನಿಯಾಗುವುದಿಲ್ಲ.]

-ರ್ಗಸ್ಯೂರ್ಜಂ ಮೇ ಧೇಹಿ ಯುಜ್ಙಸಿ ವರ್ಚೋಽಸಿ ವರ್ಚೋ
ಮಯಿ ಧೇಹ್ಯಗ್ನಯೇ ಗೃಹಪತಯೇ ಸ್ವಾಹಾ ಸೋಮಾಯ
ವನಸ್ಪತಯೇ ಸ್ವಾಹೇಂದ್ರಸ್ಯ ಬಲಾಯ ಸ್ವಾಹಾ

---

ಊರ್ಕ್ । ಅಸಿ । ಊರ್ಜಮ್ । ಮೇ । ಧೇಹಿ । ಯುಜ್ । ಅಸಿ । ವರ್ಚಃ । ಅಸಿ । ವರ್ಚಃ । ಮಯಿ । ಧೇಹಿ । ಅಗ್ನಯೇ । ಗೃಹಪತಯ ಇತಿ ಗೃಹ-ಪತಯೇ। ಸ್ವಾಹಾ । ಸೋಮಾಯ । ವನಸ್ಪತಯೇ । ಸ್ವಾಹಾ । ಇಂದ್ರಸ್ಯ । ಬಲಾಯ । ಸ್ವಾಹಾ ।

---

| ಮಂತ್ರ | ವಿನಿಯೋಗ |
|---|---|
| ಅಗ್ನಯೇ ಗೃಹಪತಯೇ ಸ್ವಾಹಾ । | ರಥವಿಮೋಚನೀಯಹೋಮದ ಮೊದಲನೆಯ ಮಂತ್ರ. |
| ಸೋಮಾಯ ವನಸ್ಪತಯೇ ಸ್ವಾಹಾ । | ಎರಡನೆಯ ಮಂತ್ರ. |
| ಇಂದ್ರಸ್ಯ ಬಲಾಯ ಸ್ವಾಹಾ । | ಮೂರನೆಯ ಮಂತ್ರ. |

---

✣ [ಎಲೈ! ತಾಮ್ರಮಣಿಯೇ! ನೀನು] **ಊರ್ಕ್ ಅಸಿ** = ಬಲಸ್ವರೂಪ ವಾಗಿದ್ದೀಯೆ; **ಊರ್ಜಂ ಮೇ ಧೇಹಿ** = ಬಲವನ್ನು ನನಗೆ ಕೊಡು; ✣ [ಎಲೈ! ಸುವರ್ಣಮಣಿಯೇ! ನೀನು] **ಯುಜ್ ಅಸಿ** =- ಧರಿಸಲು ಯೋಗ್ಯವಾಗಿದ್ದೀಯೆ; **ವರ್ಚಃ ಅಸಿ** = [ಧರಿಸುವುದರಿಂದ] ತೇಜಸ್ಸನ್ನು ಹೆಚ್ಚಿಸುತ್ತೀಯೆ; **ವರ್ಚಃ ಮಯಿ ಧೇಹಿ** = ನನಗೆ ಕಾಂತಿಯನ್ನು ನೀಡು. ✣ **ಅಗ್ನಯೇ ಗೃಹಪತಯೇ ಸ್ವಾಹಾ** = ಗೃಹಪತಿಯಾದ ಅಗ್ನಿಗೆ ಈ ಹವಿಸ್ಸು ಹುತವಾಗಲಿ. **ಸೋಮಾಯ ವನಸ್ಪತಯೇ ಸ್ವಾಹಾ** = ವನಸ್ಪತಿಗಳ ರಾಜನಾದ ಸೋಮನಿಗೆ ಈ ಆಜ್ಯಹವಿಸ್ಸು ಹುತವಾಗಲಿ. **ಇಂದ್ರಸ್ಯ ಬಲಾಯ ಸ್ವಾಹಾ** = ಇಂದ್ರನ ಬಲಕ್ಕೆ ಈ ಹವಿಸ್ಸು ಹುತವಾಗಲಿ.

---

ತಾಯಿಯಾದ ಭೂದೇವಿಯನ್ನು ನಮಸ್ಕರಿಸುತ್ತೇನೆ. ನಾನು ಭೂಮಾತೆಯನ್ನು ಹಿಂಸಿಸುವುದಿಲ್ಲ. ಭೂದೇವಿಯು ನನ್ನನ್ನು ಹಿಂಸಿಸದಿರಲಿ.

ರಾಜತಮಣಿಯು ಆಯುಃಸ್ವರೂಪ. ತಾಮ್ರಮಣಿಯು ಬಲಸ್ವರೂಪ.

## ಮರುತಾಮೋಜಸೇ ಸ್ವಾಹಾ ಹಗ್ಂಸಶ್ಶುಚಿಷದ್ವಸುರಂತರಿಕ್ಷ -ಸದ್ಧೋತಾ ವೇದಿಷದತಿಥಿರ್ದುರೋಣಸತ್ ।

---

ಮರುತಾಮ್ । ಓಜಸೇ । ಸ್ವಾಹಾ । ಹಗ್ಂಸಃ । ಶುಚಿಷದಿತಿ ಶುಚಿ-ಸತ್ । ವಸುಃ । ಅಂತರಿಕ್ಷಸದಿತ್ಯಂತರಿಕ್ಷ-ಸತ್ । ಹೋತಾ । ವೇದಿಷದಿತಿ ವೇದಿ-ಸತ್ । ಅತಿಥಿಃ । ದುರೋಣಸದಿತಿ ದುರೋಣ-ಸತ್ ॥

---

| ಮಂತ್ರ | ವಿನಿಯೋಗ |
|---|---|
| ಮರುತಾಮೋಜಸೇ ಸ್ವಾಹಾ । | ನಾಲ್ಕನೆಯ ಮಂತ್ರ. |
| ಹಗ್ಂಸಃ ...... ಬೃಹತ್ ॥ | ಕುದುರೆಗಳ ಹಗ್ಗವನ್ನು ಹಿಡಿದಿರುವ ಸಾರಥಿಯೊಡನೆ ರಥವನ್ನು *ರಥವಾಹನದಲ್ಲಿ ಕಟ್ಟಲು. |

---

**ಮರುತಾಮ್ ಓಜಸೇ ಸ್ವಾಹಾ** = ಮರುದ್ದೇವತೆಗಳ ಓಜಸ್ಸಿಗಾಗಿ ಈ ಆಜ್ಯದ್ರವ್ಯವು ಹುತವಾಗಲಿ; + ***ಹಗ್ಂಸಃ** = *ಭೂಮಿಯನ್ನು ಸುತ್ತುವ; **ಶುಚಿಷತ್** = ಶುಚಿಯಾದ ಯಜ್ಞವೇದಿಯಲ್ಲಿ ರಥವಾಹನದಲ್ಲಿರುವ; **ವಸುಃ** = ಯಜಮಾನನನ್ನು ಕೂರಿಸಿಕೊಳ್ಳುವ; **ಅಂತರಿಕ್ಷಸತ್**= ಮರಗಿಡಗಳ ತಡೆಯಿಲ್ಲದ ಅಂತರಿಕ್ಷದಲ್ಲಿರುವ; **ಹೋತಾ ವೇದಿಷತ್**= ಯಜ್ಞವೇದಿಯಲ್ಲಿರುವುದರಿಂದ ಹೋತೃಸದೃಶವಾಗಿರುವ; **ಅತಿಥಿಃ ದುರೋಣಸತ್** = ಯಜಮಾನಾದಿಗೃಹಗಳಲ್ಲಿರುವುದರಿಂದ ಮನೆಗೆ ಬಂದ ಅತಿಥಿಯಂತಿರುವ;

---

ಸುವರ್ಣಮಣಿಯು ವರ್ಚಸ್ಸ್ವರೂಪವಾಗಿದೆ. ಇವುಗಳು ನನಗೆ ಆಯುಸ್ಸನ್ನೂ, ಬಲವನ್ನೂ ತೇಜಸ್ಸನ್ನೂ ನೀಡಲಿ. [ಇಡೋಪಾಹ್ವಾನದ ನಂತರ ಈ ಮಣಿಗಳನ್ನು ಬ್ರಹ್ಮನಿಗೆ ನೀಡಬೇಕು.]

ಗೃಹಪತಿಯಾದ ಅಗ್ನಿಗೂ, ವನಸ್ಪತಿಗಳ ಒಡೆಯನಾದ ಸೋಮನಿಗೂ, ಇಂದ್ರನ ಬಲಕ್ಕೂ, ಮರುತ್ತುಗಳ ತೇಜಸ್ಸಿಗೂ ಈ ಆಜ್ಯಹವಿಸ್ಸು ಹುತವಾಗಲಿ.

---

* ರಥವನ್ನು ಒಂದೆಡೆಯಲ್ಲಿ ನಿಲ್ಲಿಸುವುದಕ್ಕಾಗಿ ನೆಟ್ಟಿರುವ ಮರದ ಗೂಟ.

* **'ಹನ ಹಿಂಸಾಗತ್ಯೋಃ' ಎಂಬ ಧಾತುವಿನಿಂದಾದ ಪದ.**

* ಇಲ್ಲಿ 'ಹಗ್ಂಸಃ' ಎಂಬ ಮಂತ್ರಕ್ಕೆ ಅಧ್ಯಾತ್ಮ, ಅಧಿದೈವ, ಅಧಿಯಜ್ಞ ಎಂಬ ಮೂರು ಅರ್ಥಗಳನ್ನು ನಿರುಕ್ತಕಾರರು ಹೇಳಿರುತ್ತಾರೆ.
ಇಲ್ಲಿ ಅಧಿಯಜ್ಞರೂಪವಾದ ಅರ್ಥವನ್ನು ಪ್ರಕರಣಾನುಸಾರಿಯಾಗಿ ನೀಡಲಾಗಿದೆ.

# ನೃಷದ್ವರಸದೃತಸದ್ವ್ಯೋಮಸದಬ್ಜಾ ಗೋಜಾ ಋತಜಾ ಅದ್ರಿಜಾ ಋತಂ ಬೃಹತ್ ॥ ೧೫-30]

[ಹಿಗ್ಂಸಿಷಂ ಮರ್ತಜಾಸ್ತ್ರೀಣಿ ಚ । ]

---

ನೃಷದಿತಿ ನೃ-ಸತ್ । ವರಸದಿತಿ ವರ-ಸತ್ । ಋತಸದಿತ್ಯೃತ-ಸತ್ । ವ್ಯೋಮಸದಿತಿ ವ್ಯೋಮ-ಸತ್ । ಅಬ್ಜಾ ಇತ್ಯಪ್-ಜಾಃ । ಗೋಜಾ ಇತಿ ಗೋ-ಜಾಃ । ಋತಜಾ ಇತ್ಯೃತ-ಜಾಃ । ಅದ್ರಿಜಾ ಇತ್ಯದ್ರಿ-ಜಾಃ । ಋತಮ್ । ಬೃಹತ್ ॥ ೧೫ ॥

---

**ನೃಷತ್** = ಉಪಕಾರ ಮಾಡಲು ಮನುಷ್ಯರಲ್ಲಿರುವ; **ವರಸತ್** = ಶ್ರೇಷ್ಠವಾದ ರಾಜಾದಿಗೃಹಗಳಲ್ಲಿರುವ; **ಋತಸತ್** = ವಾಜಪೇಯಾದಿ ಯಜ್ಞಗಳಲ್ಲಿರುವ; **ವ್ಯೋಮಸತ್** = ಸೂರ್ಯನ ಸಂಚಾರಕ್ಕಾಗಿ ಆಕಾಶದಲ್ಲಿರುವ; **ಅಬ್ಜಾಃ** = ನೀರಿನಲ್ಲಿ ಹುಟ್ಟಿರುವ ಕುದುರೆಗಳಿಂದ ಕೂಡಿದ; **ಗೋಜಾಃ** = ಗೋಶಬ್ದವಾಚ್ಯವಾದ ವಜ್ರಾಯುಧ ದಿಂದ ಹುಟ್ಟಿರುವ; **ಋತಜಾಃ** = ಯಜ್ಞಕ್ಕಾಗಿ ಹುಟ್ಟಿ ದೇವರಥವಾಗಿರುವ; **ಅದ್ರಿಜಾಃ** = ಕಲ್ಲಿನಂತೆ ಗಟ್ಟಿಯಾಗಿರುವ ದಾರುಗಳಿಂದ ನಿರ್ಮಿತವಾಗಿರುವ; [ರಥವು] **ಬೃಹತ್ ಋತಮ್** = ಈ ಮಹಾಯಾಗವನ್ನು [ಸಂಪಾದಯತು = ನೆರವೇರಿಸಿಕೊಡಲಿ.]

---

ಇದು ರಥದ ಸ್ತುತಿಯಾಗಿದೆ. ಭೂಮಿಯನ್ನು ಸುತ್ತುವ, ರಥವಾಹನದಲ್ಲಿರುವ, ಯಜಮಾನನನ್ನು ಕೂರಿಸಿಕೊಳ್ಳುವ, ಅಂತರಿಕ್ಷದಲ್ಲಿರುವ, ಹೋತೃವಿನಂತಿರುವ, ಅತಿಥಿ ಯಂತಿರುವ, ರಾಜರ ಗೃಹಗಳಲ್ಲಿಯೂ, ವಾಜಪೇಯಾದಿಯಜ್ಞಗಳಲ್ಲಿಯೂ ಇರುವ, ಆಕಾಶದಲ್ಲಿ ಸೂರ್ಯನ ಸಂಚಾರಕ್ಕಾಗಿರುವ, ಕುದುರೆಗಳಿಂದ ಕೂಡಿದ, ದೇವರಥದಂತಿ ರುವ, ಗಟ್ಟಿಯಾದ ದಾರುನಿರ್ಮಿತವಾಗಿರುವ ಈ ರಥವು ಈ ಮಹಾಯಾಗವನ್ನು ನೆರವೇರಿಸಿ ಕೊಡಲಿ.

## ವಿನಿಯೋಗ ಸಂಗ್ರಹ

[1]ಇಂದ್ರೇತಿ ರಥಮಾಹೃತ್ಯ [2]ಮಿತ್ರೇತ್ಯೇತಂ ಯುನಕ್ತಿ ಹಿ ।
[3-5]ವಿಷ್ಣೋಸ್ತ್ರಿಭೀ ರಥಂ ಗತ್ವಾ [6]ಮರ್ವಾರುಹ್ಯ ಪ್ರಯಾತಿ ಸಃ ॥
[7] ಆಪ್ತಂ ಕ್ಷತ್ರ ಇಷುಂ ಮುಕ್ತ್ವಾ [8]ಸಂ ಪ್ರದಕ್ಷಿಣಮಾವ್ರಜೇತ್ ॥
[9]ಪಶ್ಚಿತ್ಯುಪಾನಹೌ ಧೃತ್ವಾ [10]ನಮೋ ಭೂಮ್ಯಭಿಮಂತ್ರಣಮ್ ॥
[11]ಇಯನ್ಮಣಿಂ ರಾಜತಂ ಚೋ[12]ರ್ಗ್ಧ್ನಾತ್ಯಾದುಂಬರಂ ಮಣಿಮ್ ॥
[13]ಯುಙ್ ಸೌವರ್ಣಂ ಚಾಗ್ನ[14-17]ಹುತ್ವಾ ಚತಸ್ರೋ ರಥಮೋ ಚ ನೀಃ ॥
[18]ಹಂಸೋ ರಥಂ ಸ್ಥಾಪಯೀತ ಮಂತ್ರಾ ಅಷ್ಟಾದಶೇರಿತಾಃ ॥

**ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ—18**

★ ★ ★

# ॥ ಷೋಡಶೋಽನುವಾಕಃ ॥

## ಮಿತ್ರೋಽಸಿ ವರುಣೋಽಸಿ ಸಮಹಂ ವಿಶ್ವೈರ್ದೇವೈಃ
## ಕ್ಷತ್ರಸ್ಯ ನಾಭಿರಸಿ ಕ್ಷತ್ರಸ್ಯ ಯೋನಿರಸಿ

---

ಮಿತ್ರಃ । ಅಸಿ । ವರುಣಃ । ಅಸಿ । ಸಮಿತಿ । ಅಹಮ್ । ವಿಶ್ವೈಃ । ದೇವೈಃ । ಕ್ಷತ್ರಸ್ಯ। ನಾಭಿಃ । ಅಸಿ । ಕ್ಷತ್ರಸ್ಯ । ಯೋನಿಃ । ಅಸಿ ।

---

ಹದಿನೈದನೆಯ ಅನುವಾಕದಲ್ಲಿ ದಿಗ್ವಿಜಯವು ಹೇಳಲ್ಪಟ್ಟಿತು. ಈ ಹದಿನಾರನೆಯ ಅನುವಾಕದಲ್ಲಿ ಸಿಂಹಾಸನದಲ್ಲಿ ಕುಳಿತ ರಾಜನನ್ನು ಪ್ರಜೆಗಳು ಸೇವಿಸುವುದನ್ನು ಹೇಳಲಾಗಿದೆ.

---

| ಮಂತ್ರ | ವಿನಿಯೋಗ |
|---|---|
| ಮಿತ್ರೋಽಸಿ ವರುಣೋಽಸಿ । | ಬಲಗೈಯನ್ನೂ ಎಡಗೈಯನ್ನೂ ಇಳಿಸಲು |
| ಸಮಹಂ.... ದೇವೈಃ । | ವೈಶ್ವದೇವ್ಯಾಮಿಕ್ಷೆಯಲ್ಲಿ ಕೈಗಳನ್ನಿಡಲು |
| ಕ್ಷತ್ರಸ್ಯ.... ಯೋನಿರಸಿ । | ಖಾದಿರವೃಕ್ಷದ (ಕಗ್ಗಲೀಮರ) ಆಸಂದಿ (ಪೀಠ) ಯಲ್ಲಿ ಚರ್ಮಪಟವನ್ನು ಹಾಸಲು |
| ೧) ಕ್ಷತ್ರಸ್ಯ ಯೋನಿರಸಿ । | ಖಾದಿರಪೀಠವನ್ನು ಇಡಲು |
| ೨) ಕ್ಷತ್ರಸ್ಯ ನಾಭಿರಸಿ । | ಚರ್ಮಪಟವನ್ನು ಹಾಸಲು —ಭ.ಭಾ. |

---

**ಮಿತ್ರಃ ಅಸಿ** = [ಎಲೈ! ದಕ್ಷಿಣಹಸ್ತವೇ! ನೀನು ಭೋಜನಾದಿಸಹಾಯಕನಾಗಿ] ಮಿತ್ರನಾಗಿದ್ದೀಯೆ; **ವರುಣಃ ಅಸಿ** = [ಎಲೈ! ವಾಮಹಸ್ತವೇ! ನೀನು ಶೌಚಾದಿಗಳಲ್ಲಿ ಅನಿಷ್ಟನಿವಾರಕನಾದುದರಿಂದ] ವರುಣನಾಗಿರುತ್ತೀಯೆ. ✣ **ಅಹಮ್** = ನಾನು; **ವಿಶ್ವೈಃ ದೇವೈಃ ಸಮ್ ಗಚ್ಛೇಯಮ್** = ಸರ್ವದೇವರಿಂದಲೂ/ವಿಶ್ವೇದೇವದೇವತೆಗಳಿಂದ ಕೂಡಿಕೊಂಡಿರುವನಾಗುವೆನು. ✣ [ಎಲೈ* ಚರ್ಮಪಟವೇ! ನೀನು] **ಕ್ಷತ್ರಸ್ಯ ನಾಭಿಃ ಅಸಿ** = ಕ್ಷತ್ರಿಯನು [ಕುಳಿತುಕೊಳ್ಳಲು] ನಾಭಿ[ಹೊಕ್ಕಳು]ಯಂತೆ[ಮಧ್ಯಸ್ಥಾನವಾಗಿದ್ದೀಯೆ]; **ಕ್ಷತ್ರಸ್ಯ ಯೋನಿಃ ಅಸಿ** = ಕ್ಷತ್ರಿಯಜಾತಿಗೆ [ತಾಯಿಯಂತೆ] ಕಾರಣವೂ ಆಗಿದ್ದೀಯೆ. ✣ [ಎಲೈ! ಶರೀರವೇ!]

---

* ಕುಳಿತುಕೊಳ್ಳುವುದಕ್ಕೆ ಸಿದ್ಧಪಡಿಸಿದ ಚರ್ಮದ ಆಸನ.

ಸ್ಯೋನಾಮಾಸೀದ ಸುಷದಾಮಾಸೀದ ಮಾ ತ್ವಾ ಹಿಗ್ಂಸೀನ್ಮಾ ಮಾ ಹಿಗ್ಂಸೀನ್ನಿಷಸಾದ ಧೃತವ್ರತೋ ವರುಣಃ ಪಸ್ತ್ಯಾಸ್ವಾ ಸಾಮ್ರಾಜ್ಯಾಯ ಸುಕ್ರತು-

ಸ್ಯೋನಾಮ್ । ಏತಿ । ಸೀದ । ಸುಷದಾಮಿತಿ ಸು-ಸದಾಮ್ । ಏತಿ । ಸೀದ । ಮಾ । ತ್ವಾ । ಹಿಗ್ಂಸೀತ್ । ಮಾ । ಮಾ । ಹಿಗ್ಂಸೀತ್ । ನೀತಿ । ಸಸಾದ । ಧೃತವ್ರತ ಇತಿ ಧೃತ-ವ್ರತಃ । ವರುಣಃ । ಪಸ್ತ್ಯಾಸು । ಏತಿ । ಸಾಮ್ರಾಜ್ಯಾಯೇತಿ ಸಾಮ್-ರಾಜ್ಯಾಯ। ಸುಕ್ರತುರಿತಿ ಸು-ಕ್ರತುಃ ।

| ಮಂತ್ರ | ವಿನಿಯೋಗ |
|---|---|
| ಸ್ಯೋನಾಮಾಸೀದ.... ಆಸೀದ । | ಪೀಠವನ್ನು ಸಮೀಪಿಸಲು |
| ಮಾತ್ವಾ ...ಮಾ ಹಿಗ್ಂಸೀತ್ । | ಅದರಲ್ಲಿ ಕುಳಿತುಕೊಳ್ಳಲು |
| ನಿಷಸಾದ...ಸುಕ್ರತುಃ । | ಯಜಮಾನಾನುಮಂತ್ರಣ ಮಾಡಲು |

**ಸ್ಯೋನಾಮ್ ಆಸೀದ** = ಸುಖಕರವಾದ ಆ ಆಸಂದಿಯನ್ನು (ಪೀಠ) ಸಮೀಪಿಸು; **ಸುಷದಾಮ್ ಆಸೀದ** = ಸುಖವಾಗಿ ಕುಳಿತುಕೊಳ್ಳಲು ಯೋಗ್ಯವಾದ ಆಸಂದಿಯನ್ನು ಸಮೀಪಿಸು; **ಮಾ ತ್ವಾಹಿಗ್ಂಸೀತ್** = ನಿನ್ನನ್ನು/ಶರೀರವನ್ನು [ಪೀಠವು]ಹಿಂಸಿಸದಿರಲಿ; **ಮಾಮಾಹಿಗ್ಂಸೀತ್** = ಶರೀರಸ್ವಾಮಿಯಾದ ನನ್ನನ್ನೂ ಹಿಂಸಿಸದಿರಲಿ. ✢ [ಈ ಯಜಮಾನನು] **ಧೃತವ್ರತಃ** = ರಾಜಸೂಯ ಯಾಗದ ದೀಕ್ಷೆಯನ್ನು ಸ್ವೀಕರಿಸಿದವನಾಗಿ; **ವರುಣಃ** = [ಪ್ರಜೆಗಳ] ಅನಿಷ್ಟನಿವಾರಕನಾಗಿ; **ಮಾತಾ ನಿಷಸಾದ** = [ಈ ಪೀಠದಲ್ಲಿ] ಕುಳಿತಿರುತ್ತಾನೆ. [ಆತನು] **ಪಸ್ತ್ಯಾಸು ಆ** [ಗತ್ಯ] = ವೈರಿಗೃಹಗಳಲ್ಲಿಯೂ ಬಂದು; **ಸಾಮ್ರಾಜ್ಯಾಯ** = ಸಾಮ್ರಾಜ್ಯಪದವನ್ನು ಸ್ವೀಕರಿಸುವು ದಕ್ಕೆ; **ಸುಕ್ರತುಃ** = ಒಳ್ಳೆಯ ಸಂಕಲ್ಪವುಳ್ಳವನಾಗಿ [ಆಗಲಿ].

ಎಲೈ! ದಕ್ಷಿಣ–ವಾಮಹಸ್ತಗಳೇ! ಮಿತ್ರ-ವರುಣರಂತಿರುವ ನಿಮ್ಮನ್ನು ಕೆಳಗೆ ಇಳಿಸುತ್ತೇನೆ.

ಕೈಗಳು ಮಿತ್ರಾವರುಣರು. ಆಮಿಕ್ಷೆಯು ವಿಶ್ವೇದೇವದೇವತಾಕವಾದುದು. ಅದರ ಸ್ಪರ್ಶದಿಂದ ವಿಶ್ವೇದೇವಸಂಬಂಧಿಗಳಾದ ಪ್ರಜೆಗಳು ಅಧೀನರಾಗುತ್ತಾರೆ.

ಎಲೈ! ಚರ್ಮಾಸನವೇ! ನೀನು ಕುಳಿತುಕೊಳ್ಳಲು ನಾಭಿಯಂತೆ ಮಧ್ಯಸ್ಥಾನ ವಾಗಿರುವೆ. ನೀನು ಕ್ಷತ್ರಿಯ ಜಾತಿಗೆ ತಾಯಿಯಂತಿರುವೆ.

**ಬ್ರ್ಹಾ೩ನ್ತ್ವಗ್ಂ ರಾಜನ್ಬ್ರಹ್ಮಾಸಿ ಸವಿತಾಸಿ ಸತ್ಯಸವೋ ಬ್ರಹ್ಮಾ೩ನ್ತ್ವಗ್ಂ ರಾಜನ್ಬ್ರಹ್ಮಾಸೀಂದ್ರೋऽಸಿ ಸತ್ಯೌಜಾ [ಸತ್ಯೌಜಾಃ (೧)]**

---

**ಬ್ರಹ್ಮಾ೩ನ್ । ತ್ವಮ್ । ರಾಜನ್ನ್ । ಬ್ರಹ್ಮಾ । ಅಸಿ । ಸವಿತಾ । ಅಸಿ । ಸತ್ಯಸವ ಇತಿ ಸತ್ಯ-ಸವಃ । ಬ್ರಹ್ಮಾ೩ನ್ । ತ್ವಮ್ । ರಾಜನ್ನ್ । ಬ್ರಹ್ಮಾ । ಅಸಿ । ಇಂದ್ರಃ । ಅಸಿ। ಸತ್ಯೌಜಾ ಇತಿ ಸತ್ಯ-ಓಜಾಃ ।**

---

| ಮಂತ್ರ | ವಿನಿಯೋಗ |
|---|---|
| ಬ್ರಹ್ಮಾ೩ನ್... ಸತ್ಯಧರ್ಮಾ । | ರಾಜ ಮತ್ತು ಅಧ್ವರ್ಯು ಮೊದಲಾದವರ ಸಂಭಾಷಣೆಯ ಎಂಟು ಮಂತ್ರಗಳು. |

---

✢ [ರಾಜನು] ಬ್ರಹ್ಮಾ೩ನ್ ಓಮ್* =[ಎಲೈ! ಅಧ್ವರ್ಯುವೇ! ನೀನು] ಬ್ರಾಹ್ಮಣನಾಗಿದ್ದೀಯೆ. [ಎಂದು ಹೇಳುತ್ತಾನೆ.] ✢ [ಅಧ್ವರ್ಯುವು] ರಾಜನ್ = ರಾಜನೇ! **ತ್ವಮ್** = ನೀನು; **ಸತ್ಯಸವಃ ಸವಿತಾ ಅಸಿ** = [ನಾವು ಬ್ರಾಹ್ಮಣಧರ್ಮಗಳನ್ನು ಪಾಲಿಸುವುದಕ್ಕೆ] ಸತ್ಯವಾದ ಅನುಜ್ಞೆಯನ್ನು ನೀಡುವ ಸವಿತೃವಾಗಿದ್ದೀಯೆ. [ಆದುದರಿಂದ] **ಬ್ರಹ್ಮಾ ಅಸಿ** = ಬ್ರಾಹ್ಮಣನಾಗಿದ್ದೀಯೆ. ✢ [ರಾಜನು] **ಬ್ರಹ್ಮಾ೩ನ್ ಓಮ್** = [ಎಲೈ! ಬ್ರಹ್ಮನೇ! ನೀನು] ಬ್ರಾಹ್ಮಣನಾಗಿದ್ದೀಯೆ. [ಎಂದು ಹೇಳುತ್ತಾನೆ] ✢ [ಬ್ರಹ್ಮನು] **ರಾಜನ್** = ರಾಜನೇ! **ತ್ವಮ್**=ನೀನು; **ಇಂದ್ರಃ ಅಸಿ**= ಪರಮೈಶ್ವರ್ಯಯುಕ್ತನಾಗಿ ಇಂದ್ರನಾಗಿ ರುವೆ. **ಸತ್ಯೌಜಾಃ ಬ್ರಹ್ಮಾ ಅಸಿ** = ಅಮೋಘಶಕ್ತಿಯುಳ್ಳವನಾಗಿ ಬ್ರಾಹ್ಮಣನಾಗಿರುತ್ತೀಯೇ.

---

ಎಲೈ! ಶರೀರವೇ! ನೀನು ಆಸಂದಿಯನ್ನು ಸಮೀಪಿಸು. ನಿನ್ನನ್ನು ಮತ್ತು ಶರೀರ ಸ್ವಾಮಿಯಾದ ನನ್ನನ್ನು ಪೀಠವು ಹಿಂಸಿಸದಿರಲಿ. [ಈ ಮಂತ್ರವನ್ನು ಹೇಳಿ ಯಜಮಾನನು ಆಸೀನನಾಗುತ್ತಾನೆ.]

ರಾಜಸೂಯದೀಕ್ಷೆಯನ್ನು ಹೊಂದಿರುವ ಈ ಯಜಮಾನನು ಈ ಪೀಠದಲ್ಲಿ ಕುಳಿತು ಪ್ರಜೆಗಳ ಅನಿಷ್ಟಪರಿಹಾರಕನಾಗಲಿ. ಹಾಗೆಯೇ ಶತ್ರುಗೃಹಗಳಲ್ಲಿಯೂ ಕುಳಿತು ಸಮ್ರಾಜನಾಗುವ ಸಂಕಲ್ಪವನ್ನೂ ಕೈಗೊಳ್ಳಲಿ.

---

* **ಸೂತ್ರೋಕ್ತಮಂತ್ರ. [ಆಪ. ಶ್ರಾ. ಸೂ. 18-18-9-13]**

# ಬ್ರಹ್ಮಾ3ನ್ತ್ವಗ್ಂ ರಾಜನ್ಬ್ರಹ್ಮಾಸಿ ಮಿತ್ರೋಽಸಿ ಸುಶೇವೋ ಬ್ರಹ್ಮಾ3ನ್ತ್ವಗ್ಂ ರಾಜನ್ಬ್ರಹ್ಮಾಸಿ ವರುಣೋಽಸಿ ಸತ್ಯಧರ್ಮೇಂದ್ರಸ್ಯ

---

ಬ್ರಹ್ಮಾ3ನ್ । ತ್ವಮ್ । ರಾಜನ್ನ್ । ಬ್ರಹ್ಮಾ । ಅಸಿ । ಮಿತ್ರಃ । ಅಸಿ । ಸುಶೇವ ಇತಿ ಸು-ಶೇವಃ । ಬ್ರಹ್ಮಾ3ನ್ । ತ್ವಮ್ । ರಾಜನ್ನ್ । ಬ್ರಹ್ಮಾ । ಅಸಿ । ವರುಣಃ । ಅಸಿ। ಸತ್ಯಧರ್ಮೇತಿ ಸತ್ಯ-ಧರ್ಮಾ । ಇಂದ್ರಸ್ಯ ।

---

| ಮಂತ್ರ | ವಿನಿಯೋಗ |
|---|---|
| ಇಂದ್ರಸ್ಯ..... ರಧ್ಯ । | ಬ್ರಹ್ಮನು ರಾಜನಿಗೆ ಸ್ಫ್ಯವನ್ನು ಕೊಡಲು |

---

✣ [ರಾಜನು] ಬ್ರಹ್ಮಾ3ನ್ ಓಮ್ = [ಎಲೈ! ಹೋತೃವೇ! ನೀನು] ಬ್ರಾಹ್ಮಣನಾಗಿರುತ್ತೀಯೆ [ಎಂದು ಹೇಳುತ್ತಾನೆ] ✣ [ಹೋತೃವು] ರಾಜನ್ = ರಾಜನೇ!; ತ್ವಮ್ = ನೀನು; ಮಿತ್ರಃ ಅಸಿ = [ಶಿಷ್ಟಪರಿಪಾಲನೆಗಾಗಿ] ಮಿತ್ರದೇವನಾಗಿರುವೆ; ಸುಶೇವಃ ಬ್ರಹ್ಮಾ ಅಸಿ = ಸುಖವಾಗಿ ಸೇವಿಸಲು ಯೋಗ್ಯನಾಗಿ ಬ್ರಾಹ್ಮಣನಾಗಿದ್ದೀಯೆ. ✣ [ರಾಜನು] ಬ್ರಹ್ಮಾ3ನ್ ಓಮ್ =[ಎಲೈ! ಉದ್ಗಾತೃವೇ] ನೀನು ಬ್ರಾಹ್ಮಣನಾಗಿರುತ್ತೀಯೆ [ಎಂದು ಹೇಳುತ್ತಾನೆ.] ✣ [ಉದ್ಗಾತೃವು] ರಾಜನ್ = ರಾಜನೇ! ತ್ವಮ್ = ನೀನೇ; ವರುಣಃ ಅಸಿ = ಅನಿಷ್ಟನಿವಾರಕನಾದ ವರುಣನಾಗಿರುವೆ; ಸತ್ಯಧರ್ಮಾ ಬ್ರಹ್ಮಾ ಅಸಿ = ಶಾಸ್ತ್ರೀಯ ಧರ್ಮಗಳಿಂದ ಕೂಡಿದವನಾಗಿ ಬ್ರಾಹ್ಮಣನಾಗಿದ್ದೀಯೆ. [ಹೀಗೆ ಆಶೀರ್ವದಿಸುತ್ತಾರೆ] ✣ [ಎಲೈ! ಸ್ಫ್ಯವೇ! ನೀನು] ಇಂದ್ರಸ್ಯ = ಇಂದ್ರನ;

---

ರಾಜನ ಸುತ್ತಲೂ ಋತ್ವಿಜರೂ, ರತ್ನಿಗಳೂ ಕುಳಿತುಕೊಂಡಿರುವಾಗ ರಾಜ ಮತ್ತು ಅಧ್ವರ್ಯು ಮುಂತಾದ ಋತ್ವಿಜರ ನಡುವೆ ಸಂಭಾಷಣೆಯು ನಡೆಯುತ್ತದೆ. ರಾಜನ ಮುಂಭಾಗದಲ್ಲಿ ಅಧ್ವರ್ಯುವೂ, ದಕ್ಷಿಣದಲ್ಲಿ ಬ್ರಹ್ಮನೂ, ಪಶ್ಚಿಮದಲ್ಲಿ ಹೋತೃವೂ, ಉತ್ತರದಲ್ಲಿ ಉದ್ಗಾತೃವೂ ಕುಳಿತಿರುತ್ತಾರೆ.

ರಾಜ- ಎಲೈ! ಅಧ್ವರ್ಯುವೇ! ನೀನು ಬ್ರಾಹ್ಮಣನಾಗಿರುವೆ.

ಅಧ್ವರ್ಯು- ರಾಜನೇ! ಬ್ರಾಹ್ಮಣಧರ್ಮಗಳನ್ನು ಪಾಲಿಸುವ, ವ್ಯರ್ಥವಾಗದ ಅನುಜ್ಞೆಯುಳ್ಳ ನೀನೇ ಬ್ರಾಹ್ಮಣನಾಗಿದ್ದೀಯೆ.

---

* ಇವರು ಮಂಗಲನಾಮರು.

# ವಜ್ರೋಽಸಿ ವಾರ್ತ್ರಘ್ನಸ್ತೇನ ಮೇ ರಧ್ಯ ದಿಶೋಽಭ್ಯಯಗ್ಂ ರಾಜಾಽಭೂತ್ಸು-

---

ವಜ್ರಃ। ಅಸಿ । ವಾರ್ತ್ರಘ್ನ ಇತಿ ವಾರ್ತ್ರ-ಘ್ನಃ। ತೇನ । ಮೇ । ರಧ್ಯ । ದಿಶಃ । ಅಭೀತಿ। ಅಯಮ್ । ರಾಜಾ । ಅಭೂತ್ ।

---

| ಮಂತ್ರ | ವಿನಿಯೋಗ |
|---|---|
| ದಿಶಃ...ಅಭೂತ್ । | ರಾಜನಿಗೆ ಐದು*ಅಕ್ಷಗಳನ್ನು ಕೊಡಲು |

---

**ವಜ್ರಃ ಅಸಿ ವಾರ್ತ್ರಘ್ನಃ** = ವೃತ್ರಾಸುರನನ್ನು ಸಂಹರಿಸಿದ ವಜ್ರಾಯುಧದಂತೆ [ಯಜಮಾನನಿಗೆ] ಶತ್ರುಸಂಹಾರಸಾಧನವಾಗಿದ್ದೀಯೆ; **ತೇನ ಮೇ ರಧ್ಯ** = ಆ ಕಾರಣದಿಂದ ನನಗೆ ದ್ಯೂತಸ್ಥಾನಪರಿಲೇಖನ ಮಾಡುವ ಕಾರ್ಯವನ್ನು ಸಾಧಿಸಿಕೊಡು/ಶತ್ರುಗಳನ್ನು ಹಿಂಸಿಸು/ಎಲ್ಲ ಕಾರ್ಯಗಳನ್ನು ಸಾಧಿಸು. ✣ **ಅಯಮ್** = ಈ ಯಜಮಾನನು; **ದಿಶಃ ಅಭಿ** = ಊರ್ಧ್ವಸಹಿತವಾದ ಐದು ದಿಕ್ಕು ಗಳಿಗೂ; **ರಾಜಾ ಅಭೂತ್** = ರಾಜನಾದನು;

---

ರಾಜ - ಎಲೈ! ಬ್ರಹ್ಮನೇ ! ನೀನು ಬ್ರಾಹ್ಮಣನಾಗಿರುವೆ.

ಬ್ರಹ್ಮಾ - ರಾಜನೇ! ನೀನು ಪರಮೈಶ್ವರ್ಯಯುಕ್ತನಾದ ಇಂದ್ರನಾಗಿರುವೆ. ಅಮೋಘಶಕ್ತಿಯುಳ್ಳವನಾಗಿ ಬ್ರಾಹ್ಮಣನಾಗಿರುತ್ತೀಯೆ.

ರಾಜ - ಎಲೈ! ಹೋತೃವೇ ! ನೀನು ಬ್ರಾಹ್ಮಣನಾಗಿರುತ್ತೀಯೆ.

ಹೋತಾ - ರಾಜನೇ! ನೀನು ಮಿತ್ರದೇವನಾಗಿರುವೆ. ಸುಖವಾಗಿ ಸೇವಿಸಲು ಯೋಗ್ಯನಾಗಿ ಬ್ರಾಹ್ಮಣನಾಗಿರುವೆ.

ರಾಜ - ಎಲೈ! ಉದ್ಗಾತೃವೇ! ನೀನು ಬ್ರಾಹ್ಮಣನಾಗಿದ್ದೀಯೆ.

ಉದ್ಗಾತಾ - ನೀನು ಅನಿಷ್ಟನಿವಾರಕನಾದ ವರುಣನಾಗಿ ಶಾಸ್ತ್ರೀಯಧರ್ಮಗಳಿಂದ ಕೂಡಿದ ಬ್ರಾಹ್ಮಣನಾಗಿದ್ದೀಯೆ.

---

* ಅಕ್ಷಗಳು = ಚಿನ್ನದ ನಾಣ್ಯಗಳು. ಅಥವಾ ತಾರೇಕಾಯಿ ಗಾತ್ರದ ಚಿನ್ನದ ನಾಣ್ಯಗಳು. [80 ಗುಲಗಂಜಿಯ ತೂಕ = 1 ಅಕ್ಷ]

# ಶ್ಲೋಕಾಳ ಸುಮಂಗಲಾಳ ಸತ್ಯರಾಜಾ3ನ್ ॥

---

ಸುಶ್ಲೋಕಾಳ ಇತಿ ಸು-ಶ್ಲೋಕಾಳ। ಸುಮಂಗಲಾಳ ಇತಿ ಸು-ಮಂಗಲಾಳ । ಸತ್ಯರಾಜಾ3ನಿತಿ ಸತ್ಯ- ರಾಜಾ3ನ್ ॥

---

| ಮಂತ್ರ | ವಿನಿಯೋಗ |
|---|---|
| ಸುಶ್ಲೋಕಾಳ-ಸುಮಂಗಲಾಳ-<br>ಸತ್ಯರಾಜಾ3ನ್ । | *ಸಂಗ್ರಹೀತೃ * ಭಾಗದುಘ,<br>*ಕ್ಷತ್ತೃಗಳನ್ನು ಆಹ್ವಾನಿಸಲು |

---

✢ ಸುಶ್ಲೋಕಾಳ = ಒಳ್ಳೆಯ ಸ್ತುತಿಯುಳ್ಳ/ ಕೀರ್ತಿಯುಳ್ಳ ಕೋಶಾಧ್ಯಕ್ಷನೇ!/ ಕುದುರೆಗಳ ಹಗ್ಗವನ್ನು ಹಿಡಿಯುವ ಸಾರಥಿಯೇ ! ಸುಮಂಗಲಾಳ = ಪ್ರಜೆಗಳಿಗೆ ತೊಂದರೆಯಾಗ ದಂತೆ ಮರ್ಯಾದೆಯಿಂದ ತೆರಿಗೆಗಳನ್ನು ಸಂಗ್ರಹಿಸುವ ಭಾಗದುಘನೇ! ಸತ್ಯರಾಜಾ3ನ್ = ಸುಳ್ಳು ಹೇಳದೇ ಸತ್ಯವಾಗಿ ನಡೆದುಕೊಳ್ಳುವ ಅಂತಃಪುರಾಧ್ಯಕ್ಷನೇ ! [ನೀವು ಸುಶ್ಲೋಕ ಸುಮಂಗಲ, ಸತ್ಯರಾಜರಾಗಿ ನಡೆದುಕೊಳ್ಳಿರಿ.]

---

ಹೀಗೆ ಬ್ರಾಹ್ಮಣರು ಆಶೀರ್ವದಿಸುವುದರಿಂದ ರಾಜನು ಅಂತಹ ಶಕ್ತಿಯನ್ನು ಹೊಂದುತ್ತಾನೆ. ರಾಜನು ದಿಕ್ಪಾಲಕರ ಅಂಶವಾಗಿದ್ದಾನೆ ಎಂದು ಹೇಳಲಾಗಿದೆ. ಆತನು ಎಲ್ಲರೂ ಅವರವರ ಕರ್ತವ್ಯಗಳನ್ನು ಮಾಡುವಂತೆ ನಿಯಮಿಸುತ್ತಾನೆ. ದುಷ್ಟಶಿಕ್ಷಣ-ಶಿಷ್ಟಪರಿಪಾಲನೆ ಮಾಡುತ್ತಾನೆ. ಆದುದರಿಂದ ಬ್ರಾಹ್ಮಣನು ಆತನನ್ನು ಬ್ರಾಹ್ಮಣನೆಂದು ಹೊಗಳಿ, ಆಶೀರ್ವದಿಸುತ್ತಾರೆ. ಇದೇ ಅವರು ಮಾಡುವ ರಾಜಸೇವೆ.

ಎಲೈ! ಸ್ಫ್ಯವೇ ! ನೀನು ಇಂದ್ರನ ವಜ್ರಾಯುಧದಂತೆ ಯಜಮಾನನಿಗೆ ಶತ್ರು ಸಂಹಾರಸಾಧನನಾಗಿದ್ದೀಯೆ. ನೀನು ದ್ಯೂತಸ್ಥಾನಪರಿಲೇಖನಕಾರ್ಯವನ್ನು ನನಗೆ ಸಾಧಿಸಿಕೊಡು./ಶತ್ರುಗಳನ್ನು ಹಿಂಸಿಸು/ಎಲ್ಲ ಕಾರ್ಯಗಳನ್ನೂ ಸಾಧಿಸಿಕೊಡು.

ಈ ಯಜಮಾನನು ಊರ್ಧ್ವಸಹಿತವಾದ ಐದು ದಿಕ್ಕುಗಳಿಗೂ ರಾಜನಾದನು. ರಾಜನಿಗೆ ಐದು ಅಕ್ಷಗಳನ್ನು ನೀಡುವುದರಿಂದ ರಾಜನು ಐದು ದಿಕ್ಕುಗಳನ್ನೂ ಜಯಿಸಿ, ಪರಾಜಯವಿಲ್ಲದ ರಾಜನಾದಂತಾಯಿತು.

## ಅಪಾಂ ನಪ್ತ್ರೇ ಸ್ವಾಹೋರ್ಜೋ ನಪ್ತ್ರೇ ಸ್ವಾಹಾಗ್ನಯೇ ಗೃಹಪತಯೇ ಸ್ವಾಹಾ ॥ ೧೬-32 ॥

[ಸಪ್ತ್ಯಾಜಾಶ್ಚತ್ವಾರಿಗ್ಂಶಚ್ಚ।]

---

ಅಪಾಮ್ । ನಪ್ತ್ರೇ । ಸ್ವಾಹಾ । ಊರ್ಜಃ । ನಪ್ತ್ರೇ । ಸ್ವಾಹಾ । ಅಗ್ನಯೇ । ಗೃಹಪತಯ ಇತಿ ಗೃಹ-ಪತಯೇ । ಸ್ವಾಹಾ ॥ ೧೬ ॥

---

| ಮಂತ್ರ | ವಿನಿಯೋಗ |
|---|---|
| ಅಪಾಂ..... ಸ್ವಾಹಾ ॥ | ನೀರಿನಲ್ಲಿ ಹೋಮ ಮಾಡಲು |
| ಊರ್ಜೋ... ಸ್ವಾಹಾ ॥ | ದರ್ಭಸ್ತಂಬದಲ್ಲಿ ಹೋಮ ಮಾಡಲು |
| ಅಗ್ನಯೇ.... ಸ್ವಾಹಾ ॥ | ಗಾರ್ಹಪತ್ಯದಲ್ಲಿ ಹೋಮ ಮಾಡಲು |

---

✣ **ಅಪಾಮ್ ನಪ್ತ್ರೇ** = ನೀರನ್ನು ನಾಶಪಡಿಸದಿರುವ/ನೀರನ್ನು ಉತ್ಪಾದಿಸುವ ಅಗ್ನಿಗೆ; **ಸ್ವಾಹಾ** = ಇದು ಹುತವಾಗಲಿ. ✣ **ಊರ್ಜಃ ನಪ್ತ್ರೇ ಸ್ವಾಹಾ** = ಬಲವನ್ನು ನಾಶಪಡಿಸದಿರುವ/ಅನ್ನವನ್ನು ಜೀರ್ಣ ಮಾಡಿ ಬಲವನ್ನು ಉತ್ಪತ್ತಿಮಾಡುವ ಅಗ್ನಿಗೆ ಇದು ಹುತವಾಗಲಿ. **ಅಗ್ನಯೇ ಗೃಹಪತಯೇ ಸ್ವಾಹಾ** = ಗೃಹಪತಿಯಾದ ಗಾರ್ಹಪತ್ಯಾಗ್ನಿಗೆ ಇದು ಹುತವಾಗಲಿ.

---

ಮಂಗಲನಾಮವುಳ್ಳ ಕೋಶಾಧ್ಯಕ್ಷ, ಕರಸಂಗ್ರಾಹಕ, ಅಂತಃಪುರಾಧ್ಯಕ್ಷರೇ! ನೀವು ನಿಮ್ಮ ನಿಮ್ಮ ಕರ್ತವ್ಯಗಳನ್ನು ಉಚಿತರೀತಿಯಲ್ಲಿ ಮಾಡುವಂತಾಗಲಿ.

ನೀರನ್ನು ನಾಶಮಾಡದ, ನೀರನ್ನು ಉತ್ಪಾದಿಸುವ ಅಗ್ನಿಗೆ ಇದು ಹುತವಾಗಲಿ. [ಈ ಹೋಮವನ್ನು ಅವಭೃಥದ ಅನಂತರ ಮಾಡಬೇಕು].

[ಮಾರ್ಗಮಧ್ಯದಲ್ಲಿ ದರ್ಭಸ್ತಂಬಾದಿಗಳಲ್ಲಿ ಹೋಮಮಾಡಬೇಕು] ಬಲವನ್ನು ನಾಶಮಾಡುದ, ಆಹಾರವನ್ನು ಜೀರ್ಣಿಸಿ, ಬಲವನ್ನೀಯುವ ಅಗ್ನಿಗೆ ಈ ಆಹುತಿಯು ಇರಲಿ.

[ಹಿಂದಿರುಗಿ ಬಂದು ಗಾರ್ಹಪತ್ಯಾಗ್ನಿಯಲ್ಲಿ ಹೋಮ ಮಾಡಬೇಕು.] ಗೃಹಸ್ವಾಮಿಯಾದ ಗಾರ್ಹಪತ್ಯಾಗ್ನಿಗೆ ಇದು ಹುತವಾಗಲಿ.

## ಭ.ಭಾ. ಭಾಷ್ಯದಲ್ಲಿ ಇರುವ ವಿಶೇಷ ವಿವರಣೆ

**ಅಪಾಂ ನಪ್ತಾ** = ನೀರಿನಿಂದ ಪ್ರಾರಂಭಿಸಿ ನಾಲ್ಕನೆಯವನು ಅಗ್ನಿ. [1]ನೀರಿನಿಂದ ಓಷ[2]ಧಿಗಳು. ಓಷಧಿಯಿಂದ ಅ[3]ನ್ನ. ಅನ್ನದಿಂದ ಅಗ್ನಿ.[4]

**ಊರ್ಜಃ ನಪ್ತಾ = ಊರ್ಕ್** = ಅನ್ನ, ಅನ್ನದಿಂದ ಪ್ರಾರಂಭಿಸಿ ನಾಲ್ಕನೆಯವನು ಅಗ್ನಿ. ಅನ್ನದಿಂದ ಬಲ. [2]ಬಲದಿಂದ ಮಥನವೇಗ = ವೇಗವಾಗಿ ಕಡೆಯುವುದು. ಮ[3]ಥನದಿಂದ ಅಗ್ನಿ[4].

## ವಿನಿಯೋಗ ಸಂಗ್ರಹ

ಬಾಹೂ ಅಧೋ ಹರೇ ದ್ವಾಭ್ಯಾಂ [1]ಮಿತ್ರೇತಿ [2]ವರುಣೇತಿ ಚ ।
ಸ್ವಾಮ್ಯುಪಾಹೃತ್ಯ ಬಾಹೂ [3]ಸಂ ವೈಶ್ವದೇವ್ಯಾಂ ಪ್ರಸಾದಯೇತ್ ॥
[4]ಕ್ಷತ್ರಾಸಂದ್ಯಾಂ ತು ಖಾದಿರ್ಯಾಂ ಕೃತ್ಯಧೀವಾಸಸಂಸ್ಕೃತಿಃ ।
[5]ಸ್ಯೋನಾ ಸ್ವಾಮೀ ಸಮಾಗತ್ಯ [6]ಮಾ ತ್ವಾ ತತ್ರೋಪಸೀಗತಿ ॥
[7]ನಿಷೋಪವಿಷ್ಟಂ ಸಂಮನ್ತ್ರ್ಯ [8-15]ಬ್ರಹ್ಮಾ3ನಧ್ವರ್ಯುರ್ಮೀರಯೇತ್ ।
ಪ್ರತ್ಯಾಹ ಸೋಽಪಿ ತ್ವಮಿತಿ ಬ್ರಹ್ಮಾ ಹೋತಾ ಚ ಸಾಮಗಃ ॥
ರಾಜ್ಞೋಕ್ತಾ ಉತ್ತರಂ ಪ್ರಾಹುರಿಂದ್ರ[16]ಸ್ಯಂ ಸ್ವಾಮಿನೇಽರ್ಪಯೇತ್ ।
[17]ದಿಶೋಽಕ್ಷಾನ್ ದಾಪಯೇತ್ಪಂಚ [18-20]ಸುಶ್ಲೋಕ ಇತಿ ಚ ಕ್ರಮಾತ್ ।
ಸಂಗ್ರಹೀತಾ ಭಾಗದುಘಃ ಕ್ಷತ್ತಾ ಚಾಹೂಯತೇ ತ್ರಿಭಿಃ ॥
[21-23]ಅಪಾಂ ಜುಹೋತ್ಯಪ್ಸು ದರ್ಭೇ ಗಾರ್ಹಪತ್ಯೇ ತ್ರಿಭಿಃ ಕ್ರಮಾತ್ ॥
ಅನುವಾಕೇ ಷೋಡಶೇಽಸ್ಮಿಂಸ್ತ್ರಯೋವಿಂಶತಿರೀರಿತಾಃ ॥

**ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ-23**

# ಅನುವಾಕದ ವಿಶೇಷ ವಿಷಯಗಳು

## ಅ) ಮೀಮಾಂಸಾ

**೧) ದೇವನಾದಿಗಳು ಯಾವುದರ ಅಂಗಗಳು? [ಜೈ.ಸೂ. 3.3.]**

ರಾಜಸೂಯದಲ್ಲಿ ಇಷ್ಟಿ, ಪಶು, ಸೋಮಯಾಗಗಳು ಹಲವು ಪ್ರಧಾನವಾಗಿವೆ. ಅವುಗಳಲ್ಲಿ ಅಭಿಷೇಚನೀಯವೆಂಬ ಸೋಮಯಾಗವಿದೆ. ಅದರ ವಿಧಾನದ ಸನ್ನಿಧಿಯಲ್ಲಿ 'ಅಕ್ಷೈಃ ದೀವ್ಯತಿ' 'ರಾಜನ್ಯಂ ಜಿನಾತಿ' ಮೊದಲಾದ ಅಂಗಗಳು ವಿಹಿತವಾಗಿವೆ. ಅವು ಸನ್ನಿಧಿ ಇರುವುದರಿಂದ ಅಭಿಷೇಚನೀಯದ ಅಂಗವೇ? ಅಥವಾ ರಾಜಸೂಯದ ಅಂಗವೇ? ಇದು ಇಲ್ಲಿನ **ಸಂಶಯ.**

ಅಭಿಷೇಚನೀಯದ ಸನ್ನಿಧಿಯಲ್ಲಿ ಇರುವುದರಿಂದ 'ಅಕ್ಷೈಃ....' ಎಂದು ಮೊದಲಾಗಿ ವಿಹಿತವಾದ ದೇವನಾದಿಗಳು ಅಭಿಷೇಚನೀಯದ ಅಂಗಗಳು. ಇದು ಇಲ್ಲಿನ **ಪೂರ್ವಪಕ್ಷ.**

ಸ್ವತಃ ಸೋಮಯಾಗವಿಕೃತಿಯಾದ ಅಭಿಷೇಚನೀಯಕ್ಕೆ ದೇವನಾದಿಗಳು ಆಕಾಂಕ್ಷೆಯಿಲ್ಲ. ಅದನ್ನು ಕಲ್ಪಿಸಬೇಕಾಗುತ್ತದೆ. ರಾಜಸೂಯಕ್ಕಾದರೆ ಹೇಗೆ ಯಾಗವನ್ನು ಅನುಷ್ಠಿಸಬೇಕೆಂಬ ಇತಿಕರ್ತವ್ಯಾಕಾಂಕ್ಷೆಯಿದೆ. ಆಗ ದೇವನಾದಿಗಳಿಂದ ಆಕಾಂಕ್ಷೆಯು ಪೂರ್ಣವಾಗುತ್ತದೆ. ರಾಜಸೂಯವನ್ನು ಹೇಗೆ ಅನುಷ್ಠಿಸಬೇಕೆಂಬ ಆಕಾಂಕ್ಷೆಯೆಂಬುದು ಮಹಾಪ್ರಕರಣವಾದುದರಿಂದ ಸಂನಿಧಿ ಇದ್ದರೂ ಸಂನಿಧಿಯನ್ನು ಬಾಧಿಸಿ, ಪ್ರಕರಣವಶಾತ್ ದೇವನಾದಿಗಳು ರಾಜಸೂಯದ ಅಂಗಗಳಾಗುತ್ತವೆ. ಇದು **ಸಿದ್ಧಾಂತ.**

**೨) ದೇವನಾದಿಗಳನ್ನು ಯಾವಾಗ ಮಾಡಬೇಕು? [ಜೈ.ಸೂ. 5.2]**

ರಾಜಸೂಯದಲ್ಲಿ ದೇವನಾದಿಗಳು ಯಾವಾಗ ನಡೆಸಲ್ಪಡಬೇಕು? ಎಂಬುದು **ಸಂಶಯ.**

ಅತಿದೇಶದಿಂದ ಪ್ರಾಪ್ತವಾದ ಅಂಗಗಳ ಅನುಷ್ಠಾನವನ್ನು ಮುಗಿಸಿ ಅನಂತರ ಮಾಡಬೇಕೆಂಬುದು ಇಲ್ಲಿನ **ಪೂರ್ವಪಕ್ಷ.**

'ಮಾಹೇಂದ್ರಸ್ಯ ಸ್ತೋತ್ರಂ ಪ್ರತ್ಯಭಿಷಿಚ್ಯತೇ' [ಆಪ. ಶ್ರೌ. ಸೂ. 8-16.20] ಎಂಬುದಾಗಿ ಸೋಮಯಾಗದ ಮಧ್ಯದಲ್ಲಿ ಅಭಿಷೇಕವಿದೆ. ಅದಕ್ಕೆ ಮೊದಲು ಹೇಳಿರುವ ದೇವನಾದಿಗಳನ್ನು ಅಪಕರ್ಷ ಮಾಡಿ ಮೊದಲೇ ಮಾಡಬೇಕು.

**೩) ಅಪಕರ್ಷವಿರುವುದರಿಂದ ದೇವನಾದಿಗಳು ಯಾವುದಕ್ಕೆ ಅಂಗಗಳು?**

**[ಜೈ.ಸೂ. 4.4.]**

ಅಭಿಷೇಚನೀಯದಲ್ಲಿ ಅಭಿಷೇಕಕ್ಕೆ ಮೊದಲು ಅಪಕರ್ಷ ಮಾಡಿ ಅನುಷ್ಠಿಸುವ ದೇವನಾದಿಗಳು ಅಭಿಷೇಚನೀಯದ ಅಂಗಗಳ ಮಧ್ಯದಲ್ಲಿರುವುದರಿಂದ ಅಭಿಷೇಚನೀಯಸೋಮಯಾಗಕ್ಕೆ ಮಾತ್ರ ಅಂಗಗಳಾಗುತ್ತವೆಯೆಂಬುದು ಪೂರ್ವಪಕ್ಷ.

ರಾಜಸೂಯವೆಂಬ ಮಹಾಪ್ರಕರಣದಲ್ಲಿರುವುದರಿಂದ ಅನುಮತ್ಯಾದಿ ಎಲ್ಲ ಅವಾಂತರ ಯಾಗಗಳಿಗೂ ರಾಜಸೂಯವೆಂಬ ನಾಮಧೇಯವಿರುವುದರಿಂದ ದೇವನಾದಿಗಳು ಎಲ್ಲಕ್ಕೂ ಅಂಗಗಳು. ಇದು ಇಲ್ಲಿನ ಸಿದ್ಧಾಂತ.

★ ★ ★

## ॥ ಸಪ್ತದಶೋಽನುವಾಕಃ ॥

ಆಗ್ನೇಯಮಷ್ಟಾಕಪಾಲಂ ನಿರ್ವಪತಿ ಹಿರಣ್ಯಂ ದಕ್ಷಿಣಾ
ಸಾರಸ್ವತಂ ಚರುಂ ವತ್ಸತರೀ ದಕ್ಷಿಣಾ

---

**ಆಗ್ನೇಯಮ್ । ಅಷ್ಟಾಕಪಾಲಮಿತ್ಯಷ್ಟಾ-ಕಪಾಲಮ್ । ನಿರಿತಿ । ವಪತಿ । ಹಿರಣ್ಯಮ್। ದಕ್ಷಿಣಾ । ಸಾರಸ್ವತಮ್ । ಚರುಮ್ । ವತ್ಸತರೀ । ದಕ್ಷಿಣಾ ।**

---

ಈ ಹದಿನೇಳನೆಯ ಅನುವಾಕದಲ್ಲಿ ಸಂಸೃಪಹವಿಸ್ಸುಗಳು ಹೇಳಲ್ಪಟ್ಟಿವೆ. ಇವು ಹತ್ತು ಇವೆ. ಅಭಿಷೇಚನೀಯಾನಂತರ ದಶಪೇಯಯಾಗದ ಮೊದಲು ಮಾಡಬೇಕು. ದಿನಕ್ಕೆ ಒಂದರಂತೆ ಮಾಡಬೇಕು. ಹತ್ತು ದಿನಗಳಲ್ಲಿ ಹತ್ತು ಹವಿರ್ಯಾಗಗಳನ್ನು ಮಾಡಬೇಕು. ವೀರ್ಯಪ್ರಾಪಕಗಳಾದ ಈ ಯಾಗಗಳು ಸಂಸೃಪಗಳು. ಅವುಗಳ ಹವಿಸ್ಸುಗಳೂ ಸಂಸೃಪಗಳು. ಇದಕ್ಕೆ ಸಂಬಂಧಿಸಿದ ಇತರ ವಿಧಿಗಳು ಅನುಬ್ರಾಹ್ಮಣದಲ್ಲಿವೆ.

---

| ಬ್ರಾಹ್ಮಣಭಾಗ | ವಿವರಣೆ |
|---|---|
| ೧) ಆಗ್ನೇಯಮ್ ಅಷ್ಟಾಕಪಾಲಮ್ ನಿರ್ವಪತಿ | [ಮೊದಲನೆಯ ಹವಿಸ್ಸು] ಅಗ್ನಿದೇವತಾಕವಾದ ಅಷ್ಟಾಕಪಾಲಹವಿರ್ಯಾಗ ಮಾಡಬೇಕು. |
| ಹಿರಣ್ಯಮ್ ದಕ್ಷಿಣಾ | [ಇದಕ್ಕೆ] ಹಿರಣ್ಯವು ದಕ್ಷಿಣೆ. |
| ೨) ಸಾರಸ್ವತಮ್ ಚರುಮ್ [ನಿರ್ವಪತಿ] | ಸರಸ್ವತೀದೇವತಾಕವಾದ ಚರುಯಾಗವನ್ನು ಮಾಡಬೇಕು. |
| ವತ್ಸತರೀ ದಕ್ಷಿಣಾ | ಹಾಲು ಕುಡಿಯುವುದನ್ನು ನಿಲ್ಲಿಸಿರುವ ಹೆಣ್ಣು ಕರುವು ಈ ಯಾಗದ ದಕ್ಷಿಣೆ. |

---

* ತಾತ್ಪರ್ಯವು ಬ್ರಾಹ್ಮಣಭಾಗದ ವಿವರಣೆಯಿಂದಲೇ ತಿಳಿಯುವಂತೆ ಇರುವುದರಿಂದ ಪ್ರತ್ಯೇಕ ತಾತ್ಪರ್ಯವನ್ನು ನೀಡಿಲ್ಲ.

ಸಾವಿತ್ರಂ ದ್ವಾದಶಕಪಾಲಮುಪಧ್ವಸ್ತೋ ದಕ್ಷಿಣಾ ಪೌಷ್ಣಂ ಚರುಗ್ಗ್‍ಂ ಶ್ಯಾಮೋ ದಕ್ಷಿಣಾ ಬಾರ್ಹಸ್ಪತ್ಯಂ ಚರುಗ್ಂ ಶಿತಿಪೃಷ್ಠೋ ದಕ್ಷಿಣೈಂದ್ರಮೇಕಾದಶಕಪಾಲಮೃಷಭೋ ದಕ್ಷಿಣಾ

---

ಸಾವಿತ್ರಮ್ । ದ್ವಾದಶಕಪಾಲಮಿತಿ ದ್ವಾದಶ-ಕಪಾಲಮ್ । ಉಪಧ್ವಸ್ತ ಇತ್ಯುಪ-ಧ್ವಸ್ತಃ। ದಕ್ಷಿಣಾ। ಪೌಷ್ಣಮ್ । ಚರುಮ್ । ಶ್ಯಾಮಃ । ದಕ್ಷಿಣಾ । ಬಾರ್ಹಸ್ಪತ್ಯಮ್ । ಚರುಮ್। ಶಿತಿಪೃಷ್ಠ ಇತಿ ಶಿತಿ-ಪೃಷ್ಠಃ । ದಕ್ಷಿಣಾ । ಐಂದ್ರಮ್ । ಏಕಾದಶಕಪಾಲಮಿತ್ಯೇಕಾದಶ-ಕಪಾಲಮ್ । ಋಷಭಃ । ದಕ್ಷಿಣಾ ।

---

೩) ಸಾವಿತ್ರಮ್ ದ್ವಾದಶಕಪಾಲಮ್ [ನಿರ್ವಪತಿ] ಉಪಧ್ವಸ್ತಃ ದಕ್ಷಿಣಾ — ಸವಿತೃದೇವತಾಕವಾದ ದ್ವಾದಶಕಪಾಲಪುರೋಡಾಶಯಾಗವನ್ನು ಮಾಡಬೇಕು. ಇದಕ್ಕೆ ಸಂಕೀರ್ಣವರ್ಣವುಳ್ಳ ಹೋರಿಕರುವು ದಕ್ಷಿಣೆ.

೪) ಪೌಷ್ಣಮ್ ಚರುಮ್ [ನಿರ್ವಪತಿ] ಶ್ಯಾಮಃ ದಕ್ಷಿಣಾ — ಪೂಷದೇವತಾಕವಾದ ಚರುಯಾಗವನ್ನು ಮಾಡಬೇಕು. ಶ್ಯಾಮಲ(ಕಪ್ಪು)ವರ್ಣದ ಹೋರಿಯು ದಕ್ಷಿಣೆ.

೫) ಬಾರ್ಹಸ್ಪತ್ಯಂ ಚರುಮ್ [ನಿರ್ವಪತಿ] ಶಿತಿಪೃಷ್ಠಃ ದಕ್ಷಿಣಾ — ಬೃಹಸ್ಪತಿದೇವತಾಕವಾದ ಚರುಯಾಗವನ್ನು ಮಾಡಬೇಕು. ಬೆನ್ನಿನಲ್ಲಿ ಬಿಳಿಯ ಬಣ್ಣವುಳ್ಳ ಹೋರಿಗರುವು ದಕ್ಷಿಣೆ.

೬) ಐಂದ್ರಮ್ ಏಕಾದಶಕಪಾಲಮ್ [ನಿರ್ವಪತಿ] ಋಷಭಃ ದಕ್ಷಿಣಾ — ಇಂದ್ರದೇವತಾಕವಾದ ಏಕಾದಶಕಪಾಲ ಪುರೋಡಾಶಯಾಗವನ್ನು ಮಾಡಬೇಕು. ಗೂಳಿಯು ಇದರ ದಕ್ಷಿಣೆ.

ವಾರುಣಂ ದಶಕಪಾಲಂ ಮಹಾನಿರಷ್ಟೋ ದಕ್ಷಿಣಾ ಸೌಮ್ಯಂ ಚರುಂ ಬಭ್ರುರ್ದಕ್ಷಿಣಾ ತ್ವಾಷ್ಟ್ರಮಷ್ಟಾ-ಕಪಾಲಗ್ಂ ಶುಂಠೋ ದಕ್ಷಿಣಾ ವೈಷ್ಣವಂ ತ್ರಿಕಪಾಲಂ ವಾಮನೋ ದಕ್ಷಿಣಾ ॥ ೧೭-33 ॥

[ಆಗ್ನೇಯಗ್ಂ ಹಿರಣ್ಯಗ್ಂ ಸಾರಸ್ವತಂ ದ್ವಿಚತ್ವಾರಿಗ್ಂಶತ್]

---

ವಾರುಣಮ್ । ದಶಕಪಾಲಮಿತಿ ದಶ-ಕಪಾಲಮ್ । ಮಹಾನಿರಷ್ಟ ಇತಿ ಮಹಾ-ನಿರಷ್ಟಃ। ದಕ್ಷಿಣಾ । ಸೌಮ್ಯಮ್ । ಚರುಮ್ । ಬಭ್ರುಃ । ದಕ್ಷಿಣಾ । ತ್ವಾಷ್ಟ್ರಮ್ । ಅಷ್ಟಾಕಪಾಲ-ಮಿತ್ಯಷ್ಟಾ-ಕಪಾಲಮ್ । ಶುಂಠಃ । ದಕ್ಷಿಣಾ । ವೈಷ್ಣವಮ್ । ತ್ರಿಕಪಾಲಮಿತಿ ತ್ರಿ-ಕಪಾಲಮ್ । ವಾಮನಃ । ದಕ್ಷಿಣಾ ॥ ೧೭ ॥

---

| | |
|---|---|
| ೭) ವಾರುಣಮ್ ದಶಕಪಾಲಮ್ [ನಿರ್ವಪತಿ] | ವರುಣದೇವತಾಕವಾದ ದಶಕಪಾಲಪುರೋ-ಡಾಶದ ಯಾಗವನ್ನು ಮಾಡಬೇಕು. |
| ಮಹಾನಿರಷ್ಟಃ ದಕ್ಷಿಣಾ | ಬೀಜವನ್ನು ಒಡೆದಿರುವ ಎತ್ತು ಇದರ ದಕ್ಷಿಣೆ. |
| ೮) ಸೌಮ್ಯಮ್ ಚರುಮ್ [ನಿರ್ವಪತಿ] | ಸೋಮದೇವತಾಕವಾದ ಚರುಯಾಗವನ್ನು ಮಾಡಬೇಕು. |
| ಬಭ್ರುಃ ದಕ್ಷಿಣಾ | ಬಿಳಿಯ ಬಣ್ಣದ / ಬಿಳಿಗೆಂಪು ಬಣ್ಣದ ಹೋರಿಯು ಇದರ ದಕ್ಷಿಣೆ. |
| ೯) ತ್ವಾಷ್ಟ್ರಮ್ ಅಷ್ಟಾಕಪಾಲಮ್ [ನಿರ್ವಪತಿ] | ತ್ವಷ್ಟೃದೇವತಾಕವಾದ ಅಷ್ಟಾಕಪಾಲಪುರೋ ಡಾಶಯಾಗವನ್ನು ಮಾಡಬೇಕು. |
| ಶುಂಠಃ ದಕ್ಷಿಣಾ | ಬಿಳಿಯಬಣ್ಣದ ಹೋರಿಯು ಇಟರ ದಕ್ಷಿಣೆ. [ಅಲ್ಪಕಾಯದ ಹಸು] |
| ೧೦) ವೈಷ್ಣವಮ್ ತ್ರಿಕಪಾಲಮ್ [ನಿರ್ವಪತಿ] ವಾಮನಃ ದಕ್ಷಿಣಾ | ವಿಷ್ಣುದೇವತಾಕವಾದ ತ್ರಿಕಪಾಲಪುರೋ ಡಾಶಯಾಗವನ್ನು ಮಾಡಬೇಕು. ಗಿಡ್ಡಾಗಿ ರುವ ಹಸುವು ದಕ್ಷಿಣೆ. |

# ಅನುವಾಕದ ವಿಶೇಷ ವಿಷಯಗಳು

## ಅ) ಮೀಮಾಂಸಾ

### ೧) ಸೌಮ್ಯಾದಿಯಾಗಗಳು ಉಪಸದಾದಿಗಳ ಅಂಗಗಳೇ? [ಜ್ಯೈ.ಸೂ. 4.4.]

'ಪುರಸ್ತಾದುಪಸದಾಗ್ಂ ಸೌಮ್ಯೇನ ಪ್ರಚರತಿ' ಎಂಬುದಾಗಿ ಸೌಮ್ಯಾದಿಗಳಿಗೆ ಕಾಲವನ್ನು ಹೇಳಿರುತ್ತಾರೆ. ಈ ಸೌಮ್ಯಾದಿಗಳು ಉಪಸದಾದಿಗಳಿಗೆ ಅಂಗಗಳೇ ಅಲ್ಲವೇ? ಇದು ಇಲ್ಲಿನ ಸಂಶಯ.

ವಾಕ್ಯದಿಂದ ಇವು ವಿಹಿತವಾಗಿರುವುದರಿಂದ ಇವು ಉಪಸದಾದಿಗಳಿಗೆ ಅಂಗಗಳು. ಇದು ಇಲ್ಲಿನ ಪೂರ್ವಪಕ್ಷ.

'ಪುರಸ್ತಾತ್ ಉಪಸದಾಮ್' ಎಂಬ ವಾಕ್ಯದಲ್ಲಿ 'ಉಪಸದಾಮ್' ಎಂಬ ಷಷ್ಠೀವಿಭಕ್ತ್ಯಂತವಾದ ಪದಕ್ಕೆ 'ಪುರಸ್ತಾತ್' ಎಂಬ ಕಾಲವಾಚಕದೊಡನೆ ಸಂಬಂಧವಿದೆ. ಆದುದರಿಂದ ಈ ವಾಕ್ಯವು ಕಾಲಸಂಬಂಧವನ್ನು ಮಾತ್ರ ತಿಳಿಸುತ್ತದೆ. ಅಂಗಾಂಗಿ ಭಾವವನ್ನಲ್ಲ. ಆದುದರಿಂದ ಸೌಮ್ಯಾದಿಗಳೂ ಸಹ ಇತರ ಸಂಸ್ಕೃಪಗಳಂತೆ ಪ್ರಧಾನವೇ. ಇದು ಇಲ್ಲಿನ ಸಿದ್ಧಾಂತ.

★★★

# ॥ ಅಷ್ಟಾದಶೋऽನುವಾಕಃ ॥

ಸದ್ಯೋ ದೀಕ್ಷಯಂತಿ ಸದ್ಯಸ್ಸೋಮಂ ಕ್ರೀಣಂತಿ ಪುಂಡರಿ-
ಸ್ರಜಾಂ ಪ್ರಯಚ್ಛತಿ ದಶಭಿರ್ವತ್ಸತರೈಸ್ಸೋಮಂ ಕ್ರೀಣಾತಿ

---

**ಸದ್ಯಃ । ದೀಕ್ಷಯಂತಿ । ಸದ್ಯಃ । ಸೋಮಮ್ । ಕ್ರೀಣಂತಿ । ಪುಂಡರಿಸ್ರಜಾಮ್ । ಪ್ರೇತಿ । ಯಚ್ಛತಿ । ದಶಭಿರಿತಿ ದಶ-ಭಿಃ । ವತ್ಸತರೈಃ । ಸೋಮಮ್ । ಕ್ರೀಣಾತಿ ।**

---

ಹದಿನೇಳನೆಯ ಅನುವಾಕದಲ್ಲಿ ಪ್ರಜೆಗಳು ರಾಜನನ್ನು ಸೇವಿಸುವುದು ಉಕ್ತವಾಗಿದೆ. ಈ ಹದಿನೆಂಟನೆಯ ಅನುವಾಕದಲ್ಲಿ ದಶಪೇಯಸೋಮಯಾಗವು ಹೇಳಲ್ಪಡುತ್ತದೆ.

---

| **ಬ್ರಾಹ್ಮಣಭಾಗ** | **ವಿವರಣೆ** |
|---|---|
| ಸದ್ಯಃ ದೀಕ್ಷಯಂತಿ<br>ಸದ್ಯಃ ಸೋಮಮ್ ಕ್ರೀಣಂತಿ | ಏಕದಿನದಲ್ಲಿಯೇ ಯಜಮಾನನಿಗೆ ಯಜ್ಞ ದೀಕ್ಷೆಯನ್ನು ಕೊಡಬೇಕು. ಅಂದೇ ಸೋಮ ಕ್ರಯವನ್ನು ಮಾಡಬೇಕು.[ದೀಕ್ಷಾಕ್ರಯಗಳಿಗೆ ಒಂದೇ ದಿನದ ಕಾಲ. ಅಭಿಷೇಚನದಲ್ಲಿಯೇ ದಶಪೇಯಕ್ಕೂ ಕ್ರಯವನ್ನು ಹೇಳಲಾಗಿದೆ. **'ದಶಭಿಃ'** ಎಂಬುದು ಕ್ರಯವಿಶೇಷ.] |
| ಪುಂಡರಿಸ್ರಜಾಂ ಪ್ರಯಚ್ಛತಿ | [ದೀಕ್ಷಾಸ್ಥಾನದಲ್ಲಿ ಈ ವಿಶೇಷ] ಹನ್ನೆರಡು ತಾವರೆ ಹೂಗಳ ಮಾಲೆಯನ್ನು ಯಜಮಾನನಿಗೆ ಹಾಕಬೇಕು. |
| ದಶಭಿಃ ವತ್ಸತರೈಃ<br>ಸೋಮಂ ಕ್ರೀಣಾತಿ | ಹಾಲು ಕುಡಿಯುವುದನ್ನು ಬಿಟ್ಟಿರುವ ಹತ್ತು ಹೋರಿಕರುಗಳಿಂದ ಸೋಮಲತೆಯನ್ನು ಕೊಳ್ಳಬೇಕು. [ಪ್ರಕೃತಿಯಲ್ಲಿ ಹಿರಣ್ಯಾದಿ ದಶ ದ್ರವ್ಯಗಳಿಂದ ಕ್ರಯವನ್ನು ಹೇಳಿರುತ್ತಾರೆ.] |

ದಶಪೇಯೋ ಭವತಿ ಶತಂ ಬ್ರಾಹ್ಮಣಾಃ ಪಿಬಂತಿ ಸಪ್ತ-
ದಶಗ್ಗ್ಂ ಸ್ತೋತ್ರಂ ಭವತಿ ಪ್ರಾಕಾಶಾವಧ್ವರ್ಯವೇ ದದಾತಿ
ಸ್ರಜಮುದ್ಗಾತ್ರೇ ರುಕ್ಮಗ್ಂ ಹೋತ್ರೇಽಶ್ವಂ

---

ದಶಪೇಯ ಇತಿ ದಶ-ಪೇಯಃ । ಭವತಿ । ಶತಮ್ । ಬ್ರಾಹ್ಮಣಾಃ । ಪಿಬಂತಿ । ಸಪ್ತದಶಮಿತಿ ಸಪ್ತ-ದಶಮ್ । ಸ್ತೋತ್ರಮ್। ಭವತಿ । ಪ್ರಾಕಾಶೌ । ಅಧ್ವರ್ಯವೇ । ದದಾತಿ । ಸ್ರಜಮ್ । ಉದ್ಗಾತ್ರ ಇತ್ಯುತ್-ಗಾತ್ರೇ । ರುಕ್ಮಮ್ । ಹೋತ್ರೇ । ಅಶ್ವಮ್।

---

| | |
|---|---|
| ದಶಪೇಯಃ ಭವತಿ | [ಪ್ರಕೃತಿಯಾಗದಲ್ಲಿರುವ ಚಮಸಗಳಿಗಿಂತಲೂ ಅಧಿಕವಾಗಿ ಹತ್ತು ಚಮಸಗಳಲ್ಲಿ ಪ್ರತಿ ಚಮಸಕ್ಕೆ ಹತ್ತು ಜನರಂತೆ ಸೋಮಪಾನ ಮಾಡಬೇಕು.] ಹತ್ತು ಚಮಸಗಳಿಂದ ಸೋಮಪಾನ ಮಾಡುವುದರಿಂದ ಇದು '**ದಶಪೇಯ**'ವಾಗಿದೆ. |
| ಶತಂ ಬ್ರಾಹ್ಮಣಾಃ ಪಿಬಂತಿ | [ಪ್ರತಿ ಚಮಸಕ್ಕೆ ಹತ್ತು ಜನರಂತೆ] ನೂರು ಜನ ಬ್ರಾಹ್ಮಣರು ಸೋಮಪಾನ ಮಾಡಬೇಕು. |
| ಸಪ್ತದಶಂ ಸ್ತೋತ್ರಮ್ ಭವತಿ | [ತ್ರಿವೃದಾದಿಸ್ತೋಮಗಳ ಸ್ಥಾನದಲ್ಲಿ] ಬಹಿಷ್ಪವ ಮಾನಾದಿಗಳಲ್ಲಿ ಸಪ್ತದಶಸ್ತೋಮವನ್ನೇ ಗಾನ ಮಾಡಬೇಕು. |

**ಋತ್ವಿಜರಿಗೆ ದಕ್ಷಿಣಾವಿಶೇಷಗಳು**

| | |
|---|---|
| ಪ್ರಾಕಾಶೌ ಅಧ್ವರ್ಯವೇ ದದಾತಿ | ಅಧ್ವರ್ಯುವಿಗೆ ಚಿನ್ನದ ಕನ್ನಡಿಗಳನ್ನು ಕೊಡಬೇಕು. |
| ಉದ್ಗಾತ್ರೇ ಸ್ರಜಮ್ [ದದಾತಿ] | ಉದ್ಗಾತನಿಗೆ ಚಿನ್ನದ ಹಾರವನ್ನು ಕೊಡಬೇಕು. |
| ಹೋತ್ರೇ ರುಕ್ಮಮ್ [ದದಾತಿ] | ಹೋತೃವಿಗೆ ವರ್ತುಲವಾಗಿರುವ ಚಿನ್ನದ ಆಭರಣ [ತೋಳುಬಂದಿ, ಕಂಕಣ ಇತ್ಯಾದಿ]ವನ್ನು ಕೊಡಬೇಕು. |

ಪ್ರಸ್ತೋತೃಪ್ರತಿಹರ್ತೃಭ್ಯಾಂ ದ್ವಾದಶ ಪಷ್ಠೌಹೀರ್ಬ್ರಹ್ಮಣೇ
ವಶಾಂ ಮೈತ್ರಾವರುಣಾಯರ್ಷಭಂ ಬ್ರಾಹ್ಮಣಾಚ್ಛಗ್ಂ-
ಸಿನೇ ವಾಸಸೀ ನೇಷ್ಟಾಪೋತೃಭ್ಯಾಗ್ಂ ಸ್ಥೂರಿ ಯವಾಚಿತ-
ಮಚ್ಛಾವಾಕಾಯಾನಡ್ವಾಹಮಗ್ನಿಧೇ

---

ಪ್ರಸ್ತೋತೃಪ್ರತಿಹರ್ತೃಭ್ಯಾಮಿತಿ ಪ್ರಸ್ತೋತೃಪ್ರತಿಹರ್ತೃ-ಭ್ಯಾಮ್ । ದ್ವಾದಶ । ಪಷ್ಠೌಹೀಃ। ಬ್ರಹ್ಮಣೇ । ವಶಾಮ್ । ಮೈತ್ರಾವರುಣಾಯೇತಿ ಮೈತ್ರಾ-ವರುಣಾಯ। ಋಷಭಮ್ । ಬ್ರಾಹ್ಮಣಾಚ್ಛಗ್ಂಸಿನೇ । ವಾಸಸೀ ಇತಿ । ನೇಷ್ಟಾಪೋತೃಭ್ಯಾಮಿತಿ ನೇಷ್ಟಾಪೋತೃ-ಭ್ಯಾಮ್। ಸ್ಥೂರಿ। ಯವಾಚಿತಮಿತಿ ಯವ-ಆಚಿತಮ್ । ಅಚ್ಛಾವಾಕಾಯ। ಅನಡ್ವಾಹಮ್ । ಅಗ್ನೀಧ ಇತ್ಯಗ್ನಿ-ಇಧೇ ।

---

| | |
|---|---|
| ಪ್ರಸ್ತೋತೃಪ್ರತಿಹರ್ತೃಭ್ಯಾಮ್ ಅಶ್ವಮ್ [ದದಾತಿ] | ಪ್ರಸ್ತೋತಾ, ಪ್ರತಿಹರ್ತಾ-ಇವರಿಗೆ ಒಂದು ಕುದುರೆಯನ್ನು ಕೊಡಬೇಕು. |
| ಬ್ರಹ್ಮಣೇ ದ್ವಾದಶ ಪಷ್ಠೌಹೀಃ [ದದಾತಿ] | ಬ್ರಹ್ಮನಿಗೆ ಹನ್ನೆರಡು ಬಾಲಗರ್ಭಿಣೀ ಗೋವುಗಳನ್ನು ಕೊಡಬೇಕು. |
| ಮೈತ್ರಾವರುಣಾಯ ವಶಾಮ್ [ದದಾತಿ] | ಮೈತ್ರಾವರುಣನಿಗೆ ಬಂಜೆಯಾದ ಹಸುವನ್ನು ದಾನ ಮಾಡಬೇಕು. [ವಶಾ=ಹೆಣ್ಣಾನೆ ಎಂಬ ಅರ್ಥವೂ ಇದೆ] |
| ಬ್ರಾಹ್ಮಣಾಚ್ಛಂಸಿನೇ ಋಷಭಮ್ [ದದಾತಿ] | ಬ್ರಾಹ್ಮಣಾಚ್ಛಂಸಿಯೆಂಬ ಋತ್ವಿಜನಿಗೆ ಗೂಳಿಯನ್ನು ನೀಡಬೇಕು. |
| ನೇಷ್ಟಾಪೋತೃಭ್ಯಾಮ್ ವಾಸಸೀ [ದದಾತಿ] | ನೇಷ್ಟಾ ಮತ್ತು ಪೋತಾ ಎಂಬ ಋತ್ವಿಜರಿಗೆ ಒಂದೊಂದು ವಸ್ತ್ರವನ್ನು ಕೊಡಬೇಕು. |
| ಅಚ್ಛಾವಾಕಾಯ ಸ್ಥೂರಿ ಯವಾಚಿತಮ್ [ದದಾತಿ] | ಅಚ್ಛಾವಾಕನಿಗೆ ಸ್ಥೂಲವಾದ, ಯವಧಾನ್ಯದಿಂದ ತುಂಬಿದ ಬಂಡಿಯನ್ನು ಕೊಡಬೇಕು. |
| ಅಗ್ನೀಧೇ ಅನಡ್ವಾಹಮ್ [ದದಾತಿ] | ಅಗ್ನೀಧ್ರನಿಗೆ ಗಾಡಿಯನ್ನು ಎಳೆಯುವ ಸಾಮರ್ಥ್ಯವುಳ್ಳ ಎತ್ತನ್ನು ದಾನವಾಗಿ ಕೊಡಬೇಕು. |

ಭಾರ್ಗವೋ ಹೋತಾ ಭವತಿ ಶ್ರಾಯಂತೀಯಂ ಬ್ರಹ್ಮ-ಸಾಮಂ ಭವತಿ ವಾರವಂತೀಯಮಗ್ನಿಷ್ಟೋಮಸಾಮಗ್ಂ ಸಾರಸ್ವತೀರಪೋ ಗೃಹ್ಣಾತಿ ॥ ೧೮-34 ॥

[ವಾರವಂತೀಯಂ ಚತ್ವಾರಿ ಚ ।]

---

ಭಾರ್ಗವಃ । ಹೋತಾ । ಭವತಿ । ಶ್ರಾಯಂತೀಯಮ್ । ಬ್ರಹ್ಮಸಾಮಮಿತಿ ಬ್ರಹ್ಮ-ಸಾಮಮ್ । ಭವತಿ । ವಾರವಂತೀಯಮಿತಿ ವಾರ-ವಂತೀಯಮ್ । ಅಗ್ನಿಷ್ಟೋಮ ಸಾಮಮಿತ್ಯಗ್ನಿಷ್ಟೋಮ-ಸಾಮಮ್ । ಸಾರಸ್ವತೀಃ । ಅಪಃ । ಗೃಹ್ಣಾತಿ ॥ ೧೮ ॥

---

**ಕೆಲವು ವಿಶೇಷಧರ್ಮಗಳು**

| | |
|---|---|
| ಭಾರ್ಗವಃ ಹೋತಾ ಭವತಿ | [ಈ ದಶಪೇಯದಲ್ಲಿ] ಭಾರ್ಗವಗೋತ್ರದವನೇ ಹೋತೃವಾಗಿರಬೇಕು. |
| ಶ್ರಾಯಂತೀಯಮ್ ಬ್ರಹ್ಮಸಾಮಂ ಭವತಿ | [ಬ್ರಾಹ್ಮಣಾಚ್ಛಂಸಿಗೆ ಸಂಬಂಧಿಸಿದ ಆಜ್ಯ ಸ್ತೋತ್ರದಲ್ಲಿ ಪ್ರಕೃತಿಯಾಗದಲ್ಲಿನ ಗಾಯತ್ರ ಸಾಮದ ಸ್ಥಾನದಲ್ಲಿ] ಶ್ರಾಯಂತೀಯಸಾಮ ವನ್ನು ಗಾನ ಮಾಡಬೇಕು. |
| ವಾರವಂತೀಯಮ್ ಅಗ್ನಿಷ್ಟೋಮ ಸಾಮಮ್ | [ಅಗ್ನಿಷ್ಟೋಮದಲ್ಲಿನ ಸ್ತೋತ್ರವಾದ ಯಜ್ಞಾ ಯಜ್ಞಿಯ ಸಾಮದ ಸ್ಥಾನದಲ್ಲಿ] ವಾರವಂತೀಯ ಸಾಮವನ್ನು ಗಾನ ಮಾಡಬೇಕು. |
| ಸಾರಸ್ವತೀಃ ಅಪಃ ಗೃಹ್ಣಾತಿ | ['ವಹಂತೀನಾಮ್ ಗೃಹ್ಣಾತಿ' ಎಂಬ ವಚನದಂತೆ ವಸತೀವರಿಗಳಿಗಾಗಿ ಪ್ರವಾಹಮಾತ್ರದಿಂದ ತರುವ ನೀರಿನ ಸ್ಥಾನದಲ್ಲಿ] ಸರಸ್ವತೀನದಿಯ ನೀರನ್ನು ತರಬೇಕು. |

---

**ತಾತ್ಪರ್ಯ:** ಪ್ರಕೃತಿಯಾಗದಂತೆ ಪ್ರಾಪ್ತವಾಗುವ ದಕ್ಷಿಣೆಗಳ ಸ್ಥಾನದಲ್ಲಿ ವಿಶೇಷದಕ್ಷಿಣೆ ಗಳನ್ನು ಹೇಳಿರುತ್ತಾರೆ. ಒಬ್ಬರಿಗೆ ಒಂದನ್ನು ಕೊಡಬೇಕೆಂಬುದು ಸಾಮಾನ್ಯನಿಯಮ. 'ಪ್ರಸ್ತೋತೃಪ್ರತಿಹರ್ತೃಭ್ಯಾಮ್' ಎಂಬ ವಿಧಿಯು ಇಬ್ಬರಿಗೆ ಒಂದು ಕುದುರೆಯನ್ನು ಕೊಡಬೇಕೆಂದು ಹೇಳಿದೆ. ಇದು ವಾಚನಿಕ.

# ಅನುವಾಕದ ವಿಶೇಷ ವಿಷಯಗಳು

## ಅ) ಮೀಮಾಂಸಾ

**೧) ಅಭಿಷೇಚನೀಯ-ದಶಪೇಯಗಳ ಅಂಗಾನುಷ್ಠಾನವು ಹೇಗೆ? [ಜೈ.ಸೂ. 11.2.]**

ರಾಜಸೂಯದಲ್ಲಿ ಎರಡು ಸೋಮಯಾಗಗಳಿವೆ. ಅವು ಅಭಿಷೇಚನೀಯ ಮತ್ತು ದಶಪೇಯ. ಈ ಎರಡೂ ಸೋಮಯಾಗಗಳ ಅಂಗಾನುಷ್ಠಾನವನ್ನು ಹೇಗೆ ಮಾಡಬೇಕು? ಎಂದು ಸಂಶಯ. ಈ ಸಂಶಯಕ್ಕೆ ಕಾರಣವಿದೆ. **'ಸಹ ಸೋಮೌ ಕ್ರೀಣಾತಿ'** ಎಂಬುದಾಗಿ ಎರಡೂ ಯಾಗಗಳಿಗೂ ಒಟ್ಟಿಗೇ ಸೋಮಕ್ರಯವನ್ನು ಮಾಡಬೇಕೆಂದು ಹೇಳಿದೆ. ಸೋಮಕ್ರಯವನ್ನು ಒಟ್ಟಿಗೆ ಮಾಡುವ ವಿಧಿ ಇರುವುದರಿಂದ ಕ್ರಯಕ್ಕಿಂತಲೂ ಮೊದಲು ಇರುವ ಅಂಗಗಳನ್ನು ತಂತ್ರದಿಂದ ಅನುಷ್ಠಿಸಬೇಕಾಗುತ್ತದೆ. **'ಅನೇಕೋದ್ದೇಶೇನ ಸಕೃದನುಷ್ಠಾನಂ ತಂತ್ರಮ್'.** ಹೀಗಾಗಿ ಕ್ರಯಕ್ಕೆ ಸಾಹಿತ್ಯವಿರುವಂತೆ ಅದರ ಪೂರ್ವಭಾವಿಯಾದ ಅಂಗಗಳಿಗೂ ಸಾಹಿತ್ಯವೇ [ಒಟ್ಟಿಗೇ ಇರುವಿಕೆ] ಯುಕ್ತ. ಇದು ಇಲ್ಲಿನ ಪೂರ್ವಪಕ್ಷ.

ಅನುಷ್ಠಾನಕ್ರಮದಲ್ಲಿ ಮೊದಲು ಅಭಿಷೇಚನೀಯ, ಬಳಿಕ ಸಂಸೃಪಹವಿಸ್ಸುಗಳು, ಅನಂತರ ದಶಪೇಯ ಎಂಬುದಾಗಿ ಇದೆ. ಹೀಗಾದುದರಿಂದ ಅಭಿಷೇಚನೀಯ ಸೋಮಯಾಗಕ್ಕೂ ದಶಪೇಯಕ್ಕೂ ಅನುಷ್ಠಾನದಲ್ಲಿ ಕಾಲಭೇದವು ಇದೆ. ಹೀಗಾಗಿ ತಂತ್ರದಿಂದ ಅಂಗಗಳ ಅನುಷ್ಠಾನ ಆಗುವುದಿಲ್ಲ. ಅಲ್ಲದೆ ದಶಪೇಯದಲ್ಲಿ **'ಸದ್ಯಃ ಸೋಮಂ ಕ್ರೀಣಂತಿ'** ಎಂಬುದಾಗಿ ಕ್ರಯಕ್ಕೆ ದೀಕ್ಷೆಯೊಡನೆ ಸಮಾನಕಾಲವನ್ನು ಹೇಳಿರುತ್ತಾರೆ. ಹೀಗಾಗಿ **'ಸಹ ಸೋಮೌ ಕ್ರೀಣಾತಿ'** ಎಂಬ ವಚನಕ್ಕೆ ಅಭಿಷೇಚನೀಯ ಮತ್ತು ದಶಪೇಯಗಳಿಗಾಗಿ ಮಾಡಬೇಕಾದ ಕ್ರಯಸಂವಾದದಲ್ಲಿ ಮಾತ್ರ ಸಾಹಿತ್ಯ. ಇತರ ಅಂಗಗಳನ್ನು ಪ್ರತ್ಯೇಕವಾಗಿಯೇ ಅನುಷ್ಠಿಸಬೇಕು. ಇದು ಇಲ್ಲಿನ ಸಿದ್ಧಾಂತ.

**೨) ದಶಪೇಯದಲ್ಲಿ ಒಂಬತ್ತು ಜನರು ಯಾರು? [ಜೈ.ಸೂ.3.5]**

**'ದಶ ದಶ ಏಕೈಕಂ ಚಮಸಮನುಸರ್ಪಂತಿ'** [ಆಪ. ಶ್ರೌ.ಸೂ. 18-21-3] ಎಂಬ ವಚನವಿದೆ. ದಶಪೇಯದಲ್ಲಿ ಒಂದೊಂದು ಚಮಸದಲ್ಲಿ ಹತ್ತು ಹತ್ತು ಜನರು ಸೋಮಭಕ್ಷಣವನ್ನು ಮಾಡಬೇಕೆಂಬ ವಿಧಿಯಿದೆ. ಇಲ್ಲಿ ಕ್ಷತ್ರಿಯನು ಯಜಮಾನನಾದುದರಿಂದ, ಪ್ರಕೃತಿಯಾಗದಲ್ಲಿ ಯಜಮಾನನ ಚಮಸದಲ್ಲಿ ಉಳಿದ ಜಾತಿಯವರಿಗೆ ಭಕ್ಷಣವಿಲ್ಲದಿರುವುದರಿಂದ, ದಶಪೇಯದಲ್ಲಿ ಉಳಿದ ಒಂಬತ್ತು ಜನರೂ ಕ್ಷತ್ರಿಯರೇ ಆಗಬೇಕು. ಇದು ಇಲ್ಲಿನ ಪೂರ್ವಪಕ್ಷ.

ಪ್ರಕೃತಿಯಲ್ಲಿ ಬ್ರಾಹ್ಮಣಭಿನ್ನಜಾತಿಯವರಿಗೆ ಚಮಸಭಕ್ಷಣವಿಲ್ಲ. ಇಲ್ಲಿ 'ಶತಂ ಬ್ರಾಹ್ಮಣಾಃ ಪಿಬಂತಿ' ಎಂಬ ಸ್ಪಷ್ಟವಚನವೇ ಇದೆ. ಆದುದರಿಂದ ಯಜಮಾನನಾದ ಕ್ಷತ್ರಿಯನಿಗೇ ಭಕ್ಷಣವಿಲ್ಲದಿರುವಾಗ ಉಳಿದವರಿಗೆ ಭಕ್ಷಣದ ಪ್ರಸಕ್ತಿಯೇ ಇಲ್ಲ. ಇದು ಇಲ್ಲಿನ ಸಿದ್ಧಾಂತ.

**೩) 'ಪ್ರಾಕಾಶೌ......' ಎಂಬಲ್ಲಿ ಯಾವ ದಕ್ಷಿಣೆಗೆ ಬಾಧ? [ಜೈ.ಸೂ. 10-3]**

**'ಪ್ರಾಕಾಶೌ ಅಧ್ವರ್ಯವೇ ದದಾತಿ'** ಎಂಬ ವಚನದಿಂದ ಪ್ರಕೃತಿಯಾಗದಿಂದ ಪ್ರಾಪ್ತವಾದ ಎಲ್ಲ ದಕ್ಷಿಣೆಗಳಿಗೂ ಬಾಧ. ಇದು ಇಲ್ಲಿನ ಪೂರ್ವಪಕ್ಷ.

ವಚನದಲ್ಲಿ 'ಅಧ್ವರ್ಯವೇ' ಎಂಬ ಚತುರ್ಥೀವಿಭಕ್ತಿ ಇರುವುದರಿಂದ ಅಧ್ವರ್ಯುದಕ್ಷಿಣೆಗೆ ಮಾತ್ರ ಬಾಧ ಬರುತ್ತದೆ. ಇದು ಇಲ್ಲಿನ ಸಿದ್ಧಾಂತ.

★★★



# ॥ ಏಕೋನವಿಂಶೋಽನುವಾಕಃ ॥

ಆಗ್ನೇಯಮಷ್ಟಾಕಪಾಲಂ ನಿರ್ವಪತಿ ಹಿರಣ್ಯಂ ದಕ್ಷಿಣೈಂದ್ರ-
ಮೇಕಾದಶಕಪಾಲಮೃಷಭೋ ದಕ್ಷಿಣಾ ವೈಶ್ವದೇವಂ ಚರುಂ
ಪಿಶಂಗೀ ಪಷ್ಠೌಹೀ ದಕ್ಷಿಣಾ

---

**ಆಗ್ನೇಯಮ್ । ಅಷ್ಟಾಕಪಾಲಮಿತ್ಯಷ್ಟಾ-ಕಪಾಲಮ್ । ನಿರಿತಿ । ವಪತಿ । ಹಿರಣ್ಯಮ್। ದಕ್ಷಿಣಾ। ಐಂದ್ರಮ್ । ಏಕಾದಶಕಪಾಲಮಿತ್ಯೇಕಾದಶ-ಕಪಾಲಮ್। ಋಷಭಃ । ದಕ್ಷಿಣಾ। ವೈಶ್ವದೇವಮಿತಿ ವೈಶ್ವ-ದೇವಮ್ । ಚರುಮ್ । ಪಿಶಂಗೀ । ಪಷ್ಠೌಹೀ । ದಕ್ಷಿಣಾ ।**

---

ಹದಿನೆಂಟನೆಯ ಅನುವಾಕದಲ್ಲಿ ದಶಪೇಯವು ಹೇಳಲ್ಪಟ್ಟಿತು. ಈ ಹತ್ತೊಂಬತ್ತನೆಯ ಅನುವಾಕದಲ್ಲಿ ದಿಶಾಮವೇಷ್ಟಿಗಳೂ, ಪಶುದ್ವಯವೂ, ಸಾತ್ಯದೂತಹವಿಸ್ಸುಗಳೂ ಹೇಳಲ್ಪಟ್ಟಿವೆ.

---

**ದಿಶಾಮ ವೇಷ್ಟಿಹವಿಸ್ಸುಗಳು**

| | |
|---|---|
| **೧) ಆಗ್ನೇಯಮ್ ಅಷ್ಟಾಕಪಾಲಮ್ ನಿರ್ವಪತಿ ಹಿರಣ್ಯಮ್ ದಕ್ಷಿಣಾ** | ಅಷ್ಟಾಕಪಾಲಪುರೋಡಾಶದ್ರವ್ಯಕವಾದ ಅಗ್ನಿ ದೇವತಾಕವಾದ ಯಾಗವನ್ನು ಮಾಡಬೇಕು. ಈ ಯಾಗಕ್ಕೆ ಹಿರಣ್ಯವು ದಕ್ಷಿಣೆ. |
| **೨) ಐಂದ್ರಮ್ ಏಕಾದಶಕಪಾಲಮ್ [ನಿರ್ವಪತಿ]** | ಹನ್ನೊಂದು ಕಪಾಲಗಳಲ್ಲಿ ಪಕ್ವವಾದ ಪುರೋಡಾಶವುಳ್ಳ ಇಂದ್ರದೇವತಾಕವಾದ ಯಾಗವನ್ನು ಮಾಡಬೇಕು. |
| **ಋಷಭಃ ದಕ್ಷಿಣಾ** | ಇದಕ್ಕೆ ಹೋರಿಯು ದಕ್ಷಿಣೆ. |
| **೩) ವೈಶ್ವದೇವಮ್ ಚರುಮ್ [ನಿರ್ವಪತಿ] ಪಿಶಂಗೀ ಪಷ್ಠೌಹೀ ದಕ್ಷಿಣಾ** | ಚರುದ್ರವ್ಯದಿಂದ ವಿಶ್ವೇದೇವದೇವತೆಗಳಿಗೆ ಯಾಗಮಾಡಬೇಕು. ಪಚ್ಚೆಯ ಬಣ್ಣದ ಬಾಲ ಗರ್ಭಿಣಿಯಾದ ಗೋವು ಇದರ ದಕ್ಷಿಣೆ. |

ಮೈತ್ರಾವರುಣೀಮಾಮಿಕ್ಷಾಂ ವಶಾ ದಕ್ಷಿಣಾ ಬಾರ್ಹಸ್ಪತ್ಯಂ ಚರುಗ್ಂ ಶಿತಿಪೃಷ್ಠೋ ದಕ್ಷಿಣಾಽಽದಿತ್ಯಾಂ ಮಲ್ಹಾಂ ಗರ್ಭಿಣೀಮಾಲಭತೇ ಮಾರುತೀಂ ಪೃಶ್ನಿಂ ಪಷ್ಠೌಹೀ-

---

**ಮೈತ್ರಾವರುಣೀಮಿತಿ ಮೈತ್ರಾ-ವರುಣೀಮ್ । ಆಮಿಕ್ಷಾಮ್ । ವಶಾ । ದಕ್ಷಿಣಾ ಬಾರ್ಹಸ್ಪತ್ಯಮ್ । ಚರುಮ್ । ಶಿತಿಪೃಷ್ಠ ಇತಿ ಶಿತಿ-ಪೃಷ್ಠಃ । ದಕ್ಷಿಣಾ । ಆದಿತ್ಯಾಮ್ । ಮಲ್ಹಾಮ್ । ಗರ್ಭಿಣೀಮ್ । ಐತಿ । ಲಭತೇ । ಮಾರುತೀಮ್ । ಪೃಶ್ನಿಮ್ । ಪಷ್ಠೌಹೀಮ್ ।**

---

| | |
|---|---|
| ೪) ಮೈತ್ರಾವರುಣೀಮ್ ಆಮಿಕ್ಷಾಮ್ [ನಿರ್ವಪತಿ] | ಮಿತ್ರಾವರುಣದೇವತಾಕವಾದ ಆಮಿಕ್ಷಾದ್ರವ್ಯಕ ವಾದ ಯಾಗ ಮಾಡಬೇಕು. |
| ವಶಾ ದಕ್ಷಿಣಾ | ಬಂಜೆ ಹಸುವು ಇದರ ದಕ್ಷಿಣೆ. |
| ೫) ಬಾರ್ಹಸ್ಪತ್ಯಮ್ ಚರುಮ್ [ನಿರ್ವಪತಿ] | ಬೃಹಸ್ಪತಿದೇವತಾಕವಾದ ಚರುದ್ರವ್ಯವುಳ್ಳ ಯಾಗವನ್ನು ಮಾಡಬೇಕು. |
| ಶಿತಿಪೃಷ್ಠಃ ದಕ್ಷಿಣಾ | ಬೆನ್ನಿನ ಮೇಲೆ ಬಿಳಿಯ ಬಣ್ಣವುಳ್ಳ ಗೋವನ್ನು ದಕ್ಷಿಣೆಯನ್ನಾಗಿ ನೀಡಬೇಕು. |

**ದ್ವಿಪಶುಕಯಾಗ**

| | |
|---|---|
| ಆದಿತ್ಯಾಮ್ ಮಲ್ಹಾಮ್ ಗರ್ಭಿಣೀಮ್ ಆಲಭತೇ | ಅದಿತಿದೇವತಾಕವಾದ, ಕುತ್ತಿಗೆಯಲ್ಲಿ ಮೊಲೆ ಯಂತಹ ಅವಯವವುಳ್ಳ, ಗರ್ಭಿಣಿಯಾದ ಆಡನ್ನು ಆಲಂಭನ ಮಾಡಿ ಯಾಗವನ್ನು ಮಾಡ ಬೇಕು. |
| ಮಾರುತೀಮ್ ಪೃಶ್ನಿಮ್ ಪಷ್ಠೌಹೀಮ್ [ಆಲಭತೇ] | ಮರುದ್ದೇವತಾಕವಾದ, ಅಲ್ಪವಾದ ಶರೀರವುಳ್ಳ ಅಥವಾ ಬಿಳಿಯ ಬಣ್ಣದ ಐದು ವರ್ಷದ ಪಶುಯುಕ್ತವಾದ ಯಾಗವನ್ನು ಮಾಡಬೇಕು. |

---

ಇಲ್ಲಿ 'ಪಷ್ಠೌಹೀ' ಎಂಬ ಶಬ್ದಕ್ಕೆ ಬಾಲಗರ್ಭಿಣೀ ಎಂಬ ಅರ್ಥವು ಹೊಂದುವುದಿಲ್ಲ. **'ಅಗರ್ಭಾ ಮಾರುತೀ'** ಎಂಬುದಾಗಿ ಅನುಬ್ರಾಹ್ಮಣವು ಹೇಳುತ್ತದೆ. ಆದುದರಿಂದ ಐದು ವರ್ಷದ ಪಶು ಎಂಬ ಅರ್ಥವು ಇಲ್ಲಿಗೆ ಹೊಂದುತ್ತದೆ.

ಮಶ್ವಿಭ್ಯಾಂ ಪೂಷ್ಣೇ ಪುರೋಡಾಶಂ ದ್ವಾದಶಕಪಾಲಂ ನಿರ್ವಪತಿ ಸರಸ್ವತೇ ಸತ್ಯವಾಚೇ ಚರುಗ್ಂ ಸವಿತ್ರೇ ಸತ್ಯ ಪ್ರಸವಾಯ ಪುರೋಡಾಶಂ ದ್ವಾದಶಕಪಾಲಂ ತಿಸೃಧನ್ವಗ್ಂ ಶುಷ್ಕದೃತಿರ್ದಕ್ಷಿಣಾ ॥ ೧೯-35 ॥

**[ಆಗ್ನೇಯಗ್ಂ ಹಿರಣ್ಯಮೈಂದ್ರಮೃಷಭೋ ವೈಶ್ವದೇವಂ ಪಿಶಂಗೀ ಬಾರ್ಹಸ್ಪತ್ಯಗ್ಂ ಸಪ್ತಚತ್ವಾರಿಗ್ಂಶತ್ ॥]**

---

ಅಶ್ವಿಭ್ಯಾಮಿತ್ಯಶ್ವಿ-ಭ್ಯಾಮ್ । ಪೂಷ್ಣೇ । ಪುರೋಡಾಶಮ್ । ದ್ವಾದಶಕಪಾಲಮಿತಿ ದ್ವಾದಶ-ಕಪಾಲಮ್ । ನಿರಿತಿ । ವಪತಿ । ಸರಸ್ವತೇ । ಸತ್ಯವಾಚ ಇತಿ ಸತ್ಯ-ವಾಚೇ । ಚರುಮ್ । ಸವಿತ್ರೇ । ಸತ್ಯಪ್ರಸವಾಯೇತಿ ಸತ್ಯ-ಪ್ರಸವಾಯ । ಪುರೋಡಾಶಮ್ । ದ್ವಾದಶಕಪಾಲಮಿತಿ ದ್ವಾದಶ-ಕಪಾಲಮ್। ತಿಸೃಧನ್ವಮಿತಿ ತಿಸೃ-ಧ್ವನ್ವಮ್। ಶುಷ್ಕದೃತಿ-ರಿತಿ ಶುಷ್ಕ-ದೃತಿಃ । ದಕ್ಷಿಣಾ ॥ ೧೯ ॥

---

| | |
|---|---|
| ೧) ಅಶ್ವಿಭ್ಯಾಮ್ ಪೂಷ್ಣೇ[ಚ] ಪುರೋಡಾಶಮ್ ದ್ವಾದಶಕಪಾಲಮ್ ನಿರ್ವಪತಿ | ಅಶ್ವಿನೀದೇವತೆಗಳಿಗೂ, ಪೂಷದೇವನಿಗೂ ದ್ವಾದಶಕಪಾಲಪುರೋಡಾಶಯುಕ್ತವಾದ ಇಷ್ಟಿಯನ್ನು ಮಾಡಬೇಕು. |
| ೨) ಸರಸ್ವತೇ ಸತ್ಯವಾಚೇ ಚರುಮ್ [ನಿರ್ವಪತಿ] | ಸತ್ಯವಾಕ್ ಆದ ಸರಸ್ವದ್ದೇವನಿಗೆ ಚರು ಯಾಗವನ್ನು ಮಾಡಬೇಕು. |
| ೩) ಸತ್ಯಪ್ರಸವಾಯ ಸವಿತ್ರೇ ದ್ವಾದಶಕಪಾಲಮ್ ಪುರೋಡಾಶಮ್ [ನಿರ್ವಪತಿ] | ಸತ್ಯವಾದ ಅನುಜ್ಞೆಯುಳ್ಳ ಸವಿತೃದೇವನಿಗೆ ದ್ವಾದಶಕಪಾಲಪುರೋಡಾಶಯುಕ್ತವಾದ ಹವಿರ್ಯಾಗವನ್ನು ಮಾಡಬೇಕು. |
| ತಿಸೃಧನ್ವಮ್ ಶುಷ್ಕದೃತಿಃ ದಕ್ಷಿಣಾ | ಮೂರು ಬಾಣಗಳಿಂದ ಕೂಡಿದ ಬಿಲ್ಲನ್ನೂ, ಬಾಣಗಳನ್ನಿಡುವ ಶುಷ್ಕವಾದ ಚರ್ಮಚೀಲ ವನ್ನೂ ದಕ್ಷಿಣೆಯನ್ನಾಗಿ ನೀಡಬೇಕು. |

# ಅನುವಾಕದ ವಿಶೇಷ ವಿಷಯಗಳು

## ಅ) ಮೀಮಾಂಸಾ

**೧) ರಾಜಸೂಯಯಾಗದಲ್ಲಿ ಅಧಿಕಾರ ಯಾರಿಗೆ? [ಜೈ.ಸೂ. 2.3.]**

ದಿಶಾಮವೇಷ್ಟಿಯಾಗಗಳಿಗೆ ಸಂಬಂಧಿಸಿದಂತೆ 'ಯದಿ ಬ್ರಾಹ್ಮಣೋ ಯಜೇತ' ಎಂದು ಇಷ್ಟಿಕ್ರಮವೈವಿಧ್ಯವನ್ನು ಹೇಳಲಾಗಿದೆ. ಇದರಿಂದಲೂ, ಬ್ರಾಹ್ಮಣ-ವೈಶ್ಯರಿಗೆ ರಾಜ್ಯಸಂಬಂಧವಿರುವುದರಿಂದಲೂ 'ರಾಜಾ ರಾಜಸೂಯೇನ ಸಾಮ್ರಾಜ್ಯಕಾಮೋ ಯಜೇತ' ಎಂಬ ವಾಕ್ಯದಲ್ಲಿ 'ರಾಜ' ಶಬ್ದದಿಂದ ಬ್ರಾಹ್ಮಣ-ವೈಶ್ಯರನ್ನೂ ಗ್ರಹಿಸಿ ಅವರಿಗೂ ರಾಜಸೂಯದಲ್ಲಿ ಅಧಿಕಾರವಿದೆಯೆಂದು ಇಲ್ಲಿನ ಪೂರ್ವಪಕ್ಷ.

'ರಾಜ' ಶಬ್ದವು ಕ್ಷತ್ರಿಯಜಾತಿಯಲ್ಲಿ ರೂಢವಾಗಿದೆ. ಆದುದರಿಂದ ಬ್ರಾಹ್ಮಣ-ವೈಶ್ಯರಿಗೆ ರಾಜ್ಯಸಂಬಂಧವೊದಗಿದರೂ ಅದು ಗೌಣ. ರಾಜಸೂಯಪ್ರಕರಣದಿಂದ ಬೇರೆಯಾಗಿ 'ಏಕಯಾ ಅನ್ನಾದ್ಯಕಾಮಂ ಯಾಜಯೇತ್' ಎಂದು ವಿಹಿತವಾದ ಅವೇಷ್ಟಿ ಯಾಗಗಳಲ್ಲಿ ಬ್ರಾಹ್ಮಣ-ವೈಶ್ಯರಿಗೂ ಅಧಿಕಾರವುಂಟು. ಆದರೆ ರಾಜಸೂಯದಲ್ಲಿ ಅಧಿಕಾರವಿಲ್ಲ. ಇದು ಇಲ್ಲಿನ ಸಿದ್ಧಾಂತ.

**೨) ಅವೇಷ್ಟಿಯಾಗಗಳಲ್ಲಿ ಅಂಗಗಳ ಅನುಷ್ಠಾನ ಹೇಗೆ? [ಜೈ.ಸೂ. 11.4.]**

ಅವೇಷ್ಟಿಯಾಗಗಳಲ್ಲಿ ಅಂಗಗಳನ್ನು ತಂತ್ರದಿಂದ ಅನುಷ್ಠಾನ ಮಾಡಬೇಕೆ? ಅಥವಾ ಪ್ರಯೋಗಭೇದದಿಂದ ಆಚರಿಸಬೇಕೆ? ಇದು ಇಲ್ಲಿನ ಸಂಶಯ.

'ಯದಿ ಬ್ರಾಹ್ಮಣೋ ಯಜೇತ ಬಾರ್ಹಸ್ಪತ್ಯಂ ಮಧ್ಯೇ ನಿದಧ್ಯಾತ್' ಎಂದು ಹೇಳಿರುವುದರಿಂದ ಪ್ರಯೋಗೈಕ್ಯವು ತೋರುತ್ತದೆ. ಹೀಗಾಗಿ ತಂತ್ರದಿಂದ ಅನುಷ್ಠಾನ. ಇದು ಇಲ್ಲಿನ ಪೂರ್ವಪಕ್ಷ.

ಇಲ್ಲಿಯ ಸಿದ್ಧಾಂತ ಹೀಗಿದೆ. 'ರಾಜಾ ರಾಜಸೂಯೇನ ಸಾಮ್ರಾಜ್ಯಕಾಮೋ ಯಜೇತ' ಎಂದಿರುವುದರಿಂದ ಕ್ಷತ್ರಿಯನಿಗೆ ಮಾತ್ರ ಅಧಿಕಾರವಿದೆ. ಅನ್ನಾದ್ಯಕಾಮನೆ ಯಿಂದ ಮಾಡುವ ಅವೇಷ್ಟಿಯಾಗದಲ್ಲಿ ವರ್ಣತ್ರಯದವರಿಗೂ ಅಧಿಕಾರ. ಆದುದರಿಂದ ರಾಜಸೂಯಯಾಗಾಂಗವಾದ ಅವೇಷ್ಟಿಯಲ್ಲಿ ಪ್ರಯೋಗಭೇದ. ಬಹಿಷ್ಪ್ರಯೋಗದಲ್ಲಿ ತಂತ್ರದಿಂದ ಅಂಗಾನುಷ್ಠಾನ.

★ ★ ★

# ॥ ವಿಂಶೋಽನುವಾಕಃ ॥

ಆಗ್ನೇಯಮಷ್ಟಾಕಪಾಲಂ ನಿರ್ವಪತಿ ಸೌಮ್ಯಂ ಚರುಗ್ಂ ಸಾವಿತ್ರಂ ದ್ವಾದಶಕಪಾಲಂ ಬಾರ್ಹಸ್ಪತ್ಯಂ ಚರುಂ ತ್ವಾಷ್ಟ್ರ-ಮಷ್ಟಾಕಪಾಲಂ

---

**ಆಗ್ನೇಯಮ್ । ಅಷ್ಟಾಕಪಾಲಮಿತ್ಯಷ್ಟಾ-ಕಪಾಲಮ್ । ನಿರಿತಿ । ವಪತಿ । ಸೌಮ್ಯಮ್। ಚರುಮ್ । ಸಾವಿತ್ರಮ್ । ದ್ವಾದಶಕಪಾಲಮಿತಿ ದ್ವಾದಶ-ಕಪಾಲಮ್ । ಬಾರ್ಹಸ್ಪ-ತ್ಯಮ್। ಚರುಮ್ । ತ್ವಾಷ್ಟ್ರಮ್ । ಅಷ್ಟಾಕಪಾಲಮಿತ್ಯಷ್ಟಾ-ಕಪಾಲಮ್ ।**

---

ಈ ಇಪ್ಪತ್ತನೆಯ ಅನುವಾಕದಲ್ಲಿ ಪ್ರಯುಜಹವಿಸ್ಸುಗಳು ಹೇಳಲ್ಪಟ್ಟಿವೆ. ಇವು ಹನ್ನೆರಡು. ಅವುಗಳಲ್ಲಿ ಸಾತ್ಯದೂತಹವಿಸ್ಸುಗಳ ಅನಂತರ ಅಪರಾಹ್ನದಲ್ಲಿ ಆಗ್ನೇಯಾದಿ ಆರು ಯಾಗಗಳನ್ನು ಮಾಡಬೇಕು. ಇದಕ್ಕೆ ರಥವಾಹನವನ್ನು ಎಳೆಯುವ ಬಲಭಾಗದ ಎತ್ತು ದಕ್ಷಿಣೆ.

**ಪ್ರಯುಜಹವಿಸ್ಸುಗಳು**

| | |
|---|---|
| ೧) **ಆಗ್ನೇಯಮ್ ಅಷ್ಟಾಕಪಾಲಮ್ ನಿರ್ವಪತಿ** | ಅಗ್ನಿದೇವತಾಕವಾದ, ಅಷ್ಟಾಕಪಾಲಪುರೋಡಾಶ ದ್ರವ್ಯದ ಯಾಗವನ್ನು ಮಾಡಬೇಕು. |
| ೨) **ಸೌಮ್ಯಮ್ ಚರುಮ್ [ನಿರ್ವಪತಿ]** | ಸೋಮದೇವನಿಗಾಗಿ ಚರುದ್ರವ್ಯದ ಯಾಗವನ್ನು ಮಾಡಬೇಕು. |
| ೩) **ಸಾವಿತ್ರಮ್ ದ್ವಾದಶಕಪಾಲಮ್ [ನಿರ್ವಪತಿ]** | ಸವಿತೃದೇವತಾಕವಾದ ದ್ವಾದಶಕಪಾಲಪುರೋಡಾಶದ್ರವ್ಯಕವಾದ ಯಾಗವನ್ನು ಮಾಡಬೇಕು. |
| ೪) **ಬಾರ್ಹಸ್ಪತ್ಯಮ್ ಚರುಮ್ [ನಿರ್ವಪತಿ]** | ಬೃಹಸ್ಪತಿದೇವತಾಕವಾದ ಚರುಯಾಗವನ್ನು ಮಾಡಬೇಕು. |
| ೫) **ತ್ವಾಷ್ಟ್ರಮ್ ಅಷ್ಟಾಕಪಾಲಮ್ [ನಿರ್ವಪತಿ]** | ತ್ವಷ್ಟೃದೇವತಾಕವಾದ ಅಷ್ಟಾಕಪಾಲಪುರೋಡಾಶ ದ್ರವ್ಯದ ಯಾಗವನ್ನು ಮಾಡಬೇಕು. |

ವೈಶ್ವಾನರಂ ದ್ವಾದಶಕಪಾಲಂ ದಕ್ಷಿಣೋ ರಥವಾಹನ-
ವಾಹೋ ದಕ್ಷಿಣಾ ಸಾರಸ್ವತಂ ಚರುಂ ನಿರ್ವಪತಿ ಪೌಷ್ಣಂ
ಚರುಂ ಮೈತ್ರಂ ಚರುಂ ವಾರುಣಂ ಚರುಂ

---

**ವೈಶ್ವಾನರಮ್। ದ್ವಾದಶಕಪಾಲಮಿತಿ ದ್ವಾದಶ-ಕಪಾಲಮ್। ದಕ್ಷಿಣಃ। ರಥವಾಹನವಾಹ ಇತಿ ರಥವಾಹನ-ವಾಹಃ। ದಕ್ಷಿಣಾ। ಸಾರಸ್ವತಮ್। ಚರುಮ್। ನಿರಿತಿ। ವಪತಿ। ಪೌಷ್ಣಮ್। ಚರುಮ್। ಮೈತ್ರಮ್। ಚರುಮ್। ವಾರುಣಮ್। ಚರುಮ್।**

---

ಮಾರನೆಯ ದಿನ ಬೆಳಿಗ್ಗೆ 'ಸಾರಸ್ವತಂ ಚರುಮ್' ಎಂದು ಮೊದಲಾಗಿ ಹೇಳಿರುವ ಆರು ಯಾಗಗಳನ್ನು ಮಾಡಬೇಕು. ಇದಕ್ಕೆ ರಥವಾಹನವನ್ನು ಎಳೆಯುವ ಎಡಭಾಗದ ಎತ್ತು ದಕ್ಷಿಣೆ.

**ಈ ಯಾಗಗಳನ್ನು ತಿಂಗಳಿಗೆ ಒಂದರಂತೆ ಮಾಡುವ ಪಕ್ಷಾಂತರವೂ ಇದೆ.**

---

| | |
|---|---|
| **೬) ವೈಶ್ವಾನರಮ್ ದ್ವಾದಶ-ಕಪಾಲಮ್ [ನಿರ್ವಪತಿ।** | ವೈಶ್ವಾನರದೇವತಾಕವಾದ ದ್ವಾದಶಕಪಾಲ ಪುರೋಡಾಶದ್ರವ್ಯದ ಯಾಗವನ್ನು ಮಾಡಬೇಕು. |
| **ದಕ್ಷಿಣಃ ರಥವಾಹನವಾಹಃ ದಕ್ಷಿಣಾ** | [ಈ ಆರು ಯಾಗಗಳಿಗೆ] ರಥಕ್ಕೆ ಮತ್ತೊಂದು ಬಂಡಿಯನ್ನು ಕಟ್ಟಿ ಎಳೆಸುವಾಗ ಬಲಗಡೆ ಕಟ್ಟಿರುವ ಎತ್ತು ದಕ್ಷಿಣೆ. |
| **೭) ಸಾರಸ್ವತಮ್ ಚರುಮ್ ನಿರ್ವಪತಿ** | ಸರಸ್ವತೀದೇವತಾಕವಾದ ಚರುದ್ರವ್ಯದ ಯಾಗವನ್ನು ಮಾಡಬೇಕು. |
| **೮) ಪೌಷ್ಣಮ್ ಚರುಮ್ [ನಿರ್ವಪತಿ]** | ಪೂಷದೇವತಾಕವಾದ ಚರುದ್ರವ್ಯ ಯಾಗವನ್ನು ಮಾಡಬೇಕು. |
| **೯) ಮೈತ್ರಮ್ ಚರುಮ್ [ನಿರ್ವಪತಿ]** | ಮಿತ್ರದೇವತಾಕವಾದ ಚರುದ್ರವ್ಯದ ಯಾಗವನ್ನು ಮಾಡಬೇಕು. |
| **೧೦) ವಾರುಣಮ್ ಚರುಮ್ [ನಿರ್ವಪತಿ]** | ವರುಣದೇವತಾಕವಾದ ಚರುದ್ರವ್ಯದ ಯಾಗವನ್ನು ಮಾಡಬೇಕು. |

ಕ್ಷೈತ್ರಪತ್ಯಂ ಚರುಮಾದಿತ್ಯಂ ಚರುಮುತ್ತರೋ
ರಥವಾಹನವಾಹೋ ದಕ್ಷಿಣಾ ॥ ೨೦-36 ॥

[ಆಗ್ನೇಯಗ್ಂ ಸೌಮ್ಯಂ ಬಾರ್‌ಹಸ್ಪತ್ಯಂ ಚತುಸ್ತ್ರಿಗ್ಂಶತ್।]

---

ಕ್ಷೈತ್ರಪತ್ಯಮಿತಿ ಕ್ಷೈತ್ರ-ಪತ್ಯಮ್। ಚರುಮ್ । ಆದಿತ್ಯಮ್ । ಚರುಮ್। ಉತ್ತರ ಇತ್ಯುತ್-ತರಃ। ರಥವಾಹನವಾಹ ಇತಿ ರಥವಾಹನ-ವಾಹಃ । ದಕ್ಷಿಣಾ ॥೨೦॥

---

೧೧) ಕ್ಷೈತ್ರಪತ್ಯಮ್ ಚರುಮ್ [ನಿರ್ವಪತಿ] — ಕ್ಷೇತ್ರಪತಿದೇವನಿಗಾಗಿ ಚರುದ್ರವ್ಯದ ಯಾಗವನ್ನು ಮಾಡಬೇಕು.

೧೨) ಆದಿತ್ಯಮ್ ಚರುಮ್ [ನಿರ್ವಪತಿ] — ಅದಿತಿದೇವತಾಕವಾದ ಚರುದ್ರವ್ಯಕವಾದ ಯಾಗವನ್ನು ಮಾಡಬೇಕು.

ಉತ್ತರಃ ರಥವಾಹನವಾಹಃ ದಕ್ಷಿಣಾ — [ಈ ಆರು ಯಾಗಗಳಿಗೆ] ರಥವನ್ನು ಎಳೆಯುವ ಬಂಡಿಯ ಎಡಗಡೆಯ ಎತ್ತು ದಕ್ಷಿಣೆಯಾಗಿದೆ.

## ॥ ಏಕವಿಂಶೋಽನುವಾಕಃ ॥

**ಸ್ವಾದ್ವೀಂ ತ್ವಾ ಸ್ವಾದುನಾ ತೀವ್ರಾಂ ತೀವ್ರೇಣಾಮೃತಾಮಮೃತೇನ ಸೃಜಾಮಿ ಸಗ್ಂ ಸೋಮೇನ ಸೋಮೋಽಸ್ಯಶ್ವಿಭ್ಯಾಂ ಪಚ್ಯಸ್ವ**

---

**॥ ಪ ॥ ಸ್ವಾದ್ವೀಮ್ । ತ್ವಾ । ಸ್ವಾದುನಾ । ತೀವ್ರಾಮ್ । ತೀವ್ರೇಣ । ಅಮೃತಾಮ್। ಅಮೃತೇನ। ಸೃಜಾಮಿ। ಸಮಿತಿ। ಸೋಮೇನ। ಸೋಮಃ। ಅಸಿ। ಅಶ್ವಿಭ್ಯಾಮಿತ್ಯಶ್ವಿ-ಭ್ಯಾಮ್। ಪಚ್ಯಸ್ವ ।**

---

ಈ ಅನುವಾಕದ ಮಂತ್ರಗಳು ವೈಶ್ವದೇವಕಾಂಡಕ್ಕೆ ಸೇರಿವೆ. ಈ ಅನುವಾಕದಲ್ಲಿ ಸೌತ್ರಾಮಣೀಮಂತ್ರಗಳೂ. ಪಶುಗಳೂ. ಹವಿಸ್ಸುಗಳೂ ಹೇಳಲ್ಪಟ್ಟಿವೆ.

---

| ಮಂತ್ರ | ವಿನಿಯೋಗ |
|---|---|
| ಸ್ವಾದ್ವೀಂ ತ್ವಾ.... ಪಚ್ಯಸ್ವ । | ವ್ರೀಹಿಯವಾದ್ಯಂಕುರಗಳನ್ನು ಸುರೆಯಲ್ಲಿ ಹಾಕಲು |

---

[ಎಲೈ! ಸುರೆಯೇ] **ಸ್ವಾದ್ವೀಮ್** = ರುಚಿಕರವಾದ: **ತೀವ್ರಾಮ್** = ಉಗ್ರವಾದ ವಾಸನೆಯುಳ್ಳ; **ಅಮೃತಾಮ್** = ಅಮೃತದಂತೆ ಆಹ್ಲಾದಕಾರಿಯಾದ; **ತ್ವಾ** = ನಿನ್ನನ್ನು; **ಸ್ವಾದುನಾ** = ರುಚಿಕರವಾದ; **ತೀವ್ರೇಣ** = ಉಗ್ರವಾದ ವಾಸನೆಯುಳ್ಳ; **ಅಮೃತೇನ** = ಆಪ್ಯಾಯನಕಾರಿಯಾದ; **ಸೋಮೇನ** = [ಓಷಧೀರೂಪವಾಗಿ]ಸೋಮಶಬ್ದವಾಚ್ಯವಾದ[ವ್ರೀಹ್ಯಾದ್ಯಂಕುರಗಳಿಂದ]; **ಸಗ್ಂಸೃಜಾಮಿ** = ಕೂಡಿಸುತ್ತೇನೆ; [ನೀನು] **ಸೋಮಃ ಅಸಿ** = ಸೋಮದ್ರವ್ಯವೇ ಆಗಿರುತ್ತೀಯೆ; **ಅಶ್ವಿಭ್ಯಾಮ್ ಪಚ್ಯಸ್ವ** = ಅಶ್ವಿನೀದೇವತೆಗಳಿಗಾಗಿ ಪಕ್ವನಾಗು.

---

ಗಾರ್ಹಪತ್ಯದ ಮುಂಭಾಗದಲ್ಲಿ ಹಳ್ಳವನ್ನು ತೋಡಿ ಅದರಲ್ಲಿ ಸುರಾಕಲ್ಪದಿಂದ ಸುರೆಯನ್ನು ಹಾಕಿ, ಅದರಲ್ಲಿ ವ್ರೀಹ್ಯಾದ್ಯಂಕುರಗಳನ್ನು ಹಾಕುತ್ತಾರೆ. ಅವು ಓಷಧಿಗಳಾದುದರಿಂದ ಸೋಮವೆಂದು, ಅವುಗಳನ್ನು ಹಾಕುವುದರಿಂದ ಅವುಗಳಿಗೂ ಸೋಮಶಬ್ದವಿದೆ. ಸುರೆಯನ್ನು ಹೀಗೆ ಪ್ರಾರ್ಥಿಸಲಾಗಿದೆ, 'ಎಲೈ! ಸುರೆಯೇ! ನೀನೂ ರುಚಿಕರವಾಗಿರುವೆ. ಜೋರಾದ ವಾಸನೆಯನ್ನು ಹೊಂದಿರುವೆ. ಅಮೃತದಂತೆ ಆಹ್ಲಾದಕಾರಿಣಿಯಾಗಿರುವೆ. ನಿನ್ನನ್ನು ರುಚಿಯಾದ, ವಾಸನಾಯುಕ್ತವಾದ, ಆಹ್ಲಾದಕಾರಿಯಾದ ಸೋಮಸದೃಶವಾದ ಈ ಸಸ್ಯಾಂಕುರಗಳಿಂದ ಕೂಡಿಸುತ್ತೇನೆ. ನೀನೂ ಸೋಮನೇ

**ಸರಸ್ವತ್ಯೈ ಪಚ್ಯಸ್ವೇಂದ್ರಾಯ ಸುತ್ರಾಮ್ಣೇ ಪಚ್ಯಸ್ವ ಪುನಾತು ತೇ ಪರಿಸ್ರುತಗ್ಂ ಸೋಮಗ್ಂ ಸೂರ್ಯಸ್ಯ ದುಹಿತಾ । ವಾರೇಣ ಶಶ್ವತಾ ತನಾ ॥ ವಾಯುಃ ಪೂತಃ ಪವಿತ್ರೇಣ ಪ್ರತ್ಯಙ್ಖ್ಸೋಮೋ ಅತಿದ್ರುತಃ। ಇಂದ್ರಸ್ಯ ಯುಜ್ಯಃ ಸಖಾ॥**

---

ಸರಸ್ವತ್ಯೈ । ಪಚ್ಯಸ್ವ । ಇಂದ್ರಾಯ । ಸುತ್ರಾಮ್ಣ ಇತಿ ಸು-ತ್ರಾಮ್ಣೇ । ಪುನಾತು । ತೇ। ಪರಿಸ್ರುತಮಿತಿ ಪರಿ-ಸ್ರುತಮ್। ಸೋಮಮ್ । ಸೂರ್ಯಸ್ಯ । ದುಹಿತಾ ॥ ವಾರೇಣ । ಶಶ್ವತಾ। ತನಾ । ವಾಯುಃ । ಪೂತಃ । ಪವಿತ್ರೇಣ । ಪ್ರತ್ಯಙ್ । ಸೋಮಃ । ಅತಿದ್ರುತ ಇತ್ಯತಿ-ದ್ರುತಃ ॥ ಇಂದ್ರಸ್ಯ। ಯುಜ್ಯಃ । ಸಖಾ ॥

---

| ಮಂತ್ರ | ವಿನಿಯೋಗ |
|---|---|
| ಪುನಾತು.... ತನಾ ॥<br>ವಾಯುಃ...... ಸಖಾ ॥ | ವಾಲಪವಿತ್ರದಿಂದ ಸುರೆಯನ್ನು ಪವಿತ್ರಗೊಳಿಸಲು |

---

**ಸರಸ್ವತ್ಯೈ ಪಚ್ಯಸ್ವ** = ಸರಸ್ವತೀದೇವತೆಗಾಗಿ ಪಕ್ವನಾಗು; **ಇಂದ್ರಾಯ ಸುತ್ರಾಮ್ಣೇ** = [ಚೆನ್ನಾಗಿ ರಕ್ಷಿಸುವುದರಿಂದ] ಸುತ್ರಾಮನಾಮಕನಾದ ಇಂದ್ರನಿಗಾಗಿ; **ಪಚ್ಯಸ್ವ** = ಪಕ್ವನಾಗು. ÷ [ಎಲೈ! ಇಂದ್ರನೇ]; **ತೇ** = ನಿನಗಾಗಿ; **ಸೂರ್ಯಸ್ಯ ದುಹಿತಾ** = ಸೂರ್ಯನ ಮಗಳಂತೆ ಇರುವ ದೀಪ್ತಿಯು; **ಪರಿಸ್ರುತಮ್** = ದ್ರವೀಭೂತವಾದ; **ಸೋಮಮ್** = ಸೋಮದಂತೆ ಮಾಡಲ್ಪಟ್ಟಿರುವ ಸುರೆಯನ್ನು; **ಶಶ್ವತಾ** = ದೃಢವಾದ; **ತನಾ** = ವಿಸ್ತೀರ್ಣವಾದ; **ವಾರೇಣ** = ವಾಲಮಯವಾದ; **ಪವಿತ್ರೇಣ** = ಪವಿತ್ರದಿಂದ; **ಪುನಾತು** = ಪವಿತ್ರಗೊಳಿಸಲಿ; **ಸೋಮಃ** = [ಈ ಸುರಾರೂಪವಾದ] ಸೋಮವು; **ಪವಿತ್ರೇಣ ಪೂತಃ** = ವಾಲಪವಿತ್ರದಿಂದ ಪರಿಶುದ್ಧನಾಗಿ; **ವಾಯುಃ** = ವಾಯುವಿನಂತೆ [ಶೀಘ್ರಗಾಮಿಯಾಗಿ]; **ಪ್ರತ್ಯಙ್** = ಅಧೋಮುಖನಾಗಿ; **ಅತಿದ್ರುತಃ** = ಪಾತ್ರಾಭಿಮುಖವಾಗಿ ಸ್ರವಿಸಿದೆ; [ಆ ಸೋಮನು] **ಇಂದ್ರಸ್ಯ ಯುಜ್ಯಃ ಸಖಾ** = ಇಂದ್ರನಿಗೆ ಯೋಗ್ಯನಾದ ಸ್ನೇಹಿತನಾಗಿರುತ್ತಾನೆ/ಸ್ನೇಹಿತನಾಗಲಿ.

---

ಆಗಿದ್ದೀಯೆ. ನೀನು ಅಶ್ವಿನೀದೇವತೆಗಳಿಗಾಗಿಯೂ ಸರಸ್ವತೀದೇವತೆಗಾಗಿಯೂ, ಸುತ್ರಾಮೇಂದ್ರದೇವನಿಗಾಗಿಯೂ ಪಕ್ವನಾಗು. [ಅನುಬ್ರಾಹ್ಮಣದಲ್ಲಿ ವಿಶೇಷಗಳು ಇವೆ.]

ಕುವಿದಂಗ ಯವಮಂತೋ ಯವಂ ಚಿದ್ಯಥಾ ದಾಂತ್ಯನು-
ಪೂರ್ವಂ ವಿಯೂಯ । ಇಹೇಹೈಷಾಂ ಕೃಣುತ ಭೋಜನಾನಿ
[೧]ಯೇ ಬರ್‌ಹಿಷೋ ನಮೋವೃಕ್ತಿಂ ನ ಜಗ್ಮುಃ ॥

---

ಕುವಿತ್ । ಅಂಗ । ಯವಮಂತ ಇತಿ ಯವ-ಮಂತಃ । ಯವಮ್ । ಚಿತ್ । ಯಥಾ। ದಾಂತಿ । ಅನುಪೂರ್ವಮಿತ್ಯನು-ಪೂರ್ವಮ್ । ವಿಯೂಯೇತಿ ವಿ-ಯೂಯ ॥ ಇಹೇಹೇತೀಹ-ಇಹ । ಏಷಾಮ್ । ಕೃಣುತ । ಭೋಜನಾನಿ [೧] । ಯೇ । ಬರ್‌ಹಿಷಃ। ನಮೋವೃಕ್ತಿಮಿತಿ ನಮಃ-ವೃಕ್ತಿಮ್ । ನ । ಜಗ್ಮುಃ ॥

---

| ಮಂತ್ರ | ವಿನಿಯೋಗ |
|---|---|
| ಕುವಿದಂಗ....ಜಗ್ಮುಃ । | ಬೇರೆಯ *ಖರದಲ್ಲಿ ಸುರಾಗ್ರಹಗಳನ್ನು ಗ್ರಹಣ ಮಾಡಲು |

---

∻ **ಅಂಗ** = ಎಲೈ! [ಮಿತ್ರರಾದ ಅಶ್ವಿನೀ, ಸರಸ್ವತೀ, ಇಂದ್ರಸುತ್ರಾಮದೇವತೆಗಳೇ!] **ಯೇ** = ಯಾವ ಯಜ್ಞಕರ್ತೃಗಳು; **ಬರ್‌ಹಿಷಃ** = ಯಾಗದ; **ನಮೋವೃಕ್ತಿಂ ನ ಜಗ್ಮುಃ** = ನಮಸ್ಕಾರವಿನಾಶವನ್ನು ಹೊಂದಲಿಲ್ಲವೋ/ಅತ್ಯಂತ ಶ್ರದ್ಧಾಳುಗಳಾಗಿ ಯಾಗಾನುಷ್ಠಾನವನ್ನು ಮಾಡುತ್ತಾರೆಯೋ; **ಏಷಾಮ್** = ಅಂತಹ [ಯಜಮಾನರು ಅರ್ಪಿಸುವ]; **ಭೋಜನಾನಿ** = ಹವಿಸ್ಸುಗಳ ಭೋಜನ[ಸ್ವೀಕಾರ]ವನ್ನು; **ಇಹೇಹ ಕೃಣುತ** = ಇಲ್ಲಿಯೇ ಮಾಡಿರಿ. **ಯವಮಂತಃ** = ಯವಾದಿಧಾನ್ಯಗಳುಳ್ಳ ಕೃಷಿಕರು; **ಯಥಾ** = ಹೇಗೆ; **ಕುವಿತ್ ಯವಮ್ ಚಿತ್** = ಹೆಚ್ಚಾಗಿ ಯವಾದಿಗಳನ್ನು; **ವಿಯೂಯ** = [ಪಕ್ವಧಾನ್ಯಗಳನ್ನೂ, ಅಪಕ್ವಧಾನ್ಯಗಳನ್ನೂ] ಬೇರ್ಪಡಿಸಿ; **ಅನುಪೂರ್ವಮ್** = ಪರಿಪಾಕಕ್ರಮವನ್ನನುಸರಿಸಿ; **ದಾಂತಿ** = ಕೊಯ್ಯುತ್ತಾರೆಯೋ; [ಹಾಗೆ ಶ್ರದ್ಧಾವಂತರು ನೀಡುವ ಹವಿಸ್ಸನ್ನು ಸ್ವೀಕರಿಸಿರಿ]

---

ಎಲೈ ಇಂದ್ರನೇ! ನಿನಗಾಗಿ ಸೂರ್ಯನ ಮಗಳಂತಿರುವ ದೀಪ್ತಿಯು ವಾಲದಿಂದ ಸುರಾರೂಪವಾದ, ದ್ರವರೂಪವಾದ ಸೋಮನನ್ನು ಪರಿಶುದ್ಧ ಮಾಡಲಿ. ಈ ವಾಲ ಪವಿತ್ರವಾದರೋ ದೃಢವಾಗಿದೆ. ವಿಸ್ತೀರ್ಣವಾಗಿಯೂ ಇದೆ. ಈ *ವಾಲಪವಿತ್ರದಿಂದ ಪವಿತ್ರನಾದ ಈ ಸೋಮನು ವಾಯುವಿನಂತೆ ಶೀಘ್ರಗಾಮಿಯಾಗಿ ಅಧೋಮುಖನಾಗಿ ಪಾತ್ರಾಭಿಮುಖನಾಗಿ ಬೀಳಲಿ. ಇಂದ್ರನಿಗೆ ಯೋಗ್ಯನಾದ ಗೆಳೆಯನಾಗಲಿ.

---

* ಗ್ರಹಗಳನ್ನಿಡುವ ಪ್ರದೇಶ.

* ಬಾಲದ ಲೋಮಗಳಿಂದ ಮಾಡಿದ ಪವಿತ್ರ.

ಆಶ್ವಿನಂ ಧೂಮ್ರಮಾಲಭತೇ ಸಾರಸ್ವತಂ
ಮೇಷಮೈಂದ್ರಮೃಷಭಮೈಂದ್ರಮೇಕಾದಶಕಪಾಲಂ ನಿರ್ವಪತಿ

ಆಶ್ವಿನಮ್ । ಧೂಮ್ರಮ್ । ಏತಿ । ಲಭತೇ । ಸಾರಸ್ವತಮ್ । ಮೇಷಮ್ । ಐಂದ್ರಮ್ । ಋಷಭಮ್ । ಐಂದ್ರಮ್ । ಏಕಾದಶಕಪಾಲಮಿತ್ಯೇಕಾದಶ-ಕಪಾಲಮ್ । ನಿರಿತಿ । ವಪತಿ ।

## ಸೌತ್ರಾಮಣ್ಯಂಗವಾದ ಪಶುಯಾಗಗಳು

| ಬ್ರಾಹ್ಮಣಭಾಗ | ವಿವರಣೆ |
|---|---|
| ೧) ಧೂಮ್ರಮ್ ಆಶ್ವಿನಮ್ ಆಲಭತೇ | ಮಸುಕಾದ ಬಿಳಿಯ ಬಣ್ಣದ ಅಶ್ವಿನೀದೇವತಾಕವಾದ ಪಶುವನ್ನು ಯಾಗ ಮಾಡಬೇಕು. |
| ೨) ಸಾರಸ್ವತಮ್ ಮೇಷಮ್ [ಆಲಭತೇ]* | ಸರಸ್ವತೀದೇವತಾಕವಾದ ಮೇಷವನ್ನು ಯಾಗ ಮಾಡಬೇಕು. |
| ೩) ಐಂದ್ರಮ್ ಋಷಭಮ್ [ಆಲಭತೇ] | ಇಂದ್ರದೇವತೆಗಾಗಿ ಹೋರಿಯನ್ನು ಯಾಗ ಮಾಡಬೇಕು |

## ಪಶುಯಾಗದ ಅನಂತರದ ಪುರೋಡಾಶಯಾಗಗಳು

| | |
|---|---|
| ೧) ಐಂದ್ರಮ್ ಏಕಾದಶಕಪಾಲಮ್ ನಿರ್ವಪತಿ* | ಇಂದ್ರದೇವತಾಕವಾದ ಏಕಾದಶಕಪಾಲಪುರೋಡಾಶದ್ರವ್ಯವುಳ್ಳ ಹವಿರ್ಯಾಗವನ್ನು ಮಾಡಬೇಕು. |

ಅಶ್ವಿ-ಸರಸ್ವತೀ-ಸುತ್ರಾಮೇಂದ್ರ ದೇವತೆಗಳೇ! ಕೃಷಿಕರು ಧಾನ್ಯವನ್ನು ಕೊಯ್ಯುವಾಗ ಧಾನ್ಯವು ಪಕ್ವವಾಗಿದೆಯೇ ಇಲ್ಲವೇ? ಎಂದು ಚೆನ್ನಾಗಿ ಪರೀಕ್ಷಿಸಿ ಅನುಕ್ರಮವಾಗಿ ಪಕ್ವವಾದ ಧಾನ್ಯವನ್ನೇ ಕೊಯ್ಯುತ್ತಾರೆ. ಹಾಗೆಯೇ ನೀವೂ ಸಹ ಶ್ರದ್ಧಾವಂತರನ್ನೂ, ಅಶ್ರದ್ಧಾವಂತರನ್ನೂ ಬೇರ್ಪಡಿಸಿ, ಯಜಮಾನರು ಶ್ರದ್ಧಾವಂತರಾಗಿ ಸ್ತುತ್ಯರ್ಹರಾಗಿ ಯಾಗ ಮಾಡಿರುವರೇ ಎಂದು ಪರೀಕ್ಷಿಸಿ, ಅವರು ನೀಡುವ ಸುರಾರೂಪಗ್ರಹಗಳನ್ನು ಸ್ವೀಕರಿಸಿ ತೃಪ್ತರಾಗಿರಿ.

[ಸೌತ್ರಾಮಣ್ಯಂಗವಾದ ಪಶುಯಾಗಗಳು ಮೂರು. **'ಅಶ್ವಾಲಂಭಂ ಗವಾಲಂಭಂ'** ಎಂಬುದಾಗಿ ಕಲಿಯುಗದಲ್ಲಿ ಗವಾಲಂಭದ ನಿಷೇಧವಿರುವುದರಿಂದ ಈಗ ಮೇಷವನ್ನೇ ಆ ಸ್ಥಾನದಲ್ಲಿ ಉಪಯೋಗಿಸುತ್ತಾರೆ.]

* **'ನಿರ್ವಪತಿ'** ಎಂಬ ಪದವನ್ನು ಹವಿರ್ನಿರ್ವಾಪವುಳ್ಳ ಪುರೋಡಾಶ–ಚರ್ವಾದಿಯಾಗಗಳಲ್ಲಿಯೂ, **'ಆಲಭೇತ'** ಎಂದು ಪಶ್ವಾಲಂಭನವುಳ್ಳ ಪಶುಯಾಗದಲ್ಲಿಯೂ, **'ಯಜೇತ'** **'ಆಸತೇ'** ಎಂಬ ಪದಗಳನ್ನು ಸೋಮಯಾಗದಲ್ಲಿಯೂ ಉಪಯೋಗಿಸುತ್ತಾರೆ.

ಸಾವಿತ್ರಂ ದ್ವಾದಶಕಪಾಲಂ ವಾರುಣಂ ದಶಕಪಾಲಗ್ಂ
**ಸೋಮಪ್ರತೀಕಾಃ ಪಿತರಸ್ತೃಪ್ಣುತ** ವಡಬಾ ದಕ್ಷಿಣಾ||21-37||
**[ಭೋಜನಾನಿ ಷಡ್ವಿಗ್ಂಶತಿಶ್ಚ।]**

---

**ಸಾವಿತ್ರಮ್। ದ್ವಾದಶಕಪಾಲಮಿತಿ ದ್ವಾದಶ-ಕಪಾಲಮ್। ವಾರುಣಮ್। ದಶಕಪಾಲಮಿತಿ ದಶ-ಕಪಾಲಮ್ । ಸೋಮಪ್ರತೀಕಾ ಇತಿ ಸೋಮ-ಪ್ರತೀಕಾಃ । ಪಿತರಃ । ತೃಪ್ಣುತ। ವಡಬಾ । ದಕ್ಷಿಣಾ ॥ ೨೧ ॥**

---

**೨) ಸಾವಿತ್ರಮ್ ದ್ವಾದಶಕಪಾಲಮ್ [ನಿರ್ವಪತಿ]** — ಸವಿತೃದೇವತಾಕವಾದ ದ್ವಾದಶಕಪಾಲಪುರೋಡಾಶದ್ರವ್ಯದ ಯಾಗವನ್ನು ಮಾಡಬೇಕು.

**೩) ವಾರುಣಮ್ ದಶಕಪಾಲಮ್ [ನಿರ್ವಪತಿ]** — ವರುಣದೇವತಾಕವಾದ, ದಶಕಪಾಲಪುರೋಡಾಶದ್ರವ್ಯಕವಾದ ಇಷ್ಟಿಯನ್ನು ಮಾಡಬೇಕು.

---

| ಮಂತ್ರ | ವಿನಿಯೋಗ |
|---|---|
| **ಸೋಮ.....ತೃಪ್ಣುತ ।** | ಸುರಾಶೇಷವನ್ನು ಹೋಮ ಮಾಡಲು |

---

✢ **ಸೋಮಪ್ರತೀಕಾಃ** = ಸೋಮನೇ ಪ್ರಮುಖನಾಗಿರುವ; **ಪಿತರಃ** = ಪಿತೃದೇವತೆಗಳೇ! **ತೃಪ್ಣುತ** = ತೃಪ್ತಿ ಹೊಂದಿರಿ.

---

| ಬ್ರಾಹ್ಮಣಭಾಗ | ವಿವರಣೆ |
|---|---|
| ವಡಬಾ ದಕ್ಷಿಣಾ* | ಈ ಯಾಗಕ್ಕೆ ಹೆಣ್ಣುಕುದುರೆಯು ದಕ್ಷಿಣೆಯಾಗಿದೆ. |

---

ಮೂರು ಪಶುಯಾಗಗಳ ಅನಂತರ ಮೂರು ಪುರೋಡಾಶಯಾಗಗಳು ವಿಧಿಸಲ್ಪಟ್ಟಿವೆ.

[ದಕ್ಷಿಣಾಗ್ನಿಯಲ್ಲಿ ಶತಮಾನಹಿರಣ್ಯವನ್ನು ಇಟ್ಟಿರುವ ಶತಚ್ಛಿದ್ರಕುಂಭವನ್ನು ಇಡಬೇಕು. ಅದರಲ್ಲಿ ಸುರಾಶೇಷವನ್ನು ಹೋಮ ಮಾಡಬೇಕು.]

ಸೋಮನೇ ಮುಖ್ಯನಾಗಿರುವ ಎಲ್ಲೈ! ಪಿತೃದೇವತೆಗಳೇ! ನೀವು ಈ ಹೋಮದಿಂದ ತೃಪ್ತಿ ಹೊಂದಿರಿ.

---

ಸಾಯಣಭಾಷ್ಯದಲ್ಲಿ ಈ ಯಾಗಗಳ ಅನುಬ್ರಾಹ್ಮಣದ ವಿವರಣೆಯನ್ನು ಇಲ್ಲಿ ನೀಡಿರುತ್ತಾರೆ. ಆ ಅನುಬ್ರಾಹ್ಮಣವು ಬ್ರಾಹ್ಮಣಗ್ರಂಥದ ಮೊದಲನೆಯ ಅಷ್ಟಕದಲ್ಲಿದೆ. ಬ್ರಾಹ್ಮಣ ಗ್ರಂಥಾನುವಾದದಲ್ಲಿ ಅದನ್ನು ನೀಡಬಹುದಾಗಿರುವುದರಿಂದ ಇಲ್ಲಿ ಅದರ ಅನುವಾದವನ್ನು ನೀಡಿಲ್ಲ.

# ವಿನಿಯೋಗ ಸಂಗ್ರಹ

ಸ್ವಾದ್ವೀಂ[1] ಶಷ್ಪ್ಯೈಃ ಸುರಾ ಯೋಜ್ಯಾ ಪುನಾ[2-3] ದ್ವಾಭ್ಯಾಂ ತು ಪಾವಯೇತ್ ।
[4]ಕುವಿತ್ಸ್ವರೇ ಸುರಾ ಗ್ರಾಹ್ಯಾ [5]ಸೋಮಾವನಯತೇ ಸುರಾಮ್ ॥
ಶತಚ್ಛಿದ್ರಯುತಸ್ಥಾಲ್ಯಾಂ ಮಂತ್ರಾಃ ಪಂಚೈವ ವರ್ಣಿತಾಃ ॥

**ಅನುವಾಕದಲ್ಲಿರುವ ಮಂತ್ರಸಂಖ್ಯೆ-5**
**ಉಳಿದುದು ಬ್ರಾಹ್ಮಣಭಾಗ.**

## ಅನುವಾಕದಲ್ಲಿರುವ ವಿಶೇಷ ವಿಷಯಗಳು

## ಅ) ಮೀಮಾಂಸಾ

### ೧) ಸೌತ್ರಾಮಣಿಯಲ್ಲಿ ಸ್ವಿಷ್ಟಕೃದಾದಿಗಳಿವೆಯೇ? [ಜೈ.ಸೂ. 3-5]

ಸೌತ್ರಾಮಣಿಯಾಗದಲ್ಲಿ ಪಯೋಗ್ರಹಗಳೂ, ಸುರಾಗ್ರಹಗಳೂ ವಿಹಿತವಾಗಿವೆ. ಪ್ರಕೃತಿಯಾದ ಸೋಮಯಾಗದಲ್ಲಿ ಹೇಗೆ ಸೋಮಗ್ರಹದಲ್ಲಿನ ಶೇಷದಿಂದ ಸ್ವಿಷ್ಟಕೃತ್ ಇತ್ಯಾದಿಗಳು ಇವೆಯೋ, ಹಾಗೆಯೇ ವಿಕೃತಿಯಾದ ಈ ಯಾಗದಲ್ಲಿ 'ಉಚ್ಛಿನಷ್ಟಿ, ನ ಸರ್ವಂ ಜುಹೋತಿ' ಎಂದಿರುವುದರಿಂದ ಶೇಷಕಾರ್ಯವಾದ ಸ್ವಿಷ್ಟಕೃದಾದಿಗಳಿವೆ. ಇದು ಇಲ್ಲಿನ ಪೂರ್ವಪಕ್ಷ.

ಶೇಷವಿದ್ದರೂ ಅದನ್ನು ಕಾರ್ಯಾಂತರದಲ್ಲಿ ವಿನಿಯೋಗಿಸುವ ವಿಧಿಯಿದೆ. 'ಬ್ರಾಹ್ಮಣಂ ಪರಿಕ್ರೀಣೀಯಾದುಚ್ಛೇಷಣಸ್ಯ ಪಾತಾರಮ್' 'ಯದಿ ಬ್ರಾಹ್ಮಣಂ ನ ವಿಂದೇತ್। ವಲ್ಮೀಕವಪಾಯಾಮವನಯೇತ್' ಎಂದು ಶೇಷಪಾನ ಮಾಡುವ ಬ್ರಾಹ್ಮಣನಿರಬೇಕೆಂದೂ, ಅವನಿಲ್ಲದಿದ್ದರೆ ಹುತ್ತದಲ್ಲಿ ಹಾಕಬೇಕೆಂದೂ ವಿಧಿಯಿದೆ. 'ಶತಾತೃಣ್ಣಾಯಾಗ್ಂ ಸಮವನಯತಿ' ಎಂಬ ವಿನಿಯೋಗಾಂತರವೂ ಇರುವುದರಿಂದ ಶೇಷವಿಲ್ಲದುದರಿಂದ ಶೇಷಕಾರ್ಯವಾದ ಸ್ವಿಷ್ಟಕೃದಾದಿಗಳಿಲ್ಲ. ಇದು ಇಲ್ಲಿನ ಸಿದ್ಧಾಂತ.

# ॥ ದ್ವಾವಿಂಶೋಽನುವಾಕಃ ॥

**ಅಗ್ನಾವಿಷ್ಣೂ ಮಹಿ ತದ್ವಾಂ ಮಹಿತ್ವಂ ವೀತಂ ಘೃತಸ್ಯ ಗುಹ್ಯಾನಿ ನಾಮ ।**

---

**॥ ವೈ ॥** ಅಗ್ನಾವಿಷ್ಣೂ ಇತ್ಯಗ್ನಾ-ವಿಷ್ಣೂ । ಮಹಿ । ತತ್ । ವಾಮ್ । ಮಹಿತ್ವಮಿತಿ ಮಹಿ-ತ್ವಮ್ । ವೀತಮ್ । ಘೃತಸ್ಯ । ಗುಹ್ಯಾನಿ । ನಾಮ ॥

---

ಇಪ್ಪತ್ತೊಂದನೆಯ ಅನುವಾಕದಲ್ಲಿ ಸೌತ್ರಾಮಣಿಯನ್ನು ಹೇಳಲಾಯಿತು. ಅಲ್ಲಿಗೆ ರಾಜಸೂಯವು ಮುಗಿಯಿತು. ಇಪ್ಪತ್ತೆರಡನೆಯ ಈ ಅನುವಾಕದಲ್ಲಿ ಕಾಮ್ಯೇಷ್ಟಿಯ ಯಾಜ್ಯಾ-ಪುರೋನುವಾಕ್ಯೆಗಳು ಉಕ್ತವಾಗಿವೆ.

ಕಾಮ್ಯೇಷ್ಟಿಗಳಲ್ಲಿ ಮೊದಲು ಅಭಿಚಾರಕಾಮನಾದವನಿಗೆ ತ್ರಿಹವಿಷ್ಕ [ಮೂರು ಹವಿಸ್ಸುಳ್ಳ] ಯಾಗವು ಹೇಳಲ್ಪಟ್ಟಿದೆ.

| ಮಂತ್ರ | ವಿನಿಯೋಗ |
|---|---|
| **ಅಗ್ನಾವಿಷ್ಣೂ..... ಆ ಚರಣ್ಯೇತ್ ।** | [ಪ್ರಥಮಹವಿಸ್ಸು] ಆಗ್ನಾವೈಷ್ಣವ ಏಕಾದಶ ಕಪಾಲಯಾಗದ ಪುರೋನುವಾಕ್ಯೆ. |

---

**ಅಗ್ನಾವಿಷ್ಣೂ** = ಅಗ್ನಾವಿಷ್ಣುದೇವತೆಗಳೇ! **ವಾಮ್** = ನಿಮ್ಮಿಬ್ಬರ; **ತತ್** = ಆ; **ಮಹಿತ್ವಮ್** = ಮಹಿಮೆಯು; **ಮಹಿ** = ಪೂಜನೀಯವಾಗಿದೆ. **ಘೃತಸ್ಯ** = ಆಜ್ಯದ್ರವ್ಯಕ್ಕೆ ಸಂಬಂಧಿಸಿದ [ಯಾನಿ]; **ಗುಹ್ಯಾನಿ ನಾಮ*** = [ಮಂತ್ರಗಳಲ್ಲಿರುವ] [ಆಜ್ಯ, ಪೃಷದಾಜ್ಯ, ಸರ್ಪಿ ಮೊದಲಾದ] ಗೋಪ್ಯವಾದ ನಾಮಧೇಯಗಳಿವೆಯೋ [ಅವುಗಳನ್ನು];

---

ಹೇ! ಅಗ್ನಾವಿಷ್ಣುದೇವತೆಗಳೇ! ನಿಮ್ಮ ಮಹಿಮೆಯು ಸರ್ವತ್ರ ಪ್ರಸಿದ್ಧವಾಗಿ ಪೂಜನೀಯವಾಗಿದೆ. ನೀವಿಬ್ಬರು ಆಜ್ಯಕ್ಕೆ ಸಂಬಂಧಿಸಿದ ಹಲವು ಗೋಪ್ಯವಾದ

---

* ನಾಮಾನಿ ಎಂಬ ಅರ್ಥದಲ್ಲಿದೆ.

**ದಮೇದಮೇ ಸಪ್ತರತ್ನಾ ದಧಾನಾ ಪ್ರತಿ ವಾಂ ಜಿಹ್ವಾ ಘೃತ-ಮಾ ಚರಣ್ಯೇತ್ ॥ ಅಗ್ನಾವಿಷ್ಣೂ ಮಹಿ ಧಾಮ ಪ್ರಿಯಂ ವಾಂ**

---

ದಮೇದಮ ಇತಿ ದಮೇ-ದಮೇ । ಸಪ್ತ । ರತ್ನಾ । ದಧಾನಾ । ಪ್ರತೀತಿ । ವಾಮ್ । ಜಿಹ್ವಾ । ಘೃತಮ್ । ಏತಿ । ಚರಣ್ಯೇತ್ ॥ ಅಗ್ನಾವಿಷ್ಣೂ ಇತ್ಯಗ್ನಾ-ವಿಷ್ಣೂ । ಮಹಿ। ಧಾಮ । ಪ್ರಿಯಮ್ । ವಾಮ್ ॥

---

| ಮಂತ್ರ | ವಿನಿಯೋಗ |
| --- | --- |
| ಅಗ್ನಾವಿಷ್ಣೂ.... ಉಚ್ಚರಣ್ಯೇತ್ ॥ | ಹಿಂದಿನ ಯಾಗದ ಯಾಜ್ಯಾನುವಾಕ್ಯೆ |

---

**ದಮೇದಮೇ** = [ಯಜಮಾನರ] ಮನೆಮನೆಗಳಲ್ಲಿಯೂ; **ವೀತಮ್** = ಹೊಂದಿರಿ/ಕೇಳಿರಿ. **ವಾಮ್ ಜಿಹ್ವಾ*** = ನಿಮ್ಮಿಬ್ಬರ ನಾಲಿಗೆಗಳು; **ಸಪ್ತ ರತ್ನಾ ದಧಾನಾ** = ರತ್ನದಂತೆ ಪ್ರಕಾಶಮಾನವಾದ ಏಳು ಜ್ವಾಲೆಗಳನ್ನು ಹೊಂದಿದವುಗಳಾಗಿ; **ಪ್ರತಿ** = ಪ್ರತ್ಯೇಕವಾಗಿ; **ಘೃತಮ್ ಆ** [ಗತ್ಯ] = ತುಪ್ಪವೇ ಮೊದಲಾದ ಹವಿಸ್ಸನ್ನು ಹೊಂದಿ; **ಚರಣ್ಯೇತ್** = ಭಕ್ಷಿಸಲಿ/ಕುಡಿಯಲಿ. ⁘ **ಅಗ್ನಾವಿಷ್ಣೂ** = ಅಗ್ನಾವಿಷ್ಣುದೇವತೆಗಳೇ! **ವಾಮ್** = ನಿಮ್ಮಿಬ್ಬರ; **ಪ್ರಿಯಮ್ ಧಾಮ** = [ಯಜ್ಞಶಾಲೆಯೆಂಬ] ಪ್ರಿಯವಾದ ವಾಸಸ್ಥಾನವು; **ಮಹಿ** = ಪೂಜನೀಯವಾಗಿದೆ.

---

ನಾಮಧೇಯಗಳನ್ನು ಯಜಮಾನರ ಮನೆಮನೆಗಳಲ್ಲಿಯೂ ಕೇಳಿರಿ. ನಿಮ್ಮ ನಾಲಗೆಗಳು-ಯಜಮಾನರು ಸಮರ್ಪಿಸುವ ದ್ರವ್ಯಗಳನ್ನು-ಪ್ರಸಿದ್ಧವಾದ ಪ್ರಕಾಶಮಾನವಾದ *ಏಳು ಜ್ವಾಲೆಗಳಿಂದ ಕೂಡಿದವುಗಳಾಗಿ ಭಕ್ಷಿಸಲಿ/ಸ್ವೀಕರಿಸಲಿ.

ಎಲೈ! ಅಗ್ನಾವಿಷ್ಣುದೇವತೆಗಳೇ! ಯಾಗಶಾಲೆಯೆಂಬ ನಿಮ್ಮ ಗೃಹವು ಪ್ರಶಸ್ತವಾಗಿ

---

* ಜಿಹ್ವೇ ಎಂಬ ಅರ್ಥದಲ್ಲಿದೆ.

* ಅಗ್ನಿಗೆ ಸಪ್ತ ಜಿಹ್ವೆಗಳಿವೆ. ಅದನ್ನು ಛತ್ರಿನ್ಯಾಯದಿಂದ ವಿಷ್ಣುವಿಗೂ ಅನ್ವಯಿಸಲಾಗಿದೆ.

ವೀಥೋ ಘೃತಸ್ಯ ಗುಹ್ಯಾ ಜುಷಾಣಾ ॥ ದಮೇದಮೇ ಸುಷ್ಟು-ತೀರ್ವಾವೃಧಾನಾ ಪ್ರತಿ ವಾಂ ಜಿಹ್ವಾ ಘೃತಮುಚ್ಚರಣ್ಯೇತ್॥ ಪ್ರ ಣೋ ದೇವೀ ಸರಸ್ವತೀ ವಾಜೇಭಿರ್ವಾಜಿನೀವತೀ ।

---

ವೀಥಃ । ಘೃತಸ್ಯ । ಗುಹ್ಯಾ । ಜುಷಾಣಾ ॥ ದಮೇದಮ ಇತಿ ದಮೇ-ದಮೇ । ಸುಷ್ಟುತೀರಿತಿ ಸು-ಸ್ತುತೀಃ । ವಾವೃಧಾನಾ । ಪ್ರತೀತಿ । ವಾಮ್ । ಜಿಹ್ವಾ । ಘೃತಮ್। ಉದಿತಿ । ಚರಣ್ಯೇತ್ ॥ ಪ್ರೇತಿ । ನಃ । ದೇವೀ । ಸರಸ್ವತೀ । ವಾಜೇಭಿಃ । ವಾಜಿನೀವತೀತಿ ವಾಜಿನೀ-ವತೀ ॥

---

| ಮಂತ್ರ | ವಿನಿಯೋಗ |
|---|---|
| ಪ್ರ ಣೋ....ಅವತು ॥ | ಮೇಲಿನ ಯಾಗದಲ್ಲಿ ಸಾರಸ್ವತೀಷ್ಟಿಯ ಪುರೋನುವಾಕ್ಯೆ. |

---

[ನೀವಿಬ್ಬರೂ] **ಘೃತಸ್ಯ** = ಆಜ್ಯಾದಿಹವಿಸ್ಸುಗಳ; **ಗುಹ್ಯಾ** = ಗೋಪ್ಯವಾದ [ಯೋಗ್ಯವಾದ ಅಭಿಘಾರಣಾದಿಗಳ ಸಾರವನ್ನು] **ಜುಷಾಣಾ** = ಸೇವಿಸುವವರಾಗಿ; **ವೀಥಃ** = [ಪುರೋಡಾಶವನ್ನು] ಸ್ವೀಕರಿಸುವಿರಿ. **ದಮೇದಮೇ** = [ಯಜಮಾನರ] ಮನೆಮನೆಗಳಲ್ಲಿಯೂ; **ಸುಷ್ಟುತೀಃ** = ಸ್ತುತಿರೂಪವಾದ ವಾಕ್ಕುಗಳನ್ನು; **ವಾವೃಧಾನಾ** = ವೃದ್ಧಿಹೊಂದಿಸುವವರಾಗಿರಿ. **ವಾಮ್ ಜಿಹ್ವಾ** = ನಿಮ್ಮಿಬ್ಬರ ನಾಲಗೆಗಳು; **ಪ್ರತಿ** = ಪ್ರತ್ಯೇಕವಾಗಿ; **ಘೃತಮ್** = ಆಜ್ಯಾದಿಹವಿಸ್ಸುಗಳನ್ನು; **ಉತ್ ಚರಣ್ಯೇತ್** = ಉತ್ಕೃಷ್ಟವಾಗಿ ಭಕ್ಷಿಸಲಿ. ✣ **ವಾಜಿನೀವತೀ** = ಅನ್ನಪ್ರದವಾದ ಈ ಯಾಗದಿಂದ ಆರಾಧಿಸಲ್ಪಡುವ; **ದೇವೀ ಸರಸ್ವತೀ** = ಸರಸ್ವತೀದೇವಿಯು; **ನಃ** = ನಮ್ಮನ್ನು; **ವಾಜೇಭಿಃ** = ಅನ್ನಗಳಿಂದ; **ಪ್ರ ಅವತು** = ಚೆನ್ನಾಗಿ ರಕ್ಷಿಸಲಿ.

---

ಪೂಜ್ಯವಾಗಿದೆ. ನೀವಿಬ್ಬರೂ ಯಜಮಾನನು ಅರ್ಪಿಸುವ ಘೃತಾದಿಹವ್ಯ ಗಳನ್ನು ಸ್ವೀಕರಿಸಿ, ಭಕ್ಷಿಸಿರಿ. ಯಜಮಾನರ ಮನೆಮನೆಗಳಲ್ಲಿಯೂ ಕೇಳಿಬರುವ ನಿಮ್ಮ ಶೋಭನಸ್ತುತಿಗಳನ್ನು ಯಜಮಾನರ ಇಷ್ಟಾರ್ಥಗಳನ್ನು ನೀಡಿ ವೃದ್ಧಿಗೊಳಿಸಿರಿ. ನಿಮ್ಮ ನಾಲಗೆಗಳು ಪ್ರತ್ಯೇಕವಾಗಿ ಘೃತವೇ ಮೊದಲಾದ ಹವಿಸ್ಸನ್ನು ಸವಿದು, ತೃಪ್ತಿಹೊಂದಲಿ. ನೀವು ಯಜಮಾನನ ಕಾಮನೆಗಳನ್ನು ಪೂರ್ಣಗೊಳಿಸಿರಿ.

**ಧೀನಾಮವಿತ್ರ್ಯವತು ॥ ಆ ನೋ ದಿವೋ ಬೃಹತಃ [೧] ಪರ್ವತಾದಾ ಸರಸ್ವತೀ ಯಜತಾ ಗಂತು ಯಜ್ಞಮ್ । ಹವಂ ದೇವೀ ಜುಜುಷಾಣಾ ಘೃತಾಚೀ ಶಗ್ಮಾಂ ನೋ ವಾಚಮುಶತೀ ಶೃಣೋತು ॥**

---

ಧೀನಾಮ್ । ಅವಿತ್ರೀ । ಅವತು ॥ ಏತಿ । ನಃ । ದಿವಃ । ಬೃಹತಃ [೧] । ಪರ್ವತಾತ್। ಏತಿ । ಸರಸ್ವತೀ । ಯಜತಾ । ಗಂತು । ಯಜ್ಞಮ್ ॥ ಹವಮ್ । ದೇವೀ । ಜುಜುಷಾಣಾ। ಘೃತಾಚೀ । ಶಗ್ಮಾಮ್ । ನಃ । ವಾಚಮ್ । ಉಶತೀ । ಶೃಣೋತು ॥

---

| ಮಂತ್ರ | ವಿನಿಯೋಗ |
|---|---|
| ಆ ನೋ.... ಶೃಣೋತು ॥ | ಸಾರಸ್ವತೀಷ್ಟಿಯ ಯಾಜ್ಯಾನುವಾಕ್ಯೆ. |

---

**ಧೀನಾಮ್ ಅವಿತ್ರೀ** = ಬುದ್ಧಿಯನ್ನು ರಕ್ಷಿಸುವವಳಾಗಿ; **ಭವತು** = ಆಗಲಿ; ∴ **ಯಜತಾ** = ಯಾಗಾದಿಗಳಿಂದ ಆರಾಧಿಸಲ್ಪಡುವ; **ಸರಸ್ವತೀ** = ಸರಸ್ವತೀದೇವಿಯು; **ದಿವಃ** = ದ್ಯುಲೋಕದಿಂದ; **ಆ ಗಂತು** = [ನಮ್ಮ ಯಜ್ಞಕ್ಕೆ] ಬರಲಿ. **ಬೃಹತಃ ಪರ್ವತಾತ್** = ಮಹಾಮೇರುಪರ್ವತದಿಂದಲೂ; **ನಃ ಯಜ್ಞಮ್** = ನಮ್ಮ ಯಜ್ಞವನ್ನು ಕುರಿತು; **ಆ ಗಂತು** = ಬರಲಿ. **ಘೃತಾಚೀ** = ಘೃತಾದಿಹವಿಸ್ಸುಗಳನ್ನು ಸೇವಿಸುವವಳಾದ; **ದೇವೀ** = ಸರಸ್ವತೀದೇವಿಯು; **ಹವಮ್** = [ನಮ್ಮ] ಆಹ್ವಾನವನ್ನು; **ಜುಜುಷಾಣಾ** = ಮನ್ನಿಸುವವಳಾಗಿ [ಬರಲಿ]. **ಶಗ್ಮಾಮ್** = ಸುಖಕರವಾದ; **ನಃ ವಾಚಮ್** = ನಮ್ಮ ಸ್ತುತಿರೂಪವಾದ ವಾಕ್ಕನ್ನು; **ಉಶತೀ** = ಇಚ್ಛಿಸುವವಳಾಗಿ; **ಶೃಣೋತು** = ಕೇಳಲಿ [ಕೇಳಿ ನಮ್ಮನ್ನು ಅನುಗ್ರಹಿಸಲಿ].

---

ಸರಸ್ವತೀದೇವಿಯನ್ನು ನಾವು ಅನ್ನಾದಿಪ್ರದವಾದ ಯಾಗಗಳಿಂದ ಆರಾಧಿಸುತ್ತೇವೆ. ಇಂತಹ ವಾಜಿನೀವತಿಯಾದ ಸರಸ್ವತೀದೇವಿಯು ಅನ್ನಾದಿಗಳನ್ನು ಕೊಟ್ಟು ನಮ್ಮನ್ನು ಕಾಪಾಡಲಿ. ಬುದ್ಧಿಗೆ ಅಧಿದೇವತೆಯಾದ ಸರಸ್ವತಿಯು ಯಜ್ಞವಿಷಯಕವಾದ ನಮ್ಮ ಬುದ್ಧಿಯನ್ನು ಉಜ್ಜ್ವಲಗೊಳಿಸಲಿ.

ಬೃಹಸ್ಪತೇ ಜುಷಸ್ವ ನೋ ಹವ್ಯಾನಿ ವಿಶ್ವದೇವ್ಯ । ರಾಸ್ವ ರತ್ನಾನಿ ದಾಶುಷೇ ॥ ಏವಾ ಪಿತ್ರೇ ವಿಶ್ವದೇವಾಯ ವೃಷ್ಣೇ ಯಜ್ಞೈರ್ವಿಧೇಮ ನಮಸಾ ಹವಿರ್ಭಿಃ ।

---

ಬೃಹಸ್ಪತೇ । ಜುಷಸ್ವ। ನಃ । ಹವ್ಯಾನಿ । ವಿಶ್ವದೇವ್ಯೇತಿ ವಿಶ್ವ-ದೇವ್ಯ ॥ ರಾಸ್ವ । ರತ್ನಾನಿ। ದಾಶುಷೇ ॥ ಏವಾ । ಪಿತ್ರೇ । ವಿಶ್ವದೇವಾಯೇತಿ ವಿಶ್ವ-ದೇವಾಯ । ವೃಷ್ಣೇ । ಯಜ್ಞೈಃ ವಿಧೇಮ। ನಮಸಾ । ಹವಿರ್ಭಿರಿತಿ ಹವಿಃ-ಭಿಃ॥

---

| ಮಂತ್ರ | ವಿನಿಯೋಗ |
|---|---|
| ಬೃಹಸ್ಪತೇ..... ದಾಶುಷೇ ॥ | ಹಿಂದಿನ ಬಾರ್ಹಸ್ಪತ್ಯಹವಿಸ್ಸಿನ ಪುರೋನುವಾಕ್ಯೆ. |
| ಏವಾ....ರಯೀಣಾಮ್ ॥ | ಬಾರ್ಹಸ್ಪತ್ಯಹವಿಸ್ಸಿನ ಯಾಜ್ಯಾನುವಾಕ್ಯೆ |

---

✢ ವಿಶ್ವದೇವ್ಯ = [ದೇವಗುರುವಾಗಿ] ಎಲ್ಲ ದೇವತೆಗಳಿಗೂ ಹಿತನಾದ; ಬೃಹಸ್ಪತೇ = ಬೃಹಸ್ಪತಿಯೇ! ನಃ = ನಮ್ಮ; ಹವ್ಯಾನಿ = ಚರ್ವಾದಿಹವಿಸ್ಸುಗಳನ್ನು; ಜುಷಸ್ವ = ಸೇವಿಸು. ದಾಶುಷೇ = [ಈ ಹವಿಸ್ಸನ್ನು ನಿನಗೆ] ಸಮರ್ಪಿಸುವ ಯಜಮಾನನಿಗೆ; ರತ್ನಾನಿ = ರತ್ನದಂತೆ [ಅತ್ಯುತ್ತಮವಾದ ವಸ್ತುಗಳನ್ನು] ರಾಸ್ವ = ಕೊಡು. ✢ ಏವಾ = ಹೀಗೆಯೇ/ ಮತ್ತು; ಬೃಹಸ್ಪತೇ = ಬೃಹಸ್ಪತಿಯೇ! ಪಿತ್ರೇ = ತಂದೆಯಂತೆ [ಪಾಲಕನಾದ]; ವಿಶ್ವದೇವಾಯ = ಸರ್ವದೇವಗುರುವಾದ; ವೃಷ್ಣೇ = [ಭಕ್ತರ ಇಷ್ಟಾರ್ಥಗಳನ್ನು] ಸುರಿಸುವ; [ನಿನಗೆ] ಯಜ್ಞೈಃ = ಬಗೆ ಬಗೆಯ ಯಾಗಗಳಿಂದಲೂ; ನಮಸಾ = [ಭಕ್ತಿಪೂರ್ವಕ] ನಮಸ್ಕಾರಗಳಿಂದಲೂ; ಹವಿರ್ಭಿಃ = ಆಜ್ಯ-ಪುರೋಡಾಶಾದಿ ಹವಿಸ್ಸುಗಳಿಂದಲೂ [ಪರಿಚರ್ಯಾಮ್] ವಿಧೇಮ = [ನಿನ್ನ]ಪರಿಚರ್ಯೆಯನ್ನು ಮಾಡುತ್ತೇವೆ; [ನಿನ್ನ ಅನುಗ್ರಹದಿಂದ]

---

ಸರಸ್ವತೀದೇವಿಯು ಯಜ್ಞಾದಿಗಳಿಂದ ಪೂಜಿಸಲ್ಪಡತಕ್ಕವಳು. ಅಂತಹ ಸರಸ್ವತಿಯು ಸ್ವರ್ಗದಲ್ಲಿರಲಿ; ಮೇರುಪರ್ವತದಲ್ಲಿರಲಿ; ಅಥವಾ ಬೇರೆಲ್ಲಿಯಾದರೂ ಇರಲಿ; ನಮ್ಮ ಯಜ್ಞಕ್ಕೆ ಆಗಮಿಸಲಿ. ಯಜ್ಞಕ್ಕೆ ಬರಬೇಕೆಂಬ ನಮ್ಮ ಆಹ್ವಾನವನ್ನು ಸ್ವೀಕರಿಸಲಿ. ನಮ್ಮ ಪ್ರಾರ್ಥನಾ ರೂಪವಾದ ಮಾತನ್ನು ಬಯಸುತ್ತಾ ಕೇಳಲಿ. ಕೇಳಿ, ನಮ್ಮ ಇಷ್ಟಾರ್ಥವನ್ನು ಕೊಟ್ಟು ಅನುಗ್ರಹಿಸಲಿ.

ಎಲೈ! ಬೃಹಸ್ಪತಿಯೇ! ನೀನು ದೇವಗುರುವಾಗಿ ಸಮಸ್ತದೇವತೆಗಳಿಗೂ

**ಬೃಹಸ್ಪತೇ ಸುಪ್ರಜಾ ವೀರವಂತೋ ವಯಗ್ಂ ಸ್ಯಾಮ ಪತಯೋ ರಯೀಣಾಮ್ ॥ ಬೃಹಸ್ಪತೇ ಅತಿ ಯದರ್ಯೋ ಅರ್ಹಾದ್ದ್ಯುಮದ್ವಿಭಾತಿ ಕ್ರತುಮಜ್ಜನೇಷು ।**

---

ಬೃಹಸ್ಪತೇ । ಸುಪ್ರಜಾ ಇತಿ ಸು-ಪ್ರಜಾ । ವೀರವಂತ ಇತಿ ವೀರ-ವಂತಃ । ವಯಮ್। ಸ್ಯಾಮ । ಪತಯಃ । ರಯೀಣಾಮ್ ॥ ಬೃಹಸ್ಪತೇ । ಅತೀತಿ। ಯತ್ । ಅರ್ಯಃ । ಅರ್ಹಾತ್। ದ್ಯುಮದಿತಿ ದ್ಯು-ಮತ್ । ವಿಭಾತೀತಿ ವಿ-ಭಾತಿ । ಕ್ರತುಮದಿತಿ ಕ್ರತು-ಮತ್। ಜನೇಷು ॥

---

| ಮಂತ್ರ | ವಿನಿಯೋಗ |
|---|---|
| ಬೃಹಸ್ಪತೇ.... ಚಿತ್ರಮ್ ॥ | ಹಿಂದಿನಯಾಗದ ವಿಕಲ್ಪಿತ ಮತ್ತೊಂದು ಯಾಜ್ಯೆ. |

---

**ವಯಮ್** = ನಾವು; **ಸುಪ್ರಜಾಃ** = ಒಳ್ಳೆಯ ಮಕ್ಕಳುಳ್ಳವರಾಗಿಯೂ; **ವೀರವಂತಃ** = ಶೂರರಾದ ಸಹಾಯಕರುಳ್ಳವರಾಗಿಯೂ; **ರಯೀಣಾಮ್ ಪತಯಃ** =ವಿವಿಧವಾದ ಧನಗಳ ಒಡೆಯರೂ; **ಸ್ಯಾಮ** = ಆಗೋಣ. ÷ **ಋತಪ್ರಜಾತ** = ಸತ್ಯಸ್ವರೂಪನಾದ ಪರಮಾತ್ಮನಿಂದ ದೇವಗುರುವಾಗಿ ಸೃಷ್ಟಿಸಲ್ಪಟ್ಟಿರುವ; **ಬೃಹಸ್ಪತೇ** = ಬೃಹಸ್ಪತಿಯೇ! **ಅರ್ಯಃ** = ಸ್ವಾಮಿಯು/ರಾಜನು; **ಯತ್** = ಯಾವ ಧನವನ್ನು; **ಅತಿ** = [ಬೇರೆಯವರನ್ನು] ಮೀರಿ; **ಅರ್ಹಾತ್** = ಅನುಭವಿಸಲು ಯೋಗ್ಯನಾಗಿದ್ದಾನೆಯೋ; **ಯತ್** = ಯಾವ ಧನವು; **ಜನೇಷು** = ಅಮಾತ್ಯಾದಿಗಳಲ್ಲಿ; **ದ್ಯುಮತ್** = ಪ್ರಕಾಶಯುಕ್ತವಾಗಿ; **ವಿಭಾತಿ** = ಕಂಗೊಳಿಸುತ್ತಿದೆಯೋ; **ಯತ್** = ಯಾವ ಧನವು; **ಜನೇಷು** = ಯಜಮಾನಾದಿ ಜನರಲ್ಲಿ; **ಕ್ರತುಮತ್** = ಯಾಗಾದಿಗಳಿಗೆ ಉಪಯುಕ್ತವಾಗಿದೆಯೋ;

---

ಹಿತನಾಗಿದ್ದೀಯೆ. ನಾವು ಸಮರ್ಪಿಸುವ ಚರ್ವಾದಿಹವಿಸ್ಸುಗಳನ್ನು ಸ್ವೀಕರಿಸು. ಹವಿಸ್ಸುಗಳನ್ನು ಕೊಡುವ ಈ ಯಜಮಾನನಿಗೆ ರತ್ನದಂತೆ ಇರುವ ಅಮೂಲ್ಯ ವಸ್ತುಗಳನ್ನು ಕೊಡು.

ಬೃಹಸ್ಪತಿಯೇ! ಸರ್ವದೇವಗುರುವಾದ, ತಂದೆಯಂತೆ ಪಾಲಕನಾದ, ಸೇವಿಸುವವರ ಇಷ್ಟಾರ್ಥಗಳನ್ನು ಸಲ್ಲಿಸುವ ನಿನಗೆ ಹಲವು ಬಗೆಯ ಯಜ್ಞಗಳಿಂದಲೂ, ನಮಸ್ಕಾರಗಳಿಂದಲೂ, ಆಜ್ಯ-ಚರು-ಪುರೋಡಾಶಾದಿ ಹವಿಸ್ಸುಗಳಿಂದಲೂ ಹೀಗೆಯೇ ಸೇವೆಯನ್ನು ಮಾಡುವೆವು. ನಿನ್ನ ಅನುಗ್ರಹದಿಂದ ನಮಗೆ ಒಳ್ಳೆಯ ಮಕ್ಕಳು ಜನಿಸಲಿ. ವೀರರಾದ ಭಟರು ದೊರಕಲಿ. ಸರ್ವವಿಧವಾದ ಧನವೂ ನಮಗೆ ಲಭಿಸಲಿ.

ಯದ್ದೀದಯಚ್ಛವಸರ್ತಪ್ರಜಾತ [...ಚ್ಛವಸಾ(ಽ) ಋತಪ್ರ-ಜಾತ] ತದಸ್ಮಾಸು ದ್ರವಿಣಂ ಧೇಹಿ ಚಿತ್ರಮ್ ॥ ಆ ನೋ ಮಿತ್ರಾವರುಣಾ ಘೃತೈರ್ಗವ್ಯೂತಿಮುಕ್ಷತಮ್ ।

---

ಯತ್ । ದೀದಯತ್ । ಶವಸಾ । ಋತಪ್ರಜಾತೇತ್ಯೃತ-ಪ್ರಜಾತ । ತತ್ । ಅಸ್ಮಾಸು। ದ್ರವಿಣಮ್ । ಧೇಹಿ । ಚಿತ್ರಮ್ ॥ ಏತಿ । ನಃ । ಮಿತ್ರಾವರುಣೇತಿ ಮಿತ್ರಾ-ವರುಣಾ। ಘೃತೈಃ । ಗವ್ಯೂತಿಮ್ । ಉಕ್ಷತಮ್ ।

---

ಆಗ್ನಾವೈಷ್ಣವಾದಿಯಾಗಗಳನ್ನು ಹಲವು ಕಾಮನೆಗಳಿಗಾಗಿ ಹೇಳಿರುತ್ತಾರೆ. ಅವುಗಳಲ್ಲಿ **'ಅಧ್ವರಕಲ್ಪಾ'**[ಸೋಮಯಾಗಕ್ಕೆ ಸಮಾನವಾದುದು] ಎಂಬ ಇಷ್ಟಿಯೊಂದು. ಅದಕ್ಕೆ ಸೇರಿದಂತೆ ಸೋಮಯಾಗದ ಅನೂಬಂಧ್ಯಾವಶಾಯಾಗದ ಸ್ಥಾನದಲ್ಲಿ ಮೈತ್ರಾವರುಣದೇವತಾಕವಾದ ಏಕಕಪಾಲಯಾಗವನ್ನು ಹೇಳಿರುತ್ತಾರೆ.

---

| **ಮಂತ್ರ** | **ವಿನಿಯೋಗ** |
|---|---|
| **ಆ ನೋ... ಸುಕ್ರತೂ ॥** | ಮೇಲಿನ ಯಾಗದ ಪುರೋನುವಾಕ್ಯೆ. |

---

**ಯತ್** = ಯಾವುದು; **ಶವಸಾ** = ಸೇನಾದಿಬಲದಿಂದ [ಲಬ್ಧವಾಗಿ] **ದೀದಯತ್** = ಪ್ರಕಾಶಿಸುತ್ತದೆಯೋ; **ತತ್** = ಆ; **ಚಿತ್ರಂ ದ್ರವಿಣಮ್** = ಬಹುವಿಧವಾದ ಪ್ರಾರ್ಥನೀಯವಾದ ಧನವನ್ನು; **ಅಸ್ಮಾಸು ಧೇಹಿ** = ನಮ್ಮಲ್ಲಿ ಸ್ಥಿರವಾಗಿ ನೆಲೆಸಿರುವಂತೆ ಮಾಡು/ನಮಗೆ ಕೊಡು; ⁘ **ಮಿತ್ರಾವರುಣಾ** = ಮಿತ್ರಾವರುಣದೇವತೆಗಳೇ! **ನಃ** = ನಮ್ಮ; **ಗವ್ಯೂತಿಮ್** = ಗೋಸಮೂಹವನ್ನು; **ಘೃತೇನ** = ಹಾಲು, ತುಪ್ಪ ಮೊದಲಾದವುಗಳಿಂದ [ಸಂಪನ್ನವಾಗಿರುವಂತೆ] [ನೀರಿನಿಂದ] **ಆ ಉಕ್ಷತಮ್** = ಸುತ್ತಲೂ ಸೇಚಿಸಿರಿ;

---

ರಾಜನು ಬೇರೆಯವರಿಗಿಂತಲೂ ಅಧಿಕವಾದ ಐಶ್ವರ್ಯವನ್ನು ಹೊಂದಿರುತ್ತಾನೆ. ಓ! ಬೃಹಸ್ಪತಿದೇವನೇ! ನೀನು ನಮಗೆ ಅಂತಹ ಧನವನ್ನು ಕೊಡು. ಮಂತ್ರಿ ಮೊದಲಾದವರಲ್ಲಿರುವ ಮಣಿರತ್ನಾದಿಗಳನ್ನೂ ಕೊಡು. ಯಾಗಾದಿಗಳಲ್ಲಿ ಜನರು ಉಪಯೋಗಿಸುವ ಧನವನ್ನೂ ಕೊಡು. ಶೂರರು ಬಲದಿಂದ ಗಳಿಸುವ ಧನವನ್ನೂ ಕೊಡು. ಆ ಸರ್ವವಿಧವಾದ, ಪ್ರಾರ್ಥನೀಯವಾದ ಧನವನ್ನು ನೀನು ನಮ್ಮಲ್ಲಿ ನೆಲಸಿರುವಂತೆ ಮಾಡು.

**ಮಧ್ವಾ ರಜಾಗ್ಂಸಿ ಸುಕ್ರತೂ ॥ ಪ್ರ ಬಾಹವಾ ಸಿಸೃತಂ ಜೀವಸೇ ನ ಆ ನೋ ಗವ್ಯೂತಿಮುಕ್ಷತಂ ಘೃತೇನ । ಆ ನೋ ಜನೇ ಶ್ರವಯತಂ ಯುವಾನಾ ಶ್ರುತಂ ಮೇ ಮಿತ್ರಾವರುಣಾ ಹವೇಮಾ ॥**

---

ಮಧ್ವಾ । ರಜಾಗ್ಂಸಿ । ಸುಕ್ರತೂ ಇತಿ ಸು-ಕ್ರತೂ ॥ ಪ್ರೇತಿ । ಬಾಹವಾ । ಸಿಸೃತಮ್। ಜೀವಸೇ । ನಃ । ಏತಿ । ನಃ । ಗವ್ಯೂತಿಮ್ । ಉಕ್ಷತಮ್ । ಘೃತೇನ ॥ ಏತಿ । ನಃ। ಜನೇ । ಶ್ರವಯತಮ್ । ಯುವಾನಾ । ಶ್ರುತಮ್ । ಮೇ । ಮಿತ್ರಾವರುಣೇತಿ ಮಿತ್ರಾ-ವರುಣಾ । ಹವಾ । ಇಮಾ ॥

---

| ಮಂತ್ರ | ವಿನಿಯೋಗ |
|---|---|
| ಪ್ರ ಬಾಹವಾ...ಹವೇಮಾ । | ಹಿಂದಿನ ಯಾಗದ ಯಾಜ್ಯೆ. |

---

**ಸುಕ್ರತೂ** = ಶೋಭನಕ್ರತುಗಳಿಂದ ಆರಾಧಿಸಲ್ಪಡುವ ಮಿತ್ರಾವರುಣರೇ! **ರಜಾಗ್ಂಸಿ** = [ನಮ್ಮ ಭೂಮಿಯ] ಧೂಳುಗಳನ್ನು; **ಮಧ್ವಾ** = ಮಧುರವಾದ ನೀರಿನಿಂದ; **ಆ ಉಕ್ಷತಮ್** = ಆರ್ದ್ರವಾಗುವಂತೆ ವೃಷ್ಟಿಸೇಚನ ಮಾಡಿರಿ. ∻ **ಯುವಾನಾ** = ತರುಣರಾಗಿರುವ/ಯಾವಾಗಲೂ ಒಟ್ಟಾಗಿರುವ; **ಮಿತ್ರಾವರುಣಾ** = ಮಿತ್ರಾವರುಣರೇ! **ನಃ ಜೀವಸೇ** = ನಮ್ಮ ಜೀವನಕ್ಕಾಗಿ; **ಬಾಹವಾ** = ಧನಯುಕ್ತವಾದ ಬಾಹುಗಳಿಂದ ಕೂಡಿ; **ಪ್ರ ಸಿಸೃತಮ್** = ಶೀಘ್ರವಾಗಿ ಬನ್ನಿರಿ. **ನಃ ಗವ್ಯೂತಿಮ್** = ನಮ್ಮ ಗೋಸಮೂಹವನ್ನು; **ಘೃತೇನ** = ಘೃತಾದಿಗಳಿಂದ; **ಆ ಉಕ್ಷತಮ್** = ಸೇಚಿಸಿರಿ; [ಎಲೈ! ಮಿತ್ರಾವರುಣರೇ] **ಜನೇ** = ಬ್ರಾಹ್ಮಣಾದಿಸಭೆಗಳಲ್ಲಿ; **ನಃ** = ನಮ್ಮನ್ನು; **ಆ ಶ್ರವಯತಮ್** = ಪ್ರಸಿದ್ಧಿ ಪಡಿಸಿರಿ; [ನಮ್ಮ ಹೆಸರು ಕೇಳಿ ಬರುವಂತೆ ಮಾಡಿರಿ]; **ಮೇ** = ನನ್ನ[ನಮ್ಮ] **ಹವಾ ಇಮಾ**=ಈ ಆಹ್ವಾನವನ್ನು; **ಶ್ರುತಮ್**= ಕೇಳಿರಿ.

---

ಓ! ಮಿತ್ರಾವರುಣರೇ! ನೀವು ಮಳೆಗರೆದು ಸಸ್ಯಸಮೃದ್ಧಿಯನ್ನುಂಟುಮಾಡಿ, ನಮ್ಮಗೋಧನವನ್ನು ಘೃತಪೂರ್ಣವಾಗುವಂತೆ ಮಾಡಿರಿ. ನೀರಿನಿಂದ ನಮ್ಮ ಭೂಮಿಯನ್ನು ತೋಯಿಸಿ ಧಾನ್ಯಪೂರ್ಣವಾಗುವಂತೆ ಮಾಡಿರಿ. ಯುವಕರಾದ, ಜೊತೆಗೂಡಿರುವ ಮಿತ್ರಾವರುಣರೇ! ನಮ್ಮ ಜೀವನಕ್ಕಾಗಿ ಕೈಗಳಲ್ಲಿ ಹಣವನ್ನು ತುಂಬಿಕೊಂಡು ನಮ್ಮ ಬಳಿಗೆ ಬನ್ನಿರಿ. ನಮ್ಮ ಗೋಸಮೂಹವು ಘೃತಸಂಪನ್ನವಾಗಿರುವಂತೆ ಅನುಗ್ರಹಿಸಿರಿ. ನಮ್ಮ ಹೆಸರು ಜನಸಭೆಗಳಲ್ಲಿ ಕೇಳಿ ಬರುವಂತೆ ಮಾಡಿರಿ. ನಮ್ಮ ಈ ಆಹ್ವಾನವನ್ನು ಕೇಳಿರಿ.

## ಅಗ್ನಿಂ ವಃ ಪೂರ್ವ್ಯಂ ಗಿರಾ ದೇವಮೀಡೇ ವಸೂನಾಮ್ । ಸಪರ್ಯಂತಃ ಪುರುಪ್ರಿಯಂ ಮಿತ್ರಂ ನ ಕ್ಷೇತ್ರಸಾಧಸಮ್॥ ಮಕ್ಷೂ ದೇವವತೋ ರಥಃ [ರಥಃ (೩)]

---

ಅಗ್ನಿಮ್ । ವಃ । ಪೂರ್ವ್ಯಮ್ । ಗಿರಾ । ದೇವಮ್ । ಈಡೇ । ವಸೂನಾಮ್ ॥ ಸಪರ್ಯಂತಃ । ಪುರುಪ್ರಿಯಮಿತಿ ಪುರು-ಪ್ರಿಯಮ್ । ಮಿತ್ರಮ್ । ನ । ಕ್ಷೇತ್ರ ಸಾಧಸಮಿತಿ ಕ್ಷೇತ್ರ-ಸಾಧಸಮ್ ॥ ಮಕ್ಷು । ದೇವವತ ಇತಿ ದೇವ-ವತಃ । ರಥಃ [೩] ।

---

| ಮಂತ್ರ | ವಿನಿಯೋಗ |
|---|---|
| ಅಗ್ನಿಂ ವಃ...ಸಾಧಸಮ್ ॥ | *ಸೋಮಾರುದ್ರಚರುಯಾಗದಲ್ಲಿನ ಮೊದಲನೆಯ ಸಾಮಿಧೇನೀ |
| ಮಕ್ಷೂ.... ಭುವತ್ ॥ | ಎರಡನೆಯ ಸಾಮಿಧೇನೀ. |

---

✢ **ವಸೂನಾಮ್** = ವಸುಗಳಾದ; **ವಃ** = ನಿಮ್ಮ ಮಧ್ಯದಲ್ಲಿ; **ಪೂರ್ವ್ಯಮ್** = ಮೊದಲನೆಯವನಾದ; **ಪುರುಪ್ರಿಯಮ್** = ಎಲ್ಲರಿಗೂ ಪ್ರಿಯನಾದ/ಪುರೋಡಾಶಾದಿಹವಿಸ್ಸುಗಳಿಗೆ ಇಷ್ಟನಾದ; **ಮಿತ್ರಂ ನ** = ಮಿತ್ರನಂತೆ/ಪಿತೃ, ಭ್ರಾತೃ ಮೊದಲಾದವರಂತೆ; **ಕ್ಷೇತ್ರ ಸಾಧಸಮ್** = ನಮ್ಮ ಕಾರ್ಯಕ್ಷೇತ್ರವನ್ನು ಸಾಧಿಸಿ ಕೊಡುವ; **ಅಗ್ನಿಮ್ ದೇವಮ್** = ಅಗ್ನಿದೇವನನ್ನು; **ಸಪರ್ಯಂತಃ** = ಯಾಗಸಮಾಪ್ತಿಯ ಪರ್ಯಂತವಾಗಿ; **ಗಿರಾ**= ವೈದಿಕ ವಾಕ್ಕಿನಿಂದ; **ಈಡೇ** = ಸ್ತುತಿಸುತ್ತೇನೆ. ✢ **ಪೃತ್ಸು ಕಾಸು ಚಿತ್** = [ರಾಮಾಯಣ- ಮಹಾಭಾರತ ಯುದ್ಧಗಳಂತೆ] ಭೀಕರವಾದ ಕೆಲವು ಯುದ್ಧಗಳಲ್ಲಿ; **ಶೂರಃ ವಾ** = ಶೂರನಂತೆ; **ದೇವವತಃ** = ದೇವತೆಗಳಿಗಾಗಿ ಯಾಗ ಮಾಡುವ; **ರಥಃ** = [ಯಜಮಾನನ ಮನಸ್ಸೆಂಬ] ರಥವು; **ಮಕ್ಷು** [ಗಚ್ಛತಿ] = ಶೀಘ್ರವಾಗಿ ಮುಂದುವರೆಯುತ್ತದೆ.

---

ಅಗ್ನಿದೇವನು ವಸುಗಳಲ್ಲಿ ಮೊದಲನೆಯವನು. ಪಿತೃ-ಭ್ರಾತೃ-ಮಿತ್ರಾದಿಗಳಂತೆ ನಮ್ಮ ಕಾರ್ಯವನ್ನು ಸಾಧಿಸಿಕೊಡತಕ್ಕವನು. ಎಲ್ಲರಿಗೂ ಪ್ರಿಯನಾದವನು. ಎಲ್ಲ ಹವಿಸ್ಸುಗಳನ್ನೂ ಪ್ರೀತಿಸುವವನು. ಇಂತಹ ಅಗ್ನಿದೇವನನ್ನು ಯಾಗಸಮಾಪ್ತಿಯವರೆಗೂ ವೈದಿಕ

---

* ಬ್ರಹ್ಮವರ್ಚಸಕಾಮನಿಗೆ ಇದು ವಿಹಿತವಾಗಿದೆ. ಅದರಲ್ಲಿ 'ಸಮಿಧ್ಯಮಾನೋ ಅಧ್ವರೇ' 'ಸಮಿದ್ಧೋ ಅಗ್ನೇ' ಈ ಎರಡು ಸಾಮಿಧೇನಿಗಳ ಮಧ್ಯದಲ್ಲಿ 'ಮಾನವೀ ಋಚೌ ಧಾಯ್ಯೇ ಕುರ್ಯಾತ್' ಎಂದು ಎರಡು ಸಾಮಿಧೇನಿಗಳು ವಿಹಿತವಾಗಿವೆ. ಅದಕ್ಕಾಗಿ ಇಲ್ಲಿ ಆರು ಮಂತ್ರಗಳು ವಿಕಲ್ಪದಿಂದ ಹೇಳಲ್ಪಟ್ಟಿವೆ.

**ಶೂರೋ ವಾ ಪೃತ್ಸು ಕಾಸು ಚಿತ್ ।* ದೇವಾನಾಂ ಯ ಇನ್ಮನೋ ಯಜಮಾನ ಇಯಕ್ಷತ್ಯಭೀದಯಜ್ವನೋ ಭುವತ್ ॥* ನ ಯಜಮಾನ ರಿಷ್ಯಸಿ ನ ಸುನ್ವಾನ ನ ದೇವಯೋ ।**

---

ಶೂರಃ । ವಾ । ಪೃತ್ಸ್ವಿತಿ ಪೃತ್-ಸು । ಕಾಸು । ಚಿತ್ ॥ ದೇವಾನಾಮ್ । ಯಃ । ಇತ್। ಮನಃ। ಯಜಮಾನಃ । ಇಯಕ್ಷತಿ । ಅಭೀತಿ । ಇತ್ । ಅಯಜ್ವನಃ । ಭುವತ್॥ ನ । ಯಜಮಾನ । ರಿಷ್ಯಸಿ । ನ । ಸುನ್ವಾನ । ನ । ದೇವಯೋ ಇತಿ ದೇವ-ಯೋ ॥

---

| ಮಂತ್ರ | ವಿನಿಯೋಗ |
|---|---|
| ನ ಯಜಮಾನ.... ದೇವಯೋ ॥ *[ದೇವಾನಾಂ..... ಭುವತ್] | ಮೂರನೆಯ ಸಾಮಿಧೇನೀ |

---

**ಯಃ ಯಜಮಾನಃ ಇತ್** = ಯಾವ ಯಜಮಾನನೇ; **ದೇವಾನಾಂ ಮನಃ ಇಯಕ್ಷತಿ** = ದೇವತೆಗಳ ಮನಸ್ಸನ್ನು [ಒಲಿಸಿಕೊಳ್ಳುವುದಕ್ಕಾಗಿ] ಯಾಗ ಮಾಡಲು ಅಪೇಕ್ಷಿಸುವನೋ; **ಸಃ** = ಆ ಯಜಮಾನನು; **ಅಯಜ್ವನಃ** = ಯಾಗ ಮಾಡದವರನ್ನು; **ಅಭಿ ಭುವತ್ ಇತ್** = ಪರಾಭವಗೊಳಿಸುವವನೇ ಆಗುತ್ತಾನೆ. ∻ **ಯಜಮಾನ** = ಎಲೈ! ಇಷ್ಟಿಗಳನ್ನು ಮಾಡುವ ಯಜಮಾನನೇ! [ನೀನು] **ನ ರಿಷ್ಯಸಿ** = [ಯಾಗವನ್ನು] ಮಾಡಿ ವಿನಾಶ ಹೊಂದುವುದಿಲ್ಲ. **ಸುನ್ವಾನ** = ಸೋಮಯಾಗವನ್ನು ಮಾಡುವ ಯಜಮಾನನೇ! **ನ ರಿಷ್ಯಸಿ** = [ನೀನು ಯಾಗ ಮಾಡಿ] ನಶಿಸುವುದಿಲ್ಲ; **ದೇವಯೋ ನ ರಿಷ್ಯಸಿ** = ಔಪಾಸನ, [ವೈಶ್ವದೇವಾದಿ] ಪಾಕಯಜ್ಞಗಳನ್ನು ಮಾಡುವ ಯಜಮಾನನೇ! ನೀನು ಯಾಗ ಮಾಡಿ ನಶಿಸುವುದಿಲ್ಲ. [ದೇವಾನಾಂ= ಹಿಂದಿನ ಮಂತ್ರದಂತೆ]

---

ಮಂತ್ರಗಳಿಂದ ಸ್ತುತಿಸುತ್ತೇನೆ. [ವಸೂನಾಮ್-ವಸ್ವರ್ಥಮ್। ಸಂಪತ್ತಿಗಾಗಿ ಅಗ್ನಿಯನ್ನು ಸ್ತುತಿಸುತ್ತೇವೆ. ಸಪರ್ಯಂತಃ = ಅರ್ಚಿಸುವವರಾಗಿ]

ಯಾಗವು ಒಂದು ಯುದ್ಧದಂತೆ. ಯುದ್ಧದಲ್ಲಿ ವೀರನು ತನ್ನ ಪ್ರಾಣದ ಮೇಲಿನ ಆಸೆಯನ್ನು ತೊರೆದು ಕರ್ತವ್ಯದೃಷ್ಟಿಯಿಂದ ಮುನ್ನುಗ್ಗುತ್ತಾನೆ. ಹಾಗೆಯೇ ದೇವತೆಗಳನ್ನು ಉದ್ದೇಶಿಸಿ, ಅವರ ಮನಸ್ಸನ್ನು ಒಲಿಸಿಕೊಳ್ಳಲು ಇಚ್ಛಿಸುವ ಯಜಮಾನನ ಮನಸ್ಸೆಂಬ ರಥವೂ ಕಷ್ಟವನ್ನು ಲೆಕ್ಕಿಸದೆ ಮುನ್ನುಗ್ಗುತ್ತದೆ. ಯಾವ ಯಜಮಾನನು ದೇವತೆಗಳ ಮನಸ್ಸನ್ನು ಒಲಿಸಿಕೊಳ್ಳಲು ಯಾಗ ಮಾಡಲು ಇಚ್ಛಿಸುತ್ತಾನೆಯೋ ಆತನು ಯಾಗ ಮಾಡದಿರುವ ವೈರಿಗಳನ್ನು ಸೋಲಿಸಿಯೇ ಸೋಲಿಸುತ್ತಾನೆ.

---

* ಮೂರನೆಯ, ನಾಲ್ಕನೆಯ ಮತ್ತು ಐದನೆಯ ಸಾಮಿಧೇನಿಗಳಲ್ಲಿ ಇದರ ಅನುಷಂಗವಿದೆ.

**ಅಸದತ್ರ ಸುವೀರ್ಯಮುತ ತ್ಯದಾಶ್ವಶ್ವ್ಯಿಯಮ್ ॥ ನಕಿಷ್ಟಂ ಕರ್ಮಣಾ ನಶನ್ನ ಪ್ರ ಯೋಷನ್ನ ಯೋಷತಿ ।**

ಅಸತ್ । ಅತ್ರ । ಸುವೀರ್ಯಮಿತಿ ಸು-ವೀರ್ಯಮ್ । ಉತ । ತ್ಯತ್ । ಆಶ್ವಶ್ವ್ಯಿಯಮಿತ್ಯಾಶು-ಅಶ್ವಿಯಮ್ ॥ ನಕಿಃ । ತಮ್ । ಕರ್ಮಣಾ । ನಶತ್ । ನ । ಪ್ರೇತಿ । ಯೋಷತ್ । ನ । ಯೋಷತಿ ॥

| ಮಂತ್ರ | ವಿನಿಯೋಗ |
|---|---|
| ಅಸದತ್ರ.....ಆಶ್ವಶ್ವ್ಯಿಯಮ್ । [ದೇವಾನಾಂ...ಭುವತ್] | ನಾಲ್ಕನೆಯ ಸಾಮಿಧೇನೀ |
| ನಕಿಷ್ಟಂ.....ಯೋಷತಿ ॥ [ದೇವಾನಾಂ...ಭುವತ್] | ಐದನೆಯ ಸಾಮಿಧೇನೀ. |

∴ **ಅತ್ರ** = ಈ ಯಜಮಾನನಲ್ಲಿ; **ಸುವೀರ್ಯಮ್** = ಒಳ್ಳೆಯ ಸಾಮರ್ಥ್ಯವು; **ಅಸತ್** = ಇರಲಿ; **ಉತ** = ಮತ್ತು; **ತ್ಯತ್** = ಆ; **ಆಶ್ವಶ್ವ್ಯಿಯಮ್** = ಶೀಘ್ರವಾಗಿ ಹೋಗುವ ಕುದುರೆಗಳ ಒಳ್ಳೆಯ ಸಾಮರ್ಥ್ಯವೂ; ಅಸತ್ = ಇರಲಿ. ∴ **ಕರ್ಮಣಾ ತಮ್** = ಯಾಗಕರ್ಮಗಳಿಂದ [ಯುಕ್ತನಾದ] ಆ ಯಜಮಾನನನ್ನು; [ರಾಕ್ಷಸಾದಿಗಳು] **ನಕಿಃ ನಶತ್** = ನಾಶ ಮಾಡದಿರಲಿ. [ಯಜಮಾನನೊಡನೆ ಯಜ್ಞವಿರೋಧಿಯಾದ] [ಪಾಪಕರ್ಮವು] **ನ ಪ್ರಯೋಷತ್** = ಸೇರದಿರಲಿ. [ಯಜಮಾನನೂ ಪಾಪದೊಡನೆ] **ನಯೋಷತಿ** = ಚೆನ್ನಾಗಿ ಸೇರದಿರಲಿ; [ದೇವಾನಾಂ... ಹಿಂದಿನ ಮಂತ್ರದಂತೆ]

[ಅನ್ವಯವು ಕೊಂಚ ಕ್ಲಿಷ್ಟವಾಗಿದೆ. '**ಶೂರಃ ವಾ**' ಎಂಬಲ್ಲಿ ಷಷ್ಠೀವಿಭಕ್ತಿಗೆ ಪ್ರಥಮಾ ಎಂದು ವಿವರಣೆಯನ್ನು ನೀಡಿ '**ಶೂರಸ್ಯ ರಥಃ ಇವ**' ಎಂದು ಮಿಶ್ರರು ವಿವರಿಸಿರುತ್ತಾರೆ.]

ಇಷ್ಟಿಗಳನ್ನು ಮಾಡುವ ಯಜಮಾನನೇ! ನೀನು ಯಾಗ ಮಾಡಿ ನಶಿಸುವುದಿಲ್ಲ. ಸೋಮಯಾಗವನ್ನು ಮಾಡುವ ದೀಕ್ಷಿತನೇ! ನೀನೂ ಯಾಗವನ್ನು ಮಾಡಿ ನಾಶವಾಗುವುದಿಲ್ಲ. ಪಾಕಯಜ್ಞಾದಿಗಳನ್ನು ಮಾಡುವ ಯಜಮಾನನೇ! ನೀನೂ ಯಾಗವನ್ನು ಮಾಡಿ ನಶಿಸುವುದಿಲ್ಲ. ದೇವತೆಗಳ ಮನಸ್ಸನ್ನು ಒಲಿಸಲು ಯಾಗವನ್ನು ಮಾಡಬಯಸುವವನು ಯಾಗ ಮಾಡದ ವೈರಿಯನ್ನು ಪರಾಭವಗೊಳಿಸಿಯೇ ತೀರುತ್ತಾನೆ.

ಈ ಯಜಮಾನನಲ್ಲಿ ಕಾರ್ಯಗಳನ್ನು ಮಾಡುವ ಒಳ್ಳೆಯ ಸಾಮರ್ಥ್ಯವಿರಲಿ. ಶೀಘ್ರವಾಗಿ ಓಡುವ ಕುದುರೆಗಳಿಗಿರುವಂತಹ ಬೇಗನೆ ಕೆಲಸ ಮಾಡುವ ಸಾಮರ್ಥ್ಯವಿರಲಿ. ದೇವತೆಗಳ ಮನ ಒಲಿಸಲು ಯಾಗವನ್ನು ಅನುಷ್ಠಿಸಲು ಇಚ್ಛಿಸುವ ಯಜಮಾನನು ಯಾಗವನ್ನು ಮಾಡದ ವೈರಿಯನ್ನು ಅವಶ್ಯ ಸೋಲಿಸುತ್ತಾನೆ.

ಉಪಕ್ಷರಂತಿ ಸಿಂಧವೋ ಮಯೋಭುವ ಈಜಾನಂ ಚ ಯಕ್ಷ್ಯಮಾಣಂ ಚ ಧೇನವಃ । ಪೃಣಂತಂ ಚ ಪಪುರಿಂ ಚ [೪] ಶ್ರವಸ್ಯವೋ ಘೃತಸ್ಯ ಧಾರಾ ಉಪ ಯಂತಿ ವಿಶ್ವತಃ ॥

---

ಉಪೇತಿ । ಕ್ಷರಂತಿ । ಸಿಂಧವಃ । ಮಯೋಭುವ ಇತಿ ಮಯಃ-ಭುವಃ । ಈಜಾನಮ್। ಚ । ಯಕ್ಷ್ಯಮಾಣಮ್ । ಚ । ಧೇನವಃ ॥ ಪೃಣಂತಮ್ । ಚ । ಪಪುರಿಮ್ । ಚ । [೪] ಶ್ರವಸ್ಯವಃ । ಘೃತಸ್ಯ । ಧಾರಾಃ । ಉಪೇತಿ । ಯಂತಿ । ವಿಶ್ವತಃ ॥

---

| ಮಂತ್ರ | ವಿನಿಯೋಗ |
|---|---|
| ಉಪಕ್ಷರಂತಿ....ವಿಶ್ವತಃ ॥ | ಆರನೆಯ ಸಾಮಿಧೇನೀ. |

---

∴ **ಸಿಂಧವಃ** = ನದಿಗಳಂತೆ; **ಮಯೋಭುವಃ** = ಸುಖವನ್ನುಂಟುಮಾಡುವ; **ಧೇನವಃ** = ಗೋವುಗಳು; **ಈಜಾನಂ ಚ** = ಯಾಗ ಮಾಡಿರುವವನನ್ನು; **ಯಕ್ಷ್ಯಮಾಣಂ ಚ** = ಮುಂದೆ ಯಾಗ ಮಾಡಬೇಕೆಂದಿರುವವನನ್ನೂ; **ಉಪಕ್ಷರಂತಿ** = ಹೊಂದಿ ಹೆಚ್ಚು ಹಾಲನ್ನು ಸುರಿಸುತ್ತವೆ; **ಪೃಣಂತಂ ಚ** = [ಯಾಗದಲ್ಲಿ ಜುಹೂವನ್ನು ಆಜ್ಯದಿಂದ] ಪೂರ್ಣ ಮಾಡಿರುವ; **ಪಪುರಿಂ ಚ** = ಮುಂದೆ ಯಾಗಗಳಲ್ಲಿ ಜುಹೂವನ್ನು ಪೂರ್ಣ ಮಾಡಲಿರುವ [ಯಜಮಾನನನ್ನು] **ಶ್ರವಸ್ಯವಃ** = ಪ್ರಸಿದ್ಧಿ ಪಡಿಸುವುದಕ್ಕಾಗಿ ಇಚ್ಛೆ ಹೊಂದಿರುವಂತೆ; **ಘೃತಸ್ಯ ಧಾರಾಃ** = ತುಪ್ಪದ ಧಾರೆಗಳು; **ವಿಶ್ವತಃ** = ಎಲ್ಲಾ ಕಡೆಗಳಿಂದಲೂ; **ಉಪಯಂತಿ** = ಹೊಂದಿ [ಯಾಗದಲ್ಲಿ ಉಪಯುಕ್ತವಾಗಿ ದೇವತೆಗಳನ್ನು ಸಂತೋಷಪಡಿಸುತ್ತವೆ]

---

ಯಾಗಾದಿಕರ್ಮಗಳಿಂದ ಪವಿತ್ರನಾಗಿರುವ ಯಜಮಾನನನ್ನು ರಾಕ್ಷಸಾದಿಗಳು ನಾಶಪಡಿಸದಿರಲಿ. ಯಜ್ಞವಿರೋಧಿಯಾದ ಪಾಪಕರ್ಮವು ಯಜಮಾನನೊಡನೆ ಸೇರದಿರಲಿ. ಯಜಮಾನನೂ ಪಾಪಕರ್ಮಲಿಪ್ತನಾಗದಿರಲಿ. ದೇವತೆಗಳ ಮನಸ್ಸನ್ನು ಒಲಿಸಬಯಸುವ ಯಜಮಾನನು ಯಾಗಮಾಡಬೇಕೆಂದು ಬಯಸುವವನಾದರೆ ಅವನು ಯಾಗ ಮಾಡದ ವೈರಿಯನ್ನು ಸೋಲಿಸಿಯೇ ಸೋಲಿಸುತ್ತಾನೆ.

ನದಿಗಳು ಸಸ್ಯಾಭಿವೃದ್ಧಿಯನ್ನು ಮಾಡಿ ಜನರಿಗೆ ಸುಖವನ್ನು ಉಂಟು ಮಾಡುವಂತೆ ಹಾಲು, ತುಪ್ಪ ಮೊದಲಾದವುಗಳಿಂದ ದೇವತೆಗಳನ್ನು ತೃಪ್ತಿಪಡಿಸುವ ಮತ್ತು ಪುಷ್ಟಿಯನ್ನು ಉಂಟು ಮಾಡಿ ಸುಖಪಡಿಸುವ ಧೇನುಗಳು ಯಜಮಾನನ ಮನೆಯಲ್ಲಿ ಬಂದು ಸೇರಿ ಹಾಲನ್ನು ಸುರಿಸಲಿ. ಹಿಂದೆ ಯಾಗ ಮಾಡಿದವನನ್ನೂ, ಮುಂದೆ ಯಾಗ ಮಾಡುವವನನ್ನೂ, ಹೋಮಗಳಲ್ಲಿ ಜುಹೂವನ್ನು ಪೂರ್ಣಗೊಳಿಸುವವನನ್ನೂ,

**ಸೋಮಾರುದ್ರಾ ವಿ ವೃಹತಂ ವಿಷೂಚೀಮಮೀವಾ ಯಾ ನೋ ಗಯಮಾವಿವೇಶ । ಆರೇ ಬಾಧೇಥಾಂ ನಿರ್‌ಋತಿಂ ಪರಾಚೈಃ ಕೃತಂ ಚಿದೇನಃ ಪ್ರ ಮುಮುಕ್ತಮಸ್ಮತ್ ॥**

---

**ಸೋಮಾರುದ್ರೇತಿ ಸೋಮಾ-ರುದ್ರಾ ॥ ವೀತಿ । ವೃಹತಮ್ । ವಿಷೂಚೀಮ್ । ಅಮೀವಾ। ಯಾ । ನಃ । ಗಯಮ್ । ಆವಿವೇಶೇತ್ಯಾ-ವಿವೇಶ ॥ ಆರೇ। ಬಾಧೇಥಾಮ್ । ನಿರ್‌ಋತಿಮಿತಿ ನಿಃ-ಋತಿಮ್। ಪರಾಚೈಃ । ಕೃತಮ್ । ಚಿತ್ । ಏನಃ। ಪ್ರೇತಿ । ಮುಮುಕ್ತಮ್। ಅಸ್ಮತ್॥**

---

| ಮಂತ್ರ | ವಿನಿಯೋಗ |
|---|---|
| ಸೋಮಾರುದ್ರಾ.... ಅಸ್ಮತ್ ॥ | ಬ್ರಹ್ಮವರ್ಚಸಕಾಮನು ಮಾಡುವ ಸೋಮಾರುದ್ರೇಷ್ಟಿಯ ಪುರೋನುವಾಕ್ಯೆ |

---

✣ **ಸೋಮಾರುದ್ರಾ** = ಸೋಮಾರುದ್ರದೇವತೆಗಳೇ! **ಯುವಮ್** = ನೀವಿಬ್ಬರೂ; **ಯಾ ಅಮೀವಾ** = ಯಾವ ರೋಗರೂಪವಾದ ನಿರ್‌ಋತಿಯು; **ನಃ ಗಯಮ್** = [ನಮ್ಮ] ಮನೆಯನ್ನು; **ಆವಿವೇಶ** = ಪ್ರವೇಶಿಸಿದೆಯೋ; [ಆ ನಿರ್‌ಋತಿಯನ್ನು] **ವಿಷೂಚೀಮ್** = ಎಲ್ಲ ದಿಕ್ಕುಗಳಿಗೂ ಹೋಗುವಂತೆ ಮಾಡಿ; **ವಿವೃಹತಮ್** = ನಾಶಪಡಿಸಿರಿ. **ಪರಾಚೈಃ** = ಪರಾಙ್ಮುಖಗೊಳಿಸಿ; **ನಿರ್‌ಋತಿಮ್** = ನಿರ್‌ಋತಿಯನ್ನು; **ಆರೇ ಬಾಧೇಥಾಮ್** = ದೂರದಲ್ಲಿಯೇ ನಾಶಪಡಿಸಿರಿ; **ಕೃತಮ್ ಚಿತ್ ಏನಃ** = [ನಾವು] ಮಾಡಿರಬಹುದಾದ ರೋಗಕಾರಣವಾದ ಪಾಪವನ್ನು; **ಅಸ್ಮತ್** = ನಮ್ಮಿಂದ; **ಪ್ರ ಮುಮುಕ್ತಮ್** = ದೂರಗೊಳಿಸಿರಿ/ಹೋಗಲಾಡಿಸಿರಿ.

---

ಮುಂದೆ ಪೂರ್ಣಗೊಳಿಸುವವನನ್ನೂ ಲೋಕದಲ್ಲಿ ಪ್ರಸಿದ್ಧಿಗೊಳಿಸುವಂತೆ ತುಪ್ಪದ ಧಾರೆಗಳು ಎಲ್ಲ ಕಡೆಗಳಿಂದಲೂ ಬಂದು ದೇವತೆಗಳನ್ನು ತೃಪ್ತಿಪಡಿಸಿ, ಯಜಮಾನನಿಗೆ ಕರ್ಮಫಲವನ್ನು ತಂದುಕೊಡಲಿ.

ಎಲೈ! ಸೋಮಾರುದ್ರದೇವತೆಗಳೇ! ಯಾವ ರೋಗಾದಿರೂಪವಾದ ನಿರ್‌ಋತಿಯು ನಮ್ಮ ಮನೆಯನ್ನು ಪ್ರವೇಶಿಸಿದೆಯೋ, ಆ ನಿರ್‌ಋತಿಯನ್ನು ದಿಕ್ಕು ದಿಕ್ಕುಗಳಿಗೂ ಪಲಾಯನ ಮಾಡುವಂತೆ ಮಾಡಿ ನಾಶಗೊಳಿಸಿರಿ. ನಮ್ಮಿಂದ ಪರಾಙ್ಮುಖ

**ಸೋಮಾರುದ್ರಾ ಯುವಮೇತಾನ್ಯಸ್ಮೇ ವಿಶ್ವಾ ತನೂಷು ಭೇಷಜಾನಿ ಧತ್ತಮ್ । ಅವ ಸ್ಯತಂ ಮುಂಚತಂ ಯನ್ನೋ ಅಸ್ತಿ ತನೂಷು ಬದ್ಧಂ ಕೃತಮೇನೋ ಅಸ್ಮತ್ ॥**

---

ಸೋಮಾರುದ್ರೇತಿ ಸೋಮಾ-ರುದ್ರಾ । ಯುವಮ್। ಏತಾನಿ । ಅಸ್ಮೇ ಇತಿ । ವಿಶ್ವಾ । ತನೂಷು । ಭೇಷಜಾನಿ । ಧತ್ತಮ್ ॥ ಅವೇತಿ । ಸ್ಯತಮ್ । ಮುಂಚತಮ್ । ಯತ್। ನಃ । ಅಸ್ತಿ । ತನೂಷು । ಬದ್ಧಮ್ । ಕೃತಮ್ । ಏನಃ । ಅಸ್ಮತ್ ॥

---

| ಮಂತ್ರ | ವಿನಿಯೋಗ |
|---|---|
| ಸೋಮಾರುದ್ರಾ... ಅಸ್ಮತ್ ॥ | ನಾನಾಕಾಮನೆಗಳಿಗಾಗಿ ವಿಹಿತವಾದ ಸೋಮಾರುದ್ರ ಯಾಗದ ಯಾಜ್ಯೆ. |

---

∴ ಸೋಮಾರುದ್ರಾ = ಎಲೈ! ಸೋಮಾರುದ್ರದೇವತೆಗಳೇ! ಯುವಮ್= ನೀವಿಬ್ಬರು; ವಿಶ್ವಾ= ಎಲ್ಲ; ಏತಾನಿ= ಈ; ಭೇಷಜಾನಿ = ಔಷಧಿಗಳನ್ನೂ; ಅಸ್ಮೇ = ನಮ್ಮ; ತನೂಷು = ದೇಹಗಳಲ್ಲಿ; ಧತ್ತಮ್ = ನೆಲೆಗೊಳಿಸಿರಿ. ಅವ ಸ್ಯತಮ್ = [ಆ ಔಷಧಿಗಳಿಂದ ರೋಗರೂಪನಿರ್ಋತಿಯನ್ನು] ಹೋಗಲಾಡಿಸಿರಿ; ಯತ್ = ಯಾವ; ಕೃತಮ್ = [ನಿರ್ಋತಿಯಿಂದ ಸಂಭವಿಸಿರುವ] ನಾವು ಮಾಡಿರುವ; ನಃ ತನೂಷು ಬದ್ಧಮ್ = ನಮ್ಮ ಶರೀರಗಳಲ್ಲಿ ಬಲವಾಗಿ ಸೇರಿರುವ; ಏನಃ ಅಸ್ತಿ = ಪಾಪವಿದೆಯೋ [ಅದನ್ನು]; ಅಸ್ಮತ್ = ನಮ್ಮಿಂದ; ಮುಂಚತಮ್ = ಬಿಡಿಸಿರಿ.

---

ನಾದ ನಿರ್ಋತಿಯನ್ನು ದೂರದಲ್ಲಿಯೇ ಬಾಧಿಸಿರಿ. ನಿರ್ಋತಿಯಿಂದ ನಮ್ಮಲ್ಲಿ ಸಂಭವಿಸಿರುವ ರೋಗರೂಪಪಾಪವನ್ನು ಹೋಗಲಾಡಿಸಿರಿ. ನಾವು ಮಾಡಿದ ಪಾಪವಿದ್ದರೆ ಅದನ್ನೂ ನಿವಾರಿಸಿರಿ.

ಸೋಮಾರುದ್ರದೇವತೆಗಳೇ! ನೀವಿಬ್ಬರು ನಮ್ಮ ದೇಹಗಳಲ್ಲಿ ಎಲ್ಲ ಔಷಧಗಳನ್ನೂ ಇಟ್ಟು ಅದರಿಂದ ರೋಗಾದಿಗಳನ್ನು ನಿವಾರಿಸಿರಿ. ಪಾಪಫಲವಾಗಿ ನಮ್ಮಲ್ಲಿ ಬೇರೂರಿದ ರೋಗಾದಿಯಾದ ಅನಿಷ್ಟಗಳನ್ನು ನಮ್ಮಿಂದ ನಿವಾರಿಸಿರಿ.

ಸೋಮಾಪೂಷಣಾ ಜನನಾ ರಯೀಣಾಂ ಜನನಾ ದಿವೋ ಜನನಾ ಪೃಥಿವ್ಯಾಃ । ಜಾತೌ ವಿಶ್ವಸ್ಯ ಭುವನಸ್ಯ ಗೋಪೌ ದೇವಾ ಅಕೃಣನ್ನಮೃತಸ್ಯ ನಾಭಿಮ್ ॥

---

ಸೋಮಾಪೂಷಣೇತಿ ಸೋಮಾ-ಪೂಷಣಾ । ಜನನಾ । ರಯೀಣಾಮ್ । ಜನನಾ । ದಿವಃ। ಜನನಾ । ಪೃಥಿವ್ಯಾಃ ॥ ಜಾತೌ । ವಿಶ್ವಸ್ಯ । ಭುವನಸ್ಯ । ಗೋಪೌ । ದೇವಾಃ । ಅಕೃಣ್ವನ್ । ಅಮೃತಸ್ಯ । ನಾಭಿಮ್ ॥

---

| ಮಂತ್ರ | ವಿನಿಯೋಗ |
|---|---|
| ಸೋಮಾಪೂಷಣಾ.... ನಾಭಿಮ್ ॥ | ದುಶ್ಚರ್ಮಪರಿಹಾರಕವಾದ ಸೋಮಾಪೌಷ್ಣ ಯಾಗದ ಪುರೋನುವಾಕ್ಯೆ. |

---

⁘ ಸೋಮಾಪೂಷಣಾ = ಸೋಮಾಪೂಷದೇವತೆಗಳೇ! [ನೀವು] ರಯೀಣಾಮ್ = ಐಶ್ವರ್ಯಗಳ; ಜನನಾ = ಜನಕರು. ದಿವಃ = ಸ್ವರ್ಗದ/ದ್ಯುಲೋಕದ; ಜನನಾ = ಜನಕರು. ಪೃಥಿವ್ಯಾಃ = ಭೂಮಿಯ; ಜನನಾ = ಜನಕರೂ [ಆಗಿರುತ್ತೀರಿ]. ಜಾತೌ = ಹುಟ್ಟಿದವರಾಗಿಯೇ/ಹುಟ್ಟಿದೊಡನೆಯೇ; ವಿಶ್ವಸ್ಯ ಭುವನಸ್ಯ ಗೋಪೌ = ಎಲ್ಲ ಲೋಕಗಳಿಗೂ ರಕ್ಷಕರಾಗಿದ್ದೀರಿ. ದೇವಾಃ = ದೇವತೆಗಳು; [ನಿಮ್ಮನ್ನು] ಅಮೃತಸ್ಯ ನಾಭಿಮ್ = ಅಮೃತವನ್ನು ಕಟ್ಟಿರುವ ಹಗ್ಗದಂತೆ; ಅಕೃಣ್ವನ್ = ಮಾಡಿದರು.

---

ಸೋಮಾಪೂಷದೇವತೆಗಳೇ! ನೀವು ಧನದ ಜನಕರು. ದ್ಯಾವಾಪೃಥಿವಿಗಳ ಜನಕರೂ ಆಗಿದ್ದೀರಿ. ನೀವು ಹುಟ್ಟಿದೊಡನೆಯೇ ಸಮಸ್ತ ಭುವನಗಳಿಗೂ ರಕ್ಷಕರಾಗಿದ್ದೀರಿ. ದೇವತೆಗಳು ನಿಮ್ಮನ್ನು ಕರ್ಮಫಲರೂಪವಾದ ಅಮೃತವನ್ನು ಕಟ್ಟಿಟ್ಟುಕೊಂಡಿರುವ ಹಗ್ಗವನ್ನಾಗಿ ಮಾಡಿದರು. ಅಂದರೆ ಅಮೃತದ ರಕ್ಷಕರನ್ನಾಗಿ ಮಾಡಿದರು. ಈ ಅಮೃತರೂಪವಾದ ಕರ್ಮಫಲವನ್ನು ಯಜಮಾನನಿಗೆ ಕೊಡುವುದು ನಿಮ್ಮ ಅಧೀನ.

**ಇಮೌ ದೇವೌ ಜಾಯಮಾನೌ ಜುಷಂತೇಮೌ ತಮಾಗ್ಂಸಿ ಗೂಹತಾಮಜುಷ್ಟಾ । ಆಭ್ಯಾಮಿಂದ್ರಃ ಪಕ್ವಮಾಮಾಸ್ವಂತ-ಸ್ಸೋಮಾಪೂಷಭ್ಯಾಂ ಜನದುಸ್ರಿಯಾಸು ॥ ೨೨-42 ॥**

**[ಬೃಹತಃ ಶವಸಾ ರಥಃ ಪಪುರಿಂ ಚ ದಿವೋ ಜನನಾ ಪಂಚವಿಗ್ಂಶತಿಶ್ಚ]**

---

ಇಮೌ । ದೇವೌ । ಜಾಯಮಾನೌ । ಜುಷಂತ । ಇಮೌ । ತಮಾಗ್ಂಸಿ। ಗೂಹತಾಮ್। ಅಜುಷ್ಟಾ ॥ ಆಭ್ಯಾಮ್ । ಇಂದ್ರಃ । ಪಕ್ವಮ್ । ಆಮಾಸು । ಅಂತಃ । ಸೋಮಾ-ಪೂಷಭ್ಯಾಮಿತಿ ಸೋಮಾಪೂಷ-ಭ್ಯಾಮ್ । ಜನತ್ । ಉಸ್ರಿಯಾಸು ॥ ೨೨ ॥

---

| ಮಂತ್ರ | ವಿನಿಯೋಗ |
|---|---|
| ಇಮೌ...ಉಸ್ರಿಯಾಸು ॥ | ಸೋಮಾಪೌಷ್ಣಯಾಗದ ಯಾಜ್ಯೆ. |

---

∴ [ದೇವತೆಗಳು] **ಇಮೌ ದೇವೌ ಜಾಯಮಾನೌ** = ಹುಟ್ಟುತ್ತಿರುವ ಈ ಸೋಮಾಪೂಷ ದೇವತೆಗಳನ್ನು; **ಜುಷಂತ** = ಸೇವಿಸುತ್ತಾರೆ. **ಇಮೌ** = ಇವರಿಬ್ಬರೂ; **ಅಜುಷ್ಟಾ** = ಅಪ್ರಿಯವಾದ; **ತಮಾಗ್ಂಸಿ** = ಬುದ್ಧಿಮಾಂದ್ಯಾದಿಗಳನ್ನು/ಅಜ್ಞಾನಾದಿಗಳನ್ನು; **ಗೂಹತಾಮ್** = ಹೋಗಲಾಡಿಸಲಿ. **ಇಂದ್ರಃ** = ಇಂದ್ರನು; **ಆಭ್ಯಾಮ್ ಸೋಮಾಪೂಷ ಭ್ಯಾಮ್** = ಈ ಸೋಮಾಪೂಷರಿಂದ /ಸೋಮಾಪೂಷರೊಡನೆ ಕೂಡಿಕೊಂಡು; **ಆಮಾಸು ಉಸ್ರಿಯಾಸು** = ತರುಣಗೋವುಗಳಲ್ಲಿ; **ಅಂತಃ** = ಒಳಗೆ/ರಸಪೋಷಣೆ ಮಾಡಿ; **ಪಕ್ವಮ್** = ನವನೀತಾದಿಸಾಧಕವಾದ [ಕ್ಷೀರವನ್ನು] **ಜನತ್** = ಉಂಟು ಮಾಡಿದನು.

---

ಈ ಸೋಮಾಪೂಷದೇವತೆಗಳನ್ನು ಹುಟ್ಟುತ್ತಿರುವಾಗಲೇ ದೇವತೆಗಳು ಸೇವಿಸಿದರು. ಇವರಿಬ್ಬರೂ ಬುದ್ಧಿಮಾಂದ್ಯಾದಿಗಳನ್ನೂ, ಅಜ್ಞಾನಾದಿಗಳನ್ನೂ ಹೋಗಲಾಡಿಸಲಿ. ಇಂದ್ರನು ಇವರೊಡನೆ ಕೂಡಿಕೊಂಡು ತರುಣಗೋವುಗಳಲ್ಲಿ ಪಕ್ವವಾದ ಕ್ಷೀರವು ವೃದ್ಧಿ ಹೊಂದುವಂತೆ ಮಾಡಲಿ.

[ಇಂದ್ರನು ವೃಷ್ಟಿದೇವತೆ; ಸೋಮನು ಓಷಧಿಪೋಷಕ. ಪೂಷನೂ

[ಸೂರ್ಯನು] ಸಸ್ಯವರ್ಧಕ. ಇವರ ಅನುಗ್ರಹದಿಂದ ಹಸುಗಳಲ್ಲಿ ಕ್ಷೀರವು ಅಧಿಕ ವಾಗುತ್ತದೆ.]

ಇಂತಹ ಸೋಮಪೂಷದೇವತೆಗಳು ದುಶ್ಚರ್ಮರೋಗವುಂಟಾಗದಿರುವಂತೆ ಮಾಡಲಿ.

ಅನುಮತ್ಯಾ ಆಗ್ನೇಯಮ್ಮೈಂದ್ರಾಗ್ನಮಗ್ನಯೇ ಸೋಮಾಯ

ಪ್ರತಿಪೂರುಷಮ್ಮೈಂದ್ರಾಗ್ನಂ ಧಾತ್ರೇ ಬಾರ್ಹಸ್ಪತ್ಯಮಗ್ನಯೇ

ಗೃಹಪತಯೇಽರ್ಧೇತೋ ದೇವೀಸ್ಸಮಿಧಗ್‌ಂ ಸೋಮಸ್ಯೇಂದ್ರಸ್ಯ

ಮಿತ್ರ ಆಗ್ನೇಯಗ್‌ಂ ಸದ್ಯ ಆಗ್ನೇಯಗ್‌ಂ

ಹಿರಣ್ಯಮಾಗ್ನೇಯಗ್ಂ ಸ್ವಾದ್ವೀಂ ತ್ವಾಽಗ್ನಾವಿಷ್ಣೂ

ದ್ವಾವಿಗ್‌ಂಶತಿಃ ॥ 22 ॥

ಅನುಮತ್ಯೈ ಯಥಾಽಸತಿ ದೇವೀರಾಪೋ ಮಿತ್ರೋಽಸಿ ಶೂರೋ

ವಾ ದ್ವಿಚತ್ವಾರಿಗ್‌ಂಶತ್ ॥ 42 ॥

ಅನುಮತ್ಯಾ ಉಸ್ರಿಯಾಸು ॥

ಹರಿಃ ಓಮ್ ॥

ಶ್ರೀ ಕೃಷ್ಣಾರ್ಪಣಮಸ್ತು

**ಇತಿ ಪ್ರಥಮಕಾಂಡೇ ಅಷ್ಟಮಃ ಪ್ರಶ್ನಃ**

**ಇತಿ ಪ್ರಥಮಃ ಕಾಂಡಃ**

---

## ವಿನಿಯೋಗ ಸಂಗ್ರಹ

ಆಗ್ನಾವೈಷ್ಣವಮಿತ್ಯಾದಾವಭಿಚಾರಹವಿಸ್ತ್ರಯೇ ।
[1-2]ಅಗ್ನಾ ಪ್ರ ಣೋ[3-4] ಬೃಹೇತ್ಯಾದ್ಯಾ[5-6] ಅಧಿಕಾ[7]ತುವಿಕಲ್ಪ್ಯತೇ ॥
8-9 ಆನ ಏಕಕಪಾಲೇ ತು ಮೈತ್ರಾವರುಣನಾಮಕೇ ।
[10-15]ಅಗ್ನಿಮಿತ್ಯಾದಿಕಾ ಧಾಯ್ಯಾಃ ಸ್ಯುಃ ಸೋಮಾರೌದ್ರಕೇ ಚರೌ ॥
ದೇವಾನಾಮಿತಿ ಚಾರ್ಧರ್ಚಸ್ತ್ರಿಸೃಷ್ಟ್ಯರ್ಕ್ಷ್ವನುಷಜ್ಯತೇ ।
ಷಡ್ ಧಾಯ್ಯಾ ದ್ವೇ ತು ಯಾಜ್ಯಾನುವಾಕ್ಯೇ ಸೋಮೇತ್ಯುದೀರಿತೇ[16-17] ।
ಸೋಮಾಪೌಷ್ಣೇ ತು ಸೋಮೇತಿ[18-19] ಮಂತ್ರಾ ಏಕೋನವಿಂಶತಿಃ ॥

**ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ-19**

## ಅನುವಾಕದ ವಿಶೇಷ ವಿಷಯಗಳು

### ಅ) ಮೀಮಾಂಸಾ

**೧) 'ಆಗ್ನಾವೈಷ್ಣವಂ....' 'ಅಗ್ನಯೇ ಪಾವಕಾಯ' ಎಂಬಲ್ಲಿನ ಹವಿರ್ಗಣಗಳ ಪ್ರಕೃತಿ ಯಾವುದು? [ಜೈ.ಸೂ. 8-3]**

**'ಆಗ್ನಾವೈಷ್ಣವಮೇಕಾದಶಕಪಾಲಂ ನಿರ್ವಪೇತ್ ಸರಸ್ವತ್ಯೈ ಚರುಂ ಬಾರ್ಹಸ್ಪತ್ಯಂ ಚರುಮ್'** ಎಂಬ ಹವಿರ್ಗಣವಿದೆ. **'ಅಗ್ನಯೇ ಪಾವಕಾಯ, ಅಗ್ನಯೇ ಶುಚಯೇ ಅಷ್ಟಾಕಪಾಲಮ್'** ಎಂಬ ಇನ್ನೊಂದು ಹವಿರ್ಗಣವಿದೆ. ಇವುಗಳ ಪ್ರಕೃತಿ ಯಾವುದು? ಎಂಬುದು ಇಲ್ಲಿನ **ಸಂಶಯ.**

ಆಗ್ನಾವೈಷ್ಣವವು ಪ್ರಥಮಸ್ಥಾನದಲ್ಲಿರುವುದರಿಂದ, ದರ್ಶ-ಪೂರ್ಣಮಾಸಗಳಲ್ಲಿ ಪ್ರಥಮ ಸ್ಥಾನದಲ್ಲಿರುವ ಆಗ್ನೇಯದ ವಿಕಾರ. **'ಅಗ್ನಯೇ ಶುಚಯೇ'** ಎಂಬಲ್ಲಿ ದ್ವಿತೀಯ ಸ್ಥಾನದಲ್ಲಿರುವುದರಿಂದ ಅಗ್ನಿಶುಚೀಷ್ಟಿಯಲ್ಲಿ ಅಗ್ನೀಷೋಮಿಯವೇ ಪ್ರಕೃತಿ. ಇದು ಇಲ್ಲಿನ **ಪೂರ್ವಪಕ್ಷ.**

ಆಗ್ನಾವೈಷ್ಣವವು ದ್ವಿದೇವತ್ಯ. ಅಗ್ನೀಷೋಮೀಯವೂ ದ್ವಿದೇವತ್ಯ. ಈ ದೇವತಾಸಾಮ್ಯವು ಶ್ರುತವಾಗಿದೆ. ಇದು ಸ್ಥಾನ ಕ್ರಮದಿಂದ ಕಲ್ಪಿಸುವ ಪ್ರಕೃತಿ-ವಿಕೃತಿ ಭಾವಕ್ಕಿಂತಲೂ ಪ್ರಬಲ. ಆದುದರಿಂದ ಆಗ್ನಾವೈಷ್ಣವವು ಅಗ್ನೀಷೋಮೀಯದ ವಿಕೃತಿ. ಅಗ್ನಿಶುಚೀಷ್ಟಿಯು ದೇವತಾಸಾಮ್ಯದಿಂದಲೇ ಆಗ್ನೇಯವಿಕೃತಿ. ಇದು ಇಲ್ಲಿನ ಸಿದ್ಧಾಂತ.

ಶ್ರೀ ಸಾಯಣಾಚಾರ್ಯರು ಈ ಎಂಟನೆಯ ಪ್ರಪಾಠಕದಲ್ಲಿ ಬಂದಿರುವ ಅನುವಾಕಗಳ ವಿಷಯಗಳನ್ನು ಸಂಗ್ರಹಿಸಿ ಶ್ಲೋಕರೂಪದಲ್ಲಿ ನೀಡಿರುತ್ತಾರೆ.

ಆಯಾ ಅನುವಾಕದಲ್ಲಿ ಬಂದಿರುವ ವಿಷಯಗಳನ್ನು ಆಯಾ ಅನುವಾಕ ದಲ್ಲಿಯೇ ಕೊಟ್ಟಿರುವುದರಿಂದ ಇಲ್ಲಿ ಶ್ಲೋಕಗಳನ್ನು ಮಾತ್ರ ನೀಡಲಾಗಿದೆ.

## ಅನುವಾಕಾರ್ಥಸಂಗ್ರಹಃ

ವಿಸ್ಪಷ್ಟಮನುವಾಕಾರ್ಥಾ ವರ್ಣ್ಯಂತೇ ಬುದ್ಧಿಶುದ್ಧಯೇ ।
ಅನುಮತ್ಯಾದಯೋ ವೈಶ್ವದೇವೋ ವರುಣಪ್ರಘಾಸಕಾಃ ॥ ೧ ॥

ಸಾಕಮೇಧಾಃ ಪಿತೃಯಜ್ಞಸ್ತ್ರ್ಯಂಬಕಶ್ಚ ಶುನಾದಿಕಾಃ ।
ಶುನಾಸೀರೀಯಮಿಂದ್ರಾದಿ ತುರೀಯಂ ಚ ದ್ವಯಂ ತಥಾ ॥ ೨ ॥

ಪಂಚೇಧ್ಮೀಯಮಪಾಮಾರ್ಗಹೋಮ ಏತೇ ಶುನಾದಿಕಾಃ ।
ದೇವಿಕಾದ್ಯಂ ಕರ್ಮಷಟ್ಕಂ ಸ್ಯಾದ್ರತ್ನಿಹವಿರಾದಿಕಮ್ ॥ ೩ ॥

ಹವೀಂಷಿ ರತ್ನಿನಾಂ ಪಶ್ಚಾದ್ದೀಕ್ಷಣೀಯಾಭಿಷೇಚ್ಯಗಾ ।
ಹವೀಂಷಿ ಸ್ಯುರ್ದೇವಸುವಾಂ ಜಲಗ್ರಹಣಸಂಸ್ಕೃತೀ ॥ ೪ ॥

ದಿಶಾಂ ವ್ಯಾಸ್ಥಾಪನಂ ತದ್ವದಭಿಷೇಕೋಽಥ ದಿಗ್ಜಯಃ ।
ಸೇವಾ ಸಂಸೃಬ್ಭವಿಸ್ತದ್ವದ್ದಶಪೇಯೋ ಹ್ಯವೇಷ್ಟಯಃ ॥ ೫ ॥

ಹವೀಂಷಿ ಪ್ರಯುಜಾಂ ಸೌತ್ರಾಮಣೀ ಯಾಜ್ಯಾ ಇತೀರಿತಾಃ ॥

**ಇವು ಅನುವಾಕದಲ್ಲಿನ ವಿಷಯಗಳಾಗಿವೆ.**

ಇಲ್ಲಿಗೆ ಇಪ್ಪತ್ತೆರಡನೆಯ ಅನುವಾಕವು ಮುಗಿಯಿತು. ಎಂಟನೆಯ ಪ್ರಶ್ನವು ಮುಗಿಯಿತು. ಪ್ರಥಮಕಾಂಡವೂ ಸಂಪೂರ್ಣವಾಯಿತು.

## ಶ್ರೀ ಗುರು ಚರಣಾರವಿಂದಾರ್ಪಣಮಸ್ತು

ವಿಸರ್ಗಬಿಂದುಮಾತ್ರಾಣಿ ಪದಪಾದಾಕ್ಷರಾಣಿ ಚ ।
ನ್ಯೂನಾತಿರಿಕ್ತಾನ್ಯೇತಾನಿ ಕ್ಷಮಸ್ವ ಪುರುಷೋತ್ತಮ ॥

॥ ಓಂ ತತ್ಸತ್ ॥

★ ★ ★

# ಅನುಬಂಧ-೧

## ಛಂದಸ್ಸು

ಎಂಟನೆಯ ಪ್ರಪಾಠಕದಲ್ಲಿ ಮಂತ್ರಭಾಗವೂ, ಬ್ರಾಹ್ಮಣಭಾಗವೂ ಹೆಚ್ಚು ಮಿಶ್ರವಾಗಿ ಪಠಿತವಾಗಿದೆ. ಆದರಲ್ಲಿ ಮಂತ್ರಗಳ ಛಂದಸ್ಸನ್ನು ಅನುವಾಕದ ಕ್ರಮದಂತೆ ನೀಡಲಾಗಿದೆ. ಇಲ್ಲಿ ನಿರ್ದೇಶಿಸಲ್ಪಡದಿರುವುದು ಯಜುಸ್ಸಾಗಿರುತ್ತದೆ ಅಥವಾ ಬ್ರಾಹ್ಮಣ ಭಾಗವಾಗಿ ರುತ್ತದೆ.

| ಅನುವಾಕ | ಮಂತ್ರ | ಛಂದಸ್ಸು |
|---|---|---|
| ೧. | ಏಷಃ.... ಅಗ್ಂಹಸಃ । | ಗಾಯತ್ರೀ/ಯಜುಃ |
| ೨. | — | — |
| ೩. | ಪ್ರಘಾಸ್ಯಾನ್..... ಸಜೋಷಸಃ । | ಗಾಯತ್ರೀ |
| | ಮೋ ಷೂ ಣ....ಗೀಃ । | ಪಂಕ್ತಿಪ್ರಕಾರ |
| | ಯದ್ಗ್ರಾಮೇ.... ಸ್ವಾಹಾ । | ಷಟ್ಪದಾ ಜಗತೀ |
| | ಅಕ್ರನ್ಕರ್ಮ..... ಸುದಾನವಃ । | ಅನುಷ್ಟುಪ್ |
| ೪. | ಪೂರ್ಣಾ..... ಶತಕ್ರತೋ । | ಅನುಷ್ಟುಪ್ |
| | ದೇಹಿ.... ತೇ । | ಅನುಷ್ಟುಪ್ |
| ೫. | ಸುಸಂದೃಶಂ.... ಹರೀ । | ಪಂಕ್ತಿಃ |
| | ಅಕ್ಷನ್ನಮೀಮದಂತ.... ಹರೀ । | ಪಂಕ್ತಿಃ |
| | ಪರೇತ.....ಮದಂತಿ । | ಪಂಚಪದಾ ಬೃಹತೀ |
| | ಮನೋ..... ಮನ್ಮಭಿಃ । | ಗಾಯತ್ರೀ |
| | ಆ ನ...ದೃಶೇ । | ಗಾಯತ್ರೀ |
| | ಪುನರ್ನಃ.... ಸಚೇಮಹಿ । | ಗಾಯತ್ರೀ |
| | ಯದಂತರಿಕ್ಷಂ.... ಅನೇನಸಮ್ ॥ | ಷಟ್ಪದಾ ಶಕ್ವರೀ |
| ೬. | ಭೇಷಜಂ ಗವೇ... ಮೇಷ್ಯೈ । | ಪಂಚಪದಾ ಪಂಕ್ತಿಃ |
| | ಅವಾಂಬ.... ವ್ಯವಸಾಯಯಾತ್ ॥ | ಷಟ್ಪದಾ ಜಗತೀ |

| | | |
|---|---|---|
| | ತ್ರ್ಯಂಬಕಂ....ಅಮೃತಾತ್ । | ಅನುಷ್ಟುಪ್ |
| ೭. | ದೇವಸ್ಯ....ಹಸ್ತಾಭ್ಯಾಮ್ । | ಗಾಯತ್ರೀ |
| ೮. | — | — |
| ೯. | — | — |
| ೧೦. | ಪ್ರತಿ..... ನಾಮ । | ತ್ರಿಷ್ಟುಪ್ |
| | ಅಮನ್ಮಹಿ..... ಆನಟ್ । | ತ್ರಿಷ್ಟುಪ್ |
| ೧೧. | ಅಪೋ..... ಅರಾತೀಃ । | ತ್ರಿಷ್ಟುಪ್ |
| ೧೨. | ಸಧಮಾದೋ.... ಅಂತಃ । | ತ್ರಿಷ್ಟುಪ್ |
| | ಹಿರಣ್ಯವರ್ಣಾ.... ದಿತಿಂ ಚ । | ತ್ರಿಷ್ಟುಪ್ |
| ೧೩. | — | — |
| ೧೪. | ನಿರಸ್ತಂ.... ಶಿರಃ । | ಏಕಪದಾ ಗಾಯತ್ರೀ |
| | ಸೋಮೋ.... ಸುವಂತಾಮ್ ॥ | ಷಟ್ಪದಾ ತ್ರಿಷ್ಟುಪ್ |
| | ಸಮಾವವೃತ್ರನ್..... ಇಯಾನಾಃ । | ತ್ರಿಷ್ಟುಪ್ |
| | ಪ್ರಜಾಪತೇ..... ರಯೀಣಾಮ್ । | ತ್ರಿಷ್ಟುಪ್ |
| ೧೫. | ಹಗ್‌ಂಸಃ.... ಬೃಹತ್ । | ಅತಿಜಗತೀ |
| ೧೬. | ನಿ ಷಸಾದ....ಸುಕ್ರತುಃ । | ಗಾಯತ್ರೀ |
| ೧೭. | — | — |
| ೧೮. | — | — |
| ೧೯. | — | — |
| ೨೦. | — | — |
| ೨೧. | ಸ್ವಾದ್ವೀಂ..... ಸೋಮೇನ । | ಗಾಯತ್ರೀ |
| | ಪುನಾತು.... ತನಾ । | ಗಾಯತ್ರೀ |
| | ವಾಯುಃ.... ಸಖಾ । | ಗಾಯತ್ರೀ |
| | ಕುವಿದಂಗ...... ಜಗ್ಮುಃ । | ತ್ರಿಷ್ಟುಪ್ |

| | | |
|---|---|---|
| ೨೨. | ಅಗ್ನಾವಿಷ್ಣೂ.... ಚರಣ್ಯೇತ್ । | ತ್ರಿಷ್ಟುಪ್ |
| | ಅಗ್ನಾವಿಷ್ಣೂ....ಉಚ್ಚರಣ್ಯೇತ್ । | ತ್ರಿಷ್ಟುಪ್ |
| | ಪ್ರ ಣೋ.... ಅವತು । | ಗಾಯತ್ರೀ |
| | ಆ ನೋ... ಶೃಣೋತು । | ತ್ರಿಷ್ಟುಪ್ |
| | ಬೃಹಸ್ಪತೇ... ದಾಶುಷೇ । | ಗಾಯತ್ರೀ |
| | ಏವಾ.....ರಯೀಣಾಮ್ । | ತ್ರಿಷ್ಟುಪ್ |
| | ಬೃಹಸ್ಪತೇ....ಚಿತ್ರಮ್ । | ತ್ರಿಷ್ಟುಪ್ |
| | ಆ ನೋ.... ಸುಕ್ರತೂ । | ಗಾಯತ್ರೀ |
| | ಪ್ರ ಬಾಹವಾ.... ಹವೇಮಾ । | ತ್ರಿಷ್ಟುಪ್ |
| | ಅಗ್ನಿಂ ವಃ..... ಕ್ಷೇತ್ರಸಾಧಸಮ್ । | ಅನುಷ್ಟುಪ್ |
| | ಮಕ್ಷೂ.... ಭುವತ್ । | ಪಂಕ್ತಿಃ |
| | ನ ಯಜಮಾನ.... ದೇವಯೋ । | ಪಂಕ್ತಿಃ |
| | [ದೇವಾನಾಂ....ಭುವತ್] | |
| | ಅಸದತ್ರ....ಶ್ವಶ್ವಿಯಮ್ । | ಪಂಕ್ತಿಃ |
| | [ದೇವಾನಾಂ.... ಭುವತ್] | |
| | ನಕಿಷ್ಟಂ....ಯೋಷತಿ । | ಪಂಕ್ತಿಃ |
| | [ದೇವಾನಾಂ.....ಭುವತ್] | |
| | ಉಪಕ್ಷರಂತಿ.... ವಿಶ್ವತಃ । | ಜಗತೀ |
| | ಸೋಮಾರುದ್ರಾ... ಅಸ್ಮತ್ । | ತ್ರಿಷ್ಟುಪ್ |
| | ಸೋಮಾರುದ್ರಾ... ಅಸ್ಮತ್ । | ತ್ರಿಷ್ಟುಪ್ |
| | ಸೋಮಾಪೂಷಣಾ... ನಾಭಿಮ್ । | ತ್ರಿಷ್ಟುಪ್ |
| | ಇಮೌ ದೇವೌ.... ಉಸ್ರಿಯಾಸು । | ತ್ರಿಷ್ಟುಪ್ |

★ ★ ★

# ಅನುಬಂಧ - ೨

## ತೈತ್ತಿರೀಯ ಸಂಹಿತಾ

**ಪ್ರಥಮ ಕಾಂಡಃ** — **ಷಷ್ಠ ಪ್ರಶ್ನಃ**

[ಮಂತ್ರ ಮತ್ತು ಬ್ರಾಹ್ಮಣ ಭಾಗ]

| ಅನುವಾಕ | ಹನುಸ್ಸುಗಳು | ಪದಗಳು | ಮಂತ್ರಗಳು | | |
|---|---|---|---|---|---|
| | | | ಋಕ್ | ಯಜುಃ | ಒಟ್ಟು |
| ೧ | ೩ | 133 | 3 | 13 | 16 |
| ೨ | ೪ | 186 | 4 | 22 | 26 |
| ೩ | ೩ | 156 | 2 | 5 | 7 |
| ೪ | ೪ | 194 | 5 | 18 | 23 |
| ೫ | ೨ | 129 | 1 | 11 | 12 |
| ೬ | ೪ | 185 | 4 | 11 | 15 |
| ೭ | ೪ | 203 | — | — | — |
| ೮ | ೪ | 211 | — | — | — |
| ೯ | ೪ | 190 | — | — | — |
| ೧೦ | ೬ | 286 | — | — | — |
| ೧೧ | ೭ | 338 | — | — | — |
| ೧೨ | ೬ | 298 | 19 | — | 19 |
| ೧೨ | ೫೧ | 2509 | 38 | 80 | 118 |

# ತೈತ್ತಿರೀಯ ಸಂಹಿತಾ

## ಪ್ರಥಮ ಕಾಂಡಃ — ಸಪ್ತಮ ಪ್ರಶ್ನಃ

[ಮಂತ್ರ ಮತ್ತು ಬ್ರಾಹ್ಮಣ ಭಾಗ]

| ಅನುವಾಕ | ಹನುಸ್ಸುಗಳು | ಪದಗಳು | ಮಂತ್ರಗಳು | | |
|---|---|---|---|---|---|
| | | | ಋಕ್ | ಯಜುಃ | ಒಟ್ಟು |
| ೧ | ೬ | 321 | — | — | — |
| ೨ | ೪ | 220 | — | — | — |
| ೩ | ೪ | 215 | — | — | — |
| ೪ | ೬ | 308 | — | — | — |
| ೫ | ೪ | 207 | — | — | — |
| ೬ | ೭ | 374 | — | — | — |
| ೭ | ೨ | 115 | 6 | 2 | 8 |
| ೮ | ೪ | 192 | 10 | 11 | 21 |
| ೯ | ೨ | 109 | — | 35 | 35 |
| ೧೦ | ೩ | 136 | 10 | — | 10 |
| ೧೧ | ೨ | 96 | — | 17 | 17 |
| ೧೨ | ೨ | 113 | 3 | 9 | 12 |
| ೧೩ | ೫ | 251 | 14 | — | 14 |
| ೧೩ | ೫೧ | 2657 | 43 | 74 | 117 |

# ತೈತ್ತಿರೀಯ ಸಂಹಿತಾ

## ಪ್ರಥಮ ಕಾಂಡಃ ಅಷ್ಟಮ ಪ್ರಶ್ನಃ

[ಮಂತ್ರ ಮತ್ತು ಬ್ರಾಹ್ಮಣ ಭಾಗ]

| ಅನುವಾಕ | ಹನುಸ್ಸುಗಳು | ಪದಗಳು | ಮಂತ್ರಗಳು | | |
|---|---|---|---|---|---|
| | | | ಋಕ್ | ಯಜುಃ | ಒಟ್ಟು |
| ೧ | ೨ | 84 | 1 | 2 | 3 |
| ೨ | ೧ | 18 | — | — | — |
| ೩ | ೧ | 70 | 4 | — | 4 |
| ೪ | ೨ | 80 | 2 | — | 2 |
| ೫ | ೩ | 144 | 7 | 5 | 12 |
| ೬ | ೨ | 103 | 3 | 8 | 11 |
| ೭ | ೨ | 95 | 1 | 13 | 14 |
| ೮ | ೧ | 58 | — | — | — |
| ೯ | ೩ | 133 | — | 1 | 1 |
| ೧೦ | ೨ | 125 | 2 | 6 | 8 |
| ೧೧ | ೧ | 61 | 1 | 15 | 16 |
| ೧೨ | ೩ | 141 | 2 | 18 | 20 |
| ೧೩ | ೩ | 150 | — | 43 | 43 |
| ೧೪ | ೨ | 111 | 4 | 8 | 12 |
| ೧೫ | ೨ | 103 | 1 | 17 | 18 |
| ೧೬ | ೨ | 90 | 1 | 22 | 23 |
| ೧೭ | ೧ | 42 | — | — | — |
| ೧೮ | ೧ | 54 | — | — | — |
| ೧೯ | ೧ | 47 | — | — | — |
| ೨೦ | ೧ | 34 | — | — | — |
| ೨೧ | ೧ | 76 | 4 | 1 | 5 |
| ೨೨ | ೫ | 275 | 22 | — | 22 |
| ೨೨ | ೪೨ | 2094 | 55 | 159 | 214 |

* ಅನುಬಂಧದಲ್ಲಿ ಮಂತ್ರಗಳ ಒಟ್ಟು ಸಂಖ್ಯೆಯನ್ನು ಆಪಸ್ತಂಬ ಮತದಂತೆ ನೀಡಿದೆ.

* ಋಕ್‌ಗಳು ಕೆಲವೆಡೆ ಮಾತ್ರ ಉಭಯಭಾಷ್ಯ ಸಮ್ಮತವಾಗಿವೆ.



## ಕೃಷ್ಣ ಯಜುರ್ವೇದ ಕನ್ನಡ ಪ್ರಕಾಶನ

**ಸಂಪುಟ - 1**

(ವೇದಗಳ ಪರಿಚಯ, ಕೃಷ್ಣಯಜುರ್ವೇದ ಪರಿಚಯ,
ಯಜ್ಞಗಳ ಪರಿಚಯ)

**ಸಂಪುಟ - 2**

ತೈತ್ತಿರೀಯ ಸಂಹಿತೆ
(ಪ್ರಥಮ ಕಾಂಡ 1–2 ಪ್ರಪಾಠಕಗಳು)

**ಸಂಪುಟ - 3**

ತೈತ್ತಿರೀಯ ಸಂಹಿತೆ
(ಪ್ರಥಮ ಕಾಂಡ 3–4–5 ಪ್ರಪಾಠಕಗಳು)

**ಸಂಪುಟ - 4**

ತೈತ್ತಿರೀಯ ಸಂಹಿತೆ
(ಪ್ರಥಮ ಕಾಂಡ 6–7–8 ಪ್ರಪಾಠಕಗಳು)

**ಸಂಪುಟ - 5**

ತೈತ್ತಿರೀಯ ಸಂಹಿತೆ
(ದ್ವಿತೀಯ ಕಾಂಡ 1–2 ಪ್ರಪಾಠಕಗಳು)

**ಸಂಪುಟ - 6**

ತೈತ್ತಿರೀಯ ಸಂಹಿತೆ
(ದ್ವಿತೀಯ ಕಾಂಡ 3–4 ಪ್ರಪಾಠಕಗಳು)

**ಸಂಪುಟ - 7**

ತೈತ್ತಿರೀಯ ಸಂಹಿತೆ
(ದ್ವಿತೀಯ ಕಾಂಡ 5–6 ಪ್ರಪಾಠಕಗಳು)

**ಪ್ರತಿಗಳಿಗೆ :**

**ಜ್ಯೋತಿ ಸಾಂಸ್ಕೃತಿಕ ಪ್ರತಿಷ್ಠಾನ**

31, ಪಂಪಮಹಾಕವಿ ರಸ್ತೆ, ಬೆಂಗಳೂರು–560 004.

ದೂರವಾಣಿ : 26677852

ಪರಿಮಳ ಮುದ್ರಣಾಲಯ, ಬ್ಯಾಟರಾಯನ್‌ಪುರ, ಬೆಂಗಳೂರು–26 ಫೋನ್: 26758058

